# ಶಿಕ್ಷಣದ ಮನೋವಿಜ್ಞಾನ

ಲೇಖಕರು :

**ಡಾ|| ವಿರುಪಾಕ್ಷಪ್ಪ ಕೊಟ್ರಪ್ಪ ಜವಳಿ**

ಎಂ. ಈಡಿ., ಪಿ. ಎಚ್. ಡಿ. ( ಬಾಂಬೆ ),

ಎಂ. ಎ. ( ಕೊಲಂಬಿಯಾ )

**ಸಂಪೂರ್ಣ ತಿದ್ದಿ ಬೆಳೆಸಿದ**

**ಆರನೆಯ ಮುದ್ರಣ**

ಅಕಳವಾಡಿ ಬುಕ್ ಡಿಪೋ, ಧಾರವಾಡ

೫೭ ] [ ೩—೦—೦

# ಮುನ್ನುಡಿ

ಕನ್ನಡ ಶಿಕ್ಷಕ ವರ್ಗದಲ್ಲಿ ಈ ನನ್ನ ಪುಸ್ತಕವು ಹೆಚ್ಚು ಜನಪ್ರಿಯವಾದಂತೆ ತೋರುತ್ತದೆ. ಇದರ ಬೇಡಿಕೆಯು ಪ್ರತಿ ವರುಷ ಹೆಚ್ಚುತ್ತ ನಡೆದಿದೆ. ಈಗಿನದು ಆರನೆಯ ಮುದ್ರಣ. ಪುಸ್ತಕವನ್ನು ಪ್ರಿಂಟಿಗೆ ಕೊಡುವ ಮೊದಲು ಪ್ರತಿ ಸಲ ವಿಷಯದಲ್ಲಿಯಾಗಲಿ ಅಥವಾ ಶೈಲಿಯಲ್ಲಿಯಾಗಲಿ ಬದಲಾವಣೆಯನ್ನು ಮಾಡುತ್ತ ಬಂದಿರುತ್ತೇನೆ. ಈ ಸಲ " ವ್ಯಕ್ತಿತ್ವದ ಬೆಳವಣಿಗೆ " ಎಂಬ ಕೊನೆಯ ಅಧ್ಯಾಯವನ್ನು ಹೆಚ್ಚಿಗೆ ಜೋಡಿಸಲಾಗಿದೆ. ಇದರಲ್ಲಿ " ಮನಸ್ಸಿನ ಹೋರಾಟ, " " ಮಕ್ಕಳ ಅಪರಾಧಗಳು, " ಮತ್ತು " ಸುಸಂಬದ್ಧ ವ್ಯಕ್ತಿತ್ವ " ಮೊದಲಾದ ಸಂಗತಿಗಳನ್ನು ವಿವೇಚಿಸಲಾಗಿದೆ. ಶಿಕ್ಷಕರಿಗೆ ಈ ಆವೃತ್ತಿಯು ಇನ್ನೂ ಹೆಚ್ಚು ಉಪಯೋಗ ಬೀಳಬೇಕೆಂಬ ದೃಷ್ಟಿಯಿಂದ ವಿವರಣೆಯನ್ನು ಮತ್ತು ಉದಾಹರಣೆಗಳನ್ನು ಬೆಳೆಯಿಸಲಾಗಿದೆ. ಅದಕ್ಕಾಗಿ ಪುಟಗಳು ಹೆಚ್ಚಾಗಿದ್ದರಿಂದ ಬೆಲೆಯನ್ನು ಸ್ವಲ್ಪ ಏರಿಸಿದೆ.

ಬೆಳಗಾಂವಿ
೨೫-೬-೧೯೫೨

ವಿರೂಪಾಕ್ಷಪ್ಪ ಜವಳಿ

# ಪರಿವಿಡಿ

ಅಧ್ಯಾಯ

ಅಧ್ಯಾಯ ಪುಟ

ಅಧ್ಯಾಯ ಪುಟ

ಅಧ್ಯಾಯ ಪುಟ

# ಶಿಕ್ಷಣದ ಮನೋವಿಜ್ಞಾನ

## ಅಧ್ಯಾಯ ೧

## ಮನೋವಿಜ್ಞಾನ ಮತ್ತು ಶಿಕ್ಷಣ

### ಮನೋವಿಜ್ಞಾನವು ಶಿಕ್ಷಣದ ಅಡಿಗಲ್ಲು

ಶಿಕ್ಷಣಕ್ಕೆ ಮನೋವಿಜ್ಞಾನವೇ ಅಡಿಗಲ್ಲು. ಆದುದರಿಂದ ಮನೋವಿಜ್ಞಾನದ ತಳಹದಿಯ ಮೇಲೆ ನಿಂತ ಶಿಕ್ಷಣವು ಸರಿಯಾದ ಹಾದಿಯನ್ನು ಹಿಡಿಯಬಲ್ಲದು. ಇಲ್ಲವಾದರೆ ಅದು ತಪ್ಪು ದಾರಿಯನ್ನು ತುಳಿಯುತ್ತ ಅನೇಕ ತೊಂದರೆಗಳಿಗೆ ಈಡಾಗಬೇಕಾಗುತ್ತದೆ. 'ಶಾಲೆಯ ಕೆಲಸವು ವಿಷಯಗಳನ್ನು ಕಲಿಸುವದು ಅಲ್ಲ, ಆದರೆ ಮಕ್ಕಳಿಗೆ ಕಲಿಸುವದು ಇರುತ್ತದೆ.' ಈ ಮಾತಿನ ಸರಿಯಾದ ಅರ್ಥವನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ. ಕಲಿಸುವ ಕೆಲಸವನ್ನು ಒಳ್ಳೇ ಯಶಸ್ವಿ ರೀತಿಯಿಂದ ಸಾಗಿಸಬೇಕಾದರೆ ಶಿಕ್ಷಕನು ಮನೋವಿಜ್ಞಾನದ ಅಭ್ಯಾಸವನ್ನು ಮಾಡಬೇಕಾಗುತ್ತದೆ. ಅಂದರೇನೇ ಬಾಲ್ಯದಿಂದ ತಾರುಣ್ಯವನ್ನು ದಾಟಿ ದೊಡ್ಡವರು ಆಗುವವರೆಗೆ ಮಕ್ಕಳ ಬೆಳವಣಿಗೆಗೆ ತಕ್ಕಂತೆ ಅವನು ಶಿಕ್ಷಣವನ್ನು ಕೊಡಬಲ್ಲನು. ಶಿಕ್ಷಣದ ಯಾವದೇ ಯೋಜನೆಯಾಗಲಿ ಅದು ಮನೋವಿಜ್ಞಾನದ ಆಧಾರವನ್ನು ಪಡೆಯಲೇಬೇಕು.

ಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸುವಾಗ ಅಥವಾ ಶಿಕ್ಷಣವನ್ನು ಕೊಡುವಾಗ ಮಕ್ಕಳ ದೃಷ್ಟಿಯನ್ನು ಇಟ್ಟುಕೊಳ್ಳಬೇಕೆಂಬ ತತ್ವವನ್ನು ಪೂರ್ವ ಕಾಲದಿಂದಲೂ ಎಲ್ಲ ದೇಶಗಳ ತತ್ವಜ್ಞಾನಿಗಳು ಒಪ್ಪಿದಂತೆ ಕಾಣುತ್ತದೆ. ಇದು ಸಾಮಾನ್ಯ ಬುದ್ಧಿಗೂ ಹೊಳೆಯುವ ಮಾತು. 'ಬಿಗಿಯಾದ ಲೆಕ್ಕವನ್ನು ಹೇಳಿದರೆ ಸಣ್ಣ ಮಗುವು ಅದನ್ನು ಹೇಗೆ ಬಿಡಿಸ ಬಲ್ಲನು? ಎಂದು ಸಾಲೆ ಕಲಿಯದ ಮನುಷ್ಯನೂ ಕೂಡ ಅನ್ನಬಹುದು. ಅವನ ಈ ಹೇಳಿಕೆ ಯಲ್ಲಿ ಮನೋವಿಜ್ಞಾನದ ಒಂದು ದೊಡ್ಡ ಸಿದ್ಧಾಂತವು ಅಡಕವಾಗಿದೆ. ಸ್ವಿತ್ಸರಲಂಡದ ಒಂದು ಸಾಲೆಯ ಶಿಕ್ಷಕನಾದ ಪೆಸ್ಟಲಾಜಿಯು ಶಿಕ್ಷಣಕ್ಕೆ ಮನೋವಿಜ್ಞಾನದ ಒಪ್ಪ ಹಾಕಬೇಕೆಂದು ಸಾರಿದನು. ವಿದ್ಯಾರ್ಥಿಯ ಮನಸ್ಸನ್ನು ತಿಳಿದುಕೊಳ್ಳುವದು ಶಿಕ್ಷಕನ ಮೊದಲನೇ ಕರ್ತವ್ಯವೆಂದು ಅವನು ಹೇಳಿದನು. ಮಗುವಿಗೆ ಕಲಿಸತಕ್ಕ ವಿಷಯಗಳ ಪರಿಚಯು ಇದ್ದರೆ ಸಾಕು, ಅದರಿಂದ ಯಾವನೊಬ್ಬನು ಶಿಕ್ಷಕನಾಗಬಲ್ಲನು ಎಂಬ ನಂಬುಗೆಯು ತಪ್ಪು. ಮಗುವಿನ ಮನಸ್ಸಿನ ವ್ಯಾಪಾರಗಳ ಬಗೆಗೆ ಸರಿಯಾದ ಜ್ಞಾನ ಮಾಡಿಕೊಳ್ಳು ವದು ಶಿಕ್ಷಣ ಕಲೆಗಳಿಗೆ ಅವಶ್ಯವಾದದ್ದು. ಇದೇ ವಿಚಾರವನ್ನು ಸರ್ ಜಾನ್ ಅಡ್ಯಾಮ್ಸ ಎಂಬ ಶಿಕ್ಷಣ ತಜ್ಞನು ಈ ರೀತಿಯಾಗಿ ಹೇಳುತ್ತಾನೆ: 'ಶಿಕ್ಷಕನು ಬಸವಗೆ ಗಣಿತವನ್ನು ಕಲಿಸುತ್ತಾನೆ.' ಅಂದರೆ ಶಿಕ್ಷಕನು ಬಸವನ ಅಭ್ಯಾಸವನ್ನೂ ಮಾಡತಕ್ಕದ್ದು ಮತ್ತು ಗಣಿತದ ಅಭ್ಯಾಸವನ್ನೂ ಮಾಡತಕ್ಕದ್ದು. ಬಸವನ ಅಭ್ಯಾಸವೇ ಮನೋವಿಜ್ಞಾನದ ಅಭ್ಯಾಸ. ಬೆಳೆಯುತ್ತಿರುವ ಬಸವನ ವಯೋಮಾನಕ್ಕೂ ಮತ್ತು ಬುದ್ಧಿಶಕ್ತಿಗೂ ಹೊಂದಿಕೆಯಾಗುವಂತೆ ಗಣಿತದ ಅಭ್ಯಾಸ ಪತ್ರಿಕೆಯನ್ನು ಹೇಗೆ ತಯಾರಿಸಬೇಕು, ಗಣಿತದ ವಿಷಯದಲ್ಲಿ ಬಸವಗೆ ಅಭಿರುಚಿ ಉಂಟಾಗಬೇಕಾದರೆ ಏನು ಮಾಡಬೇಕು, ಲೆಕ್ಕಗಳು ಬಸವಗೆ ಹಗುರಾಗಿ ತಿಳಿಯಬೇಕಾದರೆ ಹೇಗೆ ಕಲಿಸಬೇಕು, ಬಸವಗೆ ಕಲಿಸು ವಾಗ್ಗೆ ಶ್ರಮ ಮತ್ತು ವೇಳೆ ಉಳಿಯ ಬೇಕಾದರೆ ಯಾವ ಉಪಾಯಗಳನ್ನು ಕೈಕೊಳ್ಳಬೇಕು, ಮುಂತಾದ ಸಮಸ್ಯೆಗಳಿಗೆ ಉತ್ತರ ಹುಡುಕ ಬೇಕಾದರೆ ಮನೋವಿಜ್ಞಾನವು ಸಹಾಯವಾಗುತ್ತದೆ. ಇದರಂತೆ ಸಾಲೆಯಲ್ಲಿ ವಿದ್ಯಾರ್ಥಿ ಗಳಿಗೆ ಕಲಿಸಬೇಕಾದ ಬೇರೆ ಬೇರೆ ವಿಷಯಗಳ ಬಗೆಗೆ ಕಲಿಸುವ ಪದ್ಧತಿ ಗಳನ್ನು ಕುರಿತು ಆಲೋಚಿಸುವಾಗ ಮತ್ತು ಅವರ ವ್ಯಕ್ತಿತ್ವದ ಬೆಳವಣಿಗೆ

ಯನ್ನು ಕುರಿತು ವಿವೇಚಿಸುವಾಗ ನಾವು ಮನೋವಿಜ್ಞಾನದ ಕಡೆಗೆ ತೆರಳ ಬೇಕಾಗುತ್ತದೆ. ಪೆಸ್ಟಲಾಜಿಯು ತೋರಿಸಿದ ಮಾರ್ಗದಲ್ಲಿ ಶೈಕ್ಷಣಿಕ ಮನೋ-ವಿಜ್ಞಾನವು ಇತ್ತೀಚೆಗೆ ಅತ್ಯಂತ ಪ್ರಗತಿಯನ್ನು ಹೊಂದಿದೆ. ಹರ್ಬಾರ್ಟ್, ರೂಸೋ, ಫ್ರೊಬೆಲ್, ಮೊಂಟೆಸರಿ, ಡ್ಯೂಯಿ, ಕಿಲ್‌ಪ್ಯಾಟ್ರಿಕ್, ನನ್, ರಾಸ್ ಮೊದಲಾದ ಶಿಕ್ಷಣತಜ್ಞರು ತಮ್ಮ ಶಿಕ್ಷಣ ಯೋಜನೆಗಳನ್ನು ಮಂಡಿಸುವಾಗ ಮನೋವಿಜ್ಞಾನದ ಬೆಂಬಲವನ್ನೇ ತಕ್ಕೊಳ್ಳುತ್ತಾರೆ. ಇತ್ತೀಚೆಗೆ ಇಂಗ್ಲಂಡ ಅಮೇರಿಕಾ ದೇಶಗಳಲ್ಲಿ ಶಿಕ್ಷಣ ಮನೋವಿಜ್ಞಾನವು ಬಹಳ ಮುಖ ವಾಗಿ ಅತಿವೇಗದಿಂದ ಬೆಳೆಯಹತ್ತಿದೆ. ಅದೇ ರೀತಿಯಾಗಿ ನಮ್ಮ ದೇಶದಲ್ಲಿಯೂ ಈ ವಿಜ್ಞಾನವು ಬೆಳೆಯುವದು ಅವಶ್ಯ.

ಶಿಕ್ಷಕನು ತಿಳಿದುಕೊಳ್ಳಬೇಕಾದ ಮನೋವಿಜ್ಞಾನದ ಮುಖ್ಯ ವಿಷಯ ಗಳು ಯಾವವು ಎಂಬುದನ್ನು ಈ ಕೆಳಗೆ ಸೂಚಿಸಲಾಗಿದೆ.

## ಶಿಕ್ಷಣದ ಗುರಿ ಮತ್ತು ಕಲಿಸುವ ಪದ್ಧತಿ

ಶಿಕ್ಷಣದ ಗೊತ್ತುಗುರಿಗಳನ್ನು ನಿಶ್ಚಯಿಸುವ ಕೆಲಸವನ್ನು ತತ್ವಜ್ಞಾನವು ಮಾಡುತ್ತಿದೆ; ಅದು ಮನೋವಿಜ್ಞಾನದ ಕೆಲಸವಲ್ಲ. ಶಿಕ್ಷಣದ ಧ್ಯೇಯವು ವ್ಯಕ್ತಿತ್ವ ವಿಕಾಸ, ಉಪಜೀವನ, ಆತ್ಮಸಾಕ್ಷಾತ್ಕರ, ಶೀಲ ಬೆಳೆಸುವದು, ಒಳ್ಳೇ ನಡತೆ, ನಾಗರಿಕತೆ, ಮುಂತಾಗಿ—ಯಾವುದೇ ಇರಲಿ ಅದನ್ನು ನಿರ್ಣಯಿಸುವದು ತತ್ವಜ್ಞಾನ. ಆದರೆ ಮುಂದಿಟ್ಟುಕೊಂಡ ಗುರಿಯು ಸಾಧ್ಯವೋ ಅಸಾಧ್ಯವೋ ಎಂಬುದನ್ನಾಗಲೀ, ಸಾಧ್ಯವಾದಲ್ಲಿ ಅದನ್ನು ಮುಟ್ಟುವ ಬಗೆ ಯಾವುದು ಎಂಬುದನ್ನಾಗಲಿ ತಿಳಿದುಕೊಳ್ಳಲು ಮನೋ-ವಿಜ್ಞಾನವು ಸಹಾಯವಾಗುತ್ತದೆ. "ವ್ಯಕ್ತಿತ್ವದ ವಿಕಾಸವೇ ಶಿಕ್ಷಣದ ಗುರಿ" ಎಂದು ಸರ್ ಟಿ. ಪರ್ಸಿ. ನನ್ ಎಂಬವನು ಪ್ರತಿಪಾದಿಸುತ್ತಾನೆ. ಹೀಗೆ ಪ್ರತಿ ಪಾದಿಸುವಲ್ಲಿ ಅವನು ಮನೋವಿಜ್ಞಾನದ ಆಧಾರವನ್ನೇ ತೋರಿಸುತ್ತಾನೆ. ಶಿಕ್ಷಣದ ಧ್ಯೇಯವನ್ನು ತಾನು ಎಷ್ಟರಮಟ್ಟಿಗೆ ಸಾಧಿಸಿದ್ದಾನೆ, ಮಕ್ಕಳ ನಡೆನುಡಿ ಗಳನ್ನು ತಿದ್ದುವಲ್ಲಿ ತಾನು ಎಷ್ಟರಮಟ್ಟಿಗೆ ಯಶಸ್ವಿಯಾಗಿದ್ದಾನೆ ಎಂಬುದನ್ನು ಶಿಕ್ಷಕನು ಮನೋವಿಜ್ಞಾನದ ಸಹಾಯವಿಲ್ಲದೆ ತಿಳಿದುಕೊಳ್ಳಲಾರನು. ಮನೋವಿಜ್ಞಾನವು ಶಿಕ್ಷಕನ ಸಾಮರ್ಥ್ಯವನ್ನು ಅಳೆದು ನೋಡುವ ಒರೆಗಲ್ಲು.

ಸಾಲೆಯಲ್ಲಿ ಯಾವ ಯಾವ ವಿಷಯಗಳನ್ನು ಕಲಿಸತಕ್ಕದ್ದು, ಶಿಕ್ಷಣದ ಪ್ರತಿಯೊಂದು ಮಟ್ಟಿನ—ಪ್ರಾಥಮಿಕ, ಮಾಧ್ಯಮಿಕ ಮತ್ತು ಕಾಲೇಜಿನ— ಅಭ್ಯಾಸ ಪತ್ರಿಕೆಯಲ್ಲಿ ಯಾವ ವಿಷಯಗಳನ್ನು ಸೇರಿಸತಕ್ಕದ್ದು ಎಂಬುದನ್ನು ಹಾಕಿ ಕೊಡುವದು ಸಮಾಜ, ಸರಕಾರ. ಇದು ಸಮಾಜವಿಜ್ಞಾನದ ಕೆಲಸ. ಆದರೆ ಅಭ್ಯಾಸ ಪತ್ರಿಕೆಗಳು ಮಕ್ಕಳ ವಯೋಮಾನಕ್ಕೂ ಅವರ ಬೇಡಿಕೆ- ಗಳಿಗೂ ಸರಿಯಾಗಿ ರಚಿಸಲ್ಪಟ್ಟಿವೆಯೋ ಇಲ್ಲವೋ ಎಂಬುದನ್ನು ಮನೋ- ವಿಜ್ಞಾನವು ವಿಚಾರಿಸಬಲ್ಲದು. ಅಲ್ಲದೆ ಅಭ್ಯಾಸ ಪತ್ರಿಕೆಗಳಲ್ಲಿಯ ವಿಷಯಗಳನ್ನು ಕಲಿಸುವ ವಿಧಾನಗಳನ್ನೂ ಅದು ಸೂಚಿಸಬಲ್ಲದು. ಕಲಿಸುವ ಪದ್ಧತಿಗಳನ್ನು ಕುರಿತು ನಡೆಯಿಸಿದ ಅನೇಕ ಪ್ರಯೋಗಗಳನ್ನು ಮತ್ತು ಅವುಗಳ ಸಿದ್ಧಾಂತ ಗಳನ್ನು ಮನೋವಿಜ್ಞಾನವು ಚರ್ಚಿಸುತ್ತದೆ. ಕಲಿಸುವ ಒಳ್ಳೇ ಪದ್ಧತಿಯನ್ನು ಕಂಡು ಹಿಡಿಯಲಿಕ್ಕೂ, ಇತರರ ಕಲಿಸುವಿಕೆಯನ್ನು ವಿಮರ್ಶಿಸಲಿಕ್ಕೂ ಮತ್ತು ಶಿಕ್ಷಣ ಯೋಜನೆಗಳ ಕುಂದುಕೊರತೆಗಳನ್ನು ಎತ್ತಿ ತೋರಿಸಲಿಕ್ಕೂ ಶೈಕ್ಷಣಿಕ ಮನೋವಿಜ್ಞಾನವು ಸಹಾಯವಾಗುತ್ತದೆ. ಮನೋವಿಜ್ಞಾನವು ಶಿಕ್ಷಕನ ಊರುಗೋಲು. ಶಿಕ್ಷಣ ವ್ಯವಸಾಯದಲ್ಲಿ ಅದು ಅವನಿಗೆ ಯಾವಾಗಲೂ ನೆರವಾಗುತ್ತದೆ.

## ಮಗುವಿನ ಬೆಳವಣಿಗೆ

ಮಗುವು ಹುಟ್ಟಿದಾಗಿನಿಂದಲೇ ಅವನ ಶಿಕ್ಷಣವು ಪ್ರಾರಂಭವಾಗುತ್ತದೆ. ಅವನು ಬೆಳೆದ ಹಾಗೆ ಅವನ ಅನುಭವವೂ ಅವನ ಕಲಿಯುವಿಕೆಯೂ ಹೆಚ್ಚು ತ್ತದೆ. ಶರೀರದ ಮತ್ತು ಚಲನವಲನಗಳ ಬೆಳವಣಿಗೆ, ಮನಸ್ಸಿನ ಅಥವಾ ಬುದ್ಧಿಯ ಬೆಳವಣಿಗೆ, ಸಾಮಾಜಿಕ ವರ್ತನದ ಬೆಳವಣಿಗೆ, ಶೀಲದ ಬೆಳವಣಿಗೆ ಮತ್ತು ವ್ಯಕ್ತಿತ್ವದ ಬೆಳವಣಿಗೆ—ಹೀಗೆ ಮಗುವಿನ ಎಲ್ಲ ಬಗೆಯ ಬೆಳವಣಿಗೆಯನ್ನು ಅಭ್ಯಾಸ ಮಾಡುವದು ಅವಶ್ಯ ಬೇಕಾಗುತ್ತದೆ. ಶಿಕ್ಷಣದ ಕಾರ್ಯಕ್ರಮವು ಮಗುವಿನ ಬೆಳವಣಿಗೆಯ ಮೆಟ್ಟಲುಗಳಿಗೆ ಹೊಂದಿಕೆಯಾಗಿ ಇದ್ದರೆ ಮಾತ್ರ ಅದರಿಂದ ಒಳ್ಳೇ ಪರಿಣಾಮವು ಉಂಟಾಗಬಹುದು. ಆದ್ದರಿಂದ ಮಗುವಿನ ಬೆಳವಣಿಗೆಯ ಲಕ್ಷಣಗಳನ್ನು ಅಭ್ಯಾಸಿಸುವದು ಶಿಕ್ಷಣ ಮನೋವಿಜ್ಞಾನದ ಒಂದು ಮುಖ್ಯ ವಿಷಯ.

ಬೆಳವಣಿಗೆ ಮತ್ತು ಕಲಿಯುವಿಕೆ ಇವು ಒಂದಕ್ಕೊಂದು ಸಂಬಂಧ ಪಟ್ಟಿವೆ. ಶರೀರದ ಮತ್ತು ಮನಸ್ಸಿನ ಬೆಳವಣಿಗೆಯು ಹೆಚ್ಚಿದ ಹಾಗೆ ಕಲಿಯುವ ಸಾಮರ್ಥ್ಯವೂ ಹೆಚ್ಚುತ್ತದೆ. ಕಾಲಲ್ಲಿಯ ಸ್ನಾಯುಗಳು ಬಲಿಯದ ಹೊರತು ಮಗುವಿಗೆ ಕೈಹಿಡಿದು ಅಡ್ಡಾಡಲಿಕ್ಕೆ ಕಲಿಸುವದು ವ್ಯರ್ಥ. ಅದರಂತೆ ಭಾಷೆಯ ಸಾಮರ್ಥ್ಯವು ಮಗುವಿನ ಬುದ್ಧಿಯ ಬೆಳವಣಿಗೆಯನ್ನು ಅವಲಂಬಿಸಿದೆ. ಬೆಳವಣಿಗೆ ಮತ್ತು ಕಲಿಯುವಿಕೆ ಇವುಗಳಲ್ಲಿಯ ವ್ಯತ್ಯಾಸವನ್ನು ಶಿಕ್ಷಕನು ತಿಳಿದುಕೊಂಡರೆ ಅವನ ಕೆಲಸವು ಸುಲಭವಾಗುತ್ತದೆ.

## ಕಲಿಯುವ ಕ್ರಮ ( The Learning Process )

ಶಿಕ್ಷಣದ ದೃಷ್ಟಿಯಿಂದ ನೋಡಿದರೆ ಕಲಿಸುವಿಕೆಗಿಂತಲೂ ಕಲಿಯುವಿಕೆಯು ಹೆಚ್ಚು ಮಹತ್ವದ್ದು. ಮತ್ತೊಬ್ಬರು ಕಲಿಸಲಿ ಕಲಿಸದೆ ಇರಲಿ ತಾನು ಕಲಿಯಬೇಕೆಂಬ ಬಲವಾದ ಬಯಕೆಯು ಮಗುವಿನಲ್ಲಿ ಇದ್ದೇ ಇರುತ್ತದೆ. ಕುತೂಹಲಪ್ರೇರಿತನಾಗಿ ಅವನು ತನ್ನ ಸುತ್ತುಮುತ್ತಲಿನ ಆವರಣವನ್ನು ಪರೀಕ್ಷಿಸಲು ಹಾತೊರೆಯುತ್ತಾನೆ. ಆಗ ಅನುಭವವೇ ಅವನ ಗುರು; ಜ್ಞಾನವೇ ಅವನ ಗುರಿ. ಹೀಗೆ ಸ್ವಾಭಾವಿಕವಾಗಿರುವ ತಿಳಿದುಕೊಳ್ಳಬೇಕೆಂಬ ಮನೋವೃತ್ತಿಯನ್ನು ಲವಲವಿಕೆಯನ್ನು ಪ್ರಚೋದನೆಗೊಳಿಸುವದೇ ಕಲಿಸುವಿಕೆಯ ಮೂಲ ಉದ್ದೇಶ. ಕಲಿಯುವ ಕ್ರಮದಲ್ಲಿ ಅಡಕವಾಗಿರುವ ಸಹಜ ನಿಯಮಗಳನ್ನು ಕಂಡು ಹಿಡಿದು ಕಲಿಸುವ ವಿಧಾನಗಳನ್ನು ಅಥವಾ ಪದ್ಧತಿಗಳನ್ನು ಶಿಕ್ಷಕನು ಯೋಜಿಸತಕ್ಕದ್ದು. ವಿಷಯದಲ್ಲಿ ಕಲಿಯುವವನ ಅಭಿರುಚಿ ಇದ್ದರೆ ಕಲಿಯುವಿಕೆಯು ಭರದಿಂದ ಸಾಗುತ್ತದೆ ಎಂಬುದು ಒಂದು ನಿಯಮ. ಪ್ರಾರಂಭದ ಓದುಬರಹವನ್ನು ಚಿಕ್ಕ ಮಕ್ಕಳಿಗೆ ಕಲಿಸುವಾಗ ಅದು ಅವರಿಗೆ ರುಚಿಸುವಂತೆ ಮಾಡತಕ್ಕದ್ದು ಎಂಬುದು ಈ ನಿಯಮದಿಂದ ಹೊರಟ ಸಿದ್ಧಾಂತ. ಅ, ಆ, ರ, ಠ ಮುಂತಾಗಿ ಅರ್ಥವಿಲ್ಲದ ಮತ್ತು ನಿರಸವಾದ ಅಕ್ಷರಗಳನ್ನು ತೀದಲು, ತಿದ್ದಲು ಮಕ್ಕಳಿಗೆ ಹೇಳುವುದರಿಂದ ಆ ಚಟುವಟಿಕೆಯು ಅವರಿಗೆ ಬೇಸರವನ್ನು ಉಂಟುಮಾಡುವದಲ್ಲದೆ ಓದುಬರಹದ ಬಗೆಗೆ ಮತ್ತು ಭಾಷಾ ವಿಷಯದ ಬಗೆಗೆ ಅವರಲ್ಲಿ ವಿರೋಧಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಆದರೆ ಈ ಅಕ್ಷರ ಪದ್ಧತಿಯನ್ನು ಬಿಟ್ಟು ಒಂದು ಅರ್ಥಪೂರ್ಣ ಮತ್ತು ಅಭಿರುಚಿಯುಳ್ಳ

ಸನ್ನಿವೇಶದೊಡನೆ ಓದುಬರಹವನ್ನು ಪ್ರಾರಂಭಿಸಿದರೆ ಅದು ಮಕ್ಕಳಿಗೆ ಸುಲಭವಾಗಿ ಹಿಡಿಯುವದಲ್ಲದೆ ಅದರಲ್ಲಿ ಪ್ರಗತಿಯು ಬೇಗನೆ ಕಂಡುಬರುವದು. ಉದಾಹರಣೆಗಾಗಿ, ಮಕ್ಕಳು ಆಡುವ ಆಟ ಅಥವಾ ಅವರು ನೋಡಿದ ಅಂಗಡಿ ಮುಂತಾದ ಮಕ್ಕಳಿಗೆ ಪರಿಚಿತವಾದ ಕೆಲವು ಸನ್ನಿವೇಶಗಳನ್ನು ತಕ್ಕೊಂಡು ಅವಕ್ಕೆ ಸಂಬಂಧಿಸಿದ ಶಬ್ದಗಳನ್ನೂ, ಪದಗಳನ್ನೂ ವಾಕ್ಯಗಳನ್ನೂ (ಬಿಡಿಯಾದ ಅಕ್ಷರಗಳನ್ನಲ್ಲ) ಗಾಡಿ, ಗಾಲಿ, ಓಡುತ್ತದೆ, ಓಡುತ್ತಾನೆ, ಓಡುತ್ತಾಳೆ, ಗಾಡಿ ಓಡುತ್ತದೆ, ಬಸವ ಓಡುತ್ತಾನೆ, ಲೀಲೆ ಓಡುತ್ತಾಳೆ ಮುಂತಾಗಿ-ಓದಲಿಕ್ಕೆ ಬರೆಯಲಿಕ್ಕೆ ಕಲಿಸುವದು ಸುಲಭವಾದ **'ಲೀಲಾ ಪದ್ಧತಿ'*** ಎನಿಸುವದು. ಇನ್ನೊಂದು ಉದಾಹರಣೆ. ಹಸಿದ ಬೆಕ್ಕು ಹಾಲು ಹುಡುಕುತ್ತದೆ. ಇಲ್ಲಿ ಹಸಿವೆ ಎಂಬುದು ಒಂದು ಪ್ರಚೋದನೆ, ಹಾಲು ಕುಡಿಯುವದು ಒಂದು ಗುರಿ. ಇದರಂತೆ ಬಲವಾದ ಪ್ರಚೋದನೆ ಮತ್ತು ನಿಶ್ಚಿತ ಗುರಿ ಇದ್ದರೆ ಮಾತ್ರ ಮಗುವು ಆಸ್ಥೆಯಿಂದ ಕಲಿಯುವ ಚಟುವಟಿಕೆಯಲ್ಲಿ ತೊಡಗುತ್ತಾನೆ. ಕಲಿಯುವಿಕೆಯ ನಿಯಮಗಳಲ್ಲಿ ಅಡಕವಾಗಿರುವ ಇಂಥ ಸಂಗತಿಗಳನ್ನು "ಕಲಿಯುವ ಕ್ರಮ" (Learning Process) ಎಂಬ ವಿಷಯವನ್ನು ಕುರಿತು ವಿವೇಚಿಸುವಾಗ ವಿವರಿಸಲಾಗುವದು. ಈ ಬಗೆಯಾಗಿ ಮಿತವ್ಯಯ ಮತ್ತು ಪರಿಣಾಮಕಾರಕವಾದ ಕಲಿಸುವ ಪದ್ಧತಿಗಳು ಯಾವವು ಎಂಬುವನ್ನು ತಿಳಿಯಬೇಕಾದರೆ ಶಿಕ್ಷಣ ಮನೋವಿಜ್ಞಾನದ ಅಭ್ಯಾಸವು ಅವಶ್ಯ.

ಮಗುವಿನ ಒಲವುಗಳೂ ಬೇಡಿಕೆಗಳೂ ಯಾವವು, ಅವನ ಉದ್ದೇಶಗಳೂ ಅಭಿರುಚಿಗಳಿಗೂ ಯಾವವು, ಅವನ ವಿಚಾರಸರಣಿ ಮತ್ತು ತರ್ಕದ ರೀತಿ ಹೇಗೆ ನಡೆಯುತ್ತದೆ, ಅವನು ವಿಷಯವನ್ನು ಎಷ್ಟರಮಟ್ಟಿಗೆ ತಿಳಿದಿದ್ದಾನೆ ಎಷ್ಟರಮಟ್ಟಿಗೆ ತಿಳಿದಿರುವದಿಲ್ಲ, ಕಲಿಯುವಿಕೆಗೂ ಪ್ರಚೋದನೆಗೂ (Learning and Motivation) ಯಾವ ಸಂಬಂಧ ಉಂಟು, ಶಿಕ್ಷಣಕ್ಕೂ ಪ್ರಚೋದನೆಗಳಿಗೂ ಯಾವ ಸಂಬಂಧ ಉಂಟು ಮುಂತಾದ ಸಂಗತಿಗಳನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ. ಅದಕ್ಕಾಗಿ ಅವನು ಮನೋವಿಜ್ಞಾನದ ಅಭ್ಯಾಸವನ್ನು ಮಾಡಬೇಕಾಗುವದು.

---

* ಇದೇ ಗ್ರಂಥಕಾರರಿಂದ ಬರೆಯಲ್ಪಟ್ಟ "ಮಕಳ್ಳಿಗೆ ಓದು ಕಲಿಸುವದು" ಎಂಬ ಪುಸ್ತಕದಲ್ಲಿ 'ಲೀಲಾಪದ್ಧತಿ' ಯ ಸವಿಸ್ತಾರವಾದ ವಿವರಗಳನ್ನು ಕೊಟ್ಟಿದೆ.

## ಬುದ್ಧಿಯನ್ನು ಅಳೆಯುವದು

ಬುದ್ಧಿಯ ಸ್ವರೂಪವೇನು, ಬುದ್ಧಿಯು ಹೇಗೆ ಮತ್ತು ಎಷ್ಟರಮಟ್ಟಿಗೆ ಬೆಳೆಯುತ್ತದೆ, ಬುದ್ಧಿಯ ಸಾಮರ್ಥ್ಯಗಳು ಯಾವವು, ಬುದ್ಧಿಯನ್ನು ಅಳೆಯುವ ಬಗೆ ಹೇಗೆ ಮುಂತಾದ ಬುದ್ಧಿಯ ಚಟುವಟಿಕೆಗೆ ಸಂಬಂಧಪಟ್ಟ ವಿಷಯವು ಮನೋವಿಜ್ಞಾನದಲ್ಲಿ ಒಂದು ದೊಡ್ಡ ವಿಭಾಗವೇ ಆಗಿ ಬೆಳೆದಿದೆ. ಬುದ್ಧಿ ಎಂಬುದು ಒಂದು ಸಾಮಾನ್ಯ ಶಕ್ತಿಯೋ ಅಥವಾ ಬೇರೆ ಬೇರೆ ವಿಷಯಗಳಲ್ಲಿ ಕಂಡುಬರುವ ಬೇರೆ ರೇರೆ ಬಗೆಯ ವಿಶೇಷ ಸಾಮರ್ಥ್ಯಗಳೋ? ಎಂಬುದು ಇನ್ನೂ ನಿಶ್ಚಯವಾಗಿಲ್ಲ. ಬೇರೆ ಬೇರೆ ಮಕ್ಕಳಲ್ಲಿ ಬುದ್ಧಿಯ ಮಟ್ಟವು ಹೆಚ್ಚು ಕಡಿಮೆ ಇರಲಿಕ್ಕೆ ಕಾರಣವೇನು? ಆನುವಂಶೀಯತೆ, ಮನೆಯ ಆವರಣ, ಶಿಕ್ಷಣ ಮುಂತಾದ ಅಂಶಗಳು ಬುದ್ಧಿಯ ಮೇಲೆ ಯಾವ ಪರಿಣಾಮವನ್ನು ಮಾಡುತ್ತವೆ? ಸಾಲೆಯ ವಿಷಯಗಳಲ್ಲಿರುವ ಮಗುವಿನ ಸಾಮರ್ಥ್ಯತೆಗಳನ್ನು ಕಂಡುಹಿಡಿಯುವದು ಹೇಗೆ? ಕಲಿತವಿಷಯಗಳಲ್ಲಿ ಅವನ ಪ್ರಗತಿಯನ್ನು ಪರೀಕ್ಷಿಸುವುದು ಹೇಗೆ? ಮುಂತಾದ ಶಿಕ್ಷಣ ವ್ಯವಸಾಯದ ವಿಷಯಗಳನ್ನು ತಿಳಿದುಕೊಳ್ಳಬೇಕಾದರೆ ಮನೋವಿಜ್ಞಾನದ ಅಭ್ಯಾಸ ಅವಶ್ಯ.

## ಮನಸ್ಸಿನ ಆರೋಗ್ಯ ( Mental Hygiene )

ದೇಹದ ಆರೋಗ್ಯ, ಅನಾರೋಗ್ಯ ಇದ್ದಂತೆ ಮನಸ್ಸಿನ ಆರೋಗ್ಯ, ಅನಾರೋಗ್ಯ ಇರುತ್ತದೆ. ಸಮಾಜಕ್ಕೆ ವಿಘಾತಕವಾದ ಚಟುವಟಿಕೆಗಳಲ್ಲಿ ಮಗುವು ತೊಡಗಬೇಕಾದರೆ ಅದು ಅವನ ಮನಸ್ಸಿನ ಅನಾರೋಗ್ಯದ ಲಕ್ಷಣ. ದೊಡ್ಡವರು ಅಪರಾಧಗಳನ್ನು ಮಾಡುವಂತೆ ಮಕ್ಕಳೂ ಅಪರಾಧಗಳನ್ನು ಮಾಡುತ್ತಾರೆ. ಆದರೆ ಅವುಗಳ ಕಾರಣಗಳು ಬೇರೆ ಇರುತ್ತವೆ. ಮಕ್ಕಳ ಮನೋವಿಜ್ಞಾನವನ್ನು ಅಭ್ಯಾಸ ಮಾಡಿದರೆ ಅವರ ಸಾಮಾಜಿಕ ವರ್ತನದ ಮೂಲಗಳನ್ನೂ ಮತ್ತು ಉಪಾಯಗಳನ್ನೂ ಕಂಡುಹಿಡಿಯಲು ಅನುಕೂಲವಾಗುತ್ತದೆ. ಮಕ್ಕಳಲ್ಲಿ ಕಂಡುಬರುವ ಸೋಮಾರಿತನ, ಹಗಲುಗನಸು, ಹಿಂಜರಿಯುವ ವೃತ್ತಿ, ದಬ್ಬಾಳಿಕೆಯ ವೃತ್ತಿ, ಅಳಬುರುಕುತನ, ಆಯಾಸ, ಸುಳ್ಳು ಹೇಳುವದು, ಕಳವು ಮಾಡುವದು, ಮನೆ ಬಿಟ್ಟು ತಿರುಗಾಡುವದು ಮುಂತಾದ ವರ್ತನಗಳ ಕಾರಣಗಳನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ

ಮಕ್ಕಳ ನೀತಿ ಶಿಕ್ಷಣದ ಬಗೆಗೆ ಇತ್ತೀಚೆಗೆ ಮಹತ್ವದ ಸಿದ್ಧಾಂತಗಳನ್ನು ಕಂಡು ಹಿಡಿದಿದ್ದಾರೆ. ಪ್ರತಿಕೂಲ ಪರಿಸ್ಥಿತಿಯ ಪರಿಣಾಮವಾಗಿ ಮಕ್ಕಳ ಸ್ವಾಭಾವಿಕ ಒಲವುಗಳು ನಿರಾಶಹೊಂದುತ್ತವೆ. ಅದರಿಂದ ಅವರ ಮನಸ್ಸಿನಲ್ಲಿ ಅನಾರೋಗ್ಯವು ಉಂಟಾಗುತ್ತದೆ. ಈ ಕಾರಣದಿಂದ ಮಕ್ಕಳು ಚಿಕ್ಕ-ಪುಟ್ಟ ತಪ್ಪುಗಳನ್ನು ಮಾಡುತ್ತಾರೆ. ಅವು ತಿಳುವಳಿಕೆ ಇಲ್ಲದೆ ಮಾಡಿದ ಸಹಜ ಅಪರಾಧಗಳು. ಸಮಾಜದ ರೂಢಿಗಳಿಗೆ ಹೊರತಾದ ನಡೆಗಳನ್ನು ತೋರಿಸುವ ಮಕ್ಕಳಿಗೆ "ಅಡ್ಡನಾಡಿ"ಗಳೆಂದು (ಅಡ್ಡ ನಡೆಯುವವರೆಂದು) ಜನರು ಕರೆಯುತ್ತಾರೆ. ಈ ಅಡ್ಡ ನಡೆಗಳು ಉದ್ದೇಶಪೂರಿತವಾದ ದೊಡ್ಡ ಅಪರಾಧಗಳೆಂದು ತಿಳಿಯುವದು ತಪ್ಪು. ಇಂಥ ಮಕ್ಕಳನ್ನು ತಿದ್ದಿ ಹಾದಿಗೆ ತರುವದು ಶಿಕ್ಷಣದ ಉದ್ದೇಶ. ಆದರೆ ಅದಕ್ಕೆ ಉಪಾಯವು ದಂಡವಲ್ಲ; ಸಹಾನುಭೂತಿಪರವಾದ ಉಪಚಾರ. ಅಡ್ಡ ದಾರಿಯನ್ನು ತುಳಿಯುವ ಮಕ್ಕಳಿಗೆ ಉತ್ತಮ ಪರಿಸ್ಥಿತಿಯನ್ನು ಒದಗಿಸುವದೇ ನಿಜವಾದ ಔಷಧ. ಮಕ್ಕಳ ವ್ಯಕ್ತಿತ್ವವು ಸರಿಯಾಗಿ ಒಡಮೂಡಿ ಬರಬೇಕಾದರೆ ಪ್ರೇಮಮಯ ವಾತಾ-ವರಣವೇ ಬಲವಾದ ಸಾಧನ. ಮನೋವಿಜ್ಞಾನವು ಇಂಥ ನಿಶ್ಚಿತ ಉಪಾಯ ಗಳನ್ನು ಸೂಚಿಸುತ್ತದೆ.

## ವ್ಯಕ್ತಿತ್ವದ ಬೆಳವಣಿಗೆ

ಮನಸ್ಸಿನ ಆರೋಗ್ಯವು ವ್ಯಕ್ತಿತ್ವ ಬೆಳವಣಿಗೆಯ ಒಂದು ಭಾಗ. ಮಗುವಿನ ನಡೆನುಡಿಗಳು ಸಮಾಜಕ್ಕೆ ಹೊಂದಿಕೆಯಾಗಿ ಇದ್ದರೆ ಅವನ ವ್ಯಕ್ತಿತ್ವವು ಸರಿಯಾದ ಮಾರ್ಗದಲ್ಲಿ ಬೆಳೆಯುತ್ತಿದೆ ಎಂದು ಹೇಳಬಹುದು. ಮಕ್ಕಳು ಹುಟ್ಟಿದಂದಿನಿಂದ ಬಾಲ್ಯ, ಯೌವನ, ಪ್ರೌಢಾವಸ್ಥೆಯಲ್ಲಿ ಕಾಲಿಡುತ್ತ, ದಾಟುತ್ತ ನಡೆದ ಹಾಗೆ ಅವರ ವ್ಯಕ್ತಿತ್ವವು ಹೇಗೆ ಮಾರ್ಪಡುತ್ತ ಹೋಗುತ್ತದೆ ಎಂಬುದು ಗೊತ್ತಾದರೆ ಆ ಆ ಅವಸ್ಥೆಗೆ ತಕ್ಕಂತೆ ಶಿಕ್ಷಣದ ಯೋಜನೆಯನ್ನು ಮಾಡಲು ಬರುತ್ತದೆ. ಸಾಲೆಯ ಧ್ಯೇಯವು ಕೇವಲ ಚಿಕ್ಕ ಓದು-ಬರಹ- ಕಲಿಸುವದು ಮಾತ್ರ, ಇರದೆ ಮಗುವಿನಲ್ಲಿ ಹುದುಗಿರುವ ಬಗೆ ಬಗೆಯ ಶಕ್ತಿಗಳನ್ನು ಅರಳಿಸುವದು ಇರುತ್ತದೆ. ಮಗುವಿನ ಬುದ್ಧಿ-ಸಾಮರ್ಥ್ಯ ಗಳನ್ನು ಬೆಳೆಸುವದು, ಜೀವನದಲ್ಲಿ ಉಪಯೋಗವಾಗುವ ಕಲೆ, ಕೈಕೆಲಸ,

ಉದ್ಯೋಗ, ಹಸ್ತಕೌಶಲ್ಯಗಳಲ್ಲಿ ಅವನ ಪ್ರಾವೀಣ್ಯತೆಯನ್ನು ಬೆಳೆಸುವದು, ಇತರರೊಡನೆ ನಡೆದುಕೊಳ್ಳುವ ವ್ಯವಹಾರ ಚತುರತೆಯನ್ನು ಬೆಳೆಸುವದು ತನ್ನ ಸ್ವಂತ ಏಳಿಗೆಯನ್ನು, ಮತ್ತು ಆತ್ಮೋನ್ನತಿಯನ್ನು ಸಾಧಿಸಲು ನೆರವಾಗುವದು—ಸಾಲೆಯು ಮಾಡತಕ್ಕ ಕೆಲಸ. ಮಗುವಿನ ಶೀಲ—ಸ್ವಭಾವ ಗಳನ್ನು ತಿದ್ದುವುದೇ ಶಿಕ್ಷಣದ ಹೆಗ್ಗುರಿ. ಪರಿಸ್ಥಿತಿಯು ಮಗುವಿನ ವರ್ತನದ ಮೇಲೆ ಯಾವ ಪರಿಣಾಮವನ್ನು ಉಂಟು ಮಾಡುತ್ತದೆ ಎಂಬುದು ಶಿಕ್ಷಕನಿಗೆ ಗೊತ್ತಿರಬೇಕು. ಬುದ್ಧಿಯನ್ನು ಅಳೆಯುವಂತೆ ಮನುಷ್ಯನ ಅಭಿರುಚಿಗಳನ್ನೂ ಒಲವುಗಳನ್ನೂ ಅಳೆಯುವ ಒರೆಗಳನ್ನು ರಚಿಸಿದ್ದಾರೆ. ಉದಾಹರಣೆಗಾಗಿ, ತಾರುಣ್ಯವು ಮುಗಿಯುತ್ತ ಬಂದ ಹಾಗೆ ಯುವಕನಲ್ಲಿ ಉದ್ಯೋಗ ವ್ಯವಸಾಯದ ಒಲವು ಹೆಚ್ಚುತ್ತದೆ, ವ್ಯವಹಾರಿಕ ದೃಷ್ಟಿಯು ಬೆಳೆಯುತ್ತದೆ. ಯಾವ ಬಗೆಯ ಉದ್ಯೋಗಗಳ ಕಡೆಗೆ ತರುಣನ ಒಲವುಗಳು ಇರುತ್ತವೆ. ಎಂಬುದನ್ನು ಒರೆಗಳ (Tests) ಸಹಾಯದಿಂದ ಕಂಡುಹಿಡಿದು ಅವಕ್ಕೆ ತಕ್ಕಂತೆ ಸಾಲೆಯ ಅಭ್ಯಾಸ ಕ್ರಮವು ಏರ್ಪಡಬೇಕು. ಹಾಯಸ್ಕೂಲಿನ ಕಡೆಯ ಎರಡು ವರುಷಗಳಲ್ಲಿ ಮತ್ತು ಕಾಲೇಜಗಳಲ್ಲಿ ವೃತ್ತಿ ಶಿಕ್ಷಣದ ಯೋಜನೆಯನ್ನು ಮಾಡಿದರೆ ಅದು ಮಗುವಿನ ಬೆಳವಣಿಗೆಗೆ ತಕ್ಕ ಶಿಕ್ಷಣ ಯೋಜನೆಯಾಗುವದು. ವ್ಯಕ್ತಿತ್ವದ ಪರಿಶೀಲನೆಗಳ (Personality Inventories) ಬಗೆಗೆ ಮತ್ತು ವ್ಯವಸಾಯದ ಒಲವುಗಳ (Vocational Aptitudes) ಬಗೆಗೆ ಕಟ್ಟಿದ ಒರೆಗಳನ್ನು ಉಪಯೋಗಿಸಿ ಅವುಗಳ ಸೂಚನೆಯ ಪ್ರಕಾರ ಮಕ್ಕಳಿಗೆ ಅವರವರ ಶಕ್ತಿ ಮತ್ತು ಅಭಿರುಚಿಗಳಿಗೆ ತಕ್ಕಂತೆ ಜೀವನ ಮಾರ್ಗವನ್ನು ತೋರಿಸವದು ಸಾಲೆಯ ಮುಖ್ಯ ಕೆಲಸ.

ಮಾಧಮಿಕ ಶಿಕ್ಷಣ ಆಯೋಗದವರಾದ ಮುದ್ಲಿಯಾರ ಕಮೀಶನ್ ದವರು ೧೯೫೩ರಲ್ಲಿ ನಮ್ಮ ಈಗಿನ ಶಿಕ್ಷಣ ಪದ್ಧತಿಯ ಕುಂದು ಕೊರತೆಗಳನ್ನು ಎತ್ತಿ ಹೇಳುವಾಗ ವಿದ್ಯಾರ್ಥಿಗಳ ವ್ಯಕಿತ್ವದ ಬೆಳವಣಿಗೆಯು ಯಾವ ಮಾರ್ಗದಲ್ಲಿ ಸಾಗಬೇಕೆಂಬುದರ ಬಗೆಗೆ ಕೆಲವು ಮಾರ್ಮಿಕ ಸೂಚನೆಗಳನ್ನು ಮಾಡಿದ್ದಾರೆ. ಶಿಕ್ಷಕನು ಈ ಬೀಜದ ಮಾತುಗಳನ್ನೂ ಮುಂದಿಟ್ಟು ಕೊಂಡು ನಡೆದರೆ ಸಮಾಜಕ್ಕೂ ಕಲ್ಯಾಣ ಮತ್ತು ವಿದ್ಯಾರ್ಥಿಗಳಿಗೂ ಹಿತಕರ. ನಿಃಶ್ಚೇತ-ವಾದ (Static) ಸಮಾಜಕ್ಕೆ ಹೊಂದಿಕೆಯಾಗುವದನ್ನು ಬಿಟ್ಟು ಸಚೇತನ

(Dynamic) ಸಮಾಜವನ್ನು ಕಟ್ಟಲು ನಾಳಿನ ನಾಗರಿಕರಾದ ಇಂದಿನ ವಿದ್ಯಾರ್ಥಿಗಳಿಗೆ ನೆರವಾಗುವದು ಶಿಕ್ಷಕನ ಮೂಲ ಉದ್ದೇಶವಾಗಿರತಕ್ಕದ್ದೆಂದು ಆಯೋಗದವರು ಸ್ಪಷ್ಟವಾಗಿ ಅಭಿಪ್ರಾಯಪಡುತ್ತಾರೆ. ಪುಸ್ತಕ ವಿದ್ಯೆಯು ಪ್ರಾಧಾನ್ಯವಾಗಿರುವ ಈಗಿನ ಶಿಕ್ಷಣ ಪದ್ಧತಿಯಿಂದ ಮಕ್ಕಳಲ್ಲಿ ವ್ಯಂಗ ವ್ಯಕ್ತಿತ್ವವು ಉಂಟಾಗುತ್ತದೆ. ಪಾಂಡಿತ್ಯ ಶಿಕ್ಷಣದ ( Academic Education) ಜೊತೆಗೆ ಸಾಮಾನ್ಯ ಶಿಕ್ಷಣವನ್ನು (General Education) ಮತ್ತು ವೃತ್ತಿಶಿಕ್ಷಣವನ್ನು (Vocational Education) ಕೊಡುವವರಿಂದ ಮಕ್ಕಳ ವ್ಯಕ್ತಿತ್ವವು ಪೂರ್ತಿಯಾಗಿ ಬೆಳೆಯುವದು. ಸಾಮಾನ್ಯ ಶಿಕ್ಷಣದಲ್ಲಿ ಶೀಲಶಿಕ್ಷಣ (Character Education), ನಾಗರಿಕ ಮಗುವಿನ ವ್ಯಕ್ತಿತ್ವ, (Citizenship Training) ಮತ್ತು ಬಿಡುವಿನ ಚಟುವಟಿಕೆಗಳೂ ( Leisure-time Activities ) ಒಳಗೊಂಡಿರಬೇಕು. ಹೀಗೆ ವ್ಯಕ್ತಿತ್ವದ ಎಲ್ಲ ಮುಖಗಳನ್ನು ಒಂದಕ್ಕೊಂದು ಹೊಂದಿಕೆಯಾಗುವಂತೆ ಬೆಳೆಯಿಸುವರೀತಿಗಳನ್ನು ತಿಳಿದುಕೊಳ್ಳಬೇಕಾದರೆ ಶಿಕ್ಷಕನು ಮನೋ-ವಿಜ್ಞಾನದ ಮತ್ತು ಸಮಾಜ ವಿಜ್ಞಾನದ ಪರಿಚಯುವನ್ನು ಮಾಡಿಕೊಳ್ಳಬೇಕು.

**ಶಿಕ್ಷಕನಿಗೆ ಮನೋವಿಜ್ಞಾನದ ಉಪಯೋಗ**

ಶಿಕ್ಷಣದ ಸಮಸ್ಯೆಗಳನ್ನು ಬಿಡಿಸುವಾಗ ಮನೋವಿಜ್ಞಾನದ ಪರಿಚಯವು ತುಂಬ ನೆರವಾಗುತ್ತದೆ. ಸಾಮಾನ್ಯ ಶಿಕ್ಷಣ, ವೃತ್ತಿಶಿಕ್ಷಣ, ಶಾರೀರಿಕ, ಶಿಕ್ಷಣ, ಪ್ರೌಢ ಶಿಕ್ಷಣ, ಸಹ ಶಿಕ್ಷಣ, ಆಧ್ಯಾತ್ಮಿಕ ಶಿಕ್ಷಣ, ಮುಂತಾದ ಯೋಜನೆಗಳಿಗೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರವನ್ನೂ ಹುಡುಕುವಾಗ ಮನೋ-ವಿಜ್ಞಾನವು ಸಹಾಯ ನೀಡುವದು. ಮನುಷ್ಯನನ್ನು ಕುರಿತು ವಿವೇಚಿಸುವ ಸಾಹಿತ್ಯ, ಕಲೆ, ತತ್ವಜ್ಞಾನ, ಸಮಾಜ ವಿಜ್ಞಾನ, ರಾಜನೀತಿ, ನ್ಯಾಯ, ವೈದ್ಯ, ಶಿಕ್ಷಣ ಮೊದಲಾದ ಎಲ್ಲ ಬಗೆಯ ಅಭ್ಯಾಸಗಳಿಗೂ ಮನೋವಿಜ್ಞಾನವು ಸಂಬಂಧಪಟ್ಟಿರುತ್ತದೆ. ಮಕ್ಕಳ ಶಿಕ್ಷಣವನ್ನು ಕುರಿತು ಆಲೋಚಿಸುವಾಗ ಮನೋವಿಜ್ಞಾನಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳನ್ನು ಶಿಕ್ಷಕನು ತಿಳಿದುಕೊಳ್ಳಬೇಕಾಗುತ್ತದೆ. ಮನಸ್ಸಿನ ಲಕ್ಷಣಗಳು, ವರ್ತನದ ಹಿನ್ನೆಲೆ, ಸಹಜ ಪ್ರೇರಣೆಗಳು, ಪರಂಪರೆ ಮತ್ತು ಪರಿಸ್ಥಿತಿಯ ವರ್ಚಸ್ಸು, ಬುದ್ಧಿ ಬೆಳವಣಿಗೆ ಅಭಿರುಚಿಗಳು, ಒಲವುಗಳು, ಸಾಮರ್ಥ್ಯಗಳು, ವ್ಯಕ್ತಿತ್ವದ ಬೆಳವಣಿಗೆ, ಶಿಕ್ಷಕನ

ವರ್ಚಸ್ಸು, ಮೊದಲಾದ ಮನೋವಿಜ್ಞಾನದ ವಿಷಯಗಳ ಜ್ಞಾನವು ಶಿಕ್ಷನಿಗೆ ಅವಶ್ಯವಾದುದು.

ಶಿಕ್ಷಕನು ಮನೋವಿಜ್ಞಾನವನ್ನು ಅಭ್ಯಾಸಿಸುವುದರಿಂದ ಅವನಲ್ಲಿ ವಿಮರ್ಶೆ ಮಾಡುವ ಶಕ್ತಿ ಮತ್ತು ಪ್ರಯೋಗದ ದೃಷ್ಟಿ ಬೆಳೆಯುತ್ತವೆ, ಕಲಿಸುವ ವ್ಯವಸಾಯದಲ್ಲಿ ನಿಪುಣತೆ ಹೆಚ್ಚುತ್ತದೆ. ಶಿಕ್ಷಕನದು ವ್ಯವಹಾರದ ದೃಷ್ಟಿ. ಈ ವಿಷಯವನ್ನು ಹೇಗೆ ಕಲಿಸಲಿ ? ಈ ಸಾಧನ ಸಾಮಗ್ರಿಗಳನ್ನು ಹೇಗೆ ಉಪಯೋಗಿಸಲಿ? ಈ ಸಂದರ್ಭದಲ್ಲಿ ವಿದ್ಯಾರ್ಥಿಗಳೊಡನೆ ಹೇಗೆ ವರ್ತಿಸಲಿ? ಎಂಬ ಪ್ರಶ್ನೆಗಳು ಶಿಕ್ಷಕನ ಪ್ರತಿ ನಿತ್ಯದ ವ್ಯವಹಾರದಲ್ಲಿ ಅವನ ಮುಂದೆ ಬಂದು ನಿಲ್ಲುತ್ತವೆ. ಮನೋವಿಜ್ಞಾನದ ಸಾಮಾನ್ಯ ತತ್ವಗಳನ್ನೂ, ಪ್ರಯೋಗ ಗಳನ್ನೂ, ದೃಷ್ಟಾಂತಗಳನ್ನೂ ನೆನಪಿನಲ್ಲಿ ಇಟ್ಟುಕೊಂಡಿದ್ದರೆ ಅವನಿಗೆ ಸರಿಯಾದ ಹಾದಿಯು ತಾನೇ ತೋಚುತ್ತದೆ.

ಮನೋವಿಜ್ಞಾನದಲ್ಲಿ ಬೇರೆ ಬೇರೆ ಪಂಥಗಳೂ ವಾದಗಳೂ ಇರುತ್ತವೆ. ಅವುಗಳಲ್ಲಿ ಪ್ರತಿಯೊಂದನ್ನು ಶಿಕ್ಷಣಕ್ಕೆ ಹಚ್ಚಿ ಹೇಳಬಹುದು. ಅದು ಯಾವುದು ಎಷ್ಟರಮಟ್ಟಿಗೆ ತನ್ನ ವ್ಯವಸಾಯದಲ್ಲಿ ಸಹಾಯವಾಗುತ್ತದೆ ಎಂಬು ದನ್ನು ನೋಡಿ ಅದನ್ನು ಶಿಕ್ಷಕನು ತಕ್ಕೊಳ್ಳತಕ್ಕದ್ದು. ಮನೋವಿಜ್ಞಾನವನ್ನು ಕುರಿತು ಬರೆಯಲ್ಪಟ್ಟ ಪುಸ್ತಕಗಳನ್ನು ಓದಿಬಿಡುವದರಿಂದ ಶಿಕ್ಷಕನು ಆದರ್ಶ ಶಿಕ್ಷಕನಾಗಲಾರನು. ತಾನು ಓದಿದ ನಿಯಮಗಳನ್ನೂ, ಸಿದ್ಧಾಂತಗಳನ್ನೂ ಪ್ರತ್ಯಕ್ಷ ಕಾರ್ಯರಂಗದಲ್ಲಿ ಉಪಯೋಗಿಸುವ ಒಳನೋಟ ಮತ್ತು ಕುಶಲತೆ ಅವನಲ್ಲಿ ಇರಬೇಕಾಗುತ್ತದೆ. ಮಕ್ಕಳ ವರ್ತನೆಗಳನ್ನು ನಿರೀಕ್ಷಿಸಿ ಮತ್ತು ಸ್ವಂತ ಅನುಭವಗಳನ್ನು ಪರೀಕ್ಷಿಸಿ ಅವುಗಳನ್ನು ಮನೋವಿಜ್ಞಾನದ ತತ್ವಗಳಿಗೆ ಒರೆ ಹಚ್ಚಿ ನೋಡಬೇಕಾಗುತ್ತದೆ. ಈ ತರಹದ ಜಾಣ್ಮೆ ಇದ್ದ ಶಿಕ್ಷಕನು ಮಾತ್ರ ತನ್ನ ಕಲಿಸುವ ಕಲೆಗೆ ಮಿರುಗನ್ನು ಕೊಡಬಲ್ಲನು.

ರೋಗಿಯನ್ನು ಪರೀಕ್ಷಿಸಿ ವೈದ್ಯನು ಔಷಧವನ್ನು ಕೊಡುವಂತೆ ವಿದ್ಯಾರ್ಥಿ ಯನ್ನು ಪರೀಕ್ಷಿಸಿ ಶಿಕ್ಷಕನು ವಿದ್ಯೆಯನ್ನು ಕೊಡಬೇಕು. ರೋಗಿಯ ದೇಹ ಸಾಮರ್ಥ್ಯವನ್ನು ನೋಡಿ ಆಹಾರವನ್ನು ಕೊಡುವಂತೆ ವಿದ್ಯಾರ್ಥಿಯ ಬುದ್ಧಿ ಸಾಮರ್ಥ್ಯವನ್ನು ನೋಡಿ ವಿಷಯವನ್ನು ಕಲಿಸಬೇಕು. ರೋಗಿಯನ್ನು

ನಿರೋಗಿಯನ್ನಾಗಿ ಮಾಡುವದು ವೈದ್ಯನ ಧ್ಯೇಯವಿದ್ದಂತೆ ಅಶಿಕ್ಷಿತನನ್ನು ಸುಶಿಕ್ಷಿತನನ್ನಾಗಿ ಮಾಡುವದು ಶಿಕ್ಷಕನ ಧ್ಯೇಯವಾಗಿದೆ. ದೇಹದ ಆರೋಗ್ಯವನ್ನು ಕಾಪಾಡಲು ವೈದ್ಯನು ನೆರವಾಗುವಂತೆ ಮನಸ್ಸಿನ ಆರೋಗ್ಯವನ್ನು ಕಾಪಾಡಲು ಶಿಕಕ್ಷನು ನೆರವಾಗಬೇಕು. ವೈದ್ಯನಿಗೆ ಶರೀರ ವಿಜ್ಞಾನದ ಅಭ್ಯಾಸವು ಅವಶ್ಯವಿದ್ದಂತೆ ಶಿಕ್ಷಕನಿಗೆ ಮನೋವಿಜ್ಞಾನದ ಅಭ್ಯಾಸವು ಅವಶ್ಯ. ಮನೋವಿಜ್ಞಾನದ ಪರಿಚಯು ಇಲ್ಲದವನು ಮಕ್ಕಳಿಗೆ ಸರಿಯಾದ ರೀತಿಯಲ್ಲಿ ಶಿಕ್ಷಣವನ್ನು ಕೊಡಲಾರನು. ಮನೋವಿಜ್ಞಾನವು ಶಿಕ್ಷಕನ ಕೈದೀಪಿಗೆ.

ಮನೋವಿಜ್ಞಾನದ ಯಾವ ಯಾವ ಸಂಗತಿಗಳನ್ನು ಮತ್ತು ಸಿದ್ಧಾಂತಗಳನ್ನು ಅರಿತುಕೊಂಡರೆ ಶಿಕ್ಷಕನು ಯಶಸ್ವಿಯಾಗಬಲ್ಲನು ಎಂಬುದನ್ನು ಮುಂದಿನ ಅಧ್ಯಾಯಗಳಲ್ಲಿ ಸವಿಸ್ತಾರವಾಗಿ ವಿವೇಚಿಸಿದೆ.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಶಿಕ್ಷಕನು ಕಲಿಸುವ ಕಲೆಯಲ್ಲಿ ನಿಪುಣನಾಗಬೇಕಾದರೆ ವಿಷಯದ ಅಭ್ಯಾಸಕ್ಕಿಂತ ವಿದ್ಯಾರ್ಥಿಯ ಅಭ್ಯಾಸ ಮಾಡುವದು ಹೆಚ್ಚು ಮಹತ್ವದ್ದು. ಚರ್ಚಿಸಿರಿ.

೨. ಶಿಕ್ಷಣದ ಗೊತ್ತುಗುರಿಗಳನ್ನು ನಿಶ್ಚಯಿಸದಿದ್ದರೂ ಅವುಗಳನ್ನು ಮುಟ್ಟುವ ಹಾದಿಯನ್ನು ಮನೋವಿಜ್ಞಾನವು ತೋರಿಸುತ್ತದೆ. ವಿವರಿಸಿರಿ.

೩. ಕಲಿಸುವ ಪದ್ಧತಿಗಳನ್ನು ಹುಡುಕಲು ಮತ್ತು ಶಿಕ್ಷಣದ ಯೋಜನೆಗಳನ್ನು ತಯಾರಿಸಲು ಮನೋವಿಜ್ಞಾನವು ಸಹಾಯಕವಾಗುತ್ತದೆ. ಉದಾಹರಣೆ ಕೊಟ್ಟು ಸಿದ್ಧಮಾಡಿರಿ.

೪. ಮನೋವಿಜ್ಞಾನವು ಶಿಕ್ಷಣದ ಅಡಿಗಲ್ಲು. ಈ ಮಾತನ್ನು ಉದಾಹರಣೆ ಕೊಟ್ಟು ಸ್ಪಷ್ಟಪಡಿಸಿರಿ.

೫. ಮನೋವಿಜ್ಞಾನವು ಶಿಕ್ಷಕನ ಒರೆಗಲ್ಲು. ಉದಾಹರಣೆಗಳನ್ನು ಕೊಟ್ಟು ಇದರ ಅರ್ಥವನ್ನು ಸ್ಪಷ್ಟಪಡಿಸಿರಿ.

೬. ಮನೋವಿಜ್ಞಾನದ ಅಭ್ಯಾಸವು ಶಿಕ್ಷಕನಿಗೆ ಅವನ ಕಾರ್ಯದಲ್ಲಿ ಹೇಗೆ ನೆರವಾಗುತ್ತದೆ? ಉದಾಹರಣೆ ಕೊಟ್ಟು ವಿವರಿಸಿರಿ.

೭. ಈಗಿನ ಪ್ರಾಥಮಿಕ ಶಿಕ್ಷಣದ ಯೋಜನೆಯು ಎಷ್ಟರ ಮಟ್ಟಿಗೆ ಮನೋವಿಜ್ಞಾನದ ಆಧಾರವನ್ನು ಪಡೆಯಬಲ್ಲದು ? ಚರ್ಚಿಸಿರಿ.

೮. ಶಿಕ್ಷಣ ಸಮಸ್ಯೆಗಳ ವೈಜ್ಞಾನಿಕ ಅಭ್ಯಾಸವು ಇಂಡಿಯಾದಲ್ಲಿ ಎಷ್ಟರ ಮಟ್ಟಿಗೆ ನಡೆದಿದೆ ? ಇಂಥ ಅಭ್ಯಾಸವು ಶಿಕ್ಷಣದ ಕಾರ್ಯಕ್ರಮದ ಮೇಲೆ ಯಾವ ರೀತಿಯ ಪರಿಣಾಮ ಮಾಡುವದು ?

೯. ಮನೋವಿಜ್ಞಾನ ಮತ್ತು ಶಿಕ್ಷಣ ತತ್ವಗಳ ಬಗೆಗೆ ಪಾಶ್ಚಾತ್ಯ ದೇಶಗಳಲ್ಲಿ ಹೇರಳವಾಗಿ ಪುಸ್ತಕಗಳು ಬರೆಯಲ್ಪಡಲಿಕ್ಕೆ ಕಾರಣಗಳು ಯಾವವು? ಆ ಸಾಹಿತ್ಯವನ್ನು ನಮ್ಮ ನಾಡಿನ ಪರಿಸ್ಥಿತಿಗೆ ಎಷ್ಟರ ಮಟ್ಟಿಗೆ ಉಪಯೋಗಿಸಬಹುದು ?

೧೦. ಮನೋವಿಜ್ಞಾನದ ಬೆಂಬಲವಿಲ್ಲದೆ ಶಿಕ್ಷಣ ಕಾರ್ಯಕ್ರಮಗಳ ಯೋಜನೆಗಳನ್ನು ಮಾಡಿದರೆ ಪರಿಣಾಮವೇನಾಗಬಹುದು ? ತರ್ಕಿಸಿ ಬರೆಯಿರಿ. ನಿಮಗೆ ಗೊತ್ತಿದ್ದ ಅಂಥ ಯಾವುದಾದರೊಂದು ಕಾರ್ಯಕ್ರಮದ ಉದಾಹರಣೆಕೊಡಿರಿ.

## ಅಧ್ಯಾಯ ೨

# ಮನಸ್ಸಿನ ಮೂಲ ಲಕ್ಷಣಗಳು

ಶಿಕ್ಷಕನು ಮನೋವಿಜ್ಞಾನದ ಅಭ್ಯಾಸವನ್ನು ಮಾಡುವದು ಅವಶ್ಯವೆಂದು ಹಿಂದಿನ ಅಧ್ಯಾಯದಲ್ಲಿ ತೋರಿಸಲಾಗಿದೆ. ಮನೋವಿಜ್ಞಾನವೆಂದರೇನು, ಅದರಲ್ಲಿ ಬರತಕ್ಕ ವಿಷಯಗಳು ಯಾವವು ಮತ್ತು ಅದನ್ನು ಅಭ್ಯಾಸಿಸುವ ಬಗೆ ಯಾವುದು ಎಂಬುದನ್ನು ಕುರಿತು ಈಗ ಸ್ವಲ್ಪ ವಿಚಾರಿಸುವ.

**ಮನೋವಿಜ್ಞಾನ ಅಂದರೇನು?**

ವರ್ತನ ಮತ್ತು ಅದರ ಪ್ರೇರಣೆಗಳ (Motivation) ಅಭ್ಯಾಸವೇ ಮನೋವಿಜ್ಞಾನ. ನಾವು ಹೇಗೆ ವರ್ತಿಸುತ್ತೇವೆ ಮತ್ತು ಏಕೆ ಎಂಬ ಪ್ರಶ್ನೆಗೆ ಉತ್ತರ ಹುಡುಕುವದು ಮನೋವಿಜ್ಞಾನದ ಕೆಲಸ. ಮನುಷ್ಯ ಮತ್ತು ಇತರ ಪ್ರಾಣಿಗಳ ವೈಯಕ್ತಿಕವಾದ ಮತ್ತು ಸಾಮೂಹಿಕವಾದ ಎಲ್ಲ ಬಗೆಯ ವರ್ತನಗಳ ಅಥವಾ ಚಟುವಟಿಕೆಗಳ ನಿರೀಕ್ಷಣೆ ಮಾಡಿ ಅವುಗಳ ಬಗೆಗೆ ಸಾಮಾನ್ಯ ನಿಯಮಗಳನ್ನು ಅಥವಾ ಸಿದ್ಧಾಂತಗಳನ್ನು ಕಂಡುಹಿಡಿಯುವದನ್ನು ಮನೋವಿಜ್ಞಾನವು ಮಾಡುತ್ತದೆ. ಸಾಮಾನ್ಯ ಬಾಲಕರ, ಯುವಕರ, ಪ್ರೌಢರ, ಮತ್ತು ಹುಚ್ಚರ ಹಾಗೂ ಪ್ರಭಾವಶಾಲಿಗಳ ವರ್ತನದ ಅಭ್ಯಾಸವು ಇದರಲ್ಲಿ ಬರುತ್ತದೆ. ಆದರೆ ಈ ಪುಸ್ತಕವನ್ನು ಶಾಲೆಯ ಶಿಕ್ಷಕರ ಉಪಯೋಗಕ್ಕಾಗಿ ಬರೆದಿರುವುದರಿಂದ ಇದರಲ್ಲಿ ಚಿಕ್ಕಮಕ್ಕಳ ಮತ್ತು ತರುಣರ ಮನೋ-ವಿಜ್ಞಾನಕ್ಕೆ ಹೆಚ್ಚು ಲಕ್ಷ್ಯ ಪೂರೈಸಿದೆ. ಅದರಲ್ಲಿಯೂ ವಿಶೇಷವಾಗಿ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ವಿಷಯಗಳಿಗೆ ಹೆಚ್ಚು ಮಹತ್ವವನ್ನು ಕೊಟ್ಟಿದೆ. ವಿಷಯ ಪ್ರತಿಪಾದನೆಯು ಸ್ಪಷ್ಟವಾಗಿ ತಿಳಿಯಬೇಕೆಂಬ ಉದ್ದೇಶದಿಂದ ಇತರ ಸನ್ನಿವೇಶಗಳ ಮತ್ತು ಪ್ರೌಢರ ಹಾಗೂ ಪ್ರಾಣಿಗಳ ವರ್ತನದ ಉದಾಹರಣೆಗಳನ್ನೂ ಅಲ್ಲಲ್ಲಿ ಕೊಟ್ಟಿದೆ.

ಇಂಗ್ಲಂಡ, ಅಮೇರಿಕಾ, ರಶಿಯಾ ಮೊದಲಾದ ದೇಶಗಳಲ್ಲಿ ಎಲ್ಲ ಬಗೆಯ ವಿಜ್ಞಾನಗಳು ಅಥವಾ ಸಾಯನ್ಸ ಒಳ್ಳೇ ಭರದಿಂದ ಬೆಳೆಯುತ್ತ ಬಂದಿವೆ. ಮನೋವಿಜ್ಞಾನದಲ್ಲಿಯ ಬೇರೆ ಬೇರೆ ಅಂಗಗಳ ಅಭ್ಯಾಸವು ಕೂಡ ದೊಡ್ಡ ಪ್ರಮಾಣದಿಂದ ನಾಗಿದೆ. ಪ್ರಾಣಿ ಮನೋವಿಜ್ಞಾನ, ಬಾಲ ಮನೋವಿಜ್ಞಾನ, ವ್ಯವಸಾಯ ಮನೋವಿಜ್ಞಾನ, ಸಮಾಜ ಮನೋವಿಜ್ಞಾನ, ಹೀಗೆ ಅನೇಕ ತೆರನಾಗಿ ಮನೋವಿಜ್ಞಾನವು ವಿಸ್ತಾರಗೊಳ್ಳುತ್ತ ನಡೆದಿದೆ. ಆದರೆ ಇಂಡಿಯಾದಲ್ಲಿ ಭೌತಿಕ ವಿಜ್ಞಾನಗಳ ಬೆಳವಣಿಗೆಗೆ ಅವಶ್ಯವಾಗಿ ಬೇಕಾಗಿರುವ ಚಿಕಿತ್ಸಕ ಮನೋವೃತ್ತಿಯು ನಾಕಷ್ಟು ಕಂಡುಬರುವದಿಲ್ಲ. ಲೌಕಿಕ ಜೀವನದ ಬಗೆಗೆ ಇರುವ ತಾತ್ಸಾರ ಮತ್ತು ಮೂಢ ನಂಬುಗೆಗಳು ಇದಕ್ಕೆ ಬಲವಾದ ಕಾರಣಗಳು. ಆದರೆ ವೈಜ್ಞಾನಿಕ ಸಂಶೋಧನೆಗಳು ಯಾವ ದೇಶಗಳಲ್ಲಿಯೇ ನಡೆಯಲಿ ಅವು ಇಡೀ ಮಾನವ ಕುಟುಂಬಕ್ಕೆ ಅನ್ವಯಿಸುತ್ತವೆ. ಪಾಶ್ಚಾತ್ಯ ಮನೋವಿಜ್ಞಾನಿಗಳ ಸಿದ್ಧಾಂತಗಳನ್ನೂ ನಮ್ಮ ದೇಶದ ಸನ್ನಿವೇಶಗಳಿಗೆ ಹಚ್ಚಿ ಇಲ್ಲಿ ಶಿಕ್ಷಣದ ವಿಷಯವನ್ನು ಪ್ರತಿಪಾದಿಸಲಾಗಿದೆ.

ಮನೋವಿಜ್ಞಾನವು ಇಪ್ಪತ್ತನೇ ಶತಮಾನದ ಪ್ರಾರಂಭದಿಂದ ಇತ್ತೀಚೆಗೆ ಬೆಳೆಯುತ್ತಿರುವ ವಿಜ್ಞಾನವು. ಇದು ಇನ್ನೂ ಬಾಲ್ಯಾವಸ್ಥೆಯಲ್ಲಿ ಇರುತ್ತದೆ. ಮನೋವಿಜ್ಞಾನವು ಒಂದು ಸಾಯನ್ಸ ಆಗಿ ಸಂಪೂರ್ಣ ಬೆಳೆದರೆ ಮನುಷ್ಯನ ವರ್ತನವನ್ನು ನಿಯಂತ್ರಿಸಲಿಕ್ಕೂ ಮತ್ತು ಅವನ ವರ್ತನದ ಭವಿಷ್ಯವನ್ನು ಹೇಳಲಿಕ್ಕೂ ಬರುವದು. ವಿಜ್ಞಾನಗಳಲ್ಲಿ ಎರಡು ತರಹಗಳು ಇರುತ್ತವೆ. ಪ್ರಮಾಣ ವಿಜ್ಞಾನ ಮತ್ತು ವಾಸ್ತವ ವಿಜ್ಞಾನ. ವಸ್ತುಸ್ಥಿತಿಯನ್ನು ಇದ್ದಕ್ಕೆ ಇದ್ದ ಹಾಗೆ ವರ್ಣಿಸುವದು ವಾಸ್ತವ ವಿಜ್ಞಾನ. ಇದು ಹೀಗೆ 'ಇರುತ್ತದೆ' ಎಂದು ವಾಸ್ತವ ವಿಜ್ಞಾನ ಹೇಳುವದು. ಇದು ಹೀಗೆ 'ಇರತಕ್ಕದ್ದು' ಎಂದು ಪ್ರಮಾಣ ವಿಜ್ಞಾನ ಹೇಳುವದು. ಭೌತಿಕ ವಿಜ್ಞಾನ, ರಸಾಯನ ವಿಜ್ಞಾನ ಮತ್ತು ಪ್ರಾಣಿ ವಿಜ್ಞಾನ ಇವು ವಾಸ್ತವಿಕ ವಿಜ್ಞಾನಗಳು. ನೀತಿಯು ಪ್ರಮಾಣ ವಿಜ್ಞಾನವು. ಮನುಷ್ಯನ ನಡೆನುಡಿಗಳು ಹೀಗೆ ಇರತಕ್ಕದ್ದು, ಸಮಾಜದಲ್ಲಿ ಅವನು ಹೀಗೆ ವರ್ತಿಸತಕ್ಕದ್ದು ಎಂದು ಅದು ಹೇಳುತ್ತದೆ. ಮನೋವಿಜ್ಞಾನವು ವಾಸ್ತವ ವಿಜ್ಞಾನವು. ವರ್ತನದ ನಿಜ ಸ್ವರೂಪವನ್ನೇ ಅದು ಅಭ್ಯಾಸ ಮಾಡುತ್ತದೆ. ವರ್ತನವು ಹೇಗೆ ಇರತಕ್ಕದ್ದು ಎಂಬುದನ್ನು

ಅದು ವಿವೇಚಿಸುವದಿಲ್ಲ. ಈ ವರ್ತನ ಸರಿ, ಆ ವರ್ತನ ತಪ್ಪು ಎಂದು ಒರೆ ಹಚ್ಚಿ ಹೇಳುವದಿಲ್ಲ. ವರ್ತನವು ಒಳ್ಳೆಯದೇ ಇರಲಿ, ಕೆಟ್ಟದೇ ಇರಲಿ ಅದರ ಕಾರಣ ಹುಡುಕುವದು ಮನೋವಿಜ್ಞಾನದ ಕೆಲಸ. ಮನೋವಿಜ್ಞಾನದ ದೃಷ್ಟಿಯಿಂದ ಕೆಟ್ಟ ವರ್ತನವೂ ಅಷ್ಟೇ ಮಹತ್ವದ್ದು, ಒಳ್ಳೇ ವರ್ತನವೂ ಅಷ್ಟೇ ಮಹತ್ವದ್ದು.

ಮನಸ್ಸಿನ ವ್ಯಾಪಾರಗಳನ್ನು ಕುರಿತು ಅಭ್ಯಾಸ ಮಾಡುವದು ಮನೋ-ವಿಜ್ಞಾನವೆಂದು ಹೇಳುವದು ಒಮ್ಮೆ ರೂಢಿಯಾಗಿತ್ತು. ಅದರೆ 'ಮನಸ್ಸು' ಅಂದರೇನು, ಅದರ ನಿಜ ಸ್ವರೂಪವು ಯಾವುದು ಎಂದು ಪ್ರಯೋಗದಿಂದ ತಿಳಿದುಕೊಳ್ಳುವದು ಬಹಳ ಕಠಿಣವಾದ ಮತ್ತು ಸಾಹಸದ ಕೆಲಸವಾದ್ದರಿಂದ ಹಾಗೂ ಆತ್ಮ ಮತ್ತು ಮನಸ್ಸು ಇವುಗಳ ವ್ಯತ್ಯಾಸವನ್ನು ಇನ್ನೂ ನಿಶ್ಚಯಿಸಲು ಬಾರದ್ದರಿಂದ ಮನಸ್ಸಿನ ವ್ಯಾಖ್ಯೆಯನ್ನು ಹೇಳಲು ಇಲ್ಲಿ ಪ್ರಯತ್ನಿಸಿಲ್ಲ. ಇದು ತತ್ವಜ್ಞಾನದ ಕೆಲಸ. ಆದರೆ ಮನುಷ್ಯನ ಚಟುವಟಿಕೆ ಮತ್ತು ಆ ಚಟುವಟಿಕೆಗೆ ಕಾರಣವಾದ ಬೇರೆ ಬೇರೆ ಪ್ರೇರಣೆಗಳ ಅಥವಾ ಪ್ರಚೋದನೆಗಳ ಬಗೆಗೆ ಆಲೋಚಿಸುವದು ಮನೋವಿಜ್ಞಾನದ ಪರಿಮಿತಿ. ಕೆಲವರು ಮನೋವಿಜ್ಞಾನದ ವ್ಯಾಖ್ಯೆಯನ್ನು ಹೇಳಲು ಪ್ರಯತ್ನಿಸುತ್ತಾರೆ. "ಮನಃಪ್ರೇರಿತವಾದ ಪ್ರಾಣಿಗಳ ವರ್ತನೆಯನ್ನು ಮನಸ್ಸಿನ ದೃಷ್ಟಿಯಿಂದ ವಿವರಿಸುವ ವಿಜ್ಞಾನವೇ ಮನೋ-ವಿಜ್ಞಾನ" ವೆಂದು ಡ್ರಿವ್ಹರ್‌ನು ಹೇಳುತ್ತಾನೆ. ಹಾಗಾದರೆ "ಮನಸ್ಸು" ಅಂದರೇನು? "ಚೇತನವುಳ್ಳ ವಸ್ತುವೇ ಮನಸ್ಸು" ಎಂದು ಮ್ಯಾಕಡೂಗಲ್‌ನು ಹೇಳುತ್ತಾನೆ. ಅತ್ತಿತ್ತ ಅಲೆದಾಡುವ ಪ್ರಾಣಿಗಳು ಮನಸ್ಸು ಉಳ್ಳ ಚೇತನ ವಸ್ತುಗಳು.

# ವರ್ತನ

## ವರ್ತನ ಮತ್ತು ಯಂತ್ರಕ್ರಿಯೆ

'ವರ್ತನ' ಅಂದರೇನು ಎನ್ನುವದನ್ನು ನಾವು ಈಗ ವಿಚಾರಿಸ ಬೇಕಾಯಿತು. ವರ್ತನವು ಒಂದು ಕ್ರಿಯೆ. ಯಾವ ಕ್ರಿಯೆಗೆ ವರ್ತನ ಎನ್ನಲು ಬರುತ್ತದೆ, ಯಾವ ಕ್ರಿಯೆಗೆ ವರ್ತನ ಎನ್ನಲು ಬರುವದಿಲ್ಲ ಎಂಬುದನ್ನು

ನೋಡುವ. ಲೋಹಚುಂಬಕವು ಸೂಜಿಯನ್ನು ತನ್ನ ಕಡೆಗೆ ಎಳೆಯುತ್ತದೆ. ಸೂಜಿಯ ಈ ಕ್ರಿಯೆಗೆ ನಾವು 'ವರ್ತನ' ಎಂದು ಕರೆಯುವದಿಲ್ಲ. ಹಾಲಿನ ಪಾತ್ರೆಯನ್ನು ನೋಡಿ ಬೆಕ್ಕು ಅತ್ತಕಡೆಗೆ ಹೋಗುತ್ತದೆ; ನೆಲುವಿಗೆ ಹಾರುತ್ತದೆ; ಪಾತ್ರೆಯನ್ನು ಮೂಸಿ ನೋಡುತ್ತದೆ; ಮುಚ್ಚಳವನ್ನು ನೂಕುತ್ತದೆ; ಹಾಲನ್ನು ಕುಡಿಯುತ್ತದೆ. ಬೆಕ್ಕಿನ ಈ ಕ್ರಿಯೆಗೆ ನಾವು 'ವರ್ತನ' ಎನ್ನುತ್ತೇವೆ. ಈ ಎರಡೂ ಬಗೆಯ ಕ್ರಿಯೆಗಳಲ್ಲಿ ಇರುವ ಅಂತರವೇನು ? ಲೋಹಚುಂಬಕದ ಕಡೆಗೆ ಸರಿಯುವ ಸೂಜಿಯ ಚಲನವನ್ನು ಸಂಪೂರ್ಣವಾಗಿ ಭೌತಿಕ ನಿಯಮಗಳ ಸಹಾಯದಿಂದ ತಿಳಿಸಿ ಹೇಳಲು ಬರುತ್ತದೆ. ಆದರೆ ಬೆಕ್ಕಿನ ವರ್ತನವನ್ನು ಅದೇ ರೀತಿಯಾಗಿ ಹೇಳಲು ಬರುವದಿಲ್ಲ. ಬೆಕ್ಕಿನ ಕ್ರಿಯೆಗೆ ಹೊರಗಿನ ಸನ್ನಿವೇಶಗಳೇ ಸಂಪೂರ್ಣವಾಗಿ ಕಾರಣವಾಗಿರುವದಿಲ್ಲ. ಅದರ ವರ್ತನವು ಸ್ವಯಂಪ್ರೇರಿತವಾದದ್ದು. ಹಸಿವಿನಿಂದ ಪ್ರಚೋದಿತವಾದ ಬೆಕ್ಕು ಹಾಲನ್ನು ಕುಡಿದು ತನ್ನ ಹಸಿವೆಯನ್ನು ಹಿಂಗಿಸಿಕೊಳ್ಳುತ್ತದೆ. ಇದು ಅದರ ಗುರಿ ಅಥವಾ ಉದ್ದೇಶ. ಹಸಿವೆ ಪೀಡಿಸದೇ ಇದ್ದರೆ ಆ ಬೆಕ್ಕು ಒಲೆಯ ಮುಂದೆ ಸುಮ್ಮನೇ ಕಣ್ಣು ಮುಚ್ಚಿಕೊಂಡು ಮಲಗುತ್ತಿತ್ತು. ಹಾಲನ್ನು ಬೆದಕುವ ಗೋಜಿಗೆ ಹೋಗುತ್ತಿರಲಿಲ್ಲ. ಆದರೆ ಸೂಜಿಗೆ ಈ ತರಹದ ಸ್ವಾತಂತ್ರ್ಯವು ಇಲ್ಲ. ಬೆಕ್ಕಿನ ವರ್ತನಕ್ಕೆ ಗುರಿ ಇದ್ದಂತೆ ಸೂಜಿಯ ಕ್ರಿಯೆಗೆ ಗುರಿ ಅಥವಾ ಉದ್ದೇಶವು ಇಲ್ಲ. ಲೋಹಚುಂಬಕವನ್ನು ಅದರ ಸಮೀಪಕ್ಕೆ ತಂದ ಕೂಡಲೇ ಸೂಜಿಯು ಅದಕ್ಕೆ ಅಂಟಿಕೊಳ್ಳಲೇಬೇಕು. ಬೆಕ್ಕು ನೆಲುವಿಗೆ ಒಮ್ಮೆ ಇತ್ತಿಂದ ಜಿಗಿದು ಒಮ್ಮೆ ಅತ್ತಿಂದ ಜಿಗಿದು ಮುಚ್ಚಳವನ್ನು ದೂಡಿ ಅಥವಾ ಹಾಲನ್ನು ಕೆಳಗೆ ಚಲ್ಲಿ ತನ್ನ ಕಾರ್ಯವನ್ನು ಸಾಧಿಸಬಹುದು. ಆದರೆ ಈ ತರಹದ ವೈವಿಧ್ಯವು ಸೂಜಿಯ ಚಲನದಲ್ಲಿ ಇರುವದಿಲ್ಲ. ಇಂಥ ಅನೇಕ ಉದಾಹರಣೆಗಳನ್ನು ಕೊಡಬಹುದು. ಗಡಿಯಾರದ ಮುಳ್ಳಿನ ಚಲನವು ಭೌತಿಕ ನಿಯಮಗಳಿಗೆ ಒಳಪಟ್ಟಿರುತ್ತದೆ, ಇದು ವರ್ತನವಲ್ಲ. ಆದರೆ ತೋಟದಲ್ಲಿ ಸದ್ದಿಲ್ಲದೆ ಮಾವಿನ ಹಣ್ಣನ್ನು ಹರಿಯುವ ಹುಡುಗನ ಕ್ರಿಯೆಯೂ, ತನ್ನ ಸಿಂಗಾರಕ್ಕಾಗಿ ಹೆಳಲಲ್ಲಿ ಹೂವನ್ನು ಮುಡಿದುಕೊಳ್ಳುವ ಹುಡುಗೆಯ ಕ್ರಿಯೆಯೂ, ವರ್ತನ ಎನ್ನಿಸಿಕೊಳ್ಳುವವು. ಹುಡುಗರು ಒಗೆದಾಡುವ ಚೆಂಡಿನ ಚಲನವು ಒಗೆಯುವ ಶಕ್ತಿ, ಗಾಳಿಯ ತಡೆ, ಭೂಮಿಯ ಘರ್ಷಣಶಕ್ತಿ,

ಗುರುತ್ವಾಕರ್ಷಣ ಮೊದಲಾದ ಭೌತಿಕ ನಿಯಮಗಳಿಗೆ ಸಂಬಂಧಿಸಿರುತ್ತದೆ. ಚಂಡಿಗೆ ಸ್ವಯಂಪ್ರೇರಣೆ ಇರುವದಿಲ್ಲ. ಆದರೆ ಹುಡುಗರು ಕಲ್ಲು ಎಸೆದು ಗುಬ್ಬಿಯನ್ನು ಹಾರಿಸುವಾಗ ಅಲ್ಲಿ ಕೇವಲ ಭೌತಿಕನಿಯಮಗಳಷ್ಟೇ ಅನ್ವಯಿಸುವದಿಲ್ಲ. ಚಂಡಿನ ಚಲನವು ಯಂತ್ರದ ಕ್ರಿಯೆಯು; ಗುಬ್ಬಿಯ ಚಲನವು ಯಂತ್ರದ ನಿಯಮಗಳಿಗೆ ಒಳಪಡದ ವರ್ತನವು. ಗುಬ್ಬಿಯ ವರ್ತನಕ್ಕೆ ಅದರ ಅಂತಃಪ್ರೇರಣೆಯೇ ಮುಖ್ಯ ಕಾರಣ. ಚಂಡಿನ ಚಲನಕ್ಕೆ ಕೇವಲ ಬಾಹ್ಯ ಸೃಷ್ಟಿಯ ನಿಯಮಗಳೇ ಕಾರಣ. ಅದೇ ಸನ್ನಿವೇಶದಲ್ಲಿ ಇದ್ದರೂ ಗುಬ್ಬಿಯು ಬೇರೆ ಬೇರೆ ಕಾಲಕ್ಕೆ ತನ್ನ ವರ್ತನವನ್ನು ಬದಲಾಯಿಸಬಹುದು. ಅದು ತನ್ನ ಸುರಕ್ಷಿತೆಗಾಗಿ ಒಮ್ಮೆ ಒಂದು ಗಿಡಕ್ಕೆ ಹಾರಿದರೆ ಮತ್ತೊಮ್ಮೆ ಮತ್ತೊಂದು ಗಿಡಕ್ಕೆ ಹಾರಿಹೋಗಬಹುದು. ಚಂಡಿನ ಚಲನವು ಅದೇ ಸನ್ನಿವೇಶದಲ್ಲಿ ಯಾವಾಗಲೂ ಅದೇ ರೀತಿಯಾಗಿ ನಡೆಯುವದರಿಂದ ಅದರಲ್ಲಿ ವೈವಿಧ್ಯತೆಯು ಇರುವದಿಲ್ಲ. ಒಟ್ಟಿನಲ್ಲಿ, ಪ್ರಾಣಿಯ ವರ್ತನವು **ಉದ್ದೇಶ**ಯುತವಾದುದು; ಯಂತ್ರದ ಕ್ರಿಯೆಯು ಉದ್ದೇಶರಹಿತವಾದುದು. ಮನುಷ್ಯನ ವರ್ತನಕ್ಕೆ ಆಹಾರ, ಆಶ್ರಯ, ಶಾಂತಿ, ವಿಶ್ರಾಂತಿ, ಹೊನ್ನು, ಹೆಣ್ಣು, ಜಯ, ಗೌರವ, ಅಧಿಕಾರ, ಪರೋಪಕಾರ, ಸತ್ಯ, ಸುಖ ಮೊದಲಾದ ಯಾವುದಾದರೊಂದು ಉದ್ದೇಶ ಅಥವಾ ಗುರಿಯು ಕಾರಣವಾಗಿರುತ್ತದೆ. ವರ್ತನದ ಗುಟ್ಟು ಉದ್ದೇಶ. ಪ್ರಾಣಿಯ ಉದ್ದೇಶಯುತ ಕ್ರಿಯೆಯೇ ವರ್ತನವು. ಗುರಿಯನ್ನು ಮುಟ್ಟುವ ಮಾರ್ಗದ ದೂರದೃಷ್ಟಿ ಮತ್ತು ಗುರಿಯನ್ನು ಮುಟ್ಟಲು ಅವಶ್ಯಕವಾದ ಚಟುವಟಿಕೆ ಇವು ವರ್ತನದಲ್ಲಿ ಅಡಕವಾಗಿವೆ. ವರ್ತನದ **ಕಾರಣವು** ಹೊರಗಿನ ಸನ್ನಿವೇಶ ಎಂದು ಅನ್ನುವದಕ್ಕಿಂತ ಒಳಗಿನ ಪ್ರೇರಣೆ ಎಂದು ಅನ್ನುವದು ಹೆಚ್ಚು ಸಮಂಜಸ.

ಭೌತಿಕ ವಿಜ್ಞಾನದ ನಿಯಮಗಳ ಸಹಾಯದಿಂದ ವರ್ತನವನ್ನೂ ತಿಳಿಸಿ ಹೇಳಲು ಬರುತ್ತದೆಂದು 'ವರ್ತನವಾದಿಗಳು' ಪ್ರತಿಪಾದಿಸುತ್ತಾರೆ. ಮನೋವಿಜ್ಞಾನಿಗಳಲ್ಲಿ ಇವರದೂ ಒಂದು ಪಂಥ. ಬಡಿದರೆ ಗಂಟೆಯು ಸಪ್ಪಳ ಮಾಡುವಂತೆ ನಾಯಿಯೂ ಸಪ್ಪಳ ಮಾಡುತ್ತದೆ (ಒದರುತ್ತದೆ). ಎರಡೂ ಕ್ರಿಯೆಗಳು ಒಂದೇ. ಒಂದು ಸ್ವಲ್ಪ ಕ್ಲಿಷ್ಟವಾಗಿದ್ದರೆ ಇನ್ನೊಂದು ಹೆಚ್ಚು ಕ್ಲಿಷ್ಟವಾಗಿರುತ್ತದೆ. ಇದೇ ಇವುಗಳಲ್ಲಿಯ ಹೆಚ್ಚುಕಡಿಮೆ. ಈ ರೀತಿ

ಇವರ ವಾದಸರಣಿ. ಯಂತ್ರಕ್ರಿಯೆ ಮತ್ತು ಪ್ರಾಣಿವರ್ತನ ಇವುಗಳಲ್ಲಿಯ ವ್ಯತ್ಯಾಸವನ್ನು ತಾತ್ವಿಕ ದೃಷ್ಟಿಯಿಂದ ನೋಡುವದು ಮನೋವಿಜ್ಞಾನಕ್ಕೆ ಮೀರಿದ ಮಾತು. ಇಡೀ ಜಗತ್ತು ಒಂದು ದೃಷ್ಟಿಯಿಂದ ಯಂತ್ರವೆಂದು ತೋರಿದರೆ ಮತ್ತೊಂದು ದೃಷ್ಟಿಯಿಂದ ಸಚೇತನವೆಂದು ತೋರುತ್ತದೆ. ಪರಮಾಣು (ಇಲೆಕ್ಟ್ರಾನ್ಸ) ಗಳಿಗೂ ಸ್ವತಂತ್ರ ಇಚ್ಛೆ ಇರುತ್ತದೆಂದು ಭೌತಿಕ ವಿಜ್ಞಾನದ ಹೊಸ ಸಂಶೋಧನವಾಗಿದೆ. ಅದು ಏನೇ ಇರಲಿ, ನಮ್ಮದು ವ್ಯವಹಾರ ದೃಷ್ಟಿ. ವರ್ತನವು ಯಂತ್ರಕ್ರಿಯೆಯಲ್ಲ; ಅದರ ವೈಶಿಷ್ಟ್ಯಗಳೇ ಬೇರೆ ಎಂಬುದು ನಮ್ಮ ಗ್ರಹಿಕೆ. ವರ್ತನದ ಎರಡು ಮುಖ್ಯ ಲಕ್ಷಣಗಳೆಂದರೆ— **ಗುರಿಶೋಧನೆ** ಮತ್ತು **ಕಾರ್ಯವೈವಿಧ್ಯತೆ.** ಈ ಗ್ರಹಿಕೆಯನ್ನು ಬಿಟ್ಟರೆ ನಾವು ವಿವೇಚಿಸುವದು ಮನೋವಿಜ್ಞಾನವಾಗದೆ ಶರೀರವಿಜ್ಞಾನವಾಗುತ್ತದೆ.

### ಸಜೀವ ಪ್ರಾಣಿ

ನಮ್ಮ ಗ್ರಹಿಕೆಯನ್ನು ಬೇರೆ ಮಾತಿನಲ್ಲಿ ಹೀಗೆ ಹೇಳಬಹುದು— ವರ್ತನವು ಸಜೀವ ಪ್ರಾಣಿಯ ಚಟುವಟಿಕೆ, ಆದರೆ ಯಂತ್ರಕ್ರಿಯೆಯು ನಿರ್ಜೀವ ವಸ್ತುವಿನ ಚಲನವಲನ. ಈ ವ್ಯತ್ಯಾಸದ ಮೇಲಿಂದ ಜಗತ್ತಿನೊಳಗಿನ ವಸ್ತುಗಳಲ್ಲಿ ಸಚೇತನ ಮತ್ತು ಅಚೇತನ ಎಂಬ ಎರಡು ವರ್ಗಗಳನ್ನು ಮಾಡಬಹುದು. ಎಲ್ಲ ಜೀವಿಗಳು ಸಚೇತನ ವಸ್ತುಗಳು. ಎಲ್ಲ ಜಡ ಪದಾರ್ಥಗಳು ಅಚೇತನ ವಸ್ತುಗಳು. ಜೀವಿಯು ಜಡ ಪದಾರ್ಥದಿಂದ ಭಿನ್ನವಾಗಿರುತ್ತದೆ. ಇದು ಚೇತನವಾದಿಗಳ ಮೂಲ ಸೂತ್ರ. ಸಜೀವ ವಸ್ತುಗಳ ಲಕ್ಷಣಗಳನ್ನು ನೋಡಿದರೆ ಈ ದೃಷ್ಟಿಯು ಸರಿಯೆಂದು ನಮಗೆ ತೋರುತ್ತದೆ. ಸಜೀವ ವಸ್ತುವಿನ—ಪ್ರಾಣಿಯ—ಮುಖ್ಯ ಲಕ್ಷಣಗಳು ಆವವೆಂದರೆ : (೧) ಭೌತಿಕ ವಿಜ್ಞಾನದ ನಿಯಮಗಳ ಪ್ರಕಾರ ಕೆಲವು ಜಡ ಪದಾರ್ಥಗಳನ್ನು ಕೂಡಿಸಿ ಒಂದು ಜೀವಜಂತುವನ್ನು ಮಾಡಲು ಬರುವದಿಲ್ಲ. ಜೀವವುಳ್ಳ ಎರಡು ಗಂಡು ಹೆಣ್ಣುಗಳ ಕೂಟದಿಂದಲೇ ಮತ್ತೊಂದು ಸಜೀವ ಪ್ರಾಣಿಯು ಉಂಟಾಗುತ್ತದೆ. ಶರೀರದ ಕೆಲವು ವ್ಯಾಪಾರಿಗಳಿಗೆ ಭೌತಿಕ ಮತ್ತು ರಸಾಯನ ನಿಯಮಗಳು ಅನ್ವಯಿಸುತ್ತವೆ ಎಂಬುದು ನಿಜ. ಇವಕ್ಕೆ ಪರಾವರ್ತನ ಕ್ರಿಯೆ ಅನ್ನುತ್ತಾರೆ. ಆದರೆ ಈ ನಿಯಮಗಳಿಂದ ಜೀವನದ ಎಲ್ಲ ಬಗೆಯ ಚಟುವಟಿಕೆಗಳನ್ನು ಸಂಪೂರ್ಣ

ತಿಳಿಸಿ ಹೇಳಲು ಬರುವದಿಲ್ಲ. (೨) ಪ್ರಾಣಿಯು ದೇಹವು ಒಟ್ಟಾಗಿ ಕೆಲಸ ನಡೆಯಿಸುತ್ತದೆ. ಅವಯವಗಳು ಬೇರೆ ಬೇರೆ ಕಂಡರೂ ಅವುಗಳನ್ನು ನಡೆಸುವ ಸೂತ್ರವು ಒಂದೇ ಇರುತ್ತದೆ. (೩) ಪ್ರಾಣಿಗೆ ಕೆಲಸಮಟ್ಟಿಗೆ ಇಚ್ಛಾ ಸ್ವಾತಂತ್ರ್ಯ ಇರುತ್ತದೆ. ಮಗುವು ಬೇಕಾದರೆ ಆಡಲಿಕ್ಕೆ ಹೋಗಬಹುದು, ಬೇಡಾದರೆ ಬಿಡಬಹುದು. ಆಟದ ನಿಯಮಗಳನ್ನು ಅವನು ಪಾಲಿಸಬಹುದು, ಉಲ್ಲಂಘಿಸ ಬಹುದು ಅಥವಾ ಬದಲಿಸಬಹುದು. (೪) ಕೂಳನ್ನು ತಿಂದು ಅರಗಿಸಿ ಪ್ರಾಣಿಯು ಬೆಳೆಯುತ್ತದೆ. ಆದರೆ ಯಂತ್ರಗಳಿಗೆ ಈ ತರಹದ ಶಕ್ತಿ ಇರುವದಿಲ್ಲ. (೫) ಪ್ರಾಣಿಗೆ ತನ್ನಂಥ ಮತ್ತೊಂದು ಪ್ರಾಣಿಯನ್ನು ಹುಟ್ಟಿಸುವ ಸಾಮರ್ಥ್ಯವು ಇರುತ್ತದೆ. ಆದರೆ ಯಂತ್ರವು ತನ್ನಂಥ ಮರಿ ಯಂತ್ರವನ್ನು ಹಡೆಯುವದಿಲ್ಲ. (೬) ಪ್ರಾಣಿಗೆ ಗಾಯವಾದಲ್ಲಿ ಅದನ್ನು ಮಾಯಿಸಿಕೊಳ್ಳುವ ಶಕ್ತಿ ಅದರ ದೇಹರಚನೆಯಲ್ಲಿಯೇ ಇರುತ್ತದೆ. ಮುರಿದ ಟೊಂಗೆಯು ಮತ್ತೆ ಚಿಗಿಯುತ್ತದೆ; ಕತ್ತರಿಸಿದ ಕೂದಲು ಬೆಳೆಯು ತ್ತದೆ; ಹುಣ್ಣು ಮಾಯುತ್ತದೆ; ಹಲ್ಲಿಯು ಕಳಕೊಂಡ ಬಾಲವು ಮತ್ತೆ ಮೊಳೆಯುತ್ತದೆ. ಆದರೆ ಗಡಿಯಾರವಾಗಲಿ, ಮೋಟಾರ ಆಗಲಿ ತನ್ನ ದುರಸ್ತಿಯನ್ನು ತಾನೇ ಮಾಡಿಕೊಳ್ಳಲಾರದು.

ಇವುಗಳನ್ನೆಲ್ಲ ವಿಚಾರಿಸಿ ನೋಡಿದರೆ ಪ್ರಾಣಿಯು ಒಂದು ವಿಚಿತ್ರ ಯಂತ್ರವೆಂಬ ವಾದವು ತಪ್ಪು ಎಂದು ಹೊಳೆಯುತ್ತದೆ. ಪ್ರಾಣಿಯ ವರ್ತನಕ್ಕೂ ಯಂತ್ರದ ಕ್ರಿಯೆಗೂ ಹೋಲಿಕೆ ಇರುವದಿಲ್ಲ. ಜಡ ವಸ್ತುಗಳ ಕ್ರಿಯೆಗಳು ಯಾಂತ್ರಿಕವಾಗಿರುವುದರಿಂದ ಮನೋವಿಜ್ಞಾನವು ಅವುಗಳಿಗೆ ಸಂಬಂಧಪಟ್ಟಿರುವದಿಲ್ಲ. ಮನೋವಿಜ್ಞಾನದ ವಿಷಯವು ವರ್ತನವು ಯಂತ್ರ ಕ್ರಿಯೆಯಲ್ಲ. ಅದು ಜೀವಿಗಳ ಕ್ರಿಯೆಗಳಿಗೆ ಸಂಬಂಧಪಟ್ಟಿರುತ್ತದೆ. ಜೀವವಿದ್ದಲ್ಲಿ ಸ್ವಯಂಪ್ರೇರಿತ ಚಟುವಟಿಕೆ ಇರುತ್ತದೆ.

## ಮನಸ್ಸು

ಯಂತ್ರ ಮತ್ತು ಪ್ರಾಣಿ ಇವುಗಳಲ್ಲಿ ಇರುವ ವ್ಯತ್ಯಾಸವನ್ನು ಬೇರೆ ರೀತಿಯಲ್ಲಿ ಒಂದೇ ಒಂದು ಶಬ್ದದಿಂದ ಹೇಳುವದಾದರೆ ಅದು 'ಮನಸ್ಸು'. ಪ್ರಾಣಿಯಲ್ಲಿ ಮನಸ್ಸು ಇರುತ್ತದೆ; ಯಂತ್ರದಲ್ಲಿ ಮನಸ್ಸು ಇರುವದಿಲ್ಲ. ಈ

ಮನಸ್ಸು ಇರುವದರಿಂದಲೇ ಪ್ರಾಣಿಯ ಚಟುವಟಿಕೆಯು ಯಾಂತ್ರಿಕ ಕ್ರಿಯೆ ಆಗದೆ ವರ್ತನ ಆಗುತ್ತದೆ. 'ಮನಸ್ಸು' ಅಂದರೇನು? ಮನಸ್ಸಿನ ಸರಿಯಾದ ವ್ಯಾಖ್ಯೆಯನ್ನು ಹೇಳಲು ಬರುವಂತಿಲ್ಲ. ಮನಸ್ಸು ಒಂದು ಸ್ಥೂಲವಾದ ವಸ್ತುವಲ್ಲ; ಅದು ಮಿದುಳಿನ ಒಂದು ಭಾಗವಲ್ಲ. ಅದು ಇಡೀ ದೇಹವನ್ನೇ ವ್ಯಾಪಿಸಿರುವ ಒಂದು ಅಮೂರ್ತ ಮತ್ತು ಅಖಂಡವಾದ ಚೈತನ್ಯವು. ಮಿದುಳು ಮತ್ತು ಮಜ್ಜಾವ್ಯೂಹವು ಅದರ ವ್ಯೆದೋರುವ ಸ್ಥೂಲ ಸಾಧನಗಳು. ಮನಸ್ಸಿನಲ್ಲಿ ಉಂಟಾಗುವ ಆಶೆ, ಆಕಾಂಕ್ಷೆ, ಬಯಕೆ, ಹೆದರಿಕೆ, ಭಯ, ಭಕ್ತಿ, ಸಂಕಲ್ಪ, ಊಹೆ, ತರ್ಕ, ವಿಚಾರ ಮೊದಲಾದ ಸಂಗತಿಗಳು ಅಮೂರ್ತವಾಗಿರುತ್ತವೆ. ಮ್ಯಾಕ್‌ಡೂಗಲ್‌ಸು ಹೇಳುವಂತೆ ಜೀವಿಯ ಅನುಭವದಲ್ಲಿ ಮತ್ತು ಅದರ ವರ್ತನದಲ್ಲಿ ವ್ಯಕ್ತವಾಗುವ ವಸ್ತುವೇ 'ಮನಸ್ಸು'. ಎಷ್ಟು ಚಿಕ್ಕ ಪ್ರಾಣಿಯಾದರೂ ಅದರಲ್ಲಿರುವ ಈ ಮನಸ್ಸೇ ಅದನ್ನು ಯಂತ್ರದಿಂದ ಬೇರೆ ಮಾಡುತ್ತದೆ. ವ್ಯವಹಾರದ ದೃಷ್ಟಿಯಿಂದ ಮನಸ್ಸಿನ ಸ್ವರೂಪವನ್ನು ಈ ರೀತಿಯಾಗಿ ವಿವರಿಸಬಹುದು—ವರ್ತನದ ಹಿನ್ನಲೆಯಾಗಿದ್ದು ಅದನ್ನು ನಿಯಂತ್ರಿಸುವ ಅಥವಾ ಪ್ರಚೋದಿಸುವ ವಸ್ತುವೇ 'ಮನಸ್ಸು.' ಮನಸ್ಸು ವರ್ತನೆಗಳ ಸೂತ್ರಧಾರಕನಂತೆ ಇದೆ. ವರ್ತನವನ್ನು ನಿರೀಕ್ಷಿಸಿ ಮನಸ್ಸಿನ ಸ್ವರೂಪದ ಬಗೆಗೆ ತರ್ಕಿಸಲು ಬರುತ್ತದೆ. ಮನಸ್ಸನ್ನು ಕುರಿತು ಇದಕ್ಕೂ ಹೆಚ್ಚಾಗಿ ವಿವೇಚಿಸುವದು ಶಿಕ್ಷಕರಿಗೆ ಅವಶ್ಯವಿಲ್ಲ. ವರ್ತನದ ಕಾರಣಗಳನ್ನು ತಿಳಿದುಕೊಳ್ಳುವಾಗ ಜಡ ಪದಾರ್ಥ ವಿಜ್ಞಾನದ ನಿಯಮಗಳ ಕಡೆಗೆ ನೋಡದೆ ಮನಸ್ಸಿನ ನಿಯಮಗಳ ಕಡೆಗೆ ನೋಡಬೇಕು.

## ಮನಸ್ಸು ಮತ್ತು ದೇಹ

ಈ ವಿಷಯದ ಬಗೆಗೆ ಮೂರು ಬೇರೆ ಬೇರೆ ವಾದಗಳು ಇರುತ್ತವೆ. ಮನಸ್ಸು ಬೇರೆ, ದೇಹ ಬೇರೆ ಎಂದು ದ್ವೈತಿಗಳು ಹೇಳುತ್ತಾರೆ. ದೇಹ ಎಂಬ ಸ್ಥೂಲ ವಸ್ತು ಇಲ್ಲವೇ ಇಲ್ಲ; ಆದುದರಿಂದ ಮನಸ್ಸು ಎಂಬ ಒಂದೇ ಒಂದು ವಸ್ತು ಇರುತ್ತದೆ ಎಂದು ಅದ್ವೈತಿಗಳು ಹೇಳುತ್ತಾರೆ. ಮತ್ತೆ ಕೆಲವರು ಮನಸ್ಸು ಎಂಬ ವಸ್ತುವೇ ಇಲ್ಲ; ದೇಹ ಎಂಬ ಒಂದೇ ಒಂದು ವಸ್ತುವು ಇರುವದು ಎಂದು ಕೆಲವರು ಪ್ರತಿಪಾದಿಸುತ್ತಾರೆ. ಮನಸ್ಸು ಮತ್ತು ದೇಹ

ಗಳ ಸಂಬಂಧವನ್ನು ಕುರಿತು ಆಳವಾಗಿ ವಿಚಾರ ಮಾಡುವದು ತತ್ತ್ವಜ್ಞಾನದ ಕೆಲಸ. ಈ ತೊಡಕಿನ ಬಗೆಗೆ ವಿಶೇಷವಾಗಿ ಅಭ್ಯಾಸ ಮಾಡುವದು ಶಿಕ್ಷಣ ಮನೋವಿಜ್ಞಾನದ ಕೆಲಸವಲ್ಲ. ಮನಸ್ಸು ಮತ್ತು ದೇಹಗಳ ಸಂಬಂಧದ ಬಗೆಗೆ ಶಿಕ್ಷಕನು ಇತರ ಸಾಮಾನ್ಯ ಜನರಂತೆ ವ್ಯಾವಹಾರಿಕ ದೃಷ್ಟಿಯನ್ನು ಇಟ್ಟುಕೊಳ್ಳಬೇಕು. ವಿಚಾರಗಳು ಹೆಚ್ಚು ಹೆಚ್ಚು ಒಳ್ಳೆಯವು ಇದ್ದಹಾಗೆ ಕೃತಿಗಳು ಹೆಚ್ಚು ಹೆಚ್ಚು ಒಳ್ಳೆಯವು ಆಗಿರುತ್ತವೆ ಎಂಬುದು ಎಲ್ಲರ ಅನುಭವದಲ್ಲಿ ಬಂದ ಮಾತು. ಮನೆಯ ಕೆಲಸ, ಶಾಲೆಯ ಕೆಲಸ, ಪಂಚವಾರ್ಷಿಕ ಯೋಜನೆ, ಹೀಗೆ ಸಣ್ಣದೊಡ್ಡ ಎಲ್ಲ ಕೆಲಸಗಳಲ್ಲಿ ಈ ಸಂಬಂಧದ ಅನುಭವವು ನಮಗೆ ಬರುತ್ತದೆ.

## ಮನಸ್ಸು ಮತ್ತು ವರ್ತನ

ವರ್ತನದ ಎರಡು ಮುಖ್ಯ ಲಕ್ಷಣಗಳಾದ **ಗುರಿಶೋಧನೆ** ಮತ್ತು **ಕಾರ್ಯವ್ಯತ್ಯಾಸ** ಇವು ಮನಸ್ಸು ಉಂಟೆಂಬುದಕ್ಕೆ ಬಲವಾದ ಸಾಕ್ಷಿಗಳು. ಗುರಿಯನ್ನು ಗೊತ್ತುಪಡಿಸಿ ಅದರ ಕಡೆಗೆ ಪ್ರಾಣಿಯನ್ನು ಎಳೆಯುವದು ಮನಸ್ಸೇ! ಅದರಂತೆ ಗುರಿಯನ್ನು ಮುಟ್ಟಲಿಕ್ಕೆ ನಡೆಯಿಸಿದ ಚಟುವಟಿಕೆಗಳಲ್ಲಿ ಬೇಕಾದ ಬದಲಾವಣೆಗಳನ್ನು ಮಾಡಲು ಪ್ರೇರಿಸುವದೂ ಮನಸ್ಸೇ. ಇವಲ್ಲದೆ ಮನಸ್ಸಿನಲ್ಲಿ ನಾನಾಬಗೆಯ ಗೇನಿಕೆಗಳು ನಡೆಯುತ್ತವೆ. ಆಶೆ, ನಿರಾಶೆ, ಸಂತೋಷ, ಚಿಂತೆ, ಭಯ, ಪ್ರೇಮ, ವಿಚಾರ, ತರ್ಕ ಮೊದಲಾದ ವ್ಯಾಪಾರಗಳು ಮನಸ್ಸಿನಲ್ಲಿ ನಡೆಯುತ್ತವೆ. ಅವು ವರ್ತನದಲ್ಲಿ ಹೊರಗೆ ಕಾಣಿಸಿಕೊಳ್ಳಬಹುದು ಅಥವಾ ಬಿಡಬಹುದು. ಆದರೆ ಇಂಥ ಮನೋವ್ಯಾಪಾರಗಳ ಅಭ್ಯಾಸವನ್ನೂ ಮತ್ತು ಮನಃಪ್ರೇರಿತವಾದ ವರ್ತನಗಳ ಅಭ್ಯಾಸವನ್ನೂ ಮನೋವಿಜ್ಞಾನವು ಮಾಡುತ್ತದೆ.

ಮನೋವಿಜ್ಞಾನವು ವ್ಯವಹಾರ ದೃಷ್ಟಿಯನ್ನು ಬಿಟ್ಟಿರುವದಿಲ್ಲ. ನೀನು ಹಾಗೇಕೆ ಮಾಡಿದೆ ಎಂದು ಯಾರನ್ನಾದರೂ ಕೇಳಿದರೆ ಅವನು ಸಹಜವಾಗಿ ಹೇಳಿಬಿಡುವದೇನಂದರೆ— 'ನಾನು ಸಿಟ್ಟಿನ ಭರದಲ್ಲಿ ಇದ್ದೆ' ಅಥವಾ 'ನಾನು ಹೆದರಿದ್ದೆ,' ಅಥವಾ 'ನನಗೆ ಆನಂದವಾಯಿತು,' ಅಥವಾ 'ನನ್ನ ಮನಸ್ಸಿನಲ್ಲಿ ಹಾಗೆ ವಿಚಾರ ಬಂದಿತು,' ಮುಂತಾಗಿ. ಹೀಗೆ ಹೇಳುವಾಗ

ಅವನು ತನ್ನ ಮನಸ್ಸಿನ ಸ್ಥಿತಿಯಲ್ಲಿಯೇ ತನ್ನ ವರ್ತನದ ಕಾರಣಗಳನ್ನು ಅಥವಾ ಪ್ರೇರಣೆಗಳನ್ನು ನಿಃಸಂದೇಹವಾಗಿ ಹುಡುಕುತ್ತಾನೆ. ವರ್ತನದ ಪ್ರಚೋದನೆಯ ಬಗೆಗೆ ಇರುವ ಸಾಮಾನ್ಯ ಜನರ ಈ ಕಲ್ಪನೆಯು ಸರಿ ಇರುತ್ತದೆ.

## ಅನುಭವ (Experience)

### ಅನುಭವದ ಮಹತ್ವ

ಮನಸ್ಸು ವರ್ತನದ ಹಿನ್ನೆಲೆ ಎಂದು ಮೇಲೆ ಹೇಳಿದೆವು. ಮನಸ್ಸು ಯಾವುದಾದರೊಂದು ಕೆಲಸದಲ್ಲಿ ತೊಡಗಿದಾಗ ಅದಕ್ಕೆ ನಾವು ಮನೋವ್ಯಾಪಾರ ಅಥವಾ ಮನಸ್ಸಿನ ಚಟುವಟಿಕೆ ಅಥವಾ ಗೇಸಿಕೆ ಎನ್ನುತ್ತೇವೆ. ಸನ್ನಿವೇಶಕ್ಕೆ ತಕ್ಕಂತೆ ಮನಸ್ಸಿನ ಚಟುವಟಿಕೆಗಳು ಬದಲಾಗುತ್ತವೆ. ಆಗ ಮನಸ್ಸು ಬೇರೆ ಬೇರೆ ಸ್ಥಿತಿಗಳಲ್ಲಿ ಇರುತ್ತದೆ. ನನ್ನ ಮನಸ್ಸಿನ ಸ್ಥಿತಿಗಳೇ ನನ್ನ ಅನುಭವ. ಅವರವರ ಮನಸ್ಸಿನ ಸ್ಥಿತಿಗಳು ಅವರವರ ಅನುಭವ. ಈ ಮನಸ್ಸಿನ ಸ್ಥಿತಿಗಳಲ್ಲಿ ಅಥವಾ ಅನುಭವದಲ್ಲಿ ಮೂರು ಭಾಗಗಳನ್ನು ಮಾಡಬಹುದು :

ಅನುಭವ=ಮನಸ್ಸಿನ ಸ್ಥಿತಿ

ಜಾಗ್ರತ | ಅಜಾಗ್ರತ | ಆಧ್ಯಾತ್ಮಿಕ

ಮನಸ್ಸು ಈ ಮೂರೂ ಸ್ಥಿತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಆ ಆ ಸ್ಥಿತಿಯ ಅರಿವು ಉಂಟಾದಾಗ ಮನುಷ್ಯನು ಆ ಆ ಸ್ಥಿತಿಯನ್ನು ಅನುಭವಿಸುತ್ತಾನೆ. ಮನಸ್ಸು ಮತ್ತು ಅನುಭವ, ಈ ಪದಗಳನ್ನು ವ್ಯಾಪಕವಾದ ಅರ್ಥದಲ್ಲಿ ಉಪಯೋಗಿಸಬಹುದು. ಆಧ್ಯಾತ್ಮಿಕ ಅನುಭವ ಅಥವಾ 'ಶಿವಾನುಭವ' ಎಂಬುದು ಕೂಡ ಮನುಷ್ಯನು ಹೊಂದತಕ್ಕ ಒಂದು ಮಾನಸಿಕ ಸ್ಥಿತಿ. ಬಸವಣ್ಣನವರು ಸ್ಥಾಪಿಸಿದ 'ಅನುಭವ ಮಂಟಪವು' ಈ ಸಂಗತಿಯನ್ನೇ ಹೇಳುತ್ತದೆ. ಆಳವಾಗಿ ವಿಚಾರಿಸಿ ನೋಡಿದರೆ ಆಧ್ಯಾತ್ಮಿಕ ವಿಜ್ಞಾನವು ಕೂಡ ಮನೋವಿಜ್ಞಾನದ ಒಂದು ಭಾಗ. ಮನುಷ್ಯನ ಆಧ್ಯಾತ್ಮಿಕ ನಂಬುಗೆ

ಗಳು -ಅವು ವಿವೇಕದವೇ ಇರಲಿ, ಅವಿವೇಕದವೇ ಇರಲಿ—ಅವನ ವರ್ತನ ವನ್ನು ನಿರ್ಧರಿಸುತ್ತವೆ. ಇದು ಶಿಕ್ಷಣ ತತ್ವಜ್ಞಾನದ ವಿಷಯ. ಆದರೆ ಕೇವಲ ಈ ಆಧ್ಯಾತ್ಮಿಕ ಅನುಭವದ ವಿಷಯವು ನಮ್ಮ ಲೌಕಿಕ (Secular) ಶಾಲೆಯ ಅಭ್ಯಾಸಕ್ರಮಗಳಿಗೆ ಸಂಬಂಧ ಬಾರದ್ದರಿಂದ ಅದನ್ನು ಈ ಪುಸ್ತಕ ದಲ್ಲಿ ವಿವೇಚಿಸುವ ಗೋಜಿಗೆ ಹೋಗಿಲ್ಲ.

ಇನ್ನುಳಿದುದು ಜಾಗ್ರತ ಮತ್ತು ಅಜಾಗ್ರತ ಅನುಭವ. ಈ ಅವಸ್ಥೆಗಳ ಲಕ್ಷಣಗಳನ್ನು ತಿಳಿದುಕೊಂಡರೆ ಮನಸ್ಸಿನ ಸ್ವರೂಪದ ಬಗ್ಗೆ ಹೆಚ್ಚು ಸ್ಪಷ್ಟ ಕಲ್ಪನೆಯು ಬರುತ್ತದೆ. ಅನುಭವವೆಂಬುದು ಅತ್ಯಂತ ಮಹತ್ವದ ವಿಷಯ. ನಿಚ್ಚಳವಾಗಿ ಮತ್ತು ನಿಃಸಂದೇಹವಾಗಿ ನನಗೆ ಗೊತ್ತಿದ್ದ ಸಂಗತಿ ಎಂದರೆ ನನ್ನ ಅನುಭವ. ನಾನು ಮಲಗಿರಲಿ, ಎಚ್ಚತ್ತಿರಲಿ ನನ್ನ ಅನುಭವವು ನೆರಳಿನಂತೆ ನನ್ನನ್ನು ಹಿಂಬಾಲಿಸುತ್ತದೆ. ನಾನೆಂದರೆ ನನ್ನ ಅನುಭವ; ನನ್ನ ಅನುಭವವೆಂದರೆ ನಾನು. ನನ್ನ ಜೇನೆ ಬೇಸರಿಕೆ, ನನ್ನ ನಾವು ನೋವು, ನನ್ನ ಬಯಕೆ ಹವಣಿಕೆ, ನನ್ನ ಸಿಟ್ಟು ಸಮಾಧಾನ, ನನ್ನ ತರ್ಕ ವಿತರ್ಕ ಎಲ್ಲವೂ ನನ್ನ ಅನುಭವ. ನನ್ನ ಅನುಭವವೇ ನನ್ನ ಇರುವಿಕೆಯ ಮೂಲ ಆಧಾರ. ಹೊರಗಿನ ಪ್ರಪಂಚದ ಜ್ಞಾನವಾಗಲಿ, ಇತರರ ವರ್ತನದ ಕಾರಣ ವಾಗಲಿ ತಿಳಿಯಬೇಕಾದರೆ ಅದು ನನ್ನ ಅನುಭವದ ಸಹಾಯದಿಂದಲೇ. ಒಬ್ಬನು ನಾಯಿಗೆ ಕೋಲಿನಿಂದ ಏಟು ಹಾಕಿದರೆ ಅವನು ಸಿಟ್ಟಿನಿಂದ ಹಾಗೆ ಮಾಡುತ್ತಾನೆಂದು ನಾನು ನಿರ್ಧರಿಸುತ್ತೇನೆ. ಅವನು ಪ್ರೀತಿಯಿಂದ ನಾಯಿಗೆ ಹಾಗೆ ಮಾಡುತ್ತಾನೆಂದು ಮತ್ತೊಬ್ಬರು ವಾದಿಸಿದರೆ ಅದು ತಪ್ಪು ಎಂದು ನಾನು ಪ್ರತಿಪಾದಿಸುತ್ತೇನೆ. ಇದಕ್ಕೆ ಆಧಾರವೇ ನನ್ನ ಅನುಭವ. ನಾನೂ ಸಿಟ್ಟಿನಲ್ಲಿ ಇದ್ದಾಗ ಹಾಗೆ ಮಾಡುತ್ತೇನೆಂದು ನನ್ನ ಅನುಭವವು ನನಗೆ ಹೇಳುತ್ತದೆ. ಕೋಣೆಯಲ್ಲಿ ಮೇಜಿನ ಮೇಲೆ ಪುಸ್ತಕ ಇರುತ್ತದೆ ಎಂದು ನಾನು ಹೇಳುವಾಗ ನನ್ನ ಅನುಭವವನ್ನೇ ಆಧಾರವಾಗಿ ಇಟ್ಟುಕೊಳ್ಳುತ್ತೇನೆ. ಮೇಜು ಮತ್ತು ಪುಸ್ತಕ ಎಂಬ ಎರಡು ಪದಾರ್ಥಗಳು ಕಣ್ಣೆಂಬ ಇಂದ್ರಿಯದ ಮುಖಾಂತರ ನನ್ನ ಮನಸ್ಸಿನಲ್ಲಿ ಅಂದರೆ ನನ್ನ ಅನುಭವದಲ್ಲಿ ಬರುತ್ತವೆ. ನಾನು ಕೋಣೆಯನ್ನು ಬಿಟ್ಟು ಹೊರಗೆ ಹೋದಾಗ ಅವು ನನ್ನ ಕಣ್ಣು ಮುಂದೆ ಇರುವದಿಲ್ಲ. ಆಗ ಅವುಗಳ ಪ್ರತ್ಯಕ್ಷ ಅನುಭವವು ನನಗೆ ಆಗುವದಿಲ್ಲ.

ಕೋಲಿಯಲ್ಲಿ ಇದ್ದಾಗ ನಾನು ನೋಡಿದ್ದು ಸ್ಥೂಲ ವಸ್ತುಗಳಲ್ಲ ಆದರೆ ನನ್ನ ಮಾನಸಿಕ ಸ್ಥಿತಿಗಳು ಎಂದು ಕೆಲವರು ಪ್ರತಿಪಾದಿಸಬಹುದು. ಜಗತ್ತೆಂಬುದು ಸುಳ್ಳು, ಮಾಯೆ ಎಂದು ಕೆಲವು ತತ್ವಜ್ಞಾನಿಗಳು ವಾದಿಸುತ್ತಾರೆ. ಜಗತ್ತು ಸುಳ್ಳಾಗಿರಲಿ, ನಿಜವಾಗಿರಲಿ, ನನ್ನ ಅನುಭವಗಳು ಮಾತ್ರ ನನಗೆ ಸುಳ್ಳಲ್ಲ. ನನ್ನ ಅನುಭವಗಳನ್ನು ನಾನು ಅಲ್ಲಗಳೆಯಲು ಬರುವಂತಿಲ್ಲ. ನನ್ನ ಇರುವಿಕೆಗೆ ನನ್ನ ಅನುಭವವೇ ಆಧಾರ.

## ಅನುಭವದ ಮೂರು ಮುಖಗಳು

ಅನುಭವವು ಯಾವುದಾದರೊಂದು ವ್ಯಕ್ತಿಯದು ಇರುತ್ತದೆ. ಮತ್ತು ಯಾವುದಾದರೊಂದು ವಸ್ತುವು ಆ ಅನುಭವಕ್ಕೆ ಕಾರಣವಾಗಿರುತ್ತದೆ. ವ್ಯಕ್ತಿಯು ಪಡೆಯುತ್ತಿರುವ ಪ್ರತಿಯೊಂದು ಅನುಭವದಲ್ಲಿ ಮೂರು ಮುಖಗಳು ಅಥವಾ ಮಗ್ಗಲುಗಳು ಇರುತ್ತವೆ

ಅನುಭವ

| ಅರಿವು (Cognition) ಅಥವಾ **ಬೋಧೆ** | ಅನಿಸಿಕೆ (Affect) ಅಥವಾ **ಸಂವೇದನೆ** | ಬಯಕೆ (Conation) ಅಥವಾ **ಸಂಕಲ್ಪ** |
|---|---|---|

ಒಂದೆರಡು ಉದಾಹರಣೆಗಳನ್ನು ನೋಡುವ. ಒಂದು ಹೂವು ನನ್ನ ಕಣ್ಣಿಗೆ ಬೀಳುತ್ತದೆ. ಇದು ಗುಲಾಬಿ, ಸೇವಂತಿಗೆ ಅಲ್ಲ ಎಂದು ತಿಳಿಯುವದು ನನ್ನ **ಅರಿವಿನ ಅನುಭವ.** ಇದು ಎಷ್ಟು ಚಂದ ಇರುತ್ತದೆ ಎಂದು ನನ್ನ ಮನಸ್ಸಿಗೆ ಸೊಗಸು ಅನಿಸುತ್ತದೆ. ಇದು ನನ್ನ **ಅನಿಸಿಕೆಯ ಅನುಭವ.** ಇದನ್ನು ಮುಡಿಯಲು ನಾನು ಬಯಸುತ್ತೇನೆ. ಇದು ನನ್ನ **ಬಯಕೆಯ ಅನುಭವ.** ಅನುಭವದ ಈ ಮೂರೂ ಮಗ್ಗಲುಗಳು ಒಂದರಲ್ಲೊಂದು ಸೇರಿಕೊಂಡಿರುತ್ತವೆ. ಅವನ್ನು ಬಿಡಿಸಲು ಬರುವಂತಿಲ್ಲ. ಆದರೆ ಸನ್ನಿವೇಶಕ್ಕೆ ತಕ್ಕಂತೆ ಒಂದು ಪ್ರಬಲವಾಗಿರುತ್ತದೆ, ಇನ್ನೆರಡು ಹಿನ್ನೆಲೆಯಲ್ಲಿ ಇರುತ್ತವೆ. ವಿದ್ಯಾರ್ಥಿಯು ಒಂದು ಪಾಠದಲ್ಲಿ ಕೊಟ್ಟ ವಿಷಯಗಳನ್ನು ತಿಳಿದುಕೊಳ್ಳುವಾಗ

ಅರಿವು ಮುಖ್ಯವಾಗಿರುತ್ತದೆ. ಆದರೂ ಅದು ಸುಲಭವಾಗಿ ತಿಳಿದರೆ ಆನಂದ ಮತ್ತು ಕಠಿನವೆನಿಸಿದರೆ ಅಸಮಾಧಾನವೂ ಆ ವಿದ್ಯಾರ್ಥಿಗೆ ಆಗುತ್ತದೆ. ಬಯಕೆಯೂ ಅಲ್ಲಿ ಇರುತ್ತದೆ. ವಿದ್ಯಾರ್ಥಿಯು ಆ ಪಾಠವನ್ನು ಚನ್ನಾಗಿ ತಿಳಿದುಕೊಳ್ಳಬೇಕೆಂದು ಹವಣಿಸುತ್ತಾನೆ ಅಥವಾ ಅದನ್ನು ಮತ್ತೊಬ್ಬರಿಗೆ ತಿಳಿಸಬೇಕೆಂದು ಅಪೇಕ್ಷಿಸುತ್ತಾನೆ. ಇಂಥ ಬಯಕೆಯು ಯಾವುದಾದರೊಂದು ರೂಪದಲ್ಲಿ ಇದ್ದೇ ಇರುತ್ತದೆ. ಅದರಂತೆ ಹಾವನ್ನು ಕಂಡಾಗ ಆಗುವ ಭಯದಲ್ಲಿ ಸಂವೇದನೆಯು ಹೊರಗೆ ಪ್ರಬಲವಾಗಿ ಕಾಣಿಸಿಕೊಳ್ಳುತ್ತದೆ; ಆದರೂ ಅದರಲ್ಲಿ ಬೋಧೆ ಮತ್ತು ಸಂಕಲ್ಪಗಳು ಅಡಗಿರುತ್ತವೆ. ಹಾವು ಅಪಾಯವನ್ನುಂಟುಮಾಡುವ ವಸ್ತುವು ಎಂಬ ಅರಿವು ಮತ್ತು ಅದನ್ನು ತಪ್ಪಿಸಿ ಓಡುವ ಪ್ರಯತ್ನವೂ ಜೊತೆಗೆ ಇದ್ದೇ ಇರುತ್ತವೆ. ಓಡಾಟ, ಮೇಲಾಟ ಗಳಲ್ಲಿ ಬಯಕೆಯು ಮುಖ್ಯವಾಗಿರುತ್ತದೆ. ಎಲ್ಲರಿಗಿಂತ ಮೊದಲು ತಾನು ಪಾಚೆಯನ್ನು ಮುಟ್ಟಬೇಕೆಂದು ಹುರಿಯಾಳು ಕಿತ್ತು ಓಡುತ್ತಾನೆ. ಆದರೆ ಗುರಿಗೆ ಸಂಬಂಧಿಸಿದ ಸಂಗತಿಗಳ ಅರಿವೂ ಮತ್ತು ಗೆದೆಯುವ ಲಕ್ಷಣಗಳು ಕಂಡರೆ ಆನಂದವೂ ಸೋಲುವ ಲಕ್ಷಣಗಳು ಕಂಡರೆ ನಿರಾಶೆಯೂ ಅವನ ಮನಸ್ಸಿನಲ್ಲಿ ಉಂಟಾಗುತ್ತವೆ. ಸೌಮ್ಯವಾಗಿ ಆಗಲಿ ಅಥವಾ ಪ್ರಬಲವಾಗಿ ಆಗಲಿ, ಅರಿವು ಅನಿಸಿಕೆ ಮತ್ತು ಬಯಕೆ ಇವು ಪ್ರತಿಯೊಂದು ಅನುಭವದಲ್ಲಿ ಇದ್ದೇತೀರುತ್ತವೆ.

ಅನುಭವವು ಕ್ಷಣಕ್ಷಣಕ್ಕೂ ಬದಲಾಗುತ್ತ ಹೋಗುತ್ತದೆ. ಅನುಭವದ ಹೊಳೆಯು ಯಾವಾಗಲೂ ಹರಿಯುತ್ತಿರುತ್ತದೆ. “ಅದೇ ನದಿಯಲ್ಲಿ ನೀನು ಎರಡು ಬಾರೆ ಕಾಲು ಇಡಲಾರಿ” ಎಂದು ಗ್ರೀಕ ತತ್ವಜ್ಞಾನಿಯಾದ ಹಿರ್ಯಾಕ್ಲಿಟಸ್‌ನು ಅನ್ನುತ್ತಾನೆ. ಜಗತ್ತಿನಲ್ಲಿ ಇರುವ ಎಲ್ಲ ವಸ್ತುಗಳು ಪ್ರತಿ ಚಣಕ್ಕೂ ಬದಲಾಗುತ್ತ ನಡೆದಿರುತ್ತವೆ. ಎಂಬ ಸಿದ್ಧಾಂತವನ್ನು ಬುದ್ಧನು ಸಾರಿದನು. ಮನುಷ್ಯನು ಎಚ್ಚರ ಸ್ಥಿತಿಯಲ್ಲಿ ಇದ್ದಾಗ ಅನುಭೋಗಿಸುತ್ತಿರುವ ಅನುಭವಕ್ಕೆ ನಾವು **ಜಾಗ್ರತ ಅನುಭವ** ಎಂದು ಕರೆಯುತ್ತೇವೆ. ವಾಡಿಕೆ ಯಲ್ಲಿ ಇದಕ್ಕೆ ಅರಿವು ಅನ್ನುತ್ತಾರೆ. ನಾನು ಈಗ ಏನನ್ನು ಅನುಭವಿಸುತ್ತಿ ದ್ದೇನೆ ಎಂಬುದು ಮನುಷ್ಯ ವ್ಯಕ್ತಿಗೆ ಗೊತ್ತಿರುತ್ತದೆ. ಆದರೆ ಇತರ ಪ್ರಾಣಿ ಗಳಿಗೆ ಈ ತರಹದ ಅರಿವು ಅಥವಾ ಪ್ರಜ್ಞೆ ಇರುತ್ತದೆಯೋ ಇಲ್ಲವೋ ಎಂಬು ದನ್ನು ಹೇಳಲು ಬರುವಂತಿಲ್ಲ.

**ಅಜಾಗ್ರತ ಅನುಭವ ಅಥವಾ ಮರೆವು** (The unconscious)

ಕವಿಯು "ಮನವೆಂಬ ಮರ್ಕಟವ ತಡೆಯಲಾರೆನು......." ಎಂದು ಹಾಡುವಾಗ ಮೇಲೆ ತೋರಿಸಿದಂತೆ ಚಿತ್ತ ವೃತ್ತಿಗಳು ಚಂಚಲವೆಂದೇ ಹೇಳುತ್ತಾನೆ. ಇದು ಜಾಗ್ರತಾವಸ್ಥೆಯ ಅನುಭವದ ಲಕ್ಷಣ. ಆದರೆ ನಮ್ಮ ಎಲ್ಲ ಅನುಭವಗಳು ಯಾವಾಗಲೂ ನಮ್ಮ ಕಣ್ಣುಮುಂದೆ ಇರುವದಿಲ್ಲ. ಯಾವ ದಾವದರೊಂದು ಕಾಲಕ್ಕೆ ಅನುಭವದ ಒಂದು ಸಣ್ಣ ತುಣುಕನ್ನು ಮಾತ್ರ ನಾವು ಅನುಭೋಗಿಸುತ್ತಿರುತ್ತೇವೆ. ಆಗಿಹೋದ ಅನುಭವಗಳು ಮನಸ್ಸಿನ ಹಿನ್ನೆಲೆಯಲ್ಲಿ ಕೂಡಿ ಬೀಳುತ್ತವೆ. ಇದಕ್ಕೆ **ಅಜಾಗ್ರತ ಅನುಭವ** ಅಥವಾ **ಅಜಾಗ್ರತ ಮನಸ್ಸು** ಎಂದು ಅನ್ನುತ್ತಾರೆ. ಇದಕ್ಕೆ ನಾವು ಮರೆವು ಎಂದೂ ಕರೆಯಬಹುದು. ಈ ಅಜಾಗ್ರತ ಅನುಭವವು ಹೆಚ್ಚು ಸ್ಥಿರವಾದದ್ದು ಇರುತ್ತದೆ. ಮೇಲೆ ಹೊಳೆಯ ನೀರು ಹರಿಯುತ್ತಿದ್ದರೂ ಕೆಳಗಿನ ನೆಲವು ಸ್ಥಿರವಿದ್ದಂತೆ ಅಜಾಗ್ರತೆಯೂ ಸ್ಥಿರವಿರುತ್ತದೆ. ಅಥವಾ ಸಿನೇಮಾ ಪರದೆಯ ಮೇಲೆ ಚಿತ್ರಗಳು ಸರಿದಾಡುತ್ತಿದ್ದರೂ ಹಿನ್ನೆಲೆಯಾದ ಪರದೆಯು ಮಾತ್ರ ಅಳುಕದೇ ಇರುತ್ತದೆ. ಮನಸ್ಸಿನ ಹಿನ್ನೆಲೆಯಾದರೂ ಇದರಂತೆ ಸ್ಥಿರವಾಗಿರುತ್ತದೆ. ಈ ಅಜಾಗ್ರತ ಹಿನ್ನೆಲೆಯು ಅವ್ಯಕ್ತವಾಗಿರುವದರಿಂದ ಇದರ ಇರುವಿಕೆಯನ್ನು ಇದರ ಪರಿಣಾಮಗಳಿಂದಲೇ ನಾವು ಊಹಿಸಬೇಕಾಗುತ್ತದೆ. ಕೆಳಗೆ ಕೊಟ್ಟ ಉದಾಹರಣೆಗಳಿಂದ ಈ ಮಾತು ಸ್ಪಷ್ಟವಾಗುತ್ತದೆ. ಯಾವದೋ ಒಂದು ಸಂದರ್ಭದಲ್ಲಿ ಕೆಲವು ದಿವಸಗಳ ಹಿಂದೆ ನಾನು ಒಬ್ಬ ಮನುಷ್ಯನನ್ನು ನೋಡಿರುತ್ತೇನೆ. ಆ ಮೇಲೆ ಅವನ ವಿಷಯವಾಗಿ ಎಲ್ಲವನ್ನೂ ಮರೆಯುತ್ತೇನೆ. ಮತ್ತೊಂದು ಬಾರೆ ಅವನನ್ನು ಕಂಡಾಗ "ನಾನು ಈ ಮೊದಲು ಇವನನ್ನು ಎಲ್ಲಿಯೋ ನೋಡಿದಂತೆ ಅನಿಸುತ್ತದೆ" ಎಂದು ತಲೆ ತುರಿಸಿ ನೆನಪು ಮಾಡಿಕೊಳ್ಳಲು ಪ್ರಯತ್ನಿಸುತ್ತೇನೆ. ಮೊದಲು ಭೆಟ್ಟಿಯಾದಾಗ ಇವನ ಬಗ್ಗೆ ಆದ ಅನುಭವದ ಪರಿಣಾಮವು ನನ್ನ ಮನಸ್ಸಿನ ಹಿನ್ನೆಲೆಯಲ್ಲಿ ಉಳಿದಿದ್ದರಿಂದಲೇ ಇವನನ್ನು ಗುರುತಿಸಲು ಶಕ್ಯವಾಗುತ್ತದೆ. ಅನುಭವದ ಈ ಉಳಿವು ಅಥವಾ ಶೇಷಗಳಿಗೆ **ಮನಸ್ಸಿನ ಒಲವು**ಗಳೆಂದೂ ಕರೆಯುತ್ತಾರೆ. ಹುಡುಗರು ಕಲಿತ ವಿಷಯಗಳೂ ಅವರು ಉಂಡ ಅನುಭವಗಳೂ ನೆನಪಿಗೆ ತರಲ್ಪಡುವವರೆಗೆ ಅವು ಅವರ ಮನಸ್ಸಿನಲ್ಲಿ ಅಜಾಗ್ರತ ಇರುತ್ತವೆ.

"ಅರಿತರೆ ಶರಣ ಮರೆತರೆ ಮಾನವ" ಎಂಬ ವಚನವು ಆಧ್ಯಾತ್ಮಿಕ ಅನುಭವದ ಬಗೆಗೂ ಜಾಗ್ರತ ಮತ್ತು ಅಜಾಗ್ರತ ಎಂಬ ಎರಡು ಸ್ಥಿತಿಗಳನ್ನು ಸೂಚಿಸುತ್ತವೆ. ಆಧ್ಯಾತ್ಮಿಕ ಅನುಭವವು ಜಾಗ್ರತಗೊಂಡಲ್ಲಿ, ಅಂದರೆ ಅದರ ಅರಿವು ಉಂಟಾದಲ್ಲಿ ಮನುಷ್ಯನು 'ಶರಣ'ನಾಗುತ್ತಾನೆ. ಆದರೆ ಅದು ಜಾಗ್ರತೆಯನ್ನು ಹೊಂದದೇ ಇದ್ದಲ್ಲಿ, ಅಂದರೆ ಅದನ್ನು ಮರೆತರೆ ಅದೇ ಮನುಷ್ಯನು 'ಮಾನವ'ನಾಗುತ್ತಾನೆ. ಅನುಭವ ಪದವನ್ನು ಹೀಗೆ ವ್ಯಾಪಕವಾದ ಅರ್ಥದಲ್ಲಿಯೂ ಉಪಯೋಗಿಸಬಹುದು.

## ವರ್ತನ ಮತ್ತು ಅನುಭವ

ಹೊರಗೆ ಕಾಣುವ ಮನುಷ್ಯನ ಎಲ್ಲ ಕೆಲಸಗಳು ವರ್ತನಗಳು. ಜಾಗ್ರತ ಅವಸ್ಥೆಯಲ್ಲಿ ಮನುಷ್ಯನು ತನ್ನ ವರ್ತನದ ಜೊತೆಗೆ ತನ್ನೊಳಗೆ ಪ್ರ ಅನುಭೋಗಿಸುತ್ತಿರುವುದೆಲ್ಲವು ಆತನ ಅನುಭವ. ವಾಡಿಕೆಯಾಗಿ ಈ ಮರ್ಯಾದಿತ ಅರ್ಥದಲ್ಲಿ "ಅನುಭವ" ಪದವನ್ನು ಉಪಯೋಗಿಸುವದು ಹೆಚ್ಚು. ಒಬ್ಬನು ಒಂದು ನಿಟ್ಟಿನ ಕಡೆಗೆ ಹೋಗುತ್ತಿದ್ದಾನೆಂದು ಕಲ್ಪಿಸುವ. ಅವನ ನಡಿಗೆಯು, ಮೈ-ಕೈ ಚಲನಗಳು ಹೊರಗೆ ಕಾಣುವ ಅವನ ವರ್ತನವು. ಆದರೆ ಆ ಕಾಲಕ್ಕೆ ಅವನ ಮನಸ್ಸಿನಲ್ಲಿ ಯಾವ ವಿಚಾರಗಳು ಮತ್ತು ಗೇಸಿಕೆಗಳು ನಡೆದಿರುತ್ತವೆ, ಅವನ ಎದೆಯಲ್ಲಿ ಯಾವ ಉದ್ವೇಗಗಳು ಸುಳಿಯುತ್ತಿರುತ್ತವೆ ಎಂಬುದು ಸ್ಪಷ್ಟವಾಗಿ ಅವನಿಗೆ ಗೊತ್ತಿರುತ್ತವೆ. ಆದರೆ ಇದು ನಿರೀಕ್ಷಕನಿಗೆ ಅಷ್ಟೊಂದು ಗೊತ್ತಾಗದು. ಈ ಬಗೆಯ ಅನುಭವವು ವ್ಯಕ್ತಿಗತವಾದ ಅಂತರಂಗದ ವಿಷಯು. ಮತ್ತೊಬ್ಬನಿಗೆ ಅದು ಸುಲಭವಾಗಿ ಗೊತ್ತಾಗುವದಿಲ್ಲ. ಆದರೆ ಆ ವ್ಯಕ್ತಿಯ ಮಾತು, ದೇಹದ ವ್ಯಾಪಾರ ಅಥವಾ ಕೃತಿಗಳಿಂದ ಅಂದರೆ ಅವನ ವರ್ತನಗಳ ನಿರೀಕ್ಷಣೆಯಿಂದ ಅವನ ಒಳಗಿನ ಅನುಭವಗಳ ಸ್ವರೂಪವನ್ನು ಊಹಿಸಲು ಬರುತ್ತದೆ. ವ್ಯಕ್ತಿಯ ವರ್ತನಗಳು ಪ್ರಕಟವಾಗುತ್ತಿದ್ದಾಗ ಅವುಗಳನ್ನು ಅವನು ಹೊಂದುತ್ತಿರುತ್ತಾನೆ.

ವರ್ತನದ ಮೂಲ ಪ್ರೇರಣೆಗಳು ಅಥವಾ ಅಂತಃಪ್ರವೃತ್ತಿಗಳು ಅಜಾಗ್ರತೆಯಲ್ಲಿ ಇರುತ್ತವೆ. ಪ್ರೇರಣೆಗಳ ಮೂಲ ಸ್ಥಾನವೇ ಅಜಾಗ್ರತೆಯೆಂದು ಅದರ ವ್ಯಾಖ್ಯೆಯನ್ನು ಹೇಳಬಹುದು. ಅನುಭವವು ( ಜಾಗ್ರತ ಅವಸ್ಥೆಯು )

ಸಮುದ್ರದ ಮೇಲಿನ ತೆರೆಗಳಂತೆ; ಅಜಾಗ್ರತೆಯು ತೆರೆಗಳ ಮರೆಯಲ್ಲಿ ನಮಗೆ ಕಾಣದಂತೆ ಇರುವ ಆಳವಾದ ಸಮುದ್ರದಂತೆ. ನಮ್ಮ ಎಲ್ಲ ವರ್ತನದ ಮತ್ತು ನಮ್ಮ ಎಲ್ಲ (ಜಾಗ್ರತ) ಅನುಭವದ ಪ್ರಚೋದನೆಗಳಿಗೆ ಕಾರಣವಾದ ಚೈತನ್ಯಮಯ ಸ್ಫೂರ್ತಿಯ ಆಗರವು ಅಜಾಗ್ರತೆಯು. ಮನೋವಿಶ್ಲೇಷಣವು ಈ ಅಜಾಗ್ರತ ಮನಸ್ಸಿನ ವಿಶೇಷ ಅಭ್ಯಾಸವನ್ನು ಮಾಡುತ್ತದೆ.

## ಸಂಸ್ಕಾರ ಅಥವಾ ಉಳಿವು (Mneme)

ನಮ್ಮ ಅನುಭವಗಳು ನಮ್ಮ ಮನಸ್ಸಿನ ಮೇಲೆ ಶಾಶ್ವತ ಪರಿಣಾಮವನ್ನು ಉಂಟುಮಾಡುತ್ತವೆ. ಪೂರ್ವದ ಅನುಭವಗಳನ್ನು ಕಾಯ್ದು ಇಡುವ ಮನಸ್ಸಿನ ಈ ಶಕ್ತಿಗೆ ಸಂಸ್ಕಾರ ಎಂದು ಅನ್ನುತ್ತಾರೆ. ಸಂಸ್ಕಾರವು ಮನಸ್ಸಿನ ಮೂಲ ಲಕ್ಷಣಗಳಲ್ಲಿ ಒಂದು. ಪ್ರಾಣಿಯು ಅರ್ಥಾತ್ ಮನುಷ್ಯನ ಈಗಿನ ಜೀವನ ದಲ್ಲಿಯ ಅನುಭವಗಳೂ, ಅವನ ಪೂರ್ವ ಜನ್ಮದ ಅನುಭವಗಳೂ ಮತ್ತು ಮಾನವ ವಂಶದ ಅನುಭವಗಳೂ ಅವನ ಮನಸ್ಸಿನ ಹಿನ್ನೆಲೆಯಲ್ಲಿ ನೆಲೆಸಿರುತ್ತವೆ. ಆದುದರಿಂದಲೇ ಅವನು ತನ್ನ ಹಿಂದಿನ ಅನುಭವಗಳನ್ನು ನೆನಪಿಗೆ ತಂದುಕೊಳ್ಳ ಬಲ್ಲನು. ನನ್ನ ಪ್ರವಾಸದಲ್ಲಿ ನನ್ನ ಅನುಭವಕ್ಕೆ ಬಂದ ಸಂಗತಿಗಳು ನನ್ನ ಮನಸ್ಸಿನಲ್ಲಿ ಉಳಿದುದರಿಂದಲೇ ಅವು ನನ್ನ ನೆನಪಿಗೆ ಬರುತ್ತವೆ. ಸಂಸ್ಕಾರವು ಅಜಾಗ್ರತೆಯಲ್ಲಿ ಇರುತ್ತದೆ. ಅದು ಜಾಗ್ರತಾವಸ್ಥೆಗೆ ಬಂದಾಗ ಸ್ಮರಣೆ ಎಂದು ಎನ್ನಿಸಿಕೊಳ್ಳುತ್ತದೆ. ಓದಲಿಕ್ಕೆ ಕಲಿತ ಮಗುವು ವಾಕ್ಯದಲ್ಲಿಯ ಪ್ರತಿಯೊಂದು ಅಕ್ಷರವನ್ನು ಜ್ಞಾಪಕ ಮಾಡಿಕೊಳ್ಳುವದಿಲ್ಲ. ಹಾರ್ಮೋನಿಯಮ್ಮ ಬಾರಿಸುವ ದನ್ನು, ವೀಣೆಯನ್ನು ನುಡಿಸುವವನ್ನು, ಅಥವಾ ಟಾಯಪ ಮಾಡುವದನ್ನು ಕಲಿತವನು ಪ್ರತಿಕ್ಷಣಕ್ಕೂ ತನ್ನ ಬೆರಳನ್ನು ಯಾವ ಸ್ಥಳದಲ್ಲಿ ಇಡಬೇಕೆಂಬು ದನ್ನು ನೆನಪು ಮಾಡಿಕೊಳ್ಳುವದಿಲ್ಲ. ಇಂಥ ಪ್ರಸಂಗಗಳಲ್ಲಿ ಸಂಸ್ಕಾರವು ಸಹಾಯವಾಗುತ್ತದೆ. ಸಂಸ್ಕಾರದ ಪರಿಣಾಮವು ಪ್ರಾಣಿಗಳ ಮೇಲೂ ಆಗುವದೆಂಬುದನ್ನು ಮ್ಯಾಕ್‌ಡೂಗಲ್‌ನು ಪ್ರಯೋಗದಿಂದ ಕಂಡು ಹಿಡಿದಿದ್ದಾನೆ. ನೀರಿನ ಪಾತ್ರೆಯಲ್ಲಿ ಕೆಲವು ಇಲಿಗಳನ್ನು ಇಟ್ಟು ಅವುಗಳಿಗೆ ಹೊರಗೆ ಹೋಗಲು ಎರಡು ಹಾದಿಗಳನ್ನು ಮಾಡಿದ್ದನು. ಅವರೊಳಗೆ ಒಂದು ಹಾದಿಯಲ್ಲಿ ವಿದ್ಯುತ್ ಹರಿಯುತ್ತಿದುದರಿಂದ ಇಲಿಗಳು ಅಲ್ಲಿ ಹಾದು ಹೋಗುವಾಗ

ತೊಂದರೆ ಪಡುತ್ತಿದ್ದವು. ಮತ್ತೊಂದು ಹಾದಿಯು ಸುರಕ್ಷಿತವಾಗಿತ್ತು. ವಿದ್ಯುತ್ತಿನ ಹಾದಿಯಲ್ಲಿ ಭಯವನ್ನು ಅನುಭವಿಸಿದ ಇಲಿಗಳು ಕ್ರಮೇಣ ಅದನ್ನು ಬಿಟ್ಟು ವಿದ್ಯುತ್ ಇಲ್ಲದ ಸುರಕ್ಷಿತವಾದ ಎರಡನೆಯ ಹಾದಿಯಿಂದಲೇ ಹೊರಗೆ ಹೋಗತೊಡಗಿದವು. ಅವೇ ಇಲಿಗಳ ಪೀಳಿಗೆಗಳ ಮೇಲೂ ಪ್ರಯೋಗ ವನ್ನು ಮುಂದುವರಿಸಿ ಮ್ಯಾಕ್‌ಡೂಗಲ್‌ನು ಒಂದು ಸಿದ್ಧಾಂತವನ್ನು ಕಂಡು ಹಿಡಿದನು— ಪರಿಸ್ಥಿತಿಯ ಮೂಲಕ ಉಂಟಾದ ಸಂಸ್ಕಾರವು ಆನುವಂಶಿಕವಾಗಿ ಪರಿಣಮಿಸುತ್ತದೆ. ಪ್ರಾಣಿಗಳ ಸಹಜ ಪ್ರವೃತ್ತಿಗಳು ( Instincts ) ಆನುವಂಶಿಕ ಸಂಸ್ಕಾರಗಳು. ಈ ಸಂಸ್ಕಾರವು ಅಜಾಗ್ರತ ಮನಸ್ಸಿನಲ್ಲಿ ನೆಲೆಸಿರುತ್ತದೆ.

ಅಜಾಗ್ರತೆಯ ಲಕ್ಷಣಗಳನ್ನು ನೋಡಿದರೆ ನಮಗೆ ಕಂಡುಬರುವದೇ ನಂದರೆ—ಅನುಭವದ ಒಂದು ಭಾಗವು ಅಲ್ಲಿ ನೆಲೆಸಿರುತ್ತದೆ. ಆದರೆ ನಾವು ಅನುಭವಿಸಿದ ಎಲ್ಲ ಸಂಗತಿಗಳು ಅಥವಾ ವಿಷಯಗಳು ಇದಕ್ಕೆ ಇದ್ದ ಹಾಗೆ ಅಲ್ಲಿ ಸೇರುವದಿಲ್ಲ. ಹಾಗಿದ್ದರೆ ನಾವು ಒಮ್ಮೆ ಅನುಭವಿಸಿದ್ದನ್ನು ಸಂಪೂರ್ಣ ನೆನಪಿಗೆ ತಂದುಕೊಳ್ಳಲಿಕ್ಕೆ ಬರಬಹುದಾಗಿತ್ತು. ಆದರೆ ನಿಜ ಸ್ಥಿತಿಯು ಹಾಗಿಲ್ಲ. ಏಕಂದರೆ ಅನುಭವದ ಸಾರ ಅಥವಾ ಪರಿಣಾಮವಷ್ಟೇ ಅಜಾಗ್ರತೆ ಯಲ್ಲಿ ಉಳಿಯುತ್ತದೆ. ಅನುಭವದ ಯಾವ ಸಂಗತಿಗಳಲ್ಲಿ ನಮ್ಮ ಅಭಿರುಚಿ ಇರುತ್ತದೆಯೋ ಅಥವಾ ಯಾವ ಸಂಗತಿಗಳು ನಮಗೆ ಮಹತ್ವವುಳ್ಳ ಎನಿಸುತ್ತ ವೆಯೋ ಆ ಸಂಗತಿಗಳು ಮಾತ್ರ ನಮ್ಮ ಮನಸ್ಸಿನಲ್ಲಿ ಉಳಿಯುತ್ತವೆ. ಉಳಿದ ಸಂಗತಿಗಳು ಮನಸ್ಸಿನಲ್ಲಿ ನಿಲ್ಲುವದಿಲ್ಲ. ಅಜಾಗ್ರತೆಯಲ್ಲಿ ಉಳಿಯುವ ಪರಿಣಾಮಗಳಿಗೆ 'ಅನುಭವ ಮುದ್ರೆ' ಅಥವಾ 'ಅನುಭವ ಶೇಷ' (Engram) ಎಂದು ಅನ್ನುತ್ತಾರೆ. ಆಗಿಹೋದ ಅನುಭವಗಳನ್ನು ಉಳಿಸಿಕೊಳ್ಳುವ ಮನಸ್ಸಿನ ಈ ಶಕ್ತಿಗೆ **ಸಂಸ್ಕಾರ** ಅಥವಾ **ಉಳಿವು** ಎಂದು ಹೆಸರು. ಈ ಶಕ್ತಿಯ ಸಹಾಯದಿಂದ ನಾವು ಒಮ್ಮೆ ಕಲಿತ ವಿಷಯವನ್ನು ಮತ್ತೊಮ್ಮೆ ಹಗುರಾಗಿ ಕಲಿಯುತ್ತೇವೆ. ಶಬ್ದಗಳ ಮತ್ತು ಅಕ್ಷರಗಳ ಪರಿಚಯವು ಮೊದಲು ನನಗೆ ಆಗಿದ್ದರೆ ಓದುವಾಗ ನಾನು ವಾಕ್ಯದಲ್ಲಿಯ ಪ್ರತಿಯೊಂದು ಅಕ್ಷರವನ್ನೂ ನೆನಪು ಮಾಡಿಕೊಳ್ಳುತ್ತೇನೆಂದು ಹೇಳಲಿಕ್ಕಾಗದು. ಸಂಸ್ಕಾರವು ಜಾಗ್ರತದ

ಹೊಸ್ತಿಲಿಗೆ ಬಂದರೆ ಅದಕ್ಕೆ ನಾವು ಸ್ಮರಣೆ ಅಥವಾ ನೆನಹು ಎಂದು ಕರೆಯುತ್ತೇವೆ. ಅಭಿರುಚಿಯ ನಿಯಮದಂತೆ ಮಕ್ಕಳಲ್ಲಿ ಸಂಸ್ಕಾರವು ಉಂಟಾಗುತ್ತದೆ.

ನಾವು ನಮ್ಮ ಸ್ವಂತ ಅನುಭವಗಳನ್ನಷ್ಟೇ ಉಳಿಸಿಕೊಳ್ಳುವದಲ್ಲದೆ ನಮ್ಮ ಪೂರ್ವಜರ ಅನುಭವಗಳೂ ನಮ್ಮಲ್ಲಿ ಉಳಿದಿರುತ್ತವೆ. ಇಂಡಿಯಾದ ತತ್ವಜ್ಞಾನಿಗಳ ಅಭಿಪ್ರಾಯದ ಪ್ರಕಾರ ಮನುಷ್ಯನು ತನ್ನ ಪೂರ್ವ ಜನ್ಮದ ಅಥವಾ ಜೀವನದ ಸಂಸ್ಕಾರದಿಂದ ಕೂಡಿಕೊಂಡು ಹುಟ್ಟಿರುತ್ತಾನೆ. ಮಾನವ ಪ್ರಾಣಿಯಲ್ಲಿ ಇರುವ ಪೂರ್ವ ಸಂಸ್ಕಾರಗಳಿಗೆ ಮೂಲ ಪ್ರವೃತ್ತಿಗಳು ಅಥವಾ ಪ್ರೇರಣೆಗಳು ಎಂದು ಅನ್ನುತ್ತಾರೆ. ಈ ಪ್ರೇರಣೆಗಳ ವಿಷಯವನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ಹೆಚ್ಚು ವಿವರಗಳನ್ನು ಕೊಡಲಾಗುವದು.

### ಚೇತನ ಅಥವಾ ಚಿತ್‌ಕಳೆ (Horme)

ಅಜಾಗ್ರತೆಯು ಸತ್ತ ವಸ್ತುವಲ್ಲ. ಅವ್ಯಕ್ತವಾಗಿದ್ದರೂ ಅದರಲ್ಲಿ ಯಾವುದಾದರೊಂದು ಚಟುವಟಿಕೆಯು ನಡದೇ ಇರುತ್ತದೆ. ಸೂಕ್ಷ್ಮ ರೀತಿಯಿಂದ ನೋಡಿದರೆ ಬೆಳೆಯುತ್ತಿರುವ ಗಿಡಬಳ್ಳಿಗಳಲ್ಲಿಯೂ ಮತ್ತು ಪ್ರಾಣಿಗಳ ಶರೀರದ ವ್ಯಾಪಾರಗಳಲ್ಲಿಯೂ ಈ ಚಟುವಟಿಕೆಯು ಕಂಡು ಬರುತ್ತದೆ. ಗಿಡದ ಟೊಂಗೆಯನ್ನು ಸವರಿದರೂ ಅದು ಮತ್ತೆ ಚಿಗಿಯುತ್ತದೆ. ಉಸುರಾಡಿಸುವದು, ಉಂಡ ಕೂಳನ್ನು ಅರಗಿಸುವದು, ರಕ್ತವು ಹರಿದಾಡು ವದು, ಹುಣ್ಣು ಮಾಯುವದು ಮೊದಲಾದ ಶರೀರದ ಕೆಲಸಗಳಲ್ಲಿಯೂ ಈ ವ್ಯಾಪಾರವು ಕಂಡುಬರುತ್ತದೆ. ಇದಕ್ಕೆ ಚೇತನ ಅಥವಾ ಚಿತ್‌ಕಳೆ ಎಂದು ಕರೆಯುತ್ತಾರೆ. ಸಸ್ಯಗಳ ಬೆಳವಣಿಗೆಯಲ್ಲಿ ಮತ್ತು ಪ್ರಾಣಿಗಳ ಕ್ರಿಯೆಗಳಲ್ಲಿ ಈ ಚೇತನವು ಹುದುಗಿಕೊಂಡಿರುತ್ತದೆ. ಅದು ವ್ಯಕ್ತವಾಗಿಯೂ ಮತ್ತು ಅವ್ಯಕ್ತವಾಗಿಯೂ ತನ್ನ ಕೆಲಸವನ್ನು ಯಾವಾಗಲೂ ನಡೆಸಿಯೇ ಇರುತ್ತದೆ. ಮನುಷ್ಯನ ಬಯಕೆ, ಬೇಡಿಕೆ, ಸಂಕಲ್ಪ, ಪ್ರಯತ್ನ ಮೊದಲಾದ ಎಲ್ಲ ಚಟುವಟಿಕೆಗಳು ವ್ಯೈದೋರಿದ ಚೇತನದ ಕುರುಹುಗಳು. ಇಡೀ ಪ್ರಪಂಚದಲ್ಲಿ ಕಂಡುಬರುವ ಈ ಚೈತನ್ಯ ತತ್ವಕ್ಕೆ ಬೇರೆ ಬೇರೆ ಜನರು ಬೇರೆ ಬೇರೆ ಹೆಸರು ಇಡುತ್ತಾರೆ. ಜೀವನದ ಓಘ, ಜೀವನದ ಪ್ರವಾಹ, ಬಾಳಿನ ಬಯಕೆ,

ಮಾನಸಿಕ ಚೈತನ್ಯ ಮುಂತಾಗಿ. ಈ ಓಘವು ಅಥವಾ ಕಳೆಯು ಮನುಷ್ಯ ನಲ್ಲಿ ದೊಡ್ಡ ಪ್ರಮಾಣದಲ್ಲಿ ಇರುವುದರಿಂದ ಅವನು ತನ್ನದೇ ಆದ ಒಂದು ಸಂಸ್ಕೃತಿಯನ್ನು ಕಟ್ಟುತ್ತಾನೆ. ಚೇತನ ಮತ್ತು ಸಂಸ್ಕಾರ ಇವು ಒಂದೇ ಮನಸ್ಸಿನ ಎರಡು ವ್ಯವಹಾರಗಳು. ಅವು ಬೇರೆ ಬೇರೆಯಾಗಿರದೆ ಕೂಡಿಯೇ ಇರುತ್ತವೆ. ಇವೆರಡು ತತ್ವಗಳನ್ನು ಒಳಗೊಂಡ ಮನಸ್ಸಿನ ಮೂರನೆಯ ಲಕ್ಷಣವೂ ಉಂಟು. ಅದಕ್ಕೆ ಸಂಸಕ್ತಿ ಎಂದು ಅನ್ನುತ್ತಾರೆ.

**ಸಂಸಕ್ತಿ ಅಥವಾ ಅಂಟಿಕೊಳ್ಳುವದು** (Cohesion)

ಚೇತನ ಮತ್ತು ಸಂಸ್ಕಾರ ಇವು ಯಾವಾಗಲೂ ಒಂದಕ್ಕೊಂದು ಕೂಡಿಕೊಂಡು ಕೆಲಸ ನಡೆಸಿರುತ್ತವೆ. ಮನಸ್ಸಿನ ಒಲವುಗಳು ಅಥವಾ ಅನುಭವಶೇಷಗಳು ಬಿಡಿಬಿಡಿಯಾಗಿರದೆ ಚೇತನದ ಕ್ರಿಯೆಯಿಂದ ಒಂದಕ್ಕೊಂದು ಅಂಟಿಕೊಳ್ಳುತ್ತವೆ. ಇದಕ್ಕೆ ಸಂಸಕ್ತಿ ಅಥವಾ ಏಕೀಕರಣ ಎನ್ನುತ್ತಾರೆ. ಒಂದೊಂದು ವಿಷಯಕ್ಕೆ ಸಂಬಂಧಿಸಿದ ಅನುಭವ ಶೇಷಗಳು ಅಂಟಿಕೊಂಡು ಒಂದೊಂದು ಮುದ್ದೆಯಾಗುತ್ತವೆ. ಇಂಥ ಒಂದು ಮುದ್ದೆಗೆ ಮಾನಸಿಕ ಗ್ರಂಥಿ ಅಂದರೆ ಮನಸ್ಸಿನ ಗಂಟು ಅಥವಾ ಮುಂಡಿಗೆ (Complex) ಎನ್ನುತ್ತಾರೆ.

ಅನುಭವ ಶೇಷಗಳು ಒಂದು ತತ್ವದ ಪ್ರಕಾರ ಅಂಟಿಕೊಳ್ಳುತ್ತವೆ. ಒಂದೇ ಕಾಲಕ್ಕೆ ಅನುಭವಿಸಿದ ಸಂಗತಿಗಳು ಒಂದುಗೂಡುತ್ತವೆ ಎಂದು ಹೇಳಬಹುದು. ಈ ನಿಯಮವು ಕೆಲಮಟ್ಟಿಗೆ ನಿಜವಿರುತ್ತದೆ. ನಿನ್ನಿನ ನನ್ನ ಪ್ರವಾಸದ ಒಂದು ಸಂಗತಿಯು ನೆನಪಿಗೆ ಬಂದರೆ ಆ ಪ್ರವಾಸದ ಇತರ ಸಂಗತಿಗಳೂ ನನ್ನ ನೆನಪಿಗೆ ಬರುತ್ತವೆ. ಆದರೆ ಆ ಒಂದುಗೂಡಿಸುವ ಕೆಲಸದಲ್ಲಿ ಅಡಕವಾಗಿರುವ ಮುಖ್ಯ ತತ್ವವೆಂದರೆ ಸಾಮಾನ್ಯ ಅಭಿರುಚಿ. ನನ್ನ ಪ್ರವಾಸದಲ್ಲಿ ಯಾವ ಸಂಗತಿಗಳು ಅಥವಾ ವಿಷಯಗಳು ನನಗೆ ವಿಶೇಷ ಸಂಬಂಧಪಟ್ಟಿದ್ದವೋ ಅಥವಾ ಯಾವುದರಲ್ಲಿ ನನ್ನ ಅಭಿರುಚಿಯು ಇತ್ತೋ ಅವು ಮಾತ್ರ ಅಂಟಿಕೊಂಡು ಒಂದು ಮುದ್ದೆ, ಗಂಟು ಅಥವಾ ಗೊಂಚಲು ಆಗುತ್ತದೆ. ಒಂದು ನಾಯಿಯ ಕುನ್ನಿಯು ದಾರಿಯಲ್ಲಿ ಹೋಗುವ ಕೆಲವು ಹುಡುಗರನ್ನು ಕಂಡು ಬೊಗಳುತ್ತದೆ. ಆ ಕಿಡಿಗೇಡಿ ಹುಡುಗರು ಅದಕ್ಕೆ ಕಲ್ಲನ್ನು ಎಸೆಯು

ತ್ತಾರೆ. ಪೆಟ್ಟನ್ನು ತಿಂದ ಆ ಕುನ್ನಿಯು ಹೆದರಿ ಮನೆಗೆ ಓಡಿಹೋಗುತ್ತದೆ. ಕೆಲವು ದಿವಸಗಳನಂತರ ಯಾವನಾದರೊಬ್ಬನು ತನ್ನ ಕೆಲಸಕ್ಕಾಗಿ ನೆಲಕ್ಕೆ ಬಗ್ಗಿದುದನ್ನು ಆ ಕುನ್ನಿಯು ಕಂಡರೆ ಅವನು ತನ್ನನ್ನೇ ಹೊಡೆಯುವನೆಂದು ಹೆದರಿ ಬಾಲ ಮುದುಡಿಕೊಂಡು ಓಡಿಹೋಗುತ್ತದೆ. ಹಿಂದಕ್ಕೆ ಅಂಥ ಸನ್ನಿವೇಶ ವನ್ನು ಅನುಭವಿಸಿದ ಪರಿಣಾಮವೇ ಇದಕ್ಕೆ ಕಾರಣ. ಒಂದು ಸನ್ನಿವೇಶಕ್ಕೆ ಸಂಬಂಧಪಟ್ಟ ಸಂಗತಿಗಳಲ್ಲಿ ಒಂದು ಸಂಗತಿಯು ಪ್ರಕಟವಾದ ಕೂಡಲೆ ಅದರ ಜೊತೆಗೆ ಉಳಿದ ಸಂಗತಿಗಳೂ ಪ್ರಕಟವಾಗುತ್ತವೆ. ಆಸಕ್ತಿ ಅಥವಾ ಅಭಿರುಚಿಯ ನಿಯಮದಂತೆ ಈ ಸಂಬಂಧೀಕರಣವು ಉಂಟಾಗುತ್ತದೆ. ತಾನು ಕೈಕೊಂಡ ಅಭ್ಯಾಸದಲ್ಲಿ ಅಥವಾ ಚಟುವಟಿಕೆಯಲ್ಲಿ ಮಗುವು ಎಷ್ಟೆಷ್ಟು ಅಭಿರುಚಿಯುಳ್ಳವನು ಆಗಿರುತ್ತಾನೆಯೋ ಅಷ್ಟಷ್ಟು ತೀವ್ರವಾಗಿ ಅವನಲ್ಲಿ ಸಂಸಕ್ತಿಕಾರ್ಯವು ನಡೆಯುತ್ತದೆ. ಓದುಗನು ತನ್ನ ಅನುಭವಗಳನ್ನು ಪರೀಕ್ಷಿಸಿ ಈ ಮಾತು ಸರಿ ಎಂಬುದನ್ನು ಮನಗಾಣಬಹುದು. ಅವನು ತನ್ನ ಮನಸ್ಸಿನಲ್ಲಿ ಒಂದು ವಿಚಾರವನ್ನು ತಂದುಕೊಳ್ಳಲಿ. ಆ ಮೇಲೆ ಬೇರೆ ಯಾವ ಯಾವ ವಿಚಾರಗಳು ಅದನ್ನು ತಾವಾಗಿಯೇ ಹಿಂಬಾಲಿಸುತ್ತವೆ ಎಂಬುದನ್ನು ಕಂಡು ಕೊಳ್ಳಲಿ. ಇದು ಅಭಿರುಚಿಯ ತತ್ವದ ಪ್ರಕಾರ ಸಾಗುತ್ತದೆ ಎಂಬುದು ಅವನಿಗೆ ಹೊಳೆಯದೆ ಇರದು.

### ದೃಢೀಕರಣ ಅಥವಾ ಗಟ್ಟಿಯಾಗುವಿಕೆ (Consolidation)

ಬಿಡುವಿನ ಕಾಲದಲ್ಲಿ ನಡೆಯುವ ಸಂಸಕ್ತಿಗೆ ದೃಢೀಕರಣ ಅಥವಾ ಗಟ್ಟಿ ಯಾಗುವಿಕೆ ಅನ್ನುತ್ತಾರೆ. ಒಂದು ವಿಷಯವನ್ನು ಕಲಿಯುತ್ತಿದ್ದಾಗ ಅಥವಾ ಅಭ್ಯಾಸಿಸುತ್ತಿದ್ದಾಗ ಮಾತ್ರ ಸಂಸಕ್ತಿ ಕ್ರಿಯೆಯು ನಡೆಯುತ್ತವೆ ಎಂದು ತಿಳಿಯಬಾರದು. ಅಭ್ಯಾಸವನ್ನು ಬಿಟ್ಟು ವಿರಾಮ ತಕ್ಕೊಳ್ಳುವ ಕಾಲದಲ್ಲಿಯೂ ಒಲವುಗಳು ಅಥವಾ ಅನುಭವಶೇಷಗಳು ಮತ್ತಿಷ್ಟು ಗಟ್ಟಿ ಆಗುತ್ತವೆ. ಹಸ್ತ ಕೌಶಲ್ಯದ ಚಟುವಟಿಕೆಗಳನ್ನು ಕಲಿಯುವಾಗ ಬಿಡುವಿನ ಅವಧಿಯ ನಂತರ ಅವುಗಳಲ್ಲಿ ಸುಧಾರಣೆ ಕಂಡುಬರುತ್ತವೆ. "ನಾವು ಚಳಿಗಾಲದಲ್ಲಿ (ನೀರು ಹೆಪ್ಪು ಗಟ್ಟಿದಾಗ) ಈಸುವದನ್ನೂ ಬೇಸಿಗೆಯಲ್ಲಿ ಸ್ಕೇಟಿಂಗನ್ನೂ (ಹಿಮದ ಮೇಲೆ ಜಾರುವ ಆಟವನ್ನೂ) ಕಲಿಯುತ್ತೇವೆ" ಎಂದು ವಿಲಿಯಮ್ ಜೇಮ್ಸನು

ಹೇಳುವ ಮಾತಿನ ಅರ್ಥವೂ ಇದೇ. ಮಳೆಗಾಲದ ಮೊಳಿಕೆಯು ಚಳಿಗಾಲದಲ್ಲಿ ಮಾಗುವದು ಎಂಬ ಕನ್ನಡ ಗಾದೆಯು ಕೂಡ ಇದೇ ಮಾತನ್ನು ಹೇಳುತ್ತದೆ. ದೃಢೀಕರಣದಲ್ಲಿಯೂ ಅಭಿರುಚಿ ತತ್ವವು ಅಡಕವಾಗಿದೆ. ಯಾವ ಕೆಲಸದಲ್ಲಿ ನಾವು ಮೇಲ್ಮೆಯನ್ನು ಪಡೆಯಬೇಕೆನ್ನುತ್ತೇವೆಯೋ, ಯಾವುದರಲ್ಲಿ ನಮ್ಮ ಅಭಿರುಚಿಯು ಹೆಚ್ಚಾಗಿರುತ್ತದೆಯೋ ಅದು ಬೇಗನೆ ನಮ್ಮಲ್ಲಿ ದೃಢಗೊಳ್ಳುತ್ತದೆ, ಗಟ್ಟಿಗೊಳ್ಳುತ್ತದೆ.

ಚಿಕ್ಕ ಮಕ್ಕಳು ಎರಡು ದಿವಸಗಳ ನಂತರ ತಾವು ಕಲಿತ ಕವಿತೆಯನ್ನು ಚನ್ನಾಗಿ ನೆನಪು ಮಾಡಿಕೊಳ್ಳಬಲ್ಲರು ಎಂಬುದನ್ನು ಡಾ|| ಬ್ಯಾಲಾರ್ಡನು ಪ್ರಯೋಗದಿಂದ ಸಿದ್ಧ ಮಾಡಿದ್ದಾನೆ. ಈ ಮಾತಿನ ಅರ್ಥವು ಪ್ರತಿಯೊಬ್ಬರ ಅನುಭವಕ್ಕೂ ಬಂದಿರಲಿಕ್ಕೆ ಸಾಕು. ನಾವು ಒಬ್ಬರ ಹೆಸರನ್ನು ನೆನಪು ಮಾಡಿಕೊಳ್ಳಬೇಕಾಗಿದೆ. ಪ್ರಯತ್ನಪಟ್ಟರೂ ಆ ವೇಳೆಗೆ ಅದು ನೆನಪು ಆಗುವದಿಲ್ಲ. ಆದರೆ ಮತ್ತೊಂದು ಕೆಲಸದಲ್ಲಿ ನಾವು ತೊಡಗಿದಾಗ ಕೆಲ ಸಮಯದನಂತರ ಆ ಹೆಸರು ನಮಗೆ ತಟ್ಟನೇ ಹೊಳೆಯುತ್ತದೆ. ಆ ಹೆಸರನ್ನು ನೆನಪಿಗೆ ತಂದು ಕೊಳ್ಳಲಿಕ್ಕೆ ಮಾಡಿದ ಪ್ರಯತ್ನವು ಒಟ್ಟುಗೂಡಿ ಮಾನಸಿಕ ಗ್ರಂಥಿಯಾಗಿ ಆ ಹೆಸರನ್ನು ನೆನಪು ಮಾಡಿಕೊಡುತ್ತವೆ. ನಿಬಂಧ, ಭಾಷಣ, ಪಾಠ ಅಥವಾ ಪರೀಕ್ಷೆ ಇವುಗಳ ತಯಾರಿಯನ್ನು ಮಾಡುವಾಗ ಸಾಕಷ್ಟು ಬಿಡುವಿನ ಅವಧಿಯನ್ನು ಒದಗಿಸಿಕೊಟ್ಟರೆ ಪರಿಣಾಮಗಳು ಒಳ್ಳೆಯದಾಗುವುದರಲ್ಲಿ ಸಂದೇಹವಿಲ್ಲ. ಕೈಕೆಲಸ, ಆಟ ಮುಂತಾದ ಚಟುವಟಿಕೆಗಳಲ್ಲಿ ಕುಶಲತೆಯನ್ನು ಸಂಪಾದಿಸುವಾಗ ಮಗುವು ಬಯಸಿದ ರೂಢಿಗಳು ಉಳಿದು ಅವನಿಗೆ ಬೇಡಾದ ಚಲನಗಳು ತಾವಾಗಿಯೇ ಅಳಿದು ಹೋಗುತ್ತವೆ. ಈ ಕಾರ್ಯವು ಅಭಿರುಚಿಯ ತತ್ವಕ್ಕೆ ಅನುಸರಿಸಿ ನಡೆಯುತ್ತದೆ. ಇದೇ ತತ್ವದ ಪ್ರಕಾರ ಯಶಸ್ವಿಯಾದ ಪ್ರತಿಯೊಂದು ಚಲನವೂ ದೃಢೀಕರಣದ ಕೆಲಸವನ್ನು ಮುಂದುವರಿಸುತ್ತದೆ. "ಜಯದಂತೆ ಯಾವದೂ ಜಯವಾಗುವದಿಲ್ಲ" ಎಂಬ ಪಾಶ್ಚಾತ್ಯ ಗಾದೆಯ ಮಾತಿನ ಅರ್ಥವಾದರೂ ಇದೆ. ಜಯವನ್ನು ತರುವ ಕ್ರಿಯೆಗಳು ನಮ್ಮ ಮನಸ್ಸಿನಲ್ಲಿ ಗಟ್ಟಿಗೊಳ್ಳುತ್ತವೆ. ಜಯವು ಸಿಕ್ಕದಾಗ ಉತ್ಸಾಹವು ಇಮ್ಮಡಿಯಾಗುತ್ತದೆ; ಪ್ರಯತ್ನವು ಪುಟಗೊಳ್ಳುತ್ತದೆ. ಜಯಕ್ಕೆ ಕಾರಣವಾದ

ಸಾಧನಗಳಲ್ಲಿ ವಿಶ್ವಾಸವೂ ಅಭಿರುಚಿಯೂ ಬಲಗೊಳ್ಳುತ್ತದೆ. ಮತ್ತೊಮ್ಮೆ ಅಂಥ ಕೆಲಸವನ್ನು ಹಮ್ಮಿದಾಗ ಅನುಭವಶೇಷಗಳು ನೆರವಿಗೆ ನಿಲ್ಲುತ್ತವೆ. ಮತ್ತು ಅಪಜಯುವನ್ನು ತರಬಹುದಾದ ಕ್ರಿಯೆಗಳು ಅಭಿರುಚಿಯ ಅಭಾವದ ಮೂಲಕ ಪುನರಾವರ್ತನೆಯನ್ನು ಹೊಂದದೆ ತಾವಾಗಿಯೇ ಕಳಚಿ ಹೋಗುತ್ತವೆ.

## ಮನೋವಿಜ್ಞಾನವನ್ನು ಅಭ್ಯಾಸ ಮಾಡುವ ವಿಧಾನಗಳು

ಮನೋವಿಜ್ಞಾನವನ್ನು ಅಭ್ಯಾಸ ಮಾಡುವದೆಂದರೆ ವರ್ತನ ಮತ್ತು ಅನುಭವವನ್ನು ಅಭ್ಯಾಸ ಮಾಡುವದು. ಈ ಅಭ್ಯಾಸವನ್ನು ಮಾಡುವ ಮುಖ್ಯ ವಿಧಾನಗಳು ಮೂರು ಉಂಟು–ನಿರೀಕ್ಷಣೆ, ಅಂತರಾವಲೋಕನ ಮತ್ತು ಪ್ರಯೋಗ.

**ನಿರೀಕ್ಷಣೆ** (ಅಥವಾ ಹೊರನೋಟ) (Observation)

ಒಬ್ಬ ವ್ಯಕ್ತಿಯ ಹೊರಗೆ ಕಾಣುವ ಚಟುವಟಿಕೆಗಳನ್ನು ಮತ್ತು ವಿಕಾರಗಳನ್ನು ನಿರೀಕ್ಷಿಸಿ ಅಂದರೆ ಕಣ್ಣಿನಿಂದ ನೋಡಿ ಅವುಗಳ ಕಾರಣ–ಪರಿಣಾಮಗಳನ್ನು ಊಹಿಸುವದು ನಿರೀಕ್ಷಣೆ ಅಥವಾ ಹೊರನೋಟ. ಒಬ್ಬನು ನಾಯಿಯನ್ನು ಹೊಡೆಯುವದನ್ನು ನೋಡಿ ಅವನು ಸಿಟ್ಟಿಗೆ ಎದ್ದಿದ್ದಾನೆಂದು ನಾವು ಊಹಿಸುತ್ತೇವೆ. ಮತ್ತೊಬ್ಬನು ಹಾವನ್ನು ಕಂಡು ಓಡಿ ಹೋಗುವದನ್ನು ನೋಡಿ ಅವನು ಹೆದರಿ ಹಾಗೆ ಮಾಡುತ್ತಿದ್ದಾನೆಂದು ನಾವು ಊಹಿಸುತ್ತೇವೆ. ಹೀಗೆ ಬೇರೆಯವರ ವರ್ತನವನ್ನು ನೋಡಿ ಸಾಮಾನ್ಯ ನಿಯಮಗಳನ್ನು ಕಟ್ಟುವ ನಿರೀಕ್ಷಣ ಪದ್ಧತಿಗೆ ವರ್ತನವಾದಿಗಳು (Behaviourists) ಹೆಚ್ಚು ಮಹತ್ವ ಕೊಡುತ್ತಾರೆ.

**ಅಂತರಾವಲೋಕನ** (ಅಥವಾ ಒಳನೋಟ) (Introspection)

ಹೊರಗೆ ಕಾಣುವ ವರ್ತನವಲ್ಲದೆ ಒಳಗೆ ನಡೆಯುವ ಅನುಭವವೂ ಮನೋವಿಜ್ಞಾನದ ವಿಷಯವೆಂದು ಮೇಲೆ ಹೇಳಿದೆ. ಈ ಅನುಭವವನ್ನು ಅಭ್ಯಾಸ ಮಾಡುವ ಪದ್ಧತಿಗೆ ಅಂತರಾವಲೋಕನ ಅಥವಾ ಒಳನೋಟ

ಎನ್ನುತ್ತಾರೆ ಅಂತರಾವಲೋಕನದಲ್ಲಿ "ಮನಸ್ಸು ತನ್ನ ಕಾರ್ಯಕಲಾಪಗಳನ್ನು ತಾನೇ ನಿರೀಕ್ಷಿಸುತ್ತದೆ." ಈ ಪದ್ಧತಿಯ ಮುಖ್ಯ ಲಾಭವೇನೆಂದರೆ ನಮ್ಮ ಅನುಭವಗಳನ್ನು ನಾವು ಬೇಕಾದಾಗ ನಿರೀಕ್ಷಿಸಲು ಬರುತ್ತದೆ. ಆದರೆ ಇದರ ಕೆಲವು ದೋಷಗಳೂ ಉಂಟು. ಯಾವವೆಂದರೆ : (ಅ) ನಿರೀಕ್ಷಕನು (ಸಿಟ್ಟಿನಲ್ಲಿದ್ದವನು) ಮತ್ತು ನಿರೀಕ್ಷಿಸಲ್ಪಡುವ ವಸ್ತು ( ಸಿಟ್ಟು ) ಒಂದೇ ಆಗಿವೆ. ಮನಸ್ಸು ಅದೇ ಕಾಲಕ್ಕೆ ಈ ಎರಡೂ ಕೆಲಸಗಳನ್ನು ಮಾಡಲಾರದು. (ಆ) ನಾವು ನಿರೀಕ್ಷಿಸಲಿಕ್ಕೆ ಹತ್ತಿದ ಕೂಡಲೇ ಅನುಭವವು ತನ್ನ ಸ್ವರೂಪ ವನ್ನು ಬದಲಾಯಿಸುತ್ತದೆ ಆಗ ನಾವು ನೋಡುವದು ಪ್ರತ್ಯಕ್ಷ ಅನುಭವ ವಾಗದೆ ಅದರ ಸ್ಮರಣೆಯ ನಿರೀಕ್ಷಣೆ ಆಗುತ್ತದೆ. ನನ್ನ ಸಿಟ್ಟಿನ ಲಕ್ಷಣಗಳನ್ನು ನಾನು ಪರೀಕ್ಷಿಸಲು ಹತ್ತಿದ ಕೂಡಲೇ ನನ್ನ ಸಿಟ್ಟೇ ಇಲ್ಲದಾಗುವದು. ವಿಲಿಯಮ್ ಜೇಮ್ಸನು ಇದನ್ನು ಒಂದು ಉಪಮೆಯಿಂದ ಸುಂದರವಾಗಿ ಹೇಳಿದ್ದಾನೆ– "ಕತ್ತಲು ಹೇಗೆ ಇರುತ್ತದೆ ಎಂಬುದನ್ನು ನೋಡಲಿಕ್ಕೆ ದೀಪ ಹಚ್ಚಿದ ಹಾಗೆ." (ಇ) ನಾವು ನಮ್ಮ ನಮ್ಮ ಅನುಭವಗಳನ್ನು ಮಾತ್ರ ಆವಲೋಕಿಸಬಹುದಲ್ಲದೆ ಬೇರೆಯವರ ಅನುಭವಗಳನ್ನು ನಿರೀಕ್ಷಿಸಲು ಬರುವಂತಿಲ್ಲ. ಅಂತರಾವಲೋಕನ ಪದ್ಧತಿಯಲ್ಲಿ ಈ ದೋಷಗಳು ಇದ್ದರೂ ಅದನ್ನು ಸಂಪೂರ್ಣ ಬಿಟ್ಟುಬಿಡಬೇಕೆಂದು ಸಿದ್ಧವಾಗುವದಿಲ್ಲ. ಏಕೆಂದರೆ ವರ್ತನಾವಲೋಕನಕ್ಕೂ ಕೂಡ ಅಂತರಾವಲೋಕನವೇ ಆಧಾರ.

### ಪ್ರಯೋಗ (Experiment)

ನಿಯಂತ್ರಿತ ಸನ್ನಿವೇಶದಲ್ಲಿ ನಿರೀಕ್ಷಣೆ ಮಾಡುವದೇ ಪ್ರಯೋಗ. ಮನೋವಿಜ್ಞಾನಿಗಳು ತಮಗೆ ಬೇಕಾದ ಹಾಗೆ ಸನ್ನಿವೇಶಗಳನ್ನು ಕಟ್ಟಿ ಮತ್ತೆ ಅದರಲ್ಲಿ ತಮಗೆ ತೋಚಿದ ಬದಲಾವಣೆಗಳನ್ನು ಮಾಡಿ ಅದರಲ್ಲಿ ಪ್ರಾಣಿಯ ವರ್ತನವನ್ನು ಪರೀಕ್ಷಿಸುತ್ತಾರೆ. ಆ ಸನ್ನಿವೇಶದ ಪರಿಣಾಮವು ವರ್ತನದಲ್ಲಿ ಯಾವ ಬದಲಾವಣೆ ಮಾಡುತ್ತದೆ ಎಂಬುದನ್ನು ನಿರೀಕ್ಷಿಸುತ್ತಾರೆ. ಇಂಗ್ಲಂಡ ದಲ್ಲಿ ಮ್ಯಾಕ್‌ಡೂಗಲ್, ಫ್ರಾನ್ಸದಲ್ಲಿ ಪ್ಯಾವ್ಲವ್, ಅಮೇರಿಕೆಯಲ್ಲಿ ಥಾರ್ನ್ ಡಾಯಿಕ್, ಆಫ್ರಿಕೆಯಲ್ಲಿ ಕೊಹಿಲರ್ ಎಂಬವರು ಇಲಿ, ನಾಯಿ, ಬೆಕ್ಕು ಮತ್ತು ಮಂಗಗಳ ಮೇಲೆ ಪ್ರಯೋಗ ಮಾಡಿ ಪ್ರಸಿದ್ಧವಾದ ಕಲಿಯು

ವಿಕೆಯ ನಿಯಮಗಳನ್ನು ಕಂಡುಹಿಡಿದಿದ್ದಾರೆ. ಸಾಲೆಯ ಅಭ್ಯಾಸಗಳ ಬಗೆಗೆ ಪಾಶ್ಚಾತ್ಯ ದೇಶಗಳಲ್ಲಿ ಎಷ್ಟೋ ಪ್ರಯೋಗಗಳು ನಡೆದಿವೆ, ನಡೆಯುತ್ತಲಿವೆ. ಆದರೆ ಇಂಡಿಯಾದಲ್ಲಿ ಮಾತ್ರ ಅಲ್ಲೊಂದು ಇಲ್ಲೊಂದು ಪ್ರಯೋಗವು ನಡೆದದ್ದು ಕಂಡುಬರುತ್ತದೆ. ಎಲ್ಲ ಪ್ರಾಂತೀಯ ಭಾಷೆಗಳಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ ದೊಡ್ಡ ಪ್ರಮಾಣದಿಂದ ಪ್ರಯೋಗಗಳು ನಡೆಯುವದು ಅವಶ್ಯವಿದೆ.

## ಶಿಕ್ಷಣದಲ್ಲಿ ಉಪಯೋಗ

೧. ಮನೋವಿಜ್ಞಾನವು ಒಂದು ವಾಸ್ತವಿಕ ಸಾಯನ್ಸು. ಅದರ ಅಭ್ಯಾಸ ಮಾಡಿದ ನಂತರ ಶಿಕ್ಷಕನು ವೈಜ್ಞಾನಿಕ ದೃಷ್ಟಿಯನ್ನು ಬೆಳಿಸತಕ್ಕದ್ದು. ಈ ಪುಸ್ತಕವು ಪ್ರತಿಪಾದಿಸುವ ಸಾಮಾನ್ಯ ತತ್ವಗಳು, ಸೂಚಿಸುವ ಪದ್ಧತಿಗಳು ಮತ್ತು ವಿವರಿಸುವ ಪ್ರಯೋಗಗಳು ಎಷ್ಟರಮಟ್ಟಿಗೆ ಸರಿಯಾಗಿವೆ ಎಂಬುದನ್ನು ತನ್ನ ಅನುಭವಕ್ಕೆ ಒರೆಹಚ್ಚಿ ನೋಡಬೇಕು. ತಾನೂ ಪ್ರಯೋಗಗಳನ್ನು ಮಾಡಲು ಪ್ರಯತ್ನಿಸಬೇಕು. ತಾನು ಕಲಿತ ಬಗೆಬಗೆಯ ತತ್ವಗಳನ್ನೂ ನಿಯಮಗಳನ್ನೂ ಪ್ರತ್ಯಕ್ಷ ವ್ಯವಹಾರದಲ್ಲಿ ಉಪಯೋಗಿಸಿಕೊಳ್ಳುವ ಜಾಣ್ಮೆಯನ್ನೂ ಒಳನೋಟವನ್ನೂ ಶಿಕ್ಷಕನು ಗಳಿಸಬೇಕು. ಸಾಲೆಯ ಕೋಣೆಯಲ್ಲಿಯಾಗಲಿ ಆಟದ ಬೈಲಿನಲ್ಲಿಯಾಗಲಿ ಶಿಕ್ಷಕನು ಮಕ್ಕಳ ಒಡನಾಟದಲ್ಲಿ ಇರುತ್ತಾನೆ. ಆಗ ಮನೋವಿಜ್ಞಾನವನ್ನು ಅಭ್ಯಾಸಿಸುವ ವಿಧಾನಗಳಾದ ನಿರೀಕ್ಷಣೆ, ಅಂತರಾವಲೋಕನ ಮತ್ತು ಪ್ರಯೋಗಗಳನ್ನು ಉಪಯೋಗಿಸುವ ರೂಢಿಯನ್ನು ಬೆಳಿಸಬೇಕು. ಚಿಕ್ಕಮಕ್ಕಳ ವರ್ತನವನ್ನು ಪರೀಕ್ಷಿಸುವಾಗ ತನ್ನ ಬಾಲ್ಯಾವಸ್ಥೆಯ ಅನುಭವಗಳನ್ನೂ ತನ್ನ ಹುಡುಗಾಟಗಳನ್ನೂ ನೆನಪಿಗೆ ತಂದುಕೊಳ್ಳಬೇಕು. ಮಕ್ಕಳ ಮನೋವಿಜ್ಞಾನದ ಅಭ್ಯಾಸದಿಂದ ತಾನೇ ಸಿದ್ಧಾಂತಗಳನ್ನು ಕಂಡುಹಿಡಿಯಬೇಕು.

೨. ಮಗುವು ಮಾತಾಡುವ ಯಂತ್ರವಲ್ಲ; ಕೇವಲ ಮಾಂಸದ ಮುದ್ದೆಯೂ ಅಲ್ಲ. ಆದರೆ ಬೆಳೆಯುತ್ತಿರುವ ಪ್ರಾಣಿ. ಈ ತಿಳುವಳಿಕೆಯು

ಶಿಕ್ಷಣದ ದೃಷ್ಟಿಯಿಂದ ಮಹತ್ವದ್ದು. ಈ ತಿಳುವಳಿಕೆ ಇದ್ದಲ್ಲಿ ಮಗುವಿನ ಕಡೆಗೆ ಶಿಕ್ಷಕನ ಒಲವು ಬೇರೆ ದೃಷ್ಟಿಯಿಂದ ಹರಿಯುತ್ತದೆ. ಅವನು ಸಹಾನುಭೂತಿಪರನಾಗುತ್ತಾನೆ. ಮಗುವಿನ ವ್ಯಕ್ತಿತ್ವದಲ್ಲಿ ಹುದುಗಿರುವ ಸಾಮರ್ಥ್ಯಗಳನ್ನು ಅರಳಿಸುವದೇ ಶಿಕ್ಷಣದ ಗುರಿಯಾಗುತ್ತದೆ. ಮಗುವು ಒಂದು ಜೀವಿಯಾದ್ದರಿಂದ ಅವನ ಜೀವನದ ಗುರಿ ಯಾವುದೆಂಬುದನ್ನು ಅನುಲಕ್ಷಿಸಿ ಶಿಕ್ಷಣದ ಕಾರ್ಯಕ್ರಮಗಳನ್ನು ಹೊಂದಿಸಬೇಕಾಗುತ್ತದೆ.

೩. ವರ್ತನದಲ್ಲಿ ಸ್ವಯಂಪ್ರೇರಣೆ ಉಂಟು; ಕಾರ್ಯ ಪದ್ಧತಿಯನ್ನು ಬದಲಾಯಿಸುವ ಸ್ವಾತಂತ್ರ್ಯ ಉಂಟು. ಆದಕಾರಣ ಮಗುವಿನಲ್ಲಿ ಸಹಜವಾಗಿ ಇರುವ ಸ್ವಯಂಪ್ರೇರಣೆಯನ್ನೂ ಸ್ವಾತಂತ್ರ್ಯದ ಲವಲವಿಕೆಯನ್ನೂ ಎಬ್ಬಿಸಿ ಅವು ಕೆಲಸದಲ್ಲಿ ತೊಡಗುವಂತೆ ಶಿಕ್ಷಣದ ಕಾರ್ಯಕ್ರಮಗಳನ್ನು ಯೋಜಿಸಬೇಕು. ಮಕ್ಕಳ ಸ್ವಾತಂತ್ರ್ಯ, ಸ್ವಾವಲಂಬನ ಮತ್ತು ಸ್ವಯಂಪ್ರೇರಿತ ಚಟುವಟಿಕೆ ಇವು ಅವಶ್ಯವೆಂದು ಈಗಿನ ಶಿಕ್ಷಣವು ಒತ್ತಿ ಹೇಳುತ್ತದೆ. ಸ್ವಯಂಶಿಕ್ಷಣವೇ ನಿಜವಾದ ಶಿಕ್ಷಣ; ಒತ್ತಾಯದ ಶಿಕ್ಷಣವು ಶಿಕ್ಷಣವಲ್ಲ. ಶರೀರದ ಅವಯವಗಳು ಸ್ವಲ್ಪ ಬಲಿತ ಕೂಡಲೆ ಸಣ್ಣ ಮಗುವು 'ಇದನ್ನು ನಾನು ಮಾಡುತ್ತೇನೆ' ಎಂದು ಹಾತೊರೆಯುತ್ತಾನೆ. ದೊಡ್ಡವರು ಅವನ ನೆರವಿಗೆ ಹೋದರೆ ಅದನ್ನು ಅಲ್ಲಗಳೆಯುತ್ತಾನೆ. ಇದು ಸ್ವಾತಂತ್ರ್ಯದ ಕುರುಹು. ಶಾಲೆಯಲ್ಲಿಯೇ ಆಗಲಿ ಮನೆಯಲ್ಲಿಯೇ ಆಗಲಿ ಮಕ್ಕಳ ಈ ಸ್ವಂತ ಚಟುವಟಿಕೆಗೆ ಪುಟ ಕೊಡಬೇಕು. ಮಕ್ಕಳು ತಾವಾಗಿ ಕಲಿತದ್ದನ್ನು ಚನ್ನಾಗಿ ಕಲಿಯುತ್ತಾರೆ. ವಿದ್ಯಾರ್ಥಿಗಳಲ್ಲಿ ಸ್ವಯಂಪ್ರೇರಣೆ ಇರದಿದ್ದರೆ ಶಿಕ್ಷಕನು ಕಷ್ಟಪಟ್ಟದ್ದೆಲ್ಲ ವ್ಯರ್ಥವಾಗುತ್ತಿತ್ತು. ವಿಷಯದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದರೆ ಹುಡುಗರು ಸ್ವಯಂಪ್ರೇರಣೆಯಿಂದ ಕಲಿಯುವರು. ಅವರು ನಡೆಯಿಸಿದ ಚಟುವಟಿಕೆಗಳಲ್ಲಿ ಪಾಲಕರಾಗಲಿ ಶಿಕ್ಷಕರಾಗಲಿ ನಡುನಡುವೆ ಕೈಹಾಕುವದನ್ನು ಕಡಿಮೆ ಮಾಡಬೇಕು. ಉದಾಹರಣೆಗಾಗಿ, ತೋಟದಲ್ಲಿ ಕಳೆ ತೆಗೆಯುವ ಕಾರ್ಯಕ್ರಮ, ಪ್ರವಾಸದ ಕಾರ್ಯಕ್ರಮ ಮೊದಲಾದ ಯೋಜನೆಗಳನ್ನು ಹುಡುಗರೇ ಮಾಡಲಿ, ಹುಡುಗರೇ ನೆರವೇರಿಸಲಿ. ಅಂದರೆ ಅವರ ಸ್ವಾತಂತ್ರ್ಯಕ್ಕೂ ಸ್ವಾವಲಂಬನಕ್ಕೂ ಎಡೆ ಕೊಟ್ಟಂತೆ ಆಗುವದು.

೪. ವರ್ತನವು ಉದ್ದೇಶಯುತವಾದುದು. ಕಾರಣ ಉದ್ದೇಶ ಇಲ್ಲದ ಚಟುವಟಿಕೆಗಳು ಮಕ್ಕಳಿಗೆ ಸೊಗಸು ಎನಿಸಲಾರವು. ಶಿಕ್ಷಕನು ಸಾಲೆಯಲ್ಲಿ ಕಂಡು ಬರುವ ಉದ್ದೇಶರಹಿತವಾದ ಚಟುವಟಿಕೆಗಳನ್ನು ತೆಗೆದು ಅವುಗಳ ಸ್ಥಳದಲ್ಲಿ ಉದ್ದೇಶಸಹಿತವಾದ ಚಟುವಟಿಕೆಗಳನ್ನು ಸೇರಿಸಬೇಕು. ಶಿಕ್ಷಕನ ದೂರದೃಷ್ಟಿಯ ಉದ್ದೇಶವು (ಉದಾ: ಉತ್ತಮ ನಾಗರಿಕನನ್ನು ಮಾಡುವದು) ಬೇರೆಯಾಗಿರಬಹುದು. ಮಕ್ಕಳ ಸಮೀಪ ದೃಷ್ಟಿಯ ಉದ್ದೇಶವು (ಉದಾ : ದೊಡ್ಡವರಿಂದ ಹೊಗಳಿಸಿಕೊಳ್ಳುವದು) ಬೇರೆಯಾಗಿರಬಹುದು. ಮಕ್ಕಳ ಮುಂದೆ ಅವರಿಗೆ ತಿಳಿಯುವ ಒಂದು ಉದ್ದೇಶವನ್ನು ಯಾವಾಗಲೂ ಇಡುವದು ಒಳ್ಳೆಯದು. ಕಲಿಸುವ ಪಾಠಕ್ಕೆ ಒಂದು ನಿಚ್ಚಿತ ಉದ್ದೇಶವನ್ನು ಶಿಕ್ಷಕನು ಇಟ್ಟುಕೊಂಡರೆ ಕಲಿಯುವ ವಿಷಯವು ಮಕ್ಕಳಿಗೆ ಅರ್ಥವುಳ್ಳದ್ದು ಆಗುತ್ತದೆ. ಪ್ರಶಂಸೆ, ಬಹುಮಾನ, ಕತೆ, ಪೇಟೆಯಲ್ಲಿ ಸಾಮಾನ ಕೊಳ್ಳುವದು ಮುಂತಾದ ಬಯಕೆ ಉದ್ದೇಶಗಳನ್ನು ಮಕ್ಕಳ ಮುಂದೆ ಇಟ್ಟು ಓದು, ಬರೆಹ, ಗಣಿತ ಕಲಿಸುವದು ಉತ್ತಮ ಪದ್ಧತಿ. ಸನ್ನಿವೇಶಕ್ಕೆ ತಕ್ಕಂತೆ ಬಾಲಕರ ಮುಂದೆ ಶಿಕ್ಷಕನು ಪರಿಣಾಮಕಾರಕವಾದ ಉದ್ದೇಶಗಳನ್ನು ಇಡಬೇಕು. ಕಲಿಯುವಿಕೆಯ ಉದ್ದೇಶ, ಶಿಕ್ಷಕನ ಪ್ರೋತ್ಸಾಹ ಮತ್ತು ವಿದ್ಯಾರ್ಥಿಯ ಪ್ರಯತ್ನ ಇವು ಒಂದಕ್ಕೊಂದು ಸಂಬಂಧಪಟ್ಟಿವೆ. ಪ್ರೋತ್ಸಾಹದ ಕೊರತೆಯಿಂದ ವಿದ್ಯಾರ್ಥಿಗಳಲ್ಲಿ ಇರುವ ಎಷ್ಟೋ ಶಕ್ತಿಗಳೂ ಕೌಶಲ್ಯಗಳೂ ಮಲಗಿ ಬಿಡುತ್ತವೆ. ಅವುಗಳನ್ನು ಎಚ್ಚರಿಸಿ ವಿದ್ಯಾರ್ಥಿಗಳು ಪ್ರಯತ್ನಶೀಲರಾಗುವಂತೆ ಮಾಡಬೇಕಾದರೆ ಯಾವ ಪರಿಣಾಮಕಾರಕ ಉದ್ದೇಶದ ಕಡೆಗೆ ಅವರ ಲಕ್ಷ್ಯವನ್ನು ಎಳೆಯಬೇಕು ಎಂಬುದೇ ಶಿಕ್ಷಕನ ಸಮಸ್ಯೆ. ಯಾವುದಾದರೊಂದು ಉದ್ದೇಶವನ್ನು ಸಾಧಿಸುವುದಿದ್ದರೆ ಮಾತ್ರ ಮಗುವು ಕೆಲಸ ಮಾಡಲಿಕ್ಕೆ ಅಣಿಯಾಗುತ್ತಾನೆ. ಮಾನ, ಹೊಗಳಿಕೆ, ಜ್ಞಾನ ಮೊದಲಾದವುಗಳನ್ನು ಬಯಸುವ ಮಗುವು ಹಸಿದ ಬೆಕ್ಕಿನ ಹಾಗೆ ತನ್ನ ಉದ್ದೇಶವನ್ನು ಈಡೇರಿಸಲು ಹಾತೊರೆಯುತ್ತಾನೆ. ಉತ್ತೇಜನವಿಲ್ಲದ ಮಗುವು ಹೊಟ್ಟೆ ತುಂಬಿದ ಬೆಕ್ಕಿನಂತೆ ನಿಷ್ಕ್ರಿಯನಾಗುತ್ತಾನೆ

೫. ಪ್ರಾಣಿಯ ಅವಯವಗಳು ಬಿಡಿಯಾಗಿ ಕಂಡರೂ ದೇಹವು ಇಡಿಯಾಗಿ ಕೆಲಸ ಮಾಡುತ್ತದೆ. ಇದರಿಂದ ದೊರೆಯುವ ತತ್ವನೇನೆಂದರೆ,

ಶಿಕ್ಷಣದ ದೃಷ್ಟಿಯಿಂದ ಮಹತ್ವವು. ಈ ತಿಳುವಳಿಕೆ ಇದ್ದಲ್ಲಿ ಮಗುವಿನ ಕಡೆಗೆ ಶಿಕ್ಷಕನ ಒಲವು ಬೇರೆ ದೃಷ್ಟಿಯಿಂದ ಹರಿಯುತ್ತದೆ. ಅವನು ಸಹಾನುಭೂತಿಪರನಾಗುತ್ತಾನೆ. ಮಗುವಿನ ವ್ಯಕ್ತಿತ್ವದಲ್ಲಿ ಹುದುಗಿರುವ ಸಾಮರ್ಥ್ಯಗಳನ್ನು ಅರಳಿಸುವದೇ ಶಿಕ್ಷಣದ ಗುರಿಯಾಗುತ್ತದೆ. ಮಗುವು ಒಂದು ಜೀವಿಯಾದ್ದರಿಂದ ಅವನ ಜೀವನದ ಗುರಿ ಯಾವುದೆಂಬುದನ್ನು ಅನುಲಕ್ಷಿಸಿ ಶಿಕ್ಷಣದ ಕಾರ್ಯಕ್ರಮಗಳನ್ನು ಹೊಂದಿಸಬೇಕಾಗುತ್ತದೆ.

೩. ವರ್ತನದಲ್ಲಿ ಸ್ವಯಂಪ್ರೇರಣೆ ಉಂಟು; ಕಾರ್ಯ ಪದ್ಧತಿಯನ್ನು ಬದಲಾಯಿಸುವ ಸ್ವಾತಂತ್ರ್ಯ ಉಂಟು. ಆದಕಾರಣ ಮಗುವಿನಲ್ಲಿ ಸಹಜವಾಗಿ ಇರುವ ಸ್ವಯಂಪ್ರೇರಣೆಯನ್ನೂ ಸ್ವಾತಂತ್ರ್ಯದ ಲವಲವಿಕೆಯನ್ನೂ ಎಚ್ಚರಿಸಿ ಅವು ಕೆಲಸದಲ್ಲಿ ತೊಡಗುವಂತೆ ಶಿಕ್ಷಣದ ಕಾರ್ಯಕ್ರಮಗಳನ್ನು ಯೋಜಿಸಬೇಕು. ಮಕ್ಕಳ ಸ್ವಾತಂತ್ರ್ಯ, ಸ್ವಾವಲಂಬನ ಮತ್ತು ಸ್ವಯಂಪ್ರೇರಿತ ಚಟುವಟಿಕೆ ಇವು ಅವಶ್ಯವೆಂದು ಈಗಿನ ಶಿಕ್ಷಣವು ಒತ್ತಿ ಹೇಳುತ್ತದೆ. ಸ್ವಯಂಶಿಕ್ಷಣವೇ ನಿಜವಾದ ಶಿಕ್ಷಣ; ಒತ್ತಾಯದ ಶಿಕ್ಷಣವು ಶಿಕ್ಷಣವಲ್ಲ. ಶರೀರದ ಅವಯವಗಳು ಸ್ವಲ್ಪ ಬಲಿತ ಕೂಡಲೆ ಸಣ್ಣ ಮಗುವು 'ಇದನ್ನು ನಾನು ಮಾಡುತ್ತೇನೆ' ಎಂದು ಹಾತೊರೆಯುತ್ತಾನೆ. ದೊಡ್ಡವರು ಅವನ ನೆರವಿಗೆ ಹೋದರೆ ಅದನ್ನು ಅಲ್ಲಗಳೆಯುತ್ತಾನೆ. ಇದು ಸ್ವಾತಂತ್ರ್ಯದ ಕುರುಹು. ಶಾಲೆಯಲ್ಲಿಯೇ ಆಗಲಿ ಮನೆಯಲ್ಲಿಯೇ ಆಗಲಿ ಮಕ್ಕಳ ಈ ಸ್ವಂತ ಚಟುವಟಿಕೆಗೆ ಪುಟ ಕೊಡಬೇಕು. ಮಕ್ಕಳು ತಾವಾಗಿ ಕಲಿತದ್ದನ್ನು ಚನ್ನಾಗಿ ಕಲಿಯುತ್ತಾರೆ. ವಿದ್ಯಾರ್ಥಿಗಳಲ್ಲಿ ಸ್ವಯಂಪ್ರೇರಣೆ ಇರದಿದ್ದರೆ ಶಿಕ್ಷಕನು ಕಷ್ಟಪಟ್ಟದ್ದೆಲ್ಲ ವ್ಯರ್ಥವಾಗುತ್ತಿತ್ತು. ವಿಷಯದಲ್ಲಿ ಅಭಿರುಚಿ ಹುಟ್ಟುವಂತೆ ಮಾಡಿದರೆ ಹುಡುಗರು ಸ್ವಯಂಪ್ರೇರಣೆಯಿಂದ ಕಲಿಯುವರು. ಅವರು ನಡೆಯಿಸಿದ ಚಟುವಟಿಕೆಗಳಲ್ಲಿ ಪಾಲಕರಾಗಲಿ ಶಿಕ್ಷಕರಾಗಲಿ ನಡುನಡುವೆ ಕೈಹಾಕುವದನ್ನು ಕಡಿಮೆ ಮಾಡಬೇಕು. ಉದಾಹರಣೆಗಾಗಿ, ತೋಟದಲ್ಲಿ ಕಳೆ ತೆಗೆಯುವ ಕಾರ್ಯಕ್ರಮ, ಪ್ರವಾಸದ ಕಾರ್ಯಕ್ರಮ ಮೊದಲಾದ ಯೋಜನೆಗಳನ್ನು ಹುಡುಗರೇ ಮಾಡಲಿ, ಹುಡುಗರೇ ನೆರವೇರಿಸಲಿ. ಅಂದರೆ ಅವರ ಸ್ವಾತಂತ್ರ್ಯಕ್ಕೂ ಸ್ವಾವಲಂಬನಕ್ಕೂ ಎಡೆ ಕೊಟ್ಟಂತೆ ಆಗುವದು.

೪. ವರ್ತನವು ಉದ್ದೇಶಯುತವಾದುದು. ಕಾರಣ ಉದ್ದೇಶ ಇಲ್ಲದ ಚಟುವಟಿಕೆಗಳು ಮಕ್ಕಳಿಗೆ ಸೊಗಸು ಎನಿಸಲಾರವು. ಶಿಕ್ಷಕನು ಶಾಲೆಯಲ್ಲಿ ಕಂಡು ಬರುವ ಉದ್ದೇಶರಹಿತವಾದ ಚಟುವಟಿಕೆಗಳನ್ನು ತೆಗೆದು ಅವುಗಳ ಸ್ಥಳದಲ್ಲಿ ಉದ್ದೇಶಸಹಿತವಾದ ಚಟುವಟಿಕೆಗಳನ್ನು ಸೇರಿಸಬೇಕು. ಶಿಕ್ಷಕನ ದೂರದೃಷ್ಟಿಯ ಉದ್ದೇಶವು (ಉದಾ: ಉತ್ತಮ ನಾಗರಿಕನನ್ನು ಮಾಡುವದು) ಬೇರೆಯಾಗಿರಬಹುದು. ಮಕ್ಕಳ ಸಮೀಪ ದೃಷ್ಟಿಯ ಉದ್ದೇಶವು (ಉದಾ : ದೊಡ್ಡವರಿಂದ ಹೊಗಳಿಸಿಕೊಳ್ಳುವದು) ಬೇರೆಯಾಗಿರಬಹುದು. ಮಕ್ಕಳ ಮುಂದೆ ಅವರಿಗೆ ತಿಳಿಯುವ ಒಂದು ಉದ್ದೇಶವನ್ನು ಯಾವಾಗಲೂ ಇಡುವದು ಒಳ್ಳೆಯದು. ಕಲಿಸುವ ಪಾಠಕ್ಕೆ ಒಂದು ನಿಶ್ಚಿತ ಉದ್ದೇಶವನ್ನು ಶಿಕ್ಷಕನು ಇಟ್ಟುಕೊಂಡರೆ ಕಲಿಯುವ ವಿಷಯವು ಮಕ್ಕಳಿಗೆ ಅರ್ಥಪೂರ್ಣವಾದದ್ದು ಆಗುತ್ತದೆ. ಪ್ರಶಂಸೆ, ಬಹುಮಾನ, ಕತೆ, ಪೇಟೆಯಲ್ಲಿ ಸಾಮಾನ ಕೊಳ್ಳುವದು ಮುಂತಾದ ಬಯಕೆ ಉದ್ದೇಶಗಳನ್ನು ಮಕ್ಕಳ ಮುಂದೆ ಇಟ್ಟು ಓದು, ಬರೆಹ, ಗಣಿತ ಕಲಿಸುವದು ಉತ್ತಮ ಪದ್ಧತಿ. ಸನ್ನಿವೇಶಕ್ಕೆ ತಕ್ಕಂತೆ ಬಾಲಕರ ಮುಂದೆ ಶಿಕ್ಷಕನು ಪರಿಣಾಮಕಾರಕವಾದ ಉದ್ದೇಶಗಳನ್ನು ಇಡಬೇಕು. ಕಲಿಯುವಿಕೆಯ ಉದ್ದೇಶ, ಶಿಕ್ಷಕನ ಪ್ರೋತ್ಸಾಹ ಮತ್ತು ವಿದ್ಯಾರ್ಥಿಯ ಪ್ರಯತ್ನ ಇವು ಒಂದಕ್ಕೊಂದು ಸಂಬಂಧಪಟ್ಟಿವೆ. ಪ್ರೋತ್ಸಾಹದ ಕೊರತೆ ಯಿಂದ ವಿದ್ಯಾರ್ಥಿಗಳಲ್ಲಿ ಇರುವ ಎಷ್ಟೋ ಶಕ್ತಿಗಳೂ ಕೌಶಲ್ಯಗಳೂ ಮಲಗಿ ಬಿಡುತ್ತವೆ. ಅವುಗಳನ್ನು ಎಚ್ಚರಿಸಿ ವಿದ್ಯಾರ್ಥಿಗಳು ಪ್ರಯತ್ನಶೀಲರಾಗುವಂತೆ ಮಾಡಬೇಕಾದರೆ ಯಾವ ಪರಿಣಾಮಕಾರಕ ಉದ್ದೇಶದ ಕಡೆಗೆ ಅವರ ಲಕ್ಷ್ಯ ವನ್ನು ಎಳೆಯಬೇಕು ಎಂಬುದೇ ಶಿಕ್ಷಕನ ಸಮಸ್ಯೆ. ಯಾವುದಾದರೊಂದು ಉದ್ದೇಶವನ್ನು ಸಾಧಿಸುವುದಿದ್ದರೆ ಮಾತ್ರ ಮಗುವು ಕೆಲಸ ಮಾಡಲಿಕ್ಕೆ ಅಣಿಯಾಗುತ್ತಾನೆ. ಮಾನ, ಹೊಗಳಿಕೆ, ಜ್ಞಾನ ಮೊದಲಾದವುಗಳನ್ನು ಬಯಸುವ ಮಗುವು ಹಸಿದ ಬೆಕ್ಕಿನ ಹಾಗೆ ತನ್ನ ಉದ್ದೇಶವನ್ನು ಈಡೇರಿಸಲು ಹಾತೊರೆಯುತ್ತಾನೆ. ಉತ್ತೇಜನವಿಲ್ಲದ ಮಗುವು ಹೊಟ್ಟೆ ತುಂಬಿದ ಬೆಕ್ಕಿನಂತೆ ನಿಷ್ಕ್ರಿಯನಾಗುತ್ತಾನೆ

೫. ಪ್ರಾಣಿಯ ಅವಯವಗಳು ಬಿಡಿಯಾಗಿ ಕಂಡರೂ ದೇಹವು ಇಡಿಯಾಗಿ ಕೆಲಸ ಮಾಡುತ್ತದೆ. ಇದರಿಂದ ದೊರಡುವ ತತ್ವವೇನಂದರೆ.

ಶಿಕ್ಷಣದ ಅಂಗಗಳು ಅಥವಾ ಮೆಟ್ಟಲುಗಳು ಬೇರೆ ಬೇರೆಯಾಗಿದ್ದರೂ ಅವೆಲ್ಲವುಗಳಲ್ಲಿ ಒಂದೇ ಸೂತ್ರ ಮತ್ತು ಹೊಂದಿಕೆ ಇರಬೇಕು. ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ ಮತ್ತು ಕಾಲೇಜ ಶಿಕ್ಷಣದಲ್ಲಿ ಹೊಂದಿಕೆ ಬೇಕು. ಅದರಂತೆ ಸಾಮಾನ್ಯ ಶಿಕ್ಷಣ ಮತ್ತು ವ್ಯವಸಾಯ ಶಿಕ್ಷಣ, ನಾಗರಿಕ ಶಿಕ್ಷಣ ಮತ್ತು ಸಾಮಾಜಿಕ ಶಿಕ್ಷಣ ಇವುಗಳಲ್ಲಿ ಹೊಂದಿಕೆ ಬೇಕು. ಪೂರ್ಣ ಶಿಕ್ಷಣ ಮತ್ತು ಪೂರ್ಣ ಮಗುವಿನ ಶಿಕ್ಷಣದ ದೃಷ್ಟಿಯನ್ನು ಇಟ್ಟುಕೊಳ್ಳಬೇಕು.

೬. ಮಗುವು ಬೆಳವಣಿಗೆಯನ್ನು ಹೊಂದುತ್ತಿರುವ ಒಂದು ಪ್ರಾಣಿ. ಅವನು ಬೆಳೆಯುತ್ತ ಹೋದ ಹಾಗೆ ಅವನ ವರ್ತನವೂ ಕಲಿಯುವ ಸಾಮರ್ಥ್ಯವೂ ಬದಲಾಗುತ್ತ ಹೋಗುತ್ತವೆ. ಈ ವ್ಯಾಪಕ ದೃಷ್ಟಿಯನ್ನು ಇಟ್ಟುಕೊಂಡು ಶಿಕ್ಷಣದ ಯೋಜನೆಯನ್ನು ಮಾಡಬೇಕು. ಬೆಳವಣಿಗೆಯ ಮಟ್ಟಗಳನ್ನು ಅನುಲಕ್ಷಿಸಿ ಅಭ್ಯಾಸಪತ್ರಿಕೆಯನ್ನು ರಚಿಸತಕ್ಕದ್ದು.

೭. ಇಡೀ ಜೀವನವೇ ಅನುಭವದ ಹೊಳೆಯಾದ್ದರಿಂದ ಅನುಭವವು ಅಷ್ಟೊಂದು ಮಹತ್ವದ ವಿಷಯ. ಜೀವನ ಶಾಲೆಯಲ್ಲಿ ಅನುಭವನೆಂಬ ಗುರುವಿನಿಂದ ಕಲಿತ ಸಂಗತಿಗಳು ಅಚ್ಚೊತ್ತಿದಂತೆ ಮನಸ್ಸಿನಲ್ಲಿ ಸ್ಥಿರವಾಗಿ ಮೂಡುತ್ತವೆ. ಸುಟ್ಟುಕೊಂಡ ಮಗುವು ಬೆಂಕಿಯನ್ನು ಕಂಡರೆ ಬೆದರುತ್ತಾನೆ. ಈ ಪಾಠವನ್ನು ಅವನು ಎಂದೂ ಮರೆಯುವದಿಲ್ಲ. "ಮಾಡುತ್ತ ಕಲಿಯುವದು" ಎಂಬದು ಶಿಕ್ಷಣದ ಒಂದು ಮಹತ್ವವಾದ ತತ್ವ. ಹುಡುಗರು ಕೇಳಿ ಕಲಿಯುವುದಕ್ಕಿಂತ ಮಾಡಿ ಕಲಿಯುವದು ಶ್ರೇಷ್ಠ. ಹೊಸ ಶಿಕ್ಷಣವು ಪುಸ್ತಕಗಳ ಮುಖಾಂತರ ಕಲಿಯುವದನ್ನು ಅಲ್ಲಗಳೆದು ಚಟುವಟಿಕೆಗಳ ಮುಖಾಂತರ ಕಲಿಯುವದನ್ನು ಮೆಚ್ಚುತ್ತದೆ. ಹುಡುಗರು ತಾವು ಕಲಿಯಬೇಕಾದ ವಿಷಯದ ಬಗೆಗೆ ಪ್ರತ್ಯಕ್ಷ ಅನುಭವವನ್ನು ಪಡೆಯುವಂತೆ ಬೇಕಾದ ಸನ್ನಿವೇಶಗಳನ್ನು ಶಿಕ್ಷಕನು ಒದಗಿಸಬೇಕು.

೮ ಅನುಭವದ ಮೂರೂ ಮುಖಗಳಾದ ಜ್ಞಾನ, ಉದ್ವೇಗ ಮತ್ತು ಇಚ್ಛೆಗಳನ್ನು ತರಬೇತುಗೊಳಿಸುವದು ಶಿಕ್ಷಣದ ಗುರಿ. ಮಕ್ಕಳ ಜ್ಞಾನವನ್ನು ಬೆಳಿಸಲು, ಉದ್ವೇಗಗಳನ್ನು ಹದಗೊಳಿಸಲು ಮತ್ತು ಇಚ್ಛೆಯನ್ನು ಬಲಪಡಿಸಲು ಶಾಲೆಯು ನೆರವಾಗಬೇಕು. ಶಾಲೆ ಅಂದರೆ ಕೇವಲ ವಿದ್ಯೆಯನ್ನು

ಮಾರುವ ಅಂಗಡಿಯಲ್ಲ. ಸಂಪೂರ್ಣ ಶಿಕ್ಷಣವು ಮಗುವಿನ ಸಂಪೂರ್ಣ ವ್ಯಕ್ತಿತ್ವವನ್ನು ಅರಳಿಸಿ ಬೆಳೆಯಿಸುತ್ತದೆ. ಈಗಿನ ಶಿಕ್ಷಣವು ವಿಷಯಗಳ ಜ್ಞಾನಕ್ಕೇನೇ ಹೆಚ್ಚು ಪ್ರಾಧಾನ್ಯ ಕೊಟ್ಟಿದೆ. ಇತಿಹಾಸ, ಭೂಗೋಲ, ಸಾಯನ್ಸ ಮುಂತಾದ ವಿಷಯಗಳ ಗಿಳಿಯೋದು ಇನ್ನೂ ಸಾಗುತ್ತಲಿವೆ. ಹುಡುಗರು ಸಾಲೆಯನ್ನು ಬಿಟ್ಟನಂತರ ಅವರ ದಿನದ ಬದುಕು ಬಾಳುವೆಯಲ್ಲಿ ಸಾಲೆಯಲ್ಲಿ ಕಲಿತ ವಿಷಯಗಳು ಎಷ್ಟರಮಟ್ಟಿಗೆ ಉಪಯೋಗ ಬೀಳುತ್ತವೆ ಎಂಬುದನ್ನು ಅಭ್ಯಾಸಕ್ರಮ ತಯಾರಿಸುವವರು ವಿಚಾರಿಸಬೇಕು. ಉಪಯೋಗಕ್ಕೆ ಬಾರದ ವಿಷಯಗಳನ್ನು ಹುಡುಗರ ತಲೆಯಲ್ಲಿ ತುಂಬುವುದರಿಂದ ಆಗಬೇಕಾದುದು ಏನು? ಇತ್ತ ಮನುಷ್ಯ ಪ್ರಾಣಿಯನ್ನು ಆಳುವ ಉದ್ವೇಗಗಳಾದ ಸಿಟ್ಟು, ಹೆದರಿಕೆ, ಕಾಮ, ಸೊಕ್ಕು, ಹೊಟ್ಟೆಕಿಚ್ಚು ಮೊದಲಾದವುಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವ ರೀತಿಯ ಬಗೆಗೆ ಈಗಿನ ಸಾಲೆಯ ಶಿಕ್ಷಣದಲ್ಲಿ ಅನುವೇ ಇಲ್ಲ. ಅಲ್ಲದೆ ಕ್ರಿಯೆಯಲ್ಲಿ ಬಾರದ ಜ್ಞಾನದಿಂದ ಪ್ರಯೋಜನವೇನು? ಆಡುವದು ಹಗರು, ಮಾಡುವದು ತೆಗವು. ಮಕ್ಕಳ ಇಚ್ಛಾಶಕ್ತಿಯನ್ನು ಬಲಪಡಿಸುವ ಶಿಕ್ಷಣ ಅವಶ್ಯ. ಅಂದರೆ ಮಾತ್ರ ಅವರು ಕತೃತ್ವಶಾಲಿಗಳಾಗಿ ಹೊಸ ಸಮಾಜವನ್ನು ಕಟ್ಟಬಲ್ಲರು.

೯. ಮಕ್ಕಳ ಚಿಕ್ಕ-ಪುಟ್ಟ ಅಪರಾಧಗಳ ಮೂಲ ಕಾರಣಗಳು ಅವರ ಮನಸ್ಸಿನ ಅಜಾಗ್ರತ ಭಾಗದಲ್ಲಿ ಇರುತ್ತವೆ. ಅಸಾಮಾಜಿಕ ತಪ್ಪುಗಳನ್ನು ತಾವೇಕೆ ಮಾಡುತ್ತೇವೆಂಬುದು ಅವರಿಗೆ ತಿಳಿದಿರುವದಿಲ್ಲ. ಶಿಕ್ಷಕರಾಗಲಿ, ತಂದೆತಾಯಿಗಳಾಗಲಿ ಮಕ್ಕಳ ತಪ್ಪು-ತಾಟುಗಳನ್ನು ಕಂಡು ಅವರ ಮೇಲೆ ಹರಿಹಾಯದೆ ಸಹಾನುಭೂತಿಯುಳ್ಳವರಾಗಬೇಕು. ಅವು ನಗುವ ಪ್ರಸಂಗಗಳಲ್ಲದೆ ಸಿಟ್ಟಿನ ಪ್ರಸಂಗಗಳಲ್ಲ. ಮನಸ್ಸಿನ ಆರೋಗ್ಯವನ್ನು ಕುರಿತು ಹೇಳುವ ಕೊನೆಯ ಅಧ್ಯಾಯದಲ್ಲಿ ಈ ವಿಷಯದ ಬಗೆಗೆ ಹೆಚ್ಚು ವಿವರಗಳನ್ನು ಕೊಡಲಾಗುವದು.

೧೦. ಮನಸ್ಸಿನ ಎರಡು ಮುಖ್ಯ ಶಕ್ತಿಗಳಾದ ಸಂಸ್ಕಾರ (ಉಳಿವು) ಮತ್ತು ಚೇತನ (ಕಳೆ)ಗಳನ್ನು ಒಳ್ಳೇ ಹಾದಿಗೆ ಹಚ್ಚುವದು ಶಿಕ್ಷಕನ ಕೆಲಸ. ಮಗುವಿಗೆ ತಕ್ಕ ಅನುಭವಗಳನ್ನು ಒದಗಿಸಿ ಯೋಗ್ಯ ಸಂಸ್ಕಾರಗಳನ್ನು

ಕೊಡುವದು ಮತ್ತು ಮಗುವು ಗೌರವವುಳ್ಳ ಚಟುವಟಿಕೆಗಳಲ್ಲಿ ತೊಡಗುವಂತೆ ಮಾಡುವದು ಶಿಕ್ಷಣದ ಗುರಿ. ಈ ಒಳ್ಳೇ ಚಟುವಟಿಕೆಗಳಲ್ಲಿ ತೋರುವ ಕಳಕಳಿಯು ಮಗುವಿನ ಸ್ವಭಾವದಲ್ಲಿ ಗಟ್ಟಿಯಾಗಿ ಉಳಿದರೆ ಅವನು ದೊಡ್ಡವನಾದಮೇಲೆ ಅವನ ಬದುಕು ಬಾಳುವೆಯು ಹಸನಾಗುತ್ತದೆ. ಅವನು ಉತ್ತಮ ನಾಗರಿಕನೆಂದು ನೆರೆಹೊರೆಯವರಿಂದ ಹೊಗಳಿಸಿಕೊಳ್ಳುವನು.

೧೧. ಎಷ್ಟು ಕಲಿಸಿದರೂ ಹುಡುಗರು ಅದನ್ನು ಬೇಗ ಮರೆಯುತ್ತಾರೆ ಎಂದು ಸಾಮಾನ್ಯವಾಗಿ ಶಿಕ್ಷಕರು ಹಳಹಳಿಸುವದುಂಟು. ಹೀಗಾಗಲಿಕ್ಕೆ ಮನೋವಿಜ್ಞಾನದ ಕಾರಣವೇನೆಂಬುದನ್ನು ಅವರು ವಿಚಾರಿಸಬೇಕು. ಈ ಕಾರಣವು ಅಭಿರುಚಿ ತತ್ವದಲ್ಲಿ ಅಡಕವಾಗಿದೆ. ಯಾವ ವಿಷಯದಲ್ಲಿ ಅಭಿರುಚಿಯು ಹೆಚ್ಚು ಇರುತ್ತದೆಯೋ ಅದು ಹೆಚ್ಚು ಸಂಸಕ್ತಿ ಹೊಂದುತ್ತದೆ, ಮತ್ತು ಯಾವುದು ಹೆಚ್ಚು ಸಂಸಕ್ತಿ ಹೊಂದಿರುತ್ತದೆಯೋ ಅದು ಬೇಗ ಮರೆಯುವದಿಲ್ಲ. ಅಂದಮೇಲೆ ಕಲಿಸುವ ವಿಷಯಗಳ ಬಗೆಗೆ ಮಕ್ಕಳಲ್ಲಿ ಅಭಿರುಚಿಯನ್ನು ಹುಟ್ಟಿಸಿ ಬೆಳೆಯಿಸುವದು ಶಿಕ್ಷಕನ ಕೆಲಸ. ಅಂದರೆ ಮಕ್ಕಳಿಗೆ ಗುರುಮನೆಯು (ಸಾಲೆಯು) ಸೆರೆಮನೆಯಾಗದೆ ಅರಮನೆಯಾಗಬೇಕು. ಅಭಿರುಚಿಯ ತತ್ವವು ಸಾಲೆಯನ್ನು ವಿನೋದ ಗೃಹವನ್ನಾಗಿ ಮಾಡಬೇಕೆಂದಲ್ಲ. ಆದರೆ ಅದು ಮಗುವಿಗೆ ಆಕರ್ಷಕ ಮಂದಿರವಾಗಿರಬೇಕು. ಪಾಠವೇ ಆಟವಾಗಬೇಕು, ಆಟವೇ ಪಾಠವಾಗಬೇಕು.

೧೨. ಕಲಿಸಿದುದು ಮಕ್ಕಳ ಮನಸ್ಸಿನಲ್ಲಿ ಗಟ್ಟಿಯಾಗಿ ಉಳಿಯಬೇಕಾದರೆ ಕೆಲಹೊತ್ತು ಅಭ್ಯಾಸ ಆದಮೇಲೆ ವಿಶ್ರಾಂತಿಗಾಗಿ ಬಿಡುವನ್ನು ಕೊಡುವದು ಅವಶ್ಯ. ಈ ಬಿಡುವಿನ ಅವಧಿಯಲ್ಲಿ ಅಭ್ಯಾಸಿಸಿದ ಸಂಗತಿಗಳೂ ಕೌಶಲ್ಯಗಳೂ ದೃಢೀಕರಣ ಹೊಂದಿ ಗಟ್ಟಿಯಾಗುತ್ತವೆ. ಬಿಡುವು ಅಭ್ಯಾಸದಷ್ಟೇ ಮಹತ್ವವುಳ್ಳದ್ದು. ವಿದ್ಯಾರ್ಥಿಗಳನ್ನು ಅದರಂತೆ ಕೂಲಿಕಾರರನ್ನು ಹಗಲೆಲ್ಲ ಬಹಳ ಹೊತ್ತು ದುಡಿಸಿದರೆ ಹೆಚ್ಚು ಕೆಲಸ ಆಗುವದೆಂದು ತಿಳಿಯುವದು ತಪ್ಪು. ಅದರ ವಿರುದ್ಧ ಪರಿಣಾಮವಾಗುತ್ತದೆ. ತಾನು ಕಷ್ಟಪಟ್ಟು ಕಲಿಸಿದರೂ ಮಕ್ಕಳಲ್ಲಿ ಪ್ರಗತಿಯೇ ಕಾಣುವದಿಲ್ಲವೆಂದು ಶಿಕ್ಷಕನು ಒಮ್ಮೆಲೆ ನಿರಾಶನಾಗಕೂಡದು. ಅವನ ಪರಿಶ್ರಮದ ಫಲವು

ಸ್ವಲ್ಪ ಕಾಲದ ಮೇಲೆ ನಿಶ್ಚಯವಾಗಿ ಕಾಣುವದು. ಅವನು ಕಲಿಸಿದ ವಿಷಯಗಳ ದೃಢೀಕರಣವು ವಿದ್ಯಾರ್ಥಿಗಳಲ್ಲಿ ಕೆಲವು ಕಾಲಪವರೆಗೆ ನಡೆದಿರುತ್ತದೆ. ಈ ಅವಧಿ ಮುಗಿದಮೇಲೆ ಪ್ರಗತಿಯೂ ಸುಧಾರಣೆಯೂ ಕಂಡು ಬರುತ್ತದೆ. ಮಗುವಿನ ಬೆಳವಣಿಗೆಯ ಮಟ್ಟಗಳು ಸಹ ಸ್ಮೃತಿಯ ಸ್ಥಿರೀಕರಣದ ಅವಧಿಗಳಾಗಿರಬಹುದೆಂದು ಮುಂದಿನ ಅಧ್ಯಾಯದಲ್ಲಿ ಗೊತ್ತಾಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಮನೋವಿಜ್ಞಾನವೆಂದರೇನು? ಶಿಕ್ಷಣವು ಮನೋವಿಜ್ಞಾನಕ್ಕೆ ಹೇಗೆ ಸಂಬಂಧಪಟ್ಟಿದೆ? ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೨. ವರ್ತನವೆಂದರೇನು? ವರ್ತನ, ಪರಾವರ್ತನ ಕ್ರಿಯೆ ಮತ್ತು ಯಂತ್ರ ಕ್ರಿಯೆ ಇವುಗಳಲ್ಲಿ ಯಾವ ಅಂತರ ಉಂಟು? ಉದಾಹರಣೆ ಕೊಟ್ಟು ವಿವರಿಸಿರಿ.

೩. ವರ್ತನವಾದಿಗಳು ಅಂತರಾವಲೋಕನವನ್ನು ಏಕೆ ಅಲ್ಲಗಳೆಯುತ್ತಾರೆ? ನಿರೀಕ್ಷಣಾ ಪದ್ಧತಿಯ ಲಾಭಗಳೇನು? ಅಂತರಾವಲೋಕನ ಪದ್ಧತಿಯನ್ನು ಸಂಪೂರ್ಣ ಬಿಟ್ಟು ಬಿಡಲಿಕ್ಕೆ ಏಕೆ ಬರುವಂತಿಲ್ಲ? ಉದಾಹರಣೆ ಕೊಟ್ಟು ವಿವರಿಸಿರಿ.

೪. ಪ್ರಯೋಗ ಪದ್ಧತಿ ಅಂದರೇನು? ಇಂಡಿಯಾದಲ್ಲಿ ಶಿಕ್ಷಣದ ಪ್ರಯೋಗಗಳ ಆವಶ್ಯಕತೆ ಮತ್ತು ಮಹತ್ವ ಎಷ್ಟರಮಟ್ಟಿಗೆ ಇದೆ? ನಿಮಗೆ ಗೊತ್ತಿದ್ದ ಒಂದು ಮನೋವಿಜ್ಞಾನದ ಪ್ರಯೋಗವನ್ನು ವಿವರಿಸಿರಿ.

೫. ಮನೋವಿಜ್ಞಾನವನ್ನು ಅಭ್ಯಾಸಿಸುವ ಮುಖ್ಯ ವಿಧಾನಗಳನ್ನು ಕುರಿತು ಚರ್ಚಿಸಿರಿ. ಇಂಡಿಯಾದಲ್ಲಿ ಶಿಕ್ಷಣದ ಮನೋವಿಜ್ಞಾನದ ಪ್ರಗತಿ ಆಗದೇ ಇರಲಿಕ್ಕೆ ಕಾರಣಗಳು ಯಾವವು? ಪ್ರಗತಿಯು ಆಗಬೇಕಾದರೆ ಹಾದಿ ಯಾವುದೆಂಬುದನ್ನು ಸೂಚಿಸಿರಿ.

೬. ಅನುಭವ ಅಂದರೇನು? ಅನುಭವದಲ್ಲಿ ಅಡಕವಾದ ಅರಿವು, ಅನಿಸಿಕೆ ಮತ್ತು ಬಯಕೆ ಇವು ಮೂರೂ ಪ್ರತಿಯೊಂದು ಅನುಭವ ದಲ್ಲಿ ಇದ್ದೇ ತೀರುತ್ತವೆ ಎಂಬುದನ್ನು ಉದಾಹರಣೆ ಕೊಟ್ಟು ಸಿದ್ಧ ಮಾಡಿರಿ.

೭. ಒಂದು ಮಾವಿನ ಹಣ್ಣಿನ ಬಗೆಗೆ ನಿಮಗಿದ್ದ ಜ್ಞಾನವು ನಿಮ್ಮ ಅನುಭವದಿಂದಲೇ ಹೇಗೆ ಬಂದಿರುತ್ತದೆ ಎಂಬುದನ್ನು ತಿಳಿಸಿ

೮. ನಿಮ್ಮಷ್ಟಕ್ಕೆ ನೀವೇ ಸ್ವಂತ ಅನುಭವದಿಂದ ಕಲಿತ ಒಂದು ವಿಷಯವನ್ನು ವಿವರಿಸಿರಿ. ಮತ್ತು ಅದನ್ನು ನೀವು ಹೇಗೆ ಕಲಿತಿರಿ ಎಂಬುದನ್ನು ತೋರಿಸಿರಿ.

೯. "ಜೀವನವೇ ಸಾಲೆ ಅನುಭವವೇ ಗುರು." ಈ ಮಾತು ಶಿಕ್ಷಣ ಯೋಜನೆಗಳಲ್ಲಿ ಹೇಗೆ ಮಾರ್ಗದರ್ಶಕವಾಗುತ್ತದೆ ಎಂಬುದನ್ನು ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ. ವರ್ಧಾ ಯೋಜನೆಯಲ್ಲಿ ಈ ತತ್ವವು ಎಷ್ಟರಮಟ್ಟಿಗೆ ಉಪಯೋಗಿಸಲ್ಪಟ್ಟಿದೆ?

೧೦. ಅನುಭವಕ್ಕೆ ಮೂರೂ ಮುಖಗಳು ಇರುತ್ತವೆ. ಈ ಮಾತಿನ ಅರ್ಥವನ್ನು ಸ್ಪಷ್ಟ ಮಾಡಿರಿ. ಅನುಭವದ ದೃಷ್ಟಿಯಿಂದ ಈಗಿನ ಶಿಕ್ಷಣಕ್ರಮದಲ್ಲಿ ಯಾವ ಕೊರತೆಗಳು ಕಂಡು ಬರುತ್ತವೆ?

೧೧. "ಮಾಡಿ ಕಲಿ" ಎಂಬ ತತ್ವವನ್ನು ಸಾಲೆಯ ಕಾರ್ಯಕ್ರಮಗಳಲ್ಲಿ ಹೇಗೆ ಉಪಯೋಗಿಸಬಹುದು? ವರ್ಧಾ ಯೋಜನೆಯಲ್ಲಿ ಈ ತತ್ವವು ಎಷ್ಟರಮಟ್ಟಿಗೆ ಅಡಕವಾಗಿದೆ?

೧೨. ಜಾಗ್ರತ ಅನುಭವ ಮತ್ತು ಅಜಾಗ್ರತ ಅನುಭವ ಇವುಗಳಲ್ಲಿಯ ಅಂತರವೇನು? ನಿಮ್ಮ ಸ್ವಂತ ಅನುಭವದ ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೧೩. ಸ್ವಯಂ ಪ್ರೇರಿತ ಚಟುವಟಿಕೆ ಅಂದರೇನು? ಶಿಕ್ಷಣದಲ್ಲಿ ಇದರ ಬೆಲೆ ಯಾವುದು?

೧೪. ಮನೋವಿಜ್ಞಾನದ ದೃಷ್ಟಿಯಿಂದ ಕೆಳಗೆ ಕೊಟ್ಟ ಅಭಿಪ್ರಾಯಗಳನ್ನು ಟೀಕಿಸಿರಿ:—

(ಅ) ಹುಡುಗರು ಅಭ್ಯಾಸದನಂತರ ಸ್ವಲ್ಪ ವಿಶ್ರಾಂತಿ ಪಡೆಯಬೇಕು.

(ಆ) ಕಲಿಸಿದುದು ದೃಢಗೊಳ್ಳಲಿಕ್ಕೆ ಕೆಲವು ಅವಧಿ ಬೇಕಾಗುವದು.

(ಇ) ಹುಡುಗರು ದಡ್ಡರಿದ್ದಕಾರಣ ಕಲಿಸಿದ್ದನ್ನು ಅವರು ಬೇಗ ಮರೆಯುತ್ತಾರೆ.

(ಈ) ಪದೇ ಪದೇ ಸೂಟಿಗಳನ್ನು ಕೊಡುವುದರಿಂದ ಮಕ್ಕಳ ಅಭ್ಯಾಸವೇ ಹಾಳಾಗಿ ಹೋಗುತ್ತದೆ.

(ಉ) ಈ ಹುಡುಗನು ಆಟಗೂಳಿ ಇದ್ದರೂ ಅಭ್ಯಾಸದಲ್ಲಿ ಹರತು ಇರುತ್ತಾನೆ.

೧೫. ಮೊದಲು ನೀವು ಕಲಿಯುವಾಗ ಒಂದು ವಿಷಯವು ನಿಮಗೆ ಬಹಳ ಕಠಿಣವೆನಿಸಿತು. ಆದರೆ ಅದೇ ವಿಷಯವು ಕೆಲವು ಕಾಲ ಕಳೆದಮೇಲೆ ನಡುವೆ ಅದನ್ನು ಅಭ್ಯಾಸ ಮಾಡದಿದ್ದರೂ ಮುಂದೆ ಹಗುರು ಎನಿಸಿತು. ಸಾಲೆಯಲ್ಲಿಯ ನಿಮ್ಮ ಅನುಭವದಿಂದ ಇದನ್ನು ತಿಳಿಸಿ ಹೇಳಿರಿ.

೧೬. ಕೆಳಗೆ ಕೊಟ್ಟ ಪದಗಳ ಅರ್ಥವನ್ನು ಶಿಕ್ಷಣದ ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ:—

(ಅ) ಜೀವನದ ಕಳೆ (ಆ) ಸಂಸಕ್ತಿ (ಇ) ದೃಢೀಕರಣ (ಈ) ಅಂತರಾವಲೋಕನ (ಉ) ಅಜಾಗ್ರತೆ (ಊ) ಅನುಭವ (ಎ) ಅಭಿರುಚಿ ತತ್ವ (ಏ) ಪರಾವರ್ತನ ಕ್ರಿಯೆ (ಐ) ವರ್ತನ-ವಾದ (ಒ) ಚೇತನ-ವಾದ (ಓ) ಮನೋವಿಶ್ಲೇಷಣ (ಔ) ವಾಸ್ತವಿಕ ವಿಜ್ಞಾನ (ಅಂ) ಪ್ರಮಾಣ ವಿಜ್ಞಾನ (ಅಃ) ಮಾನಸಿಕ ಗ್ರಂಥಿ

---

## ಅಧ್ಯಾಯ ೩

# ಮಗುವಿನ ಬೆಳವಣಿಗೆ :

## I. ಬೆಳವಣಿಗೆಯ ಸಾಮಾನ್ಯ ಲಕ್ಷಣಗಳು

ಮಗುವು ಹುಟ್ಟಿದಕೂಡಲೇ ಅವನ ಶಿಕ್ಷಣವು ಪ್ರಾರಂಭವಾಗುತ್ತದೆ. ತಾಯಿ ಅವನ ಮೊದಲನೇ ಗುರು ಮತ್ತು ಮನೆ ಅವನ ಮೊದಲನೆ ಸಾಲೆ. ಅವನ ಲಾಲನೆ–ಪಾಲನೆ ತಾಯಿಯ ಶಿಕ್ಷಣ ಪದ್ಧತಿ. ಸಣ್ಣವರು ಮತ್ತು ದೊಡ್ಡವರು ಮಗುವನ್ನು ಮುದ್ದಾಡುತ್ತಾರೆ. ಅಥವಾ ಪೀಡಿಸುತ್ತಾರೆ. ಇಂದ್ರಿಯ ಮತ್ತು ಸನ್ನಿವೇಶಗಳ ಸಂಪರ್ಕದಿಂದ ಅವನ ಮೇಲೆ ಸಪ್ಪಳ, ನೋಟ ಮುಂತಾದ ಆಘಾತಗಳು ಉಂಟಾಗುತ್ತವೆ. ಈ ಎಲ್ಲ ಅನುಭವಗಳ ಪರಿಣಾಮವಾಗಿ ಅವನ ನಡೆನುಡಿ ನೋಟಗಳು ಕ್ರಮೇಣ ಮಾರ್ಪಡುತ್ತವೆ. ಪ್ರತಿ ದಿವಸದ ಅನುಭವಗಳೇ ಮಗುವಿನ ಅಭ್ಯಾಸದ ವಿಷಯಗಳು.

ಮಗುವು ಬೆಳೆಯುತ್ತ ಹೋದ ಹಾಗೆ ಅವನ ತಿಳುವಳಿಕೆಯೂ, ಬುದ್ಧಿ ಸಾಮರ್ಥ್ಯಗಳೂ, ಅಭಿರುಚಿಗಳೂ, ಒಲವುಗಳೂ, ವರ್ತನಗಳೂ, ಚಟುವಟಿಕೆಗಳೂ ಬದಲಾಗುತ್ತ ಹೋಗುತ್ತವೆ. ಅವನ ಈ ಬೆಳವಣಿಗೆಯ ಸ್ವಾಭಾವಿಕ ಲಕ್ಷಣಗಳನ್ನೂ ಅವನ ಸ್ವಾಭಾವಿಕ ಬೇಡಿಕೆಗಳನ್ನೂ ಮತ್ತು ಅವನು ಸ್ವಂತ ಕಲಿಯುವ ರೀತಿಗಳನ್ನೂ ನೋಡಿಕೊಂಡು ಅವಕ್ಕೆ ಹೊಂದಿಕೆಯಾಗುವಂತೆ ಶಿಕ್ಷಣದ ಯೋಜನೆಯನ್ನು ಮಾಡಿದರೆ ಅದು ಪರಿಣಾಮಕಾರಕವೂ ಫಲದಾಯಕವೂ ಆಗುವದು. ಮನೆಯಲ್ಲಿ ನಡೆಯುವ ಪಾಲನೆಯೂ ಮತ್ತು ಸಾಲೆಯಲ್ಲಿ

ನಡೆಯುವ ಶಿಕ್ಷಣವೂ ಬೆಳೆಯುತ್ತಿರುವ ಮಗುವಿನ ಶಕ್ತಿಗಳಿಗೆ ಹೊಂದಿಕೆಯಾಗಿರಬೇಕು. ಆದ್ದರಿಂದ ಮಗುವಿನ ಬೆಳವಣಿಗೆಯನ್ನು ಕುರಿತು ಅಭ್ಯಾಸಿಸುವದು ಶಿಕ್ಷಣದ ಮನೋವಿಜ್ಞಾನದ ಒಂದು ಮುಖ್ಯ ವಿಷಯ. ಬೆಳವಣಿಗೆಯಲ್ಲಿ ಕಂಡುಬರುವ ಕೆಲವು ಸಾಮಾನ್ಯ ಲಕ್ಷಣಗಳನ್ನು ಕೆಳಗೆ ವಿವರಿಸಿದೆ.

## ಬೆಳವಣಿಗೆಯ ಕೆಲವು ಸಾಮಾನ್ಯ ಲಕ್ಷಣಗಳು

**೧. ಸಾಮಾನ್ಯದಿಂದ ವಿಶೇಷಕ್ಕೆ:—** ಮಗುವು ಚಿಕ್ಕವನಿದ್ದಾಗ ಯಾವುದಾದರೊಂದು ಪ್ರಚೋದನೆಗೆ ಅವನ ಇಡೀ ದೇಹವೇ ಪ್ರತಿಕ್ರಿಯೆಯನ್ನು ಕೊಡುತ್ತದೆ. ಅವನ ಕಾಲಿನ ತುದಿಗೆ ಟಾಚಣಿಯಿಂದ ಕೆರೆದರೆ ಅವನು ಇಡೀ ದೇಹವನ್ನೇ ಹೊರಳಿಸುತ್ತಾನೆ. ಮತ್ತು ಅಳತೊಡಗುತ್ತಾನೆ. ಆದರೆ ಶರೀರವು ಬೆಳೆದ ಹಾಗೆ ತಾಗಿದ ಭಾಗವನ್ನಷ್ಟೇ ಗುರುತಿಸುತ್ತಾನೆ. ಮತ್ತು ಕಾಲನ್ನು ಮಾತ್ರ ಎಳೆಯುತ್ತಾನೆ. ಕ್ರಮೇಣ ಟಾಚಣಿ ಹತ್ತಿದ ಸ್ಥಳವನ್ನು ಮಾತ್ರ ತುರಿಸಿಕೊಳ್ಳುತ್ತಾನೆ. ಅಥವಾ ಟಾಚಣಿಯನ್ನು ದೂಡುತ್ತಾನೆ. ಅದರಂತೆ ಒಂದು ಪದಾರ್ಥವನ್ನು ಎತ್ತಿಕೊಳ್ಳಬೇಕಾದರೆ ಸಣ್ಣ ಮಗುವು ಇಡೀ ತೋಳನ್ನೇ ಉಪಯೋಗಿಸುತ್ತಾನೆ. ಆದರೆ ದೊಡ್ಡವನಾದ ಮೇಲೆ ಮುಂಗೈಯನ್ನು ಅನಂತರ ಕೇವಲ ಕೈಬೆರಳುಗಳನ್ನು ಉಪಯೋಗಿಸುತ್ತಾನೆ.

ಇದರಿಂದ ಹೊರಡುವ ಶಿಕ್ಷಣ ತತ್ವವೇನೆಂದರೆ, ಮಗುವಿನ ಅಭ್ಯಾಸವು ವಿಷಯಗಳ ಸಾಮಾನ್ಯ ಪರಿಚಯದಿಂದ ವಿಶೇಷ ಪರಿಚಯಕ್ಕೆ ಸಾಗಬೇಕು. ಅಲ್ಲದೆ ಯಾವುದಾದರೊಂದು ಚಟುವಟಿಕೆಯನ್ನು ಕಲಿಸುವಾಗ ಯಾವ ಕೃತಿಯು ಅವಶ್ಯವಿಲ್ಲ ಎಂಬುದನ್ನು ಮಗುವಿಗೆ ತೋರಿಸಬೇಕು. ಇದರಿಂದ ಶ್ರಮದ ಮಿತವ್ಯಯವಾಗುತ್ತದೆ. ಮಗುವು ಬರೆಯುವದನ್ನು ಮೊದಲು ಕಲಿಯುವಾಗ ಮೋರೆಯನ್ನು ಕಿವಚುತ್ತಾನೆ, ನಾಲಿಗೆಯನ್ನು ಚಾಚುತ್ತಾನೆ, ಹಲ್ಲನ್ನು ಗಿಟಗರಿಸುತ್ತಾನೆ, ಇಡೀ ತೋಳನ್ನು ಅಲಕಾಡಿಸುತ್ತಾನೆ, ಮತ್ತು ಪೆನ್ಸಿಲನ್ನು ಒತ್ತಿ ಬಿಗಿಯಾಗಿ ಹಿಡಿಯುತ್ತಾನೆ. ಆದರೆ ಅವನ ಈ ಎಲ್ಲ ಕೃತಿಗಳು ಅನಾವಶ್ಯಕ. ಹೀಗೆ ಮಾಡುವದು ಬೇಕಾಗಿಲ್ಲವೆಂದು ಅವನಿಗೆ ತೋರಿಸಿಕೊಡಬೇಕು. ವಿಶೇಷವಾಗಿ ಬೆರಳುಗಳಿಂದ ಬರೆಯುವ ಕೆಲಸವು

ನಡೆಯುತ್ತದೆಂದು ಅವನಿಗೆ ಮನವರಿಕೆ ಮಾಡಿಕೊಡಬೇಕು. ಸಾಲು ಹಿಡಿದು ಬರೆಯುವಾಗ ಮಾತ್ರ ಕೆಲಮಟ್ಟಿಗೆ ಮುಂಗೈಯನ್ನು ಸರಿಸಾಡಲು ಬೇಕಾಗುತ್ತದೆ. ಚಿಕ್ಕವನಿದ್ದಾಗ ಶ್ರಮದ ಮಿತವ್ಯಯವನ್ನು ಕಲಿಸದಿದ್ದರೆ ಅನಾವಶ್ಯಕ ಚಟುವಟಿಕೆಗಳು ಚಟಗಳಾಗಿ ದೊಡ್ಡವನಾದಾಗಲೂ ಹೋಗುವದಿಲ್ಲ. ಆದುದರಿಂದ ಮುಂಜಾಗ್ರತೆಯನ್ನು ತಕ್ಕೊಳ್ಳಲೇಬೇಕು.

೨. **ಸ್ಥೂಲದಿಂದ ಸೂಕ್ಷ್ಮಕ್ಕೆ:**— ಬೆಳವಣಿಗೆಯ ನಿಯಮದ ಪ್ರಕಾರ ಮೊದಲು ತಲೆ, ಆ ಮೇಲೆ ಕೈಗಳು, ಆ ಮೇಲೆ ಕಾಲುಗಳು ಬಲಿಯುತ್ತವೆ. ಮಗುವು ಮೊದಲು ತಲೆಯನ್ನು ಎತ್ತಿ ಹಿಡಿಯಲಿಕ್ಕೆ ಶಕ್ತನಾಗುತ್ತಾನೆ. ಅದಾದ ಮೇಲೆ ಕಾಲುಗಳನ್ನು ಉಪಯೋಗಿಸಲಿಕ್ಕೆ ಶಕ್ತನಾಗುತ್ತಾನೆ. ಅದರಂತೆ ಮೊದಲು ತೋಳುಗಳನ್ನು ಉಪಯೋಗಿಸಲು ಶಕ್ತನಾದ ಮೇಲೆ ಬೆರಳುಗಳನ್ನು ಉಪಯೋಗಿಸಲು ಶಕ್ತನಾಗುತ್ತಾನೆ. ಮೊದಲು ಒಂದು ಆಟದ ಗೊಂಬೆಯನ್ನು ಹಿಡಿಯಲಿಕ್ಕೆ ಇಡೀ ಕೈ ಸರಿಸಾಡುತ್ತಿದ್ದವನು ಕ್ರಮೇಣ ಬೆರಳುಗಳಿಂದ ಮಾತ್ರ ಅದನ್ನು ತಕ್ಕೊಳ್ಳುತ್ತಾನೆ.

ಈ ಬಗೆಯ ವರ್ತನದಿಂದ ಹೊರಡುವ ಶಿಕ್ಷಣ ತತ್ವವೇನಂದರೆ— ಸ್ಥೂಲದಿಂದ ಸೂಕ್ಷ್ಮಕ್ಕೆ ಸಾಗು. ಶಾರೀರಿಕ ಕಸರತ್ತುಗಳನ್ನು ಅಥವಾ ಕೌಶಲ್ಯಗಳನ್ನು ಕಲಿಸುವಾಗ ಮೊದಲು ಸ್ಥೂಲವಾದ ಚಟುವಟಿಕೆಗಳಿಂದ ಪ್ರಾರಂಭಿಸಿ ಆ ಮೇಲೆ ಸೂಕ್ಷ್ಮವಾದ ಚಟುವಟಿಕೆಗಳನ್ನು ಕಲಿಸಬೇಕು. ಅಂದರೆ ದೊಡ್ಡ ಸ್ನಾಯುಗಳ ಚಟುವಟಿಕೆಗಳನ್ನು ಕಲಿಸಿದನಂತರ ಸಣ್ಣ ಸ್ನಾಯುಗಳ ಚಟುವಟಿಕೆಗಳನ್ನು ಕಲಿಸಬೇಕು. ಇದು ಸಾಮಾನ್ಯ ನಿಯಮ. ಇದನ್ನು ಎಲ್ಲ ಪ್ರಸಂಗಗಳಲ್ಲಿ ಕಡ್ಡಾಯವಾಗಿ ಉಪಯೋಗಿಸಲುಬಾರದು. ಸುಂದರವಾದ ಬರಹವನ್ನು ಮತ್ತು ಸಣ್ಣ ಅಕ್ಷರಗಳನ್ನು ಬಾಲಕ ವರ್ಗದ ಮಕ್ಕಳಿಂದ ಅಪೇಕ್ಷಿಸಕೂಡದು. ಇಷ್ಟನೇ ವಯಸ್ಸಿನ ವರೆಗೆ ಅಥವಾ ಬೆಳವಣಿಗೆಯ ಇಂಥ ಮಟ್ಟದ ವರೆಗೆ ಮಾತ್ರ ದೊಡ್ಡ ಸ್ನಾಯುಗಳ ಚಟುವಟಿಕೆಗಳನ್ನು ಕಲಿಸಬೇಕೆಂದು ನಿರ್ಧರಿಸುವದು ತಪ್ಪು. ಮೂರು ಗಾಲಿಯ ಸೈಕಲ್ಲು ಹೊಡೆಯಲಿಕ್ಕೆ (ಕಾಲಲ್ಲಿಯ ದೊಡ್ಡ ಸ್ನಾಯುಗಳನ್ನು ಉಪಯೋಗಿಸಲಿಕ್ಕೆ) ಬಾರದ ಹುಡುಗನು ಕೈಕೆಲಸಗಳನ್ನು ಮಾಡಲಿಕ್ಕೆ (ಬೆರಳುಗಳಲ್ಲಿಯ ಸಣ್ಣ ಸ್ನಾಯುಗಳನ್ನು ಉಪಯೋಗಿಸಲಿಕ್ಕೆ) ಶಕ್ತನಾಗಿರಬಹುದು.

**೩. ಅಂತಃಸ್ಫೂರ್ತಿಯ ಚಟುವಟಿಕೆ:–** ತನ್ನ ಶಕ್ತಿಗಳು ಬೆಳೆದಹಾಗೆ ಅವುಗಳನ್ನು ಉಪಯೋಗಿಸುವ ಅಂತಃಸ್ಫೂರ್ತಿ ಅಥವಾ ಹುಮ್ಮಸ ಮಗುವಿನಲ್ಲಿ ಸ್ವಾಭಾವಿಕವಾಗಿ ಉಂಟು. ತೊಟ್ಟಿಲದಲ್ಲಿಯ ಕೂಸು ಕೂಡ ಕುತೂಹಲ ಪ್ರೇರಿತನಾಗಿ ಇತರರು ಹತ್ತಿರ ಬಂದರೆ ಕಣ್ಣು ಪಿಳಕಿಸುತ್ತಾನೆ, ಕೈ ಚಾಚುತ್ತಾನೆ ಅಥವಾ ನಗುತ್ತಾನೆ. ಸ್ನಾಯುಗಳು ಬಲಿತಹಾಗೆ ಕೈಕಾಲುಗಳನ್ನು ಚಲಿಸುತ್ತಾನೆ, ಅಂಬೆಗಾಲು ಇಕ್ಕುತ್ತಾನೆ, ಆ ಮೇಲೆ ಅತ್ತಿತ್ತ ಅಡ್ಡಾಡುತ್ತಾನೆ. ಅವಯವಗಳು ಬೆಳೆದಹಾಗೆ ಅವನ ಚಲನವಲನಗಳು ಹೆಚ್ಚಾಗುತ್ತವೆ. ಮುಟ್ಟಲಿಕ್ಕೆ ಮುರಿಯಲಿಕ್ಕೆ ಹಾತೊರೆಯುತ್ತಾನೆ. ಬೆದಕಲಿಕ್ಕೆ ಅಲೆದಾಡುತ್ತಾನೆ. ಜನರ ಒಡನಾಟವು ಬೆಳೆಯುತ್ತದೆ. ಅವನ ವ್ಯವಹಾರದ ಪ್ರಪಂಚವು ದೊಡ್ಡದಾಗುತ್ತದೆ. ಕ್ರಮೇಣ ಮಾತಾಡಲಿಕ್ಕೆ ಕಲಿಯುತ್ತಾನೆ. ಹೊಸದಾಗಿ ಕಲಿತ ಶಬ್ದಗಳನ್ನು, ನುಡಿಗಳನ್ನು ಉಪಯೋಗಿಸಲು ಪ್ರಸಂಗ ಹುಡುಕುತ್ತಾನೆ. ಮಗುವು ತನ್ನಲ್ಲಿ ಇರುವ ಶಕ್ತಿಗಳನ್ನು ಬೆಳೆಯಿಸಲು ಮತ್ತು ತೋರಿಸಲು ಯಾವಾಗಲೂ ಆತುರಪಡುತ್ತಾನೆ. ಅವನಲ್ಲಿ ಇರುವ ಅಂತಃಪ್ರೇರಣೆಯೇ ಅವನನ್ನು ಹೀಗೆ ಮಾಡಲು ಹಚ್ಚುತ್ತದೆ.

ಶಿಕ್ಷಣದ ದೃಷ್ಟಿಯಿಂದ ಮಗುವಿನಲ್ಲಿ ಒಳಗೆ ಸುಳಿದಾಡುವ ಈ ಪ್ರೇರಣೆಯು ಮಹತ್ವದ್ದು. ಕಲಿಯುವಿಕೆಗೆ ದಾರಿಯನ್ನು ತೋರಿಸುವ ಅನುಭವಗಳನ್ನು ಅವನು ಹುಡುಕುತ್ತಿರುತ್ತಾನೆ. ಈ ಪ್ರಚೋದನೆ ಪ್ರಬಲವಾಗಿ ಇರುವದರಿಂದ ಅವನು ಉತ್ಪಾದಕ ಚಟುವಟಿಕೆಗಳಲ್ಲಿ ತೊಡಗುತ್ತಾನೆ. ಪಾಲಕರಾಗಲಿ ಶಿಕ್ಷಕರಾಗಲಿ ಮಗುವನ್ನು ನಿರುತ್ಸಾಹಗೊಳಿಸಬಾರದು, ಬೆದರಿಸಬಾರದು, ಕಿಡಿಗೇಡಿ ಎಂದು ಜಬರಿಸಬಾರದು. ಆದರೆ ಮಗುವು ಉಪಯುಕ್ತ ಚಟುವಟಿಕೆಗಳಲ್ಲಿ ತೊಡಗುವಂತೆ ಅವನಿಗೆ ಹಾದಿಯನ್ನು ತೋರಿಸಿ ಅವನನ್ನು ಪ್ರೋತ್ಸಾಹಿಸಬೇಕು. ಅವನನ್ನು ನಿರುತ್ಸಾಹಗೊಳಿಸಿ ಅವನಲ್ಲಿರುವ ಸ್ಫೂರ್ತಿಯ ಮೇಲೆ ತಣ್ಣೀರನ್ನು ಎರಚಬಾರದು.

**೪ ಮುಂಬರುವ ಕುರುಹುಗಳು:—** ಬೆಳವಣಿಗೆಯ ಬೇರೆ ಬೇರೆ ಮಟ್ಟಗಳಲ್ಲಿ ಒಡೆದು ತೋರುವ ಮಗುವಿನ ಕೃತಿಗಳ ಚಿನ್ಹಗಳು ಅವನ ಪೂರ್ವದ ಮಟ್ಟಗಳಲ್ಲಿಯೇ ಕಂಡುಬರುತ್ತವೆ. ಹಲ್ಲು ಬರುವ ಮೊದಲು ಮಲಿಗೂಸು

ಅಗಿಯುವದನ್ನೂ, 'ಕಡಿ'ಯುವದನ್ನೂ ಮಾಡುತ್ತದೆ. ಕಾಮಪ್ರವೃತ್ತಿಯು ಯೌವನದಲ್ಲಿ ಪರಿಪಕ್ವವಾಗುತ್ತಿದ್ದರೂ ಅದರ ಸುಳುವು ಬಾಲ್ಯದಲ್ಲಿಯೇ ಕಾಣುತ್ತದೆ. ಮಗುವು ಚಿಕ್ಕವನಿರುವಾಗಲೇ ಎಷ್ಟೋ ಸಾರೆ ತನ್ನದನ್ನೇ ಸಾಧಿಸುವ ಹಟ ಹಿಡಿಯುತ್ತಾನೆ. ಈ ಹಟಮಾರಿತನವು ಪ್ರಾಯದಲ್ಲಿ ಪೂರ್ಣತೆಗೆ ಬರುವ ಸ್ವಾತಂತ್ರ್ಯವೃತ್ತಿಯು.

ಬೆಳವಣಿಗೆಯ ಇಡಿಯಾದ ನೋಟವನ್ನು ಇಟ್ಟುಕೊಂಡರೆ ಮಗುವಿನ ವರ್ತನವನ್ನು ತಿಳಿದುಕೊಳ್ಳಲಿಕ್ಕೆ ಹಗುರಾಗುವದು. ಮಗುವಿನ ಕೆಲವು ವರ್ತನಗಳು ದೊಡ್ಡವರಿಗೆ ಬೇಸರ ಬರುವಂತವು ಇರುತ್ತವೆ. ಆದರೆ ಅವು ಬೆಳವಣಿಗೆಯ ಸ್ವಾಭಾವಿಕ ಕುರುಹುಗಳೆಂದು ತಿಳಿದು ಶಿಕ್ಷಕರು ಪಾಲಕರು ಸಹಾನುಭೂತಿ ಉಳ್ಳವರಾಗಿರಬೇಕು.

೫. **ಹಿಮ್ಮೆಟ್ಟುವದು:**—ಬೆಳವಣಿಗೆಯು ಸಾಗುತ್ತಿರುವಾಗಲೇ ಕೆಲ ಕೆಲವು ಪ್ರಸಂಗಗಳಲ್ಲಿ ಮಗುವು ಮುಂದಿಟ್ಟ ಹೆಜ್ಜೆಯನ್ನು ಹಿಂಪಡೆಯುವ ಸಂಭವ ವುಂಟು. ಹೊಸದಾಗಿ ಗೋಡೆ ಹಿಡಿದು ಅಡ್ಡಾಡಲಿಕ್ಕೆ ಕಲಿತ ಮಗುವು ಕೆಲವು ದಿವಸ ಹುರುಪಿನಿಂದ ಅಡ್ಡಾಡುವನು. ಆದರೆ ಮತ್ತೆ ಅಂಬೆಗಾಲು ಹಚ್ಚಿ ಸರಿದಾಡಲು ಪ್ರಾರಂಭಿಸುವನು. ಸಾಯಕಲ್ಲು ಹೊಡೆಯಲಿಕ್ಕೆ ಅದೇ ತುಸು ಕಲಿತವನು ಸ್ವಲ್ಪ ದೂರ ಹತ್ತಿದ ಮೇಲೆ ಅದು ನೆಟ್ಟಗೆ ಬರುವದಿಲ್ಲವೆಂದು ಬಿಟ್ಟುಬಿಡಬಹುದು.

ಹೊಸದಾಗಿ ಕಲಿತ ಕೃತಿಯು ಪೂರ್ಣ ದೃಢಗೊಳ್ಳದಿದ್ದರೆ ಮೊದಲು ರೂಢಿಗೊಂಡ ಕೃತಿಗೆ ಹಿಂತಿರುಗುವದು ಕಂಡುಬರುತ್ತದೆ. ಅಥವಾ ಆ ಕೃತಿಗೆ ಸಂಬಂಧಪಟ್ಟ ಬೇರೆ ಬೇರೆ ಚಟುವಟಿಕೆಗಳಲ್ಲಿ ಹೊಂದಿಕೆಯಾಗುವವರೆಗೂ ಪೂರ್ವದ ಕೃತಿಗೆ ಮರಳುವದು ಕಂಡುಬರುತ್ತದೆ. ದೊಡ್ಡವರು ಕೂಡ ಬಿಕ್ಕಟ್ಟಿನ ಪ್ರಸಂಗವು ಒದಗಿದಾಗ ಸಣ್ಣವರಂತೆ ವರ್ತಿಸಬಹುದು. ಈ ಸ್ವಾಭಾವಿಕ ವರ್ತನದಿಂದ ಹೊರಡುವ ಶಿಕ್ಷಣ ಸಿದ್ಧಾಂತವೇನಂದರೆ ಹೊಸ ಅಭ್ಯಾಸಗಳನ್ನು ಬಿಟ್ಟೂಬಿಡದೆ ಮುಂದೆ ಮುಂದೆ ಸಾಗಿಸಬಾರದು. ನಡುನಡುವೆ ವಿರಾಮ ಕೊಟ್ಟು ಅಭ್ಯಾಸವನ್ನು ಪುನರುಕ್ತಿ ("ಉಜಳಣಿ") ಮಾಡುವದು ಅವಶ್ಯ.

ಹಿಂದೆ ಎರಡನೇ ಅಧ್ಯಾಯದಲ್ಲಿ ವಿವರಿಸಿದ ಸಂಸಕ್ತಿ ಮತ್ತು ದೃಢೀಕರಣದ ತತ್ವಗಳು ಇಲ್ಲಿ ಅಡಕವಾಗಿವೆ.

೬. **ಹಂಬಲಗಳು**:— ಹೊಸದಾಗಿ ಕಲಿತ ಚಟುವಟಿಕೆಗಳು ಕೆಲವು ಕಾಲದವರೆಗೆ ಮಗುವನ್ನು ಪೂರ್ಣವಾಗಿ ಆಕರ್ಷಿಸುತ್ತವೆ. ಅವುಗಳ ಹವ್ಯಾಸ ಅಥವಾ ಹಂಬಲ ಬಹಳ ಪ್ರಬಲವಾಗಿರುತ್ತದೆ. ಅವನು ಆ ಕಾಲದಲ್ಲಿ ಉಳಿದವುಗಳನ್ನು ಮರೆಯುತ್ತಾನೆ. ಕೆಲವು ಕಾಲ ಅಂಬೆಗಾಲು ಇಕ್ಕಿ ಸರಿದಾಡುವದು ಸೇರುತ್ತದೆ, ಕೆಲವು ಕಾಲ ಎದ್ದು ಅಡ್ಡಾಡುವದು ಸೇರುತ್ತದೆ. ಕೆಲವು ಕಾಲ ಒಗೆದಾಡುವದು, ಕೆಲವು ಕಾಲ ಅವೇ ಶಬ್ದಗಳನ್ನು ಪದೇ ಪದೇ ಉಪಯೋಗಿಸುವದು, ಕೆಲವು ಕಾಲ ಮೂರು ಗಾಲಿ ಸಾಯಕಲ್ಲ ಹೊಡೆಯುವದು, ರೇಡಿಯೋ ಕೇಳುವದು, ಹಗ್ಗ ಜಿಗಿಯುವದು, ಅಣೇಕಲ್ಲು ಆಡುವದು, ಪಟ ಹಾರಿಸುವದು, ಗೋಲಿಗುಂಡು ಆಡುವದು ಮುಂತಾದವು ಮಗುವನ್ನು ಗುತ್ತಿಗೆ ಹಿಡಿಯುತ್ತವೆ. ಇದಕ್ಕೆ ಮಾನಸಿಕ ಕಾರಣವೇನಂದರೆ ಆ ಚಟುವಟಿಕೆಯಲ್ಲಿ ಸಂಪಾದಿಸಿದ ಪ್ರಭುತ್ವದ ಆನಂದ; ತನಗೆ ಆ ಚಟುವಟಿಕೆಯು ಬರುತ್ತವೆಂದು ತೋರುವ ಹುಮ್ಮಸ; ಆತ್ಮಪ್ರತಿಷ್ಠಾಪ್ರವೃತ್ತಿ. ಆದರೆ ಆ ಅವಧಿಯ ಕಾಲ ಕಳೆದ ಮೇಲೆ ಮಗುವು ಮೊದಲು ಆಸಕ್ತಿಯುಳ್ಳ ಚಟುವಟಿಕೆಯನ್ನು ಬಿಟ್ಟುಕೊಟ್ಟು ಮತ್ತೊಂದು ಚಟುವಟಿಕೆಯಲ್ಲಿ ಅಥವಾ ಹವ್ಯಾಸವನ್ನು ಅಥವಾ ಹವ್ಯಾಸದಲ್ಲಿ ಅಭಿರುಚಿ ತೋರಿಸುತ್ತಾನೆ. ದೊಡ್ಡವನು ಆದಹಾಗೆ ಅವನ ಅಭಿರುಚಿಗಳು ಕಾಲಕಾಲಕ್ಕೆ ಬದಲಾಗುತ್ತ ಹೋಗುತ್ತವೆ.

ಹೊಸದಾಗಿ ಸಂಪಾದಿಸಿದ ಶಕ್ತಿಯನ್ನು ಅಥವಾ ಕೌಶಲ್ಯವನ್ನು ಮಗುವು ಅತಿಶಯವಾಗಿ ಕೆಲವು ದಿವಸಗಳವರೆಗೆ ತೋರಿಸುವದು ಅವನ ಬೆಳವಣಿಗೆಗೆ ಸ್ವಾಭಾವಿಕವಾದುದು. ದೊಡ್ಡವರಾದವರು ಇದನ್ನು ಅರಿತಿರಬೇಕು. ಅವರು ಮಗುವಿನ ಹಂಬಲಗಳಲ್ಲಿ ಅಥವಾ ಆಸಕ್ತಿಗಳಲ್ಲಿ ಅನಾವಶ್ಯಕವಾಗಿ ಕೈ ಹಾಕಬಾರದು. ಮಗುವು ಬೆಳವಣಿಗೆಯಲ್ಲಿ ಮುಂದೆ ಹೆಜ್ಜೆ ಇಟ್ಟಹಾಗೆ ಮೊದಲಿನ ಆಸಕ್ತಿಗಳನ್ನು ಅವನು ತಾನಾಗಿಯೇ ಬಿಡುವದರಿಂದ ದೊಡ್ಡವರು ಅವುಗಳನ್ನು ಉದ್ದೇಶಪೂರ್ವಕವಾಗಿ ಬಿಡಿಸಲಿಕ್ಕೆ ಹೋಗುವದು ಅನಾವಶ್ಯಕ. ಈ ವಿಷಯದಲ್ಲಿ ಇತರ ವಿಷಯಗಳಲ್ಲಿಯಂತೆ, ಮಗುವಿನ ಸಂಪೂರ್ಣ

ಬೆಳವಣಿಗೆಯ ವ್ಯಾಪಕ ದೃಷ್ಟಿಯನ್ನು ಇಟ್ಟುಕೊಳ್ಳಬೇಕಲ್ಲದೆ ದೊಡ್ಡವರ ದೃಷ್ಟಿಯಿಂದ ಮಗುವಿನ ವರ್ತನವನ್ನು ಎಣಿಸಬಾರದು.

೭. **ಪ್ರತ್ಯಕ್ಷದಿಂದ ಅಪ್ರತ್ಯಕ್ಷಕ್ಕೆ**:—ಮಗುವು ಚಿಕ್ಕವನಿದ್ದಾಗ ತನ್ನ ಉದ್ವೇಗಗಳನ್ನು ಬಹಿರಂಗವಾಗಿ ಮತ್ತು ಸ್ಥೂಲವಾಗಿ ವ್ಯಕ್ತಮಾಡುತ್ತಾನೆ. ಮಗುವನ್ನು ಸಿಟ್ಟು ಆವರಿಸಿತೆಂದರೆ ಅವನು ದೊಡ್ಡ ಗದ್ದಲವನ್ನೇ ಮಾಡುತ್ತಾನೆ, ಒದರಾಡುತ್ತಾನೆ, ಚೀರಾಡುತ್ತಾನೆ, ಮುಸುಗುಡುತ್ತಾನೆ, ನೆಲಕ್ಕೆ ಕೈಕಾಲು ಅಪ್ಪಳಿಸುತ್ತಾನೆ. ಅವನ ತೊಂದರೆಯ ಕಾರಣವು ಸಣ್ಣದೇ ಇದ್ದರೂ ಅವನ ಆರ್ಭಟ ಮಾತ್ರ ಬಹಳ. ಅವನ ಅಳುವಿಗೆ ಅಥವಾ ಸಿಟ್ಟಿಗೆ ದೊಡ್ಡವರು ಕೂಡಲೇ ಸೊಪ್ಪು ಹಾಕಬಾರದು. ಮಗುವು ಸಂಯಮನವನ್ನು ಕಲಿಯಲಿ. ಅವನ ಆರ್ಭಟವನ್ನು ದೊಡ್ಡವರು ಮಾನ್ಯ ಮಾಡುವದಿಲ್ಲವೆಂದು ಅವನಿಗೆ ಅನಿಸಲಿ. ದಿವಸಗಳು ಕಳೆದ ಹಾಗೆ, ಅನುಭವವು ಹೆಚ್ಚಿದ ಹಾಗೆ ಮತ್ತು ಮಗುವು ದೊಡ್ಡವನಾದ ಹಾಗೆ ಅವನು ತನ್ನ ಉದ್ವೇಗಗಳನ್ನು ಸ್ಥೂಲವಾಗಿ ಬಹಿರಂಗದಲ್ಲಿ ಪ್ರಕಟ ಮಾಡುವದಿಲ್ಲ. ಆದರೆ ಸೂಕ್ಷ್ಮ ರೀತಿಯಾಗಿ ಹೊರಗೆ ಕಣ್ಣಿಗೆ ಕಾಣಿಸದಂತ ತನ್ನ ಕೆಲಸ ಸಾಧಿಸಲು ಪ್ರಯತ್ನಿಸುತ್ತಾನೆ, ಒಳಸಂಚು ನಡೆಸುತ್ತಾನೆ. ಆಗ ತನ್ನ ಸಿಟ್ಟಿನ ಚಿನ್ಹಗಳನ್ನು ಹೊರಗೆ ತೋರಿಸದೆ ಗುಪ್ತವಾಗಿ ಸೇಡನ್ನು ತೀರಿಸಿಕೊಳ್ಳುವ ಅನೇಕ ಹಾದಿಗಳನ್ನು ಹುಡುಕುತ್ತಾನೆ. ಉದ್ವೇಗಗಳ ಆವೇಶದಲ್ಲಿ ಎಲ್ಲರೂ ಯಾವಾಗಲೂ ದೊಡ್ಡದನಿಯಿಂದ ಚೀರಾಡುವದನ್ನೂ ಒದರಾಡುವದನ್ನೂ ಮಾಡಿದರೆ ನಾಗರಿಕ ಜೀವನವೇ ಕಠಿಣವಾಗುತ್ತಿತ್ತು.

೮. **ಸ್ವಾಭಾವಿಕ ತಿದ್ದುಪಡೆಗಳು**:—ಬೆಳವಣಿಗೆಯ ಮೆಟ್ಟುಗಳನ್ನು ದಾಟುತ್ತ ಹೋಗುವಾಗ ಮಗುವು ತನ್ನ ಮೊದಲಿನ ತಪ್ಪುಗಳನ್ನು ತಾನಾಗಿಯೇ ತಿದ್ದಿಕೊಳ್ಳುತ್ತಾನೆ. ಒಂದು ಕಾಲಕ್ಕೆ ನಡೆಯುತ್ತಿದ್ದ ಚಟುವಟಿಕೆಯು ಕಡೆತನಕ ಚಟವಾಗಿ ಅಂಟಿಕೊಳ್ಳುವದು ತಪ್ಪು. ಮಗುವು ಅಂಬೆಗಾಲು ಇಕ್ಕುತ್ತಾನೆ; ಆದರೆ ಕಡೆತನಕ ಅವನು ಹಾಗೆ ಮಾಡುವದಿಲ್ಲ; ಕೆಲವು ದಿವಸಗಳ ಮೇಲೆ ಅವನು ಅಡ್ಡಾಡುತ್ತಾನೆ. ಮೊದಲು ತೊದಲು ನುಡಿ ಆಡುತ್ತಿದ್ದವನು ಆ ಮೇಲೆ ಸ್ಪಷ್ಟ ಮಾತಾಡುತ್ತಾನೆ. ಮೊದಲು "ಮೂಲು", "ಬತೇನಿ"

ಎಂದು ಅನ್ನುತ್ತಿದ್ದ ಮಗುವು ಆ ಮೇಲೆ "ಮೂರು" "ಬರುತ್ತೇನೆ" ಎಂದು ನಿಚ್ಚಳವಾಗಿ ಉಚ್ಚರಿಸಲು ತಾನಾಗಿಯೇ ಕಲಿಯುತ್ತಾನೆ.

ಬೆಳವಣಿಗೆಯ ಸಾಗುವಳಿಯಲ್ಲಿ ಮೊದಲಿನ ವರ್ತನದ ಅಥವಾ ಚಟದ ರೂಪವು ಸ್ವಾಭಾವಿಕವಾಗಿ ಬಿಡಲ್ಪಡುತ್ತದೆ ಅಥವಾ ತಿದ್ದುಪಡೆ ಹೊಂದುತ್ತದೆ ಎಂಬ ತತ್ವವು ಶಿಕ್ಷಣದ ಒಂದು ಮಹತ್ವದ ಸಿದ್ಧಾಂತವನ್ನು ಸೂಚಿಸುತ್ತದೆ. ಮಾರ್ಗದರ್ಶಕರು ಅಂದರೆ ಮನೆಯಲ್ಲಿ ತಂದೆತಾಯಿಗಳೇ ಆಗಲಿ ಅಥವಾ ಸಾಲೆಯಲ್ಲಿ ಅಧ್ಯಾಪಕರೇ ಆಗಲಿ ಮಗುವಿನ ಬೆಳವಣಿಗೆಯ ಗತ್ತಿಗೆ ತಾಳ ಹಿಡಿಯಬೇಕಾಗುತ್ತದೆ. ನಾಳೆ ಮಗುವು ತಾನಾಗಿಯೇ ಕಲಿಯುವದನ್ನು ಇವತ್ತು ಕಲಿಸಲಿಕ್ಕೆ ಪ್ರಯತ್ನ ಪಡುವದು ಮತ್ತು ನಾಳೆ ಮಗುವು ತಾನಾಗಿಯೆ ಬಿಟ್ಟುಬಿಡುವದನ್ನು ಇವತ್ತು ತಗೆದು ಹಾಕಲು ಪ್ರಯತ್ನಪಡುವದು ವ್ಯರ್ಥ.

೯. **ಮುಂದುವರಿದ ಬಾಲ್ಯ ವರ್ತನಗಳು:—** ಬೆಳವಣಿಗೆಯು ಸಾಗಿದ ಹಾಗೆ ಮಗುವು ತನ್ನ ಮೊದಲಿನ ವರ್ತನಗಳನ್ನು ಬಿಟ್ಟುಬಿಡುತ್ತಾನೆ ಎಂದು ಮೇಲೆ ಹೇಳಿದೆ. ಇದು ಸಾಮಾನ್ಯ ನಿಯಮ. ಆದರೆ ಇದಕ್ಕೆ ಅಪವಾದ ಗಳುಂಟು. ಮಗುವು ಸಣ್ಣವನಿದ್ದಾಗ ಅವನನ್ನು ಅಂಟಿಕೊಂಡ ಕೆಲವು ಕೆಡಕು ಚಟಗಳು ಅವನು ದೊಡ್ಡವನಾದಾಗಲೂ ಅವನನ್ನು ಓಂಬಾಲಿಸು ತ್ತವೆ. ಸಣ್ಣವನಿದ್ದಾಗ ಅವನು ನಾಯಿಯನ್ನು, ಪೋಲೀಸನನ್ನು ಅಥವಾ ಕಪ್ಪೆಯನ್ನು ಕಂಡು ಹೆದರುತ್ತಿದ್ದವನು ದೊಡ್ಡವನಾದಾಗಲೂ ಆ ತರಹದ ಅಂಜುಬುರುಕತನವನ್ನು ತೋರಿಸಬಹುದು. ಊಟದ ಕೆಲವು ಪದಾರ್ಥಗಳನ್ನು ಸೇರದೇ ಇದ್ದವನು ಮುಂದೆಯೂ ಸೇರದೇ ಇರಬಹುದು. ಚಿಕ್ಕವನಿದ್ದಾಗ ಮನೆಯವರಿಂದಾಗಲಿ, ನೆರೆಹೊರೆಯವರಿಂದಾಗಲಿ, ತಂದೆತಾಯಿಗಳಿಂದಾಗಲಿ ಕಲಿತ ತಿರಸ್ಕಾರ, ದ್ವೇಷ, ದುರಭಿಪ್ರಾಯ, ನಂಬುಗೆ, ನಡೆನುಡಿಗಳ ಬಗ್ಗೆ ಸರಿ ಅಥವಾ ತಪ್ಪು ಎಂಬುದರ ಕಲ್ಪನೆಗಳು ಮಗುವು ದೊಡ್ಡವನಾದಾಗಲೂ ಅವನನ್ನು ಓಂಬಾಲಿಸಬಹುದು.

ಮಗುವಿನ ವರ್ತನದ ಹಿನ್ನೆಲೆಯನ್ನು ಅಥವಾ ಕಾರಣವನ್ನು ಶಿಕ್ಷಕನು ತಿಳಿದಿದ್ದರೆ ಅದನ್ನು ಮಾರ್ಪಡಿಸುವ ಮಾರ್ಗವನ್ನು ಕಂಡುಹಿಡಿಯಲು ಸುಲಭ ವಾಗುವದು. ಬಾಲ್ಯದಲ್ಲಿ ಇದ್ದಾಗ ಮೂಡಿದ ಅಭಿಪ್ರಾಯಗಳು, ಭಾವನೆಗಳು

ಅಥವಾ ನಂಬುಗೆಗಳು ವಿವೇಕದ ಒರೆಗೆ ನಿಲ್ಲದವು ಇರಬಹುದು. ಇಂಡಿಯಾದಲ್ಲಿ ದೇಶವನ್ನೇ ಕಲಕು ಮಾಡಿದ ಕುಲಜಾತಿಗಳ ಮತ್ತು ಅವಕ್ಕೆ ಸಂಬಂಧಿಸಿದ ಕೀಳು ಮೇಲಿನ ಕಲ್ಪನೆಗಳು ಸಮಾಜದಲ್ಲಿ ರೂಢವಾಗಿರುವದರಿಂದ ಅವುಗಳನ್ನು ಮಕ್ಕಳು ಸಹಜವಾಗಿ ಅಂಗೀಕರಿಸುತ್ತಾರೆ. ಅವುಗಳಿಗೆ ವಿವೇಕದ ಆಧಾರವಿಲ್ಲ. ಈಗಿದ್ದ ಆರ್ಥಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನು ಬದಲಾಯಿಸಿದರೆ ಒಂದುಳಿದ ಸಮಾಜದವರು ಮುಂದೆ ಬರುವದರಲ್ಲಿ ಸಂದೇಹವಿಲ್ಲ. ಕಾರಣ ಜ್ಞಾನದಲ್ಲಿ, ಬುದ್ಧಿಮತ್ತೆಯಲ್ಲಿ, ಮುತ್ಸದ್ದಿತನದಲ್ಲಿ ಒಂದುಳಿದ ಸಮಾಜದವರಾದ ಡಾಕ್ಟರ ಅಂಬೇಡಕರ ಅವರನ್ನು ಸರಿಗಟ್ಟಲು ಯಾರೂ ಇಲ್ಲದ್ದರಿಂದ ಅವರನ್ನು ಇಂಡಿಯಾದ ಹೊಸ ರಾಜ್ಯಘಟನೆಯನ್ನು ತಯಾರಿಸಲಿಕ್ಕೆ ನೇಮಿಸಿದ್ದರು. ವಿವೇಕ, ಅನುಭವ, ಪ್ರಯೋಗ, ಸಿದ್ಧಾಂತ, ಮತ್ತು ಪರಿಸ್ಥಿತಿಯ ಬದಲಾವಣೆ ಇವುಗಳ ಸಹಾಯದಿಂದ, ಸಾಧನದಿಂದ ವೈಯಕ್ತಿಕ ಮತ್ತು ಸಾಮಾಜಿಕ ದೋಷಗಳನ್ನು ಮತ್ತು ಮೂಢ ನಂಬಿಗೆಗಳನ್ನು ಹೋಗಲಾಡಿಸಿ ಹೊಸ ವ್ಯಕ್ತಿತ್ವವನ್ನೂ ಹೊಸ ಸಮಾಜವನ್ನೂ ಸುಧಾರಿಸಲಿಕ್ಕೆ ಮನೋವಿಶ್ಲೇಷಣಜ್ಞರು ಇದೇ ಪದ್ಧತಿಯನ್ನು ಸೂಚಿಸುತ್ತಾರೆ. ವಿವೇಕದ ಬೆಳಕಿನಲ್ಲಿ ಸತ್ಯಶೋಧನೆಯ ವೃತ್ತಿಯನ್ನು ಮಕ್ಕಳಲ್ಲಿ ಬೆಳೆಸಲು ಶಿಕ್ಷಕರು ನೆರವಾಗಬೇಕು.

## ಕಲಿಯುವಿಕೆ ಮತ್ತು ಬೆಳವಣಿಗೆ

ಮಗುವು ಬೆಳೆಯುತ್ತ ಹೋದಹಾಗೆ ಅವನಲ್ಲಿ ಶಾರೀರಿಕ ಮತ್ತು ಬೌದ್ಧಿಕ ಮಾರ್ಪಾಟಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಮಗುವಿನ ಬೇರೆ ಬೇರೆ ವಯಸ್ಸಿನಲ್ಲಿ ಬೇರೆ ಬೇರೆ ಲಕ್ಷಣಗಳು ಒಡೆದು ತೋರುತ್ತವೆ. ಬೆಳವಣಿಗೆಯು ಸ್ವಾಭಾವಿಕವಾಗಿ ಸಾಗಿದರೂ ಪರಿಸ್ಥಿತಿಯ ಪರಿಣಾಮವು ಅದರ ಮೇಲೆ ಆಗದೇ ಇರದು. ಮಗುವಿನ ಬೆಳವಣಿಗೆಯು ಸರಿಯಾದ ರೀತಿಯಲ್ಲಿ ಸಾಗಬೇಕೆಂದು ನಿರ್ಮಿಸಿದ ಆದರ್ಶ ಆವರಣವೇ ಶಾಲೆ. ಬೆಳೆಯುತ್ತಿರುವ ಮಗುವಿನ ಯೋಗ್ಯತೆಯನ್ನೂ ಅಭಿರುಚಿಯನ್ನೂ ತಿಳಿದುಕೊಂಡು ಆಯಾ ಮಟ್ಟಕ್ಕೆ ತಕ್ಕಂತೆ ಶಿಕ್ಷಣ ಯೋಜನೆಗಳನ್ನು ಹೊಂದಿಸಿಕೊಳ್ಳಬೇಕೆಂದು ಫ್ರೊಬೆಲ್‌ನು ಸ್ಪಷ್ಟವಾಗಿ ಹೇಳುತ್ತಾನೆ.

ಕಲಿಯುವಿಕೆ ಮತ್ತು ಬೆಳವಣಿಗೆ ಇವುಗಳಲ್ಲಿ ಯಾವ ಸಂಬಂಧ ಉಂಟೆಂಬುದನ್ನು ತಿಳಿಯುವದು ಅವಶ್ಯ. ಅಂದರೆ ಮಗುವಿನ ಯಾವ ವಯಸ್ಸಿನಲ್ಲಿ ಯಾವ ವಿಷಯಗಳನ್ನು ಕಲಿಸುವದು ಯೋಗ್ಯವೆನಿಸುತ್ತದೆ ಎಂಬುದು ಗೊತ್ತಾಗುವದು. ಬೆಳವಣಿಗೆ ಅಂದರೆ ಇಲ್ಲಿ ವಿಶೇಷವಾಗಿ ದೇಹದ ಬೆಳವಣಿಗೆ. ಇದು ಆಹಾರ, ವ್ಯಾಯಾಮ, ಹವೆ ಮೊದಲಾದ ಸಂಗತಿಗಳನ್ನು ಅವಲಂಬಿಸಿರುತ್ತದೆ. ದೇಹದ ಬೆಳವಣಿಗೆಯನ್ನು ಮಗುವು ಕಲಿಯಬೇಕಾಗಿಲ್ಲ. ದಿನಗಳು ಕಳೆದಹಾಗೆ ದೊಡ್ಡವನಾಗಿ ಬೆಳೆಯುವದು ತಾನೇ ಸಾಗಿರುತ್ತದೆ. ಆದರೆ ಕಲಿಯುವಿಕೆಯು ಅನುಭವವನ್ನು ಅವಲಂಬಿಸಿರುತ್ತದೆ. ಒಮ್ಮೆ ಕೈ ಸುಟ್ಟುಕೊಂಡ ಮಗುವು ಮತ್ತೊಮ್ಮೆ ಬೆಂಕಿಯನ್ನು ಮುಟ್ಟಲು ಹೆದರುತ್ತಾನೆ. ಇದನ್ನು ಅವನು ಅನುಭವದಿಂದ ಕಲಿತಿರುತ್ತಾನೆ. ಹಿಂದಿನ ಅನುಭವದ ಮೇಲಿಂದ ಮಗುವಿನ ವರ್ತನದಲ್ಲಿ ಬದಲಾವಣೆ ಆಗುತ್ತದೆ. ಇದು ಕಲಿಯುವಿಕೆಯ ಲಕ್ಷಣ. ಮಗುವು ತಾಯಿನುಡಿಯನ್ನು ಪ್ರಯತ್ನಪಟ್ಟು ಕಲಿಯುತ್ತಾನೆ. ಚಿಕ್ಕವನಿರುವಾಗ ಅವನು ಕನ್ನಡ ಕಲಿತನು. ಆದರೆ ದೊಡ್ಡವನಾದ ಮೇಲೆ ಬೇಕಾದ ಭಾಷೆಯನ್ನು ಕಲಿಯುವ ಸಾಮರ್ಥ್ಯವು ಬರುತ್ತದೆ. ಭಾಷೆಯನ್ನು ಅವನು ಹೇಗೆ ಕಲಿಯುತ್ತಾನೆಯೋ ಹಾಗೆಯೇ ಅವನು ತನ್ನ ಸುತ್ತುಮುತ್ತಲಿನ ವಾತಾವರಣದಿಂದ ವರ್ತನವನ್ನೂ ದೃಷ್ಟಿಕೋನವನ್ನೂ ಕಲಿಯುತ್ತಾನೆ. ಬೆಳವಣಿಗೆಯ ಲಕ್ಷಣಗಳು ಸಾಮಾನ್ಯವಾಗಿ ಒಂದೇ ವಯಸ್ಸಿನ ಎಲ್ಲ ಮಕ್ಕಳಲ್ಲಿ, ಅವರು ಬೇರೆ ಬೇರೆ ಪರಿಸ್ಥಿತಿಗಳಲ್ಲಿ ಬೆಳೆದಿದ್ದರೂ, ಸಮನಾಗಿ ಕಾಣಿಸಿಕೊಳ್ಳುತ್ತವೆ. ಆದರೆ ಕಲಿಯುವಿಕೆ ಎಂಬುದು ಒಂದು ವಿಶಿಷ್ಟ ಸನ್ನಿವೇಶವನ್ನು ಅವಲಂಬಿಸಿರುತ್ತದೆ. ಮಗುವು ಏನನ್ನು ಕಲಿಯುತ್ತಾನೆ ಎಂಬುದು ಅವನ ಮನೆಯ ಪರಿಸ್ಥಿತಿ ಮತ್ತು ಸುತ್ತುಮುತ್ತಲಿನ ಆವರಣಗಳನ್ನು ಅವಲಂಬಿಸಿರುತ್ತದೆ.

ಕಲಿಯುವಿಕೆಯು ಶರೀರದ ಪಕ್ವತೆ ಮತ್ತು ಅನುಕೂಲ ಸಂದರ್ಭಗಳನ್ನು ಅವಲಂಬಿಸಿರುತ್ತದೆ. ಕಾಲಲ್ಲಿ ಶಕ್ತಿಯು ಬಾರದ ಹೊರತು ಮಗುವಿಗೆ ನಡೆದಾಡಲಿಕ್ಕೆ ತಾಯಿಯು ಎಷ್ಟು ಪ್ರಯತ್ನಪಟ್ಟು ಕಲಿಸಿದರೂ ಅದರಿಂದ ಪ್ರಯೋಜನವಾಗುವದಿಲ್ಲ. ಅವಯವಗಳೂ ಸ್ನಾಯುಗಳೂ ಬಲಿತ ಕೂಡಲೇ ಅವನು ತಾನಾಗಿಯೇ ಆಡ್ಡಾಡಲಿಕ್ಕೆ ಪ್ರಾರಂಭಿಸುವನು. ಕಲಿಯುವಿಕೆಯು

ಬೆಳವಣಿಗೆಯ ಮಟ್ಟವನ್ನು ಅವಲಂಬಿಸಿರುತ್ತದೆ ಎಂಬ ಸಿದ್ಧಾಂತವನ್ನು ಪ್ರಯೋಗದಿಂದಲೂ ಕಂಡುಹಿಡಿದಿದ್ದಾರೆ. ಇಂಥ ಒಂದೆರಡು ಪ್ರಯೋಗಗಳನ್ನು ಇಲ್ಲಿ ವಿವರಿಸಿದೆ. ಕೆಲವು ಸಣ್ಣ ಹುಡುಗರ ಒಂದು ಗುಂಪಿಗೆ ಬಿರಡಿ ಹಾಕುವದಕ್ಕೆ, ಕತ್ತರಿಯಿಂದ ಕತ್ತರಿಸುವದಕ್ಕೆ, ನಿಚ್ಚಣಿಕೆ ಏರುವದಕ್ಕೆ ಹನ್ನೆರಡು ವಾರಗಳವರೆಗೆ ವಿಶೇಷ ಟ್ರೇನಿಂಗ ಕೊಡಲಾಯಿತು. ಈ ಅವಧಿಯು ಮುಗಿದ ಮೇಲೆ ಅದೇ ವಯಸ್ಸಿನ ಬೇರೆ ಕೆಲವು ಹುಡುಗರಿಗೆ ಒಂದು ವಾರದ ವರೆಗೆ ಮಾತ್ರ ಟ್ರೇನಿಂಗ ಕೊಡಲಾಯಿತು. ಟ್ರೇನಿಂಗ ಮುಗಿದ ಮೇಲೆ ಎರಡೂ ಗುಂಪುಗಳನ್ನು ಪರೀಕ್ಷಿಸಲು ಅವರವರ ಕೃತಿಗಳಲ್ಲಿ ಸಮಾನ ಕೌಶಲ್ಯವು ಕಂಡುಬಂದಿತು. ಟ್ರೇನಿಂಗ ಕೊಡುವ ಮೊದಲು ಎರಡನೇ ಗುಂಪನ್ನು ಪರೀಕ್ಷಿಸಿದಾಗ ಮೊದಲನೇ ಗುಂಪು ತೋರಿಸಿದ ಕೌಶಲ್ಯವು ಕಂಡುಬರಲಿಲ್ಲ. ಇನ್ನೊಂದು ಪ್ರಯೋಗದಲ್ಲಿ ‘ಟಿ’ ಮತ್ತು ‘ಸಿ’ ಎಂಬ ಇಬ್ಬರು ಅವಳಿ ಜವಳಿ ಹುಡುಗರಿದ್ದರು. ಇವರಿಬ್ಬರಿಗೂ ಶಬ್ದ ಪರಿಚಯ, ಉಚ್ಚಾರ ಮತ್ತು ವಾಕ್ಯ ರಚನೆಯಲ್ಲಿ ಬೇರೆ ಬೇರೆಯಾಗಿ ಅಭ್ಯಾಸ ಮಾಡಿಸಲಾಯಿತು. ‘ಟಿ’ ಎಂಬವನಿಗೆ ಐದು ವಾರ ಮೊದಲೇ ಟ್ರೇನಿಂಗ ಪ್ರಾರಂಭಿಸಲಾಗಿತ್ತು. ಅವನು ಐದು ವಾರ ಅಭ್ಯಾಸ ಮಾಡಿ ಶಬ್ದ ಪರಿಚಯ ಮಾಡಿಕೊಂಡಷ್ಟು ಸಿ ಎಂಬವನು ಕೆಲವು ದಿವಸಗಳ ನಂತರ ನಾಲ್ಕೇ ವಾರದಲ್ಲಿ ಕಲಿತನು. ಟಿ ಎಂಬವನು ತೋರಿಸಿದ ಪ್ರಗತಿಯು ಮೂರು ತಿಂಗಳಲ್ಲಿ ಇಲ್ಲದಂತಾಯಿತು. ಈ ಪ್ರಯೋಗಗಳಿಂದ ಕಂಡುಬರುವದೇನಂದರೆ, ಶರೀರವು ಅಪಕ್ವವಿದ್ದಾಗ ಅಭ್ಯಾಸ ಮಾಡಿಸುವದು ಶ್ರಮ ಮತ್ತು ವೇಳೆಯ ದೃಷ್ಟಿಯಿಂದ ಹಾನಿಕರವಾದದ್ದು. ಎಳೆಯ ವಯಸ್ಸಿನಲ್ಲಿ ಬಹಳ ಅವಧಿಯ ವರೆಗೆ ಕೊಡುವ ತರಬೇತಿಗಿಂತಲೂ ಬೆಳೆದ ವಯಸ್ಸಿನಲ್ಲಿ ಅಲ್ಪ ಅವಧಿಯ ವರೆಗೆ ಕೊಡುವ ತರಬೇತು ಹೆಚ್ಚು ಪರಿಣಾಮವನ್ನು ತೋರಿಸುವದು. ಕೆಳಗಿನ ಇಯತ್ತೆಗಳ ಹುಡುಗರು ಬಹಳ ದಿವಸಗಳವರೆಗೆ ಶ್ರಮಪಟ್ಟು ಕಲಿತ ಗಣಿತದ ಲೆಕ್ಕಗಳನ್ನು ಮೇಲಿನ ಇಯತ್ತೆಯ ಹುಡುಗರು ಸ್ವಲ್ಪೇ ದಿವಸಗಳಲ್ಲಿ ಹಗುರಾಗಿ ಕಲಿತದ್ದು ಒಂದು ಪ್ರಯೋಗದಲ್ಲಿ ಕಂಡುಬಂದಿದೆ. ಆದರೆ ಕಲಿಯುವಿಕೆಯಲ್ಲಿಯ ಈ ಪ್ರಗತಿಯು ಕೇವಲ ಬೆಳವಣಿಗೆಯ ಮಟ್ಟವನ್ನೇ ಅಥವಾ ವಯಸ್ಸನ್ನೇ ಅವಲಂಬಿಸಿರುತ್ತದೆ ಎಂದು ಭಾವಿಸಬಾರದು. ಅದಕ್ಕೆ ಅನುಕೂಲ ಸಂದರ್ಭವೂ ಮತ್ತು ಅಭ್ಯಾಸವೂ

ಅವಶ್ಯವಾಗಿರುತ್ತದೆ. ಅವಯವಗಳ ಬೆಳವಣಿಗೆಯ ದೃಷ್ಟಿಯಿಂದ ಒಬ್ಬ ಮಗುವು ಹಸ್ತಕೌಶಲ್ಯಗಳನ್ನು ಕಲಿಯಲಿಕ್ಕೆ ಸಿದ್ಧನಾಗಿರಬಹುದು ಆದರೆ ಅದಕ್ಕಾಗಿ ಅನುಕೂಲ ಸಂದರ್ಭಗಳು ಇರಬೇಕಾಗುತ್ತದೆ. ಇದು ಮಹತ್ವದ್ದು. ಸಾಯಕಲ್ಲ ಹೊಡೆಯಲಿಕ್ಕೆ, ಗಾಲಿ ತಿರುಗಿಸಲಿಕ್ಕೆ, ಕತ್ತರಿಯನ್ನು ಉಪಯೋಗಿಸಲಿಕ್ಕೆ ಟ್ರೇನಿಂಗ ಕೊಡಬೇಕಾಗುತ್ತದೆ. ಈ ಟ್ರೇನಿಂಗ ಅಥವಾ ಶಿಕ್ಷಣ ಇದ್ದರೆ ಮಾತ್ರ ಅವುಗಳಲ್ಲಿ ಕೌಶಲ್ಯವು ಅಥವಾ ನಿಪುಣತೆಯು ಬೆಳೆಯುತ್ತದೆ.

ಮಗುವು ಒಂದು ವಿಷಯವನ್ನು ಕಲಿಯಲಿಕ್ಕೆ ಸಿದ್ಧನಾಗಬೇಕಾದರೆ ಶರೀರದ ಪಕ್ವತೆಯೊಂದನ್ನೇ ಅವಲಂಬಿಸಿರುವದಿಲ್ಲ. ಶರೀರದ ಬೆಳವಣಿಗೆಯೂ ಅವಶ್ಯವಾದದ್ದು. ಆದರೆ ಅದರಂತೆ ಬುದ್ಧಿಯ ಬೆಳವಣಿಗೆಯೂ ಅನುಭವವೂ ಅವಶ್ಯವಾಗಿರುತ್ತದೆ. ಉದಾಹರಣೆಗಾಗಿ, ಓದು ಕಲಿಯಲಿಕ್ಕೆ ಮಗುವು ಸಿದ್ಧನಾಗಬೇಕಾದರೆ ಅದು ಅವನ ಬುದ್ಧಿ, ಶರೀರ, ಉದ್ವೇಗ, ಮತ್ತು ಸಮಾಜ, ವರ್ತನಗಳ ಬೆಳವಣಿಗೆಯನ್ನು ಅವಲಂಬಿಸಿರುತ್ತದೆ; ಅವನ ಅಭಿರುಚಿ, ಅನುಭವಗಳನ್ನು ಅವಲಂಬಿಸಿರುತ್ತದೆ. ಗಣಿತ ಕಲಿಯಲಿಕ್ಕೆ ಮಗುವು ಸಿದ್ಧನಾಗಬೇಕಾದರೆ ಅದಕ್ಕೆ ತಕ್ಕ ಬೆಳವಣಿಗೆ, ಅನುಭವ, ಅಭಿರುಚಿ, ಒಲವು ಮತ್ತು ಉದ್ದೇಶಗಳು ಅವನಲ್ಲಿ ಇರಬೇಕಾಗುತ್ತವೆ. ಆದ್ದರಿಂದ ಮಗುವಿನ ಪೂರ್ಣ ಹಿನ್ನೆಲೆಯನ್ನು ನೋಡದೆ ಕೇವಲ ಅವನ ಬುದ್ಧಿಬಲವನ್ನು ನೋಡಿ ಗಣಿತದ ಅಭ್ಯಾಸಕ್ರಮವನ್ನು ಯೋಚಿಸುವದು ಸಮಂಜಸವಾಗದು. ವಿಷಯವನ್ನು ಕಲಿಯುವ ಸಿದ್ಧತೆಯು ಮಗುವಿನ ಬೆಳವಣಿಗೆಯನ್ನು, ಅನುಭವವನ್ನು, ಅನುಕೂಲತೆಯನ್ನು, ಪ್ರೋತ್ಸಾಹವನ್ನು ಮತ್ತು ತರಬೇತನ್ನು ಅವಲಂಬಿಸಿರುತ್ತದೆ. ಒಟ್ಟಿನಲ್ಲಿ ಒಕ್ಕಲಿಗನು ಹದನಾದ ಸಮಯವನ್ನು ನೋಡಿ ಬೀಜವನ್ನು ಬಿತ್ತುವಂತೆ ಶಿಕ್ಷಕನು ಹದನಾದ ಸಮಯವನ್ನು ನೋಡಿ ಮಗುವಿಗೆ ಕಲಿಸುವ ವಿಷಯವನ್ನು ಪ್ರಾರಂಭಿಸಬೇಕು. ಪ್ರಾಥಮಿಕ ಸಾಲೆಯಲ್ಲಿಯಂತೂ ಕಲಿಯುವಿಕೆಯಲ್ಲಿ ಬೆಳವಣಿಗೆಯ ಪಾತ್ರವು ಬಹಳ ಮಹತ್ವದ್ದು. ಕಾರಣ ಮಗುವಿನ ಬೆಳವಣಿಗೆಯ ಮಟ್ಟಗಳನ್ನು ಅನುಸರಿಸಿ ಅಭ್ಯಾಸ ಪತ್ರಿಕೆಯನ್ನು ರಚಿಸಬೇಕು. ಹೀಗೆ ಮಾಡುವಾಗ ಒಂದು ಇಯತ್ತೆಯನ್ನು ಅಥವಾ ವಯವನ್ನು ಅಳತೆಗೋಲೆಂದು ಇಟ್ಟುಕೊಳ್ಳದೆ ಬೆಳವಣಿಗೆಯ ಸ್ಥಲಗಳನ್ನು ಅಥವಾ

ಮಟ್ಟಗಳನ್ನು ಅನುಲಕ್ಷಿಸಬೇಕು. ಈ ಬೆಳವಣಿಗೆಯ ಮಟ್ಟಗಳನ್ನು ಮತ್ತು ಅವುಗಳಿಗೆ ತಕ್ಕಂತೆ ಇರಬೇಕಾದ ಶಿಕ್ಷಣ ಯೋಜನೆಯನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿವೇಚಿಸಲಾಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಒಂದೊಂದು ಕಾಲದಲ್ಲಿ ಮಕ್ಕಳು ಒಂದೊಂದು ವಿಶಿಷ್ಟ ಚಟುವಟಿಕೆಯಲ್ಲಿ ಅತಿಶಯವಾಗಿ ಆಸಕ್ತಿಯುಳ್ಳವರು ಆಗಿರುತ್ತಾರೆ. ಈ ಮಾತನ್ನು ಸಮರ್ಥಿಸಲು ನಿಮ್ಮ ಅನುಭವದಲ್ಲಿ ಬಂದ ಅಥವಾ ನೀವು ನೋಡಿದ ಕೆಲವು ಉದಾಹರಣೆಗಳನ್ನು ಕೊಡಿರಿ.

೨. ಸಾಲೆಯ ಯಾವವಾದರೊಂದು ವಿಷಯವನ್ನು ನೀವು ಸ್ವತಃ ಕಲಿಯುವಾಗ ಮೊದಲು ಬಿಗಿ ಅನಿಸಿದ್ದು ಮತ್ತು ಕೆಲವು ದಿವಸಗಳು ಕಳೆದ ಮೇಲೆ ಅದೇ ಹಗುರು ಎನಿಸಿದ್ದು ನಿಮ್ಮ ಅನುಭವದಲ್ಲಿ ಬಂದಿದ್ದರೆ ಅದನ್ನು ವಿವರಿಸಿರಿ. ಈ ವ್ಯತ್ಯಾಸದ ಕಾರಣವು ಎಷ್ಟರಮಟ್ಟಿಗೆ (ಅ) ಬೆಳವಣಿಗೆಗೆ ಮತ್ತು (ಆ) ಅಭ್ಯಾಸಕ್ಕೆ ಸಂಬಂಧಿಸಿದೆ ?

೩. ನಿಮ್ಮ ಅಭಿಪ್ರಾಯದ ಪ್ರಕಾರ, ಮಗುವಿನ ಬೆಳವಣಿಗೆಯ ದೃಷ್ಟಿಯಿಂದ ಈಗಿನ ಪ್ರಾಥಮಿಕ ಸಾಲೆಯ ಅಭ್ಯಾಸ ಪತ್ರಿಕೆಯಲ್ಲಿಯ ಯಾವ ವಿಷಯಗಳನ್ನು ಬೇರೆ ವರ್ಗಗಳಿಗೆ ಬದಲಾಯಿಸತಕ್ಕದ್ದು ? ಇದನ್ನು ಉದಾಹರಣೆ ಕೊಟ್ಟು ಪ್ರತಿಪಾದಿಸಿರಿ.

೪. ಎಳೆಯ ವಯಸ್ಸಿನ ವಿದ್ಯಾರ್ಥಿಗಳಿಗೆ ಈಗ ಕಲಿಸಲ್ಪಡುವ ಕೆಲವು ಹಸ್ತಕೌಶಲ್ಯಗಳನ್ನು ಮುಂದೆ ಅವರು ದೊಡ್ಡವರಾದ ಮೇಲೆ ಕಲಿಸಿದರೆ ಹೆಚ್ಚು ಪರಿಣಾಮಕಾರಕವಾಗುತ್ತದೆ ಎಂಬ ನಿಮ್ಮ ಅಭಿಪ್ರಾಯವನ್ನು ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ.

೫. ಸಾಮಾನ್ಯವಾಗಿ ಚಿಕ್ಕ ಮಕ್ಕಳಿಗೆ ದೊಡ್ಡ ಸ್ನಾಯುಗಳ ಚಟುವಟಿಕೆಗಳನ್ನು ಕೊಡಬೇಕು. ಈ ನಿಯಮವನ್ನು ಉದಾಹರಣೆ ಕೊಟ್ಟು ಸಿದ್ಧಗೊಳಿಸಿರಿ.

೬. ಚಿಕ್ಕ ವಯಸ್ಸಿನಲ್ಲಿ ಅಂಟಿಕೊಂಡ ಎಲ್ಲ ಚಟಿಗಳು ಅವಶ್ಯವಾಗಿ ಕಡೆತನಕ ಉಳಿಯುತ್ತವೆ ಎಂದು ಹೇಳಲಿಕ್ಕೆ ಬರುವದಿಲ್ಲ. ಈ ಅಭಿಪ್ರಾಯವನ್ನು ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ.

೭. ನಾವು ಸಣ್ಣವರಿದ್ದಾಗ ನಮ್ಮಲ್ಲಿ ಸೇರಿದ ಕೆಲವು ವರ್ತನಗಳು ಮತ್ತು ಮನೋವೃತ್ತಿಗಳು ದೊಡ್ಡವರಾದಾಗ್ಯೂ ನಮ್ಮನ್ನು ಬಿಡುವದಿಲ್ಲ. ಈ ಮಾತನ್ನು ಉದಾಹರಣೆ ಕೊಟ್ಟು ಸಮರ್ಥಿಸಿರಿ.

## ಅಧ್ಯಾಯ ೪

# ಮಗುವಿನ ಬೆಳವಣಿಗೆ :

## II ಬೆಳವಣಿಗೆಯ ಮಟ್ಟಗಳು

### ಬೆಳವಣಿಗೆಯ ಮುಖಗಳು

ಮಗುವಿನ ಬೆಳವಣಿಗೆಯು ಕೇವಲ ಅವನ ಶರೀರಕ್ಕೆ ಸಂಬಂಧಪಟ್ಟ ವಿಷಯವಲ್ಲ. ಶರೀರವು ಬೆಳವಣಿಗೆಯನ್ನು ಹೊಂದುತ್ತ ನಡೆದ ಹಾಗೆ ಮಗುವಿನ ಬುದ್ಧಿಯ ಬೆಳವಣಿಗೆಯೂ, ಅವನ ಉದ್ವೇಗಗಳ ಬೆಳವಣಿಗೆಯೂ ಮತ್ತು ವರ್ತನದ ಬೆಳವಣಿಗೆಯೂ ಅದರ ಜೊತೆಗೆ ಸಾಗುತ್ತಿರುತ್ತವೆ. ಬೆಳವಣಿಗೆಯ ಈ ನಾಲ್ಕೂ ಮುಖಗಳು **ಒಂದಕ್ಕೊಂದು ಸಂಬಂಧ ಪಟ್ಟಿರುತ್ತವೆ.** ಮಗುವು ಅಡ್ಡಾಡಲಿಕ್ಕೆ ಕಲಿಯುವದು ಮುಖ್ಯವಾಗಿ **ಶರೀರದ** ಚಟುವಟಿಕೆ. ಆದರೆ ಅವನ ಈ ಸಾಮರ್ಥ್ಯವು **ಬುದ್ಧಿಯ** ಬೆಳವಣಿಗೆಗೆ ಸಹಾಯಕವಾಗುತ್ತದೆ. ಏಕೆಂದರೆ ಅವನು ಅತ್ತಲಿತ್ತ ಅಲೆದಾಡಿ ತನ್ನ ಆವರಣದ ಸಂಶೋಧನೆಯನ್ನು ನಡೆಸುತ್ತಾನೆ. ಮತ್ತು ಇತರರೊಡನೆ ಸಂಪರ್ಕವು ಹೆಚ್ಚಾಗುವದರಿಂದ ಅವನ **ಸಾಮಾಜಿಕ** ವರ್ತನವೂ ಮಾರ್ಪಡುತ್ತದೆ. ಅದರಂತೆ ಅವನ **ಉದ್ವೇಗದ** ಪ್ರಕಟನೆಯು ಅನೇಕ ಬಗೆಯಾಗಿ ಪರಿಣಾಮವನ್ನು ಹೊಂದುತ್ತದೆ. ಏಕೆಂದರೆ ಅವನ ಆನಂದದ ಅಥವಾ ಕಷ್ಟದ, ಸಿಟ್ಟಿನ ಅಥವಾ ಭಯದ ಪ್ರಸಂಗಗಳು ಹೆಚ್ಚುತ್ತವೆ. ಅದರಂತೆ ಹುಟ್ಟಿದ ಎರಡು ಮೂರು ತಿಂಗಳಲ್ಲಿ ಮತ್ತೊಬ್ಬರನ್ನು ನೋಡಿದಾಗ ಮಗುವು ನಗುತ್ತದೆ. ನಗುವದು ಒಂದು ವಿಶಿಷ್ಟ ಸನ್ನಿವೇಶದಲ್ಲಿ ವ್ಯಕ್ತವಾಗುವ ದೇಹದ

ಪ್ರತಿಕ್ರಿಯೆ. ಆದರೂ ಅದು ಸಾಮಾಜಿಕ ವರ್ತನವೂ ಅಹುದು. ಅಲ್ಲದೆ ಇದರಲ್ಲಿ ಮನುಷ್ಯರನ್ನು ಇತರ ವಸ್ತುಗಳಿಂದ ಬೇರೆಯಾಗಿ ಗುರುತಿಸುವ ಸಾಮರ್ಥ್ಯವು ಅಡಕವಾಗಿರುವದರಿಂದ ಇದು ಬುದ್ಧಿಯ ಬೆಳವಣಿಗೆಯನ್ನೂ ಸೂಚಿಸುತ್ತದೆ. ಬೆಳವಣಿಗೆಯ ಯಾವುದೇ ಭಾಗವನ್ನು ಪರಿಶೀಲಿಸಿದರೂ ಆದರಲ್ಲಿ ಇನ್ನುಳಿದ ಭಾಗಗಳ ಪರಿಮಾಣವು ಇದ್ದದ್ದು ಕಂಡುಬರುತ್ತದೆ. ಈ ಬಗೆಯ ಅನ್ಯೋನ್ಯ ಸಂಬಂಧವು ಜೀವನದ ಕೊನೆಯವರೆಗೂ ಮುಂದು ವರೆಯುತ್ತದೆ. ಆದರೆ ಕಾಲವು ಕಳೆದಹಾಗೆ, ಮಗುವಿನ ವಯಸ್ಸು ಹೆಚ್ಚಿದ ಹಾಗೆ ಮೊದಲು ನಿಕಟ ಸಂಬಂಧವಿದ್ದ ವರ್ತನವು ಬರಬರುತ್ತ ಒಂದು ವಿಶಿಷ್ಟ ರೂಪವನ್ನು ತಾಳಿ ಒಂದು ಚಟ ಅಥವಾ ಕೌಶಲ್ಯವಾಗಿ ಪರಿಣಮಿಸುತ್ತದೆ. ಆಗ ಇತರ ಭಾಗಗಳ ಸಂಬಂಧವು ಅಷ್ಟೊಂದು ವ್ಯಕ್ತವಾಗಿ ತೋರುವದಿಲ್ಲ.

ಬೆಳವಣಿಗೆಯ ಬೇರೆ ಬೇರೆ ಮುಖಗಳು ಕ್ರಮೇಣ ಸಾಗುತ್ತಿದ್ದರೂ ಅವು ಎಲ್ಲವೂ ಸಮನಾಗಿ ಸಾಗುತ್ತವೆಂದು ತಿಳಿಯಬಾರದು. ವೇಗದಲ್ಲಿಯೂ ಪ್ರಮಾಣದಲ್ಲಿಯೂ ಒಂದು ಮುಂದೆ ನಡೆದಿರಬಹುದು, ಮತ್ತೊಂದು ಹಿಂದೆ ಉಳಿದಿರಬಹುದು. ಇದು ವಿಶೇಷವಾಗಿ ವೈಯಕ್ತಿಕ ಭೇದದಲ್ಲಿ ಕಂಡುಬರುತ್ತದೆ. ಅದೇ ವಯಸ್ಸಿನ ಇಬ್ಬರು ಹುಡುಗರಲ್ಲಿ ಒಬ್ಬನು ಶಾರೀರಿಕ ಚಟುವಟಿಕೆಗಳಲ್ಲಿ ಅಂದರೆ ಆಟಪಾಟಗಳಲ್ಲಿ ಮುಂದೆ ಇರಬಹುದು ಮತ್ತೊಬ್ಬರು ಬೌದ್ಧಿಕ ಚಟುವಟಿಕೆ ಅಂದರೆ ಶಾಲೆಯ ಅಭ್ಯಾಸದಲ್ಲಿ ಮುಂದೆ ಇರಬಹುದು. ಶರೀರವು ಗಟ್ಟಿಮುಟ್ಟಿಯಾಗಿದ್ದರೆ ಬುದ್ಧಿಯೂ ಚುರುಕಾಗಿರುತ್ತದೆಂದೂ, ಸಾಮಾಜಿಕ ವರ್ತನವೂ ಒಳ್ಳೆಯದಾಗಿರುತ್ತದೆಂದೂ ಊಹಿಸಬಾರದು. ಎಲ್ಲ ಮಕ್ಕಳು ಒಂದೇ ಸಮನಾಗಿ ಬೆಳೆಯುವದಿಲ್ಲ.

ಮಗುವು ಬೆಳೆಯುತ್ತದೆ. ಇದು ನಿಜ. ಆದರೆ ಈ ಬೆಳವಣಿಗೆಯ ಕಾರಣಗಳು ಯಾವವು ? ಬೆಳವಣಿಗೆಯಲ್ಲಿ ಮಾರ್ಪಾಟಗಳನ್ನು ತರುವ ಶಕ್ತಿಗಳು ಎರಡು—ಒಂದನೆಯದು, ಮಗುವು ಹುಟ್ಟಿದಾಗಿನಿಂದಲೇ ಅವನ ಒಡಲಲ್ಲಿ ಹುದುಗಿರುವ ಒಳಗಿನ ಪ್ರೇರಣೆ. ಇದಕ್ಕೆ ಚಿತ್ಕಳೆ, ಚೇತನ, ಜೀವನದರಭಸ, ಪ್ರವೃತ್ತಿ ಅಥವಾ ಪ್ರಚೋದನೆ ಎಂತಲೂ ಕರೆಯುತ್ತಾರೆ. ಎರಡನೆಯದು, ಮಗುವು ಹುಟ್ಟಿದಾಗಿನಿಂದಲೇ ಅವನನ್ನು ಸುತ್ತುಗಟ್ಟಿರುವ ಆವರಣ ಅಥವಾ

ಪೋಷಿಕೆ. ಇದಕ್ಕೆ ಪರಿಸ್ಥಿತಿ ಎಂತಲೂ ಎನ್ನುತ್ತಾರೆ. ಈ ಎರಡೂ ಶಕ್ತಿಗಳು—ಅಂತಃಪ್ರೇರಣೆ (ಮೂಲ ಪ್ರವೃತ್ತಿ) ಮತ್ತು ಬಾಹ್ಯಪ್ರೇರಣೆ (ಪರಿಸ್ಥಿತಿ)—ಮಗುವಿನ ಬೆಳವಣಿಗೆಯನ್ನು ಹೇಗೆ ಮಾರ್ಪಡಿಸುತ್ತವೆ ಎಂಬುದನ್ನು ಮನೋವಿಜ್ಞಾನವು ಅಭ್ಯಾಸಿಸುತ್ತದೆ. ಇವುಗಳ ಲಕ್ಷಣಗಳನ್ನು ಮತ್ತು ಅನ್ಯೋನ್ಯ ಸಂಬಂಧಗಳನ್ನು ಕುರಿತು ವಿಶೇಷ ವಿವರಗಳನ್ನು ನಾವು ಮುಂದಿನ ಅಧ್ಯಾಯಗಳಲ್ಲಿ ಓದುವೆವು.

## ಬೆಳವಣಿಗೆಯ ಮಟ್ಟಗಳು

ಮಗುವಿನ ಬೆಳವಣಿಗೆಯಲ್ಲಿ ಸಾಮಾನ್ಯವಾಗಿ ನಾಲ್ಕು ಮಟ್ಟಗಳನ್ನು ಮಾಡುವದುಂಟು. ಇವು ವಯಸ್ಸಿನ ದೃಷ್ಟಿಯಿಂದ ಮಾಡಿದ ಸ್ಥೂಲವಾದ ನಾಲ್ಕು ಸ್ಥಲಗಳು ಅಥವಾ ಅವಸ್ಥೆಗಳು. **ಬಾಲ್ಯ**: ಒಂದರಿಂದ ಐದು ವರುಷಗಳವರೆಗೆ. **ಕೌಮಾರ್ಯ**: ಆರರಿಂದ ಹನ್ನೆರಡು ವರುಷಗಳವರೆಗೆ. **ತಾರುಣ್ಯ**: ಹದಿಮೂರರಿಂದ ಹದಿನೆಂಟು ವರುಷಗಳವರೆಗೆ. **ಪ್ರೌಢಾವಸ್ಥೆ**: ಹದಿನೆಂಟರಿಂದ ಮುಂದೆ. ವಯಸ್ಸಿನ ಈ ಒಂದೊಂದು ಗುಂಪಿನಲ್ಲಿ ಕೆಲವೊಂದು ಲಕ್ಷಣಗಳು ಅಥವಾ ಬೇಡಿಕೆಗಳು ವಿಶೇಷ ಒಡೆದು ಕಾಣುತ್ತವೆ. ಆದರೆ ಇಂಥ ವೈಶಿಷ್ಟ್ಯಗಳು ಬೇರೆ ಬೇರೆ ವಯಸ್ಸಿನ ಗುಂಪಿನ ಹುಡುಗರಲ್ಲಿ ಕಂಡುಬರುವದಿಲ್ಲವೆಂದಲ್ಲ. ಎಷ್ಟೋ ಬಾರಿ, ಹನ್ನೊಂದು ವಯದ ಹುಡುಗರು ಆರು ವಯದ ಹುಡುಗರಂತೆ ವರ್ತಿಸಬಹುದು. ಅಲ್ಲದೆ, ಪ್ರತಿಯೊಬ್ಬ ಮಗುವಿನ ಬೆಳವಣಿಗೆಯು ಅವನದೇ ಆದ ಒಂದು ರೀತಿಯಲ್ಲಿ ನಡೆಯಬಹುದು. ಅವನಿಗಿಂತ ಬೇರೆ ವಯಸ್ಸಿನ ಗುಂಪಿನ ಲಕ್ಷಣಗಳು ಅವನಲ್ಲಿ ಕಾಣಬಹುದು. ಆದರೆ ಪ್ರತಿಯೊಂದು ಮಟ್ಟದ ಮಕ್ಕಳ ಸಾಮಾನ್ಯ ವೈಶಿಷ್ಟ್ಯಗಳನ್ನು ಇಲ್ಲಿ ಕೊಟ್ಟಿದೆ.

ಬಾಲ್ಯಾ ಮತ್ತು ತಾರುಣ್ಯಗಳಲ್ಲಿ ಒಂದು ಬಗೆಯ ಹೋಲಿಕೆ, ಅದರಂತೆ ಕೌಮಾರ್ಯ ಮತ್ತು ಪ್ರೌಢಾವಸ್ಥೆಗಳಲ್ಲಿ ಒಂದು ಬಗೆಯ ಹೋಲಿಕೆ ಇರುವದು ಕಂಡು ಬರುತ್ತದೆ. ತಾರುಣ್ಯವು ಬಾಲ್ಯದ ಪುನರಾವರ್ತನೆಯೆಂದು ಮತ್ತು ಪ್ರೌಢಾವಸ್ಥೆಯು ಕುಮಾರಾವಸ್ಥೆಯ ಪುನರಾವರ್ತನೆಯೆಂದು ಜೋನ್ಸನ ಅಭಿಪ್ರಾಯ. ಬಾಲ್ಯದಲ್ಲಿಯೂ ತಾರುಣ್ಯದಲ್ಲಿಯೂ ಬೆಳವಣಿಗೆಯು ಭರದಿಂದ ಸಾಗುತ್ತದೆ. ಈ ಅವಸ್ಥೆಗಳಲ್ಲಿ ಮಗುವು ತನ್ನ ಸುತ್ತಲಿನ ಸನ್ನಿವೇಶಗಳಿಗೆ ಹೊಂದಿಕೊಳ್ಳಲಿಕ್ಕೆ

ಸಾಹಸಪಡುತ್ತಾನೆ. ಬಾಲಕನಾಗಿದ್ದಾಗ ಅಥವಾ ತರುಣನಾಗಿದ್ದಾಗ ಹೊಯದಾಡುತ್ತಿದ್ದ ಮನಸ್ಸು ಕುಮಾರನಾಗಿದ್ದಾಗ ಅಥವಾ ಪ್ರೌಢನಾಗಿದ್ದಾಗ ಒಂದು ಸಮಾಧಾನವೃತ್ತಿಯನ್ನು ತಾಳುತ್ತದೆ. ಆಗ ಚಿತ್ತ ಚಂಚಲತೆ ಅಡಗುತ್ತದೆ. ಕುಮಾರಾವಸ್ಥೆ ಮತ್ತು ಪ್ರೌಢಾವಸ್ಥೆಗಳು ಸೃಷ್ಟಿಯಿಂದ ವಿಧಿಸಲ್ಪಟ್ಟ ದೃಢೀಕರಣದ ಅವಧಿಗಳೆಂದು ತೋರುತ್ತದೆ. ಈ ಅವಸ್ಥೆಗಳಲ್ಲಿ ಇದ್ದಾಗ ಮನಸ್ಸಿಗೆ ಒಂದು ಸ್ಥಿರತೆಯು ಪ್ರಾಪ್ತವಾಗುತ್ತದೆ.

ಹಿಂದಿನ ಅಧ್ಯಾಯದಲ್ಲಿ ವಿವರಿಸಿದ ಬೆಳವಣಿಗೆಯ ಮುಖ್ಯ ಲಕ್ಷಣಗಳು ಸಾಮಾನ್ಯವಾಗಿ ಎಲ್ಲ ಮಕ್ಕಳಲ್ಲಿ ಕಂಡುಬರುತ್ತವೆ. ಆದರೆ ಅವು ವ್ಯಕ್ತವಾಗುವ ರೀತಿಯಲ್ಲಿ, ಪ್ರಮಾಣದಲ್ಲಿ ಮತ್ತು ವಯಸ್ಸಿನಲ್ಲಿ ವೈಯಕ್ತಿಕ ವ್ಯತ್ಯಾಸವು ಉಂಟೆಂಬುದನ್ನು ಮರೆಯಲಾಗದು. ಇನ್ನು ಬೆಳವಣಿಗೆಯ ಮುಖಗಳಲ್ಲಿ ಮತ್ತು ಮಟ್ಟಗಳಲ್ಲಿ ಒಂದಕ್ಕೊಂದು ಸಂಬಂಧವು ಹೇಗೆ ಉಂಟೆಂಬುದನ್ನು ಮೇಲೆ ತೋರಿಸಿದೆ. ಮಗುವು ದೊಡ್ಡವನು ಆದ ಹಾಗೆ ಬೆಳವಣಿಗೆಯ ನಾಲ್ಕು ಮಟ್ಟಗಳನ್ನು ದಾಟುತ್ತ ಹೋಗುವನು. ಒಂದೊಂದು ಮಟ್ಟದಲ್ಲಿ ಅಥವಾ ಸ್ಥಲದಲ್ಲಿ ಇದ್ದಾಗ ಅವನ ದೇಹ, ಬುದ್ಧಿ, ಉದ್ವೇಗ ಮತ್ತು ವರ್ತನಕ್ಕೆ ಸಂಬಂಧಿಸಿದ ಸಾಮಾನ್ಯ ಲಕ್ಷಣಗಳು ಯಾವವು ಎಂಬುದನ್ನು ಕುರಿತು ಈಗ ಸ್ವಲ್ಪ ವಿಚಾರಿಸುವ.

## ಬಾಲ್ಯ–ಒಂದರಿಂದ ಐದು ವರುಷ

### ( i ) ದೇಹದ ಬೆಳವಣಿಗೆ

ಬಾಲ್ಯದಲ್ಲಿ ಮತ್ತು ತಾರುಣ್ಯದಲ್ಲಿ ಮಗುವಿನ ದೇಹದ ಬೆಳವಣಿಗೆಯು ಭರದಿಂದ ಸಾಗುತ್ತದೆ. ಆಗ ಅವನ ಎತ್ತರ, ತೂಕ ಮತ್ತು ಅವಯವಗಳು ಬೆಳೆಯುತ್ತವೆ. ಸ್ನಾಯುಗಳು ಬಲಿತ ಹಾಗೆ ಹುಟ್ಟಿದ ಕೂಸು ಕ್ರಮೇಣ ತನ್ನ ಅವಯವಗಳನ್ನು ಅತ್ತಿತ್ತ ಚಲಿಸಲಿಕ್ಕೆ ಶಕ್ತಿಯನ್ನು ಸಂಪಾದಿಸುತ್ತದೆ. ಮೊದಲು ತಲೆ ಎತ್ತಿ ಹಿಡಿಯಲಿಕ್ಕೆ, ಆ ಮೇಲೆ ಕೂತುಕೊಳ್ಳಲಿಕ್ಕೆ, ಆ ಮೇಲೆ

ಅಂಬೆಗಾಲು ಇಡಲಿಕ್ಕೆ ಕಡೆಗೆ ನಡೆಯಲಿಕ್ಕೆ ಮತ್ತು ಓಡಲಿಕ್ಕೆ ಕಲಿಯುತ್ತದೆ. ದೇಹದ ಬೆಳವಣಿಗೆಗೆ ಇಂಥ ಚಟುವಟಿಕೆಗಳು ಸಹಜ ಮತ್ತು ಅವಶ್ಯ.

**ಆಟ:—** ಮಗುವಿನ ಬಗೆಬಗೆಯ ಚಟುವಟಿಕೆಗಳು ಅವನ ತರತರದ ಆಟಗಳು. ಅವುಗಳಲ್ಲಿ ಅವನ ಬುದ್ಧಿ ಬೆಳವಣಿಗೆಯೂ, ವರ್ತನದ ಬೆಳವಣಿಗೆಯೂ ಕಂಡುಬರುತ್ತದೆ. ಬಾಲ್ಯದ ಅವಧಿಯಲ್ಲಿ ಮಗುವು ಒಂಟಿಗನಾಗಿ ಆಡುವುದು ಹೆಚ್ಚು. ಆಟದ ಗೊಂಬೆಗಳು ತನಗೊಬ್ಬನಿಗೇ ಬೇಕು. ಇತರ ಹುಡುಗರೊಡನೆ ಕೂಡಿ ಆಡಲು ಬಯಸುವದಿಲ್ಲ. ಕೃತಕ ನಂಬುಗೆಯ ಆಟಗಳಲ್ಲಿ ಅವನು ಅನೇಕ ಬಾರಿ ತೊಡಗುತ್ತಾನೆ. ಕೋಲು ಕುದುರೆಯ ಆಟ, ಗಾಡಿ ಹೊಡೆಯುವವನ ಆಟ, ಗೌಳಿಗನ ಆಟ ಮೊದಲಾದವು ಕೇವಲ ದೊಡ್ಡವರ ಕೃತಿಗಳ ಅನುಕರಣಗಳಲ್ಲ. ಅವು ಮಗುವಿನ ಭಾವವಿಮೋಚನೆಯ ಸಾಧನಗಳು. ಯಾಕಂದರೆ ಬಾಲಕನ ಆತ್ಮಪ್ರತಿಷ್ಠೆ ಎಂಬ ಸಹಜ ಪ್ರವೃತ್ತಿಗೆ (Innate Tendency) ದೊಡ್ಡವರ ಒಡನಾಟದಲ್ಲಿ ಅನೇಕ ಬಾರಿ ಪ್ರತಿಕೂಲ ಉಂಟಾಗುತ್ತದೆ. ಇಂಥ ನಿರಾಶೆಯ ಪ್ರಸಂಗಗಳನ್ನು ಎದುರಿಸಲಿಕ್ಕೆ ಅಥವಾ ಹಾನಿಯನ್ನು ತುಂಬಿಕೊಳ್ಳಲಿಕ್ಕೆ ಮಗುವು ನಟನೆಯ ಆಟಗಳನ್ನು ಹೂಡಿ ಸಮಾಧಾನ ಪಡುತ್ತಾನೆ. ಇದು ಉಚಿತವಾದುದೇ. ಆಟಗಳಿಂದ ದೇಹದ ಬೆಳವಣಿಗೆಯ ಜೊತೆಗೆ ಭಾವವಿಮೋಚನೆಯೂ ಸಾಧಿಸುತ್ತದೆ.

### ( ii ) ಬುದ್ಧಿಯ ಬೆಳವಣಿಗೆ

ಬಾಲ್ಯಾವಸ್ಥೆಯಲ್ಲಿ ದೇಹದ, ಬುದ್ಧಿಯ ಮತ್ತು ವರ್ತನದ ಬೆಳವಣಿಗೆಗಳನ್ನು ಬಿಡಿಬಿಡಿಸಿ ಹೇಳಲು ಬರುವಂತಿಲ್ಲ. ಆಗ ಮಗುವಿನ ಬೇರೆ ಬೇರೆ ಬೆಳವಣಿಗೆಗೆ ಅವನ ದೇಹದ ಬೆಳವಣಿಗೆಯೇ ಮೂಲ ಆಧಾರ. ಇಂದ್ರಿಯಗಳ ಮುಖಾಂತರ ಮತ್ತು ಸಂಚಲನಗಳ ಮುಖಾಂತರ ಅವನ ಅನುಭವಗಳು ಹೆಚ್ಚುತ್ತವೆ. ಅನುಭವವು ಹೆಚ್ಚಿದ ಹಾಗೆ ಅವನ ಬುದ್ಧಿಯು ವಿಕಾಸ ಹೊಂದುತ್ತದೆ, ವರ್ತನವು ಮಾರ್ಪಡುತ್ತದೆ.

**ಬಾಲ ಭಾಷೆ:—** ಎಲ್ಲ ಪ್ರಾಣಿಗಳಲ್ಲಿ ಮನುಷ್ಯನು ಮಾತ್ರ ಭಾಷೆ ಎಂಬ ಸಾಧನೆಯನ್ನು ಹುಟ್ಟಿಸಿ ಬೆಳಸಿದ್ದಾನೆ. ತಂದೆತಾಯಿಗಳು, ನೆರೆಹೊರೆಯವರು ಆಡುವ ಭಾಷೆಯನ್ನು ಮಗುವು ಅನುಕರಣದಿಂದ ಕಲಿಯುತ್ತಾನೆ.

ಬಾಲಭಾಷೆಯು ಅಶುದ್ಧವಾಗಿದ್ದರೂ ಮಾತಾಡುವ ಶಕ್ತಿಯು ಬುದ್ಧಿಸಾಮರ್ಥ್ಯದ ಲಕ್ಷಣವು. ಮಗುವು ಹೊಸ ಶಬ್ದಗಳನ್ನು ಅನ್ನಲು ಕಲಿತಾಗ ತಂದೆ ತಾಯಿಗಳಿಗೆ ಹಿಗ್ಗು. ಮೊದಲು ತೊದಲು ನುಡಿಗಳನ್ನು ಆಡುತ್ತಿದ್ದವನು ಕ್ರಮೇಣ ಸ್ಪಷ್ಟ ಮಾತಾಡಲು ಕಲಿಯುತ್ತಾನೆ. ಶಬ್ದಗಳು, ಮಾತುಗಳು ಹೆಚ್ಚುತ್ತ ಹೋಗುವದು ಬುದ್ಧಿಬೆಳವಣಿಗೆಯ ಕುರುಹು. ಮಗುವು ಮಾತಾಡಲಿಕ್ಕೆ ಕಲಿಯುವದು ವಿದ್ಯಾಭ್ಯಾಸದ ಮೊದಲನೇ ಮೆಟ್ಟು. ಓದು–ಬರೆಹ ಕಲಿಯುವದು ಎರಡನೇ ಮೆಟ್ಟು. ಮನೆಯಲ್ಲಿ ತಂದೆತಾಯಿಗಳು ಕಲಿತವರು ಇದ್ದರೆ ಅಥವಾ ಅಕ್ಕ, ಅಣ್ಣ ಮೊದಲಾದ ದೊಡ್ಡ ಹುಡುಗರು ಸಾಲಿಗೆ ಹೋಗುವವರು ಇದ್ದರೆ ಮೂರು ನಾಲ್ಕು ವರುಷದ ಚಿಕ್ಕಮಕ್ಕಳು ಕೂಡ ಓದು–ಬರೆಹದಲ್ಲಿ ಆಸಕ್ತಿಯನ್ನು ತೋರಿಸುತ್ತಾರೆ. ಹಾಳಿಯನ್ನೋ ಪುಸ್ತಕವನ್ನೋ ಹಿಡಿದುಕೊಂಡು ಓದುವದನ್ನು ನಟಿಸುತ್ತಾರೆ; ಖಡು ಹಿಡಿದುಕೊಂಡು ಪಾಟಿಯ ಮೇಲೆಯೋ ಗೋಡೆಯ ಮೇಲೆಯೋ ಗೀಜುತ್ತಾರೆ. ಅರ್ಥವು ತಿಳಿಯದಿದ್ದರೂ ಅಂಕಿಯನ್ನು ತಿರುವುಮುರುವು ಎಣಿಸುತ್ತಾರೆ. ಮಕ್ಕಳ ಸಾಲೆಗಳಲ್ಲಿ ಶಿಕ್ಷಣವನ್ನು ಪ್ರಾರಂಭಿಸಲಿಕ್ಕೆ ಕಾಲವು ಹದವಾಗಿರುವದೆಂದು ಬುದ್ಧಿಯ ಈ ಚಟುವಟಿಕೆಗಳು ಸೂಚಿಸುತ್ತವೆ.

**ಕಲ್ಪನಾವಿಲಾಸ:**— ಕವಿಯಂತೆ ಬಾಲಕನು ಕೂಡ ಕಲ್ಪನಾವಿಲಾಸಿ. ಅವನು ಆಡುವ ಕೃತಕ ನಂಬಿಗೆಯ ಆಟಗಳಲ್ಲಿ, ಕೇಳಿ ಆನಂದಪಡುವ ಕಟ್ಟು ಕತೆಗಳಲ್ಲಿ ಅವನ ಈ ಮನೋವೃತ್ತಿಯು ಕಂಡುಬರುತ್ತದೆ. ಸಾಲೆಯಲ್ಲಿ ಮಗುವು ಚಂಡಿತನದಿಂದ ವರ್ತಿಸುತ್ತಿದ್ದರೆ ಮನೆಯಲ್ಲಿ ಅವನ ತಂದೆತಾಯಿಗಳು ಅಥವಾ ಪಾಲಕರು ಅವನನ್ನು ವಾತ್ಸಲ್ಯದಿಂದ ಕಾಣರೆಂದು ನಾವು ಸಹಜವಾಗಿ ಊಹಿಸಬಹುದು. ಕತೆಯಲ್ಲಿ ವಿವೇಕಕ್ಕೆ ಹೊರತಾದ ಸೋಜಿಗದ ಅಥವಾ ಸಾಹಸದ ಸಂಗತಿಗಳು ಇದ್ದರೂ ಮಗುವು ಅವುಗಳನ್ನು ನಂಬುತ್ತಾನೆ. 'ರಾವಣನಿಗೆ ಹತ್ತು ತಲೆಗಳು ಇದ್ದವು,' 'ಹನುಮಂತನು ತನ್ನ ಬಾಲದ ಸಹಾಯದಿಂದ ಲಂಕೆಯನ್ನು ಸುಟ್ಟನು' ಎಂಬುದನ್ನು ಪುಸ್ತಕದಲ್ಲಿ ಓದಿ ವಿಚಾರಿಸದೆ ನಂಬಿಬಿಡುತ್ತಾನೆ. ಈ ಸಂಗತಿಗಳು ತರ್ಕಕ್ಕೆ ಅಥವಾ ವಿವೇಕಕ್ಕೆ ಸಮ್ಮತವಾಗಿರುವವೋ ಇಲ್ಲವೋ ಎಂಬುದರ ಬಗೆಗೆ ಅವನು ಸಂದೇಹ ಪಡುವದಿಲ್ಲ.

## (iii) ಉದ್ವೇಗಗಳ ಬೆಳವಣಿಗೆ

ವರ್ತನದ ಬೆಳವಣಿಗೆಗೆ ಉದ್ವೇಗಗಳೇ ಆಧಾರ. ಮಗುವು ತನ್ನ ಉದ್ವೇಗಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಲು ಇನ್ನೂ ಕಲಿತಿರುವದಿಲ್ಲ. ಗಟ್ಟಿಯಾಗಿ ಅಳುವದನ್ನು, ಚೀರಾಡುವದನ್ನು, ಗದ್ದಲ ಮಾಡುವದನ್ನು ಅವನು ಇನ್ನೂ ಬಿಟ್ಟಿರುವದಿಲ್ಲ.

**ದೇಹದ ಸುಖ-ದುಃಖ:—** ಹಸಿವು, ನೀರಡಿಕೆ, ದೇಹಕ್ಕೆ ಆಗುವ ನೋವು, ಆನಂದ ಇವು ಮಾತ್ರ ಮಗುವನ್ನು ಪ್ರೇರಿಸುತ್ತವೆ. ತನ್ನ ದೇಹಕ್ಕೆ ಯಾವುದು ಹಿತ, ಯಾವುದು ಅಹಿತ ಎಂಬುದನ್ನು ಮಗುವು ಸ್ವಾಭಾವಿಕ ವಾಗಿ ಬೇಗ ತಿಳಿದುಕೊಳ್ಳುತ್ತಾನೆ. ಮಗುವಿನಲ್ಲಿ ನೀತಿಯ ವಿಚಾರಗಳು ಇನ್ನೂ ಒಡಮೂಡಿರುವದಿಲ್ಲ. ನಾಚಿಕೆ, ಆತ್ಮಸಂಯಮನ, ಆತ್ಮಗೌರವ ಮೊದಲಾದವುಗಳನ್ನು ಅವನು ಅರಿಯನು. ಕಾರಣ ಮುಖ್ಯವಾಗಿ ದೇಹದ ಸುಖ-ದುಃಖಗಳೇ ಅವನ ವರ್ತನವನ್ನು ನಿಯಂತ್ರಿಸುತ್ತವೆ. ಬರಬರುತ್ತ ಈ ಸುಖ-ದುಃಖದ ಸ್ಥಾನವನ್ನು ಸಮಾಜದ ಸ್ತುತಿ ನಿಂದೆಗಳು ವಹಿಸುತ್ತವೆ. ಆಗ ಮಗುವಿನಲ್ಲಿ ನೀತಿಯ ಕಲ್ಪನೆಗಳು ಅಂಕುರಿಸುವವು.

**ಸ್ವದೇಹ ಕಾಮ:—** ಕಾಮಪ್ರೇರಣೆಯು ಯೌವನದಲ್ಲಿ ಪರಿಪಕ್ವತೆ ಯನ್ನು ಹೊಂದುತ್ತಿದ್ದರೂ ಅದರ ಪೂರ್ವ ಚಿಹ್ನಗಳು ಬಾಲ್ಯದಲ್ಲಿಯೇ ತೋರುತ್ತವೆಂದು ಫ್ರಾಯಿಡ್ ಎಂಬ ಪ್ರಸಿದ್ಧ ಮನೋವಿಶ್ಲೇಷಣಜ್ಞನು ಪ್ರತಿಪಾದಿಸುತ್ತಾನೆ. ಆದರೆ 'ಕಾಮ' ಈ ಶಬ್ದವನ್ನು ಅತಿ ವಿಶಾಲವಾದ ಅರ್ಥದಲ್ಲಿ, ಅಂದರೆ ತ್ವಚೇಂದ್ರಿಯಕ್ಕೆ ಸಂಬಂಧಿಸಿದ ಅನುಭವ ಎಂಬ ಅರ್ಥದಲ್ಲಿ, ಉಪಯೋಗಿಸಲಾಗಿದೆ. ಶರೀರಕ್ಕೆ ಆಗುವ ಸುಖ-ದುಃಖದ ಕಲ್ಪನೆಯಿಂದ ಮಗುವಿನಲ್ಲಿ ಸ್ವಾಂಗಪ್ರೇಮವು ಹುಟ್ಟುವದು. ಮೊಲೆ ಉಣಿಸುವದು, ತಿನಿಸುವದು, ಮುದ್ದಾಡುವದು ಇವು ಮಗುವಿನಲ್ಲಿ ಆಲ್ಹಾದವನ್ನು ಉಂಟು ಮಾಡುತ್ತವೆ. ತನ್ನ ದೇಹದ ಬಗೆಗೆ ಮಗುವಿನಲ್ಲಿ ಸ್ವಂತ ಪ್ರೇಮವೂ ಹುಟ್ಟುತ್ತದೆ. ಇದಕ್ಕೆ 'ನಾರ್ಸಿಸಿಜಂ' ಎಂದು ಅನ್ನುತ್ತಾರೆ. ಈ ಪ್ರೇಮವು ತಂದೆತಾಯಿಗಳ ಮೇಲೆಯೂ ಕೂಡ್ರುತ್ತದೆ. ಏಕೆಂದರೆ ಮಗುವಿನ ಲಾಲನೆ ಪಾಲನೆಗಳನ್ನು ತಂದೆತಾಯಿಗಳೇ ಮಾಡುತ್ತಾರೆ. ಒಮ್ಮೊಮ್ಮೆ ಬಾಲಕನು

ತಂದೆಯನ್ನೂ ಬಾಲಿಕೆಯು ತಾಯಿಯನ್ನೂ ದ್ವೇಷಿಸುವುದು ಕಂಡುಬರುತ್ತದೆ. ಇದಕ್ಕೆ ಅವರವರ ಕಠೋರ ವರ್ತನವೇ ಕಾರಣವಾಗಿರುತ್ತದೆ. ಅನುರಾಗದ ಅತಿರೇಕದಿಂದ ಮಗುವಿಗೆ ಕೆಡಕು ಆಗುವ ಸಂಭವವೇ ಹೆಚ್ಚು. ನನ್ ಮತ್ತು ಬರ್ಟ್ರ್ಯಾಂಡ ರಸೆಲ್ ಅವರು ಹೇಳುವಂತೆ ಬಾಲ್ಯದಲ್ಲಿಯೇ ಮಗುವಿಗೆ ಸ್ವಾವಲಂಬನವನ್ನು ಕಲಿಸಬೇಕು. ಏಕಂದರೆ ಮುಂದೆ ಅವನು ಬೆಳೆದು ದೊಡ್ಡವನಾದ ಮೇಲೆ ನಿರ್ದಾಕ್ಷಿಣ್ಯವಾದ ಜಗತ್ತಿನಲ್ಲಿ ಸ್ವಾವಲಂಬನದಿಂದ ಬದುಕಬೇಕಾಗುವದು. ಅಲ್ಲದೆ ಸ್ವಪ್ರಯತ್ನದಿಂದ ಮಾಡಿದ ಕೃತಿಯಲ್ಲಿ ಮಗುವಿಗೆ ಅತ್ಯಂತ ಆನಂದವೆನಿಸುತ್ತದೆ. ಸಣ್ಣಪುಟ್ಟ ತಪ್ಪಿಗಾಗಿ ಮಕ್ಕಳನ್ನು ಬೆದರಿಸಬಾರದು, ದಂಡಿಸಬಾರದು. ಬೆದರಿಕೆ, ದಂಡನೆಗಳು ಅವರನ್ನು ಯೋಗ್ಯ ಹಾದಿಗೆ ಹಚ್ಚಿಯೇ ಬಿಡುವವೆಂದು ತಿಳಿಯುವದು ತಪ್ಪು.

## (iv) ವರ್ತನದ ಬೆಳವಣಿಗೆ

ಮಗುವು ಬಾಲ್ಯಾವಸ್ಥೆಯಲ್ಲಿ ಇದ್ದಾಗ ಅವನ ಬೆಳವಣಿಗೆಯ ಬೇರೆ ಬೇರೆ ಮುಖಗಳನ್ನು ಸ್ಪಷ್ಟವಾಗಿ ಬಿಡಿಸಿ ಹೇಳಲು ಬರುವಂತಿಲ್ಲ. ಆಗ ದೇಹದ ಬೆಳವಣಿಗೆಯ ಮೇಲೆ ಬುದ್ಧಿಯ ಬೆಳವಣಿಗೆಯೂ ಬುದ್ಧಿಯ ಬೆಳವಣಿಗೆಯ ಮೇಲೆ ವರ್ತನದ ಬೆಳವಣಿಗೆಯೂ ಹೆಚ್ಚಾಗಿ ಅವಲಂಬಿಸಿವೆ. ಅಲ್ಲದೆ ತಂದೆತಾಯಿಗಳ ಸಾಮಾಜಿಕ ಮತ್ತು ಆರ್ಥಿಕ ಮಟ್ಟವೂ ಮಕ್ಕಳ ವರ್ತನದ ಮೇಲೆ ಬೇಗ ಮಾಸದ ಪರಿಣಾಮವನ್ನು ಉಂಟು ಮಾಡುತ್ತವೆ ಎಂಬುದು ಮನೋವಿಜ್ಞಾನದ ಸಿದ್ಧಾಂತ.

**ಪರಾವಲಂಬನ:** ತಾಯಿಯು ಮೊಲೆಯುಣಿಸಿ, ಎರೆದು, ಹಾಸಿ, ಹೊಚ್ಚಿ ಮಗುವನ್ನು ಜೋಪಾನ ಮಾಡುತ್ತಾಳೆ. ತಂದೆಯು ಅವನಿಗೆ ತಿಂಡಿ ತಿನಿಸು, ಅಂಗಿ ಅರಿವೆ, ಆಟದ ಸಾಮಾನುಗಳನ್ನು ತಂದು ಕೊಡುತ್ತಾನೆ. ಅಪಾಯಗಳಿಂದಲೂ ಭಯಗಳಿಂದಲೂ ತಂದೆ ತಾಯಿಗಳು ಮಗುವನ್ನು ಕಾಪಾಡುತ್ತಾರೆ. ಬೇಡಿದುದನ್ನು ಒದಗಿಸಿ ಕೊಡುತ್ತಾರೆ. ಕಾರಣ ಸ್ವಾಭಾವಿಕವಾಗಿ ಮಗುವು ತಂದೆ ತಾಯಿಗಳ ಮೇಲೆ ಕೈಯ್ಯೂರಿ ಕೂತಿರುತ್ತಾನೆ. ಆದರೆ ಪಾಲಕರ ಪ್ರೇಮವು ಅತಿರೇಕವಾದರೆ ಮಗುವಿನಲ್ಲಿ ಪರಾವಲಂಬನ

ವೃತ್ತಿಯು ಬೆಳೆಯುತ್ತದೆ. ಹಿರಿಯರು ಯಾವಾಗಲೂ ಅಚ್ಚುಚ್ಚಿ ಮಾಡುವುದರಿಂದ ಅದು ಮಗುವಿನ ಕೆಡಕಿಗೆ ಕಾರಣವಾಗುತ್ತದೆ.

**ವೈಯಕ್ತಿಕ ಹಾಗು ಸಾಮೂಹಿಕ ವರ್ತನಗಳು:—** ಬಾಲ್ಯದಲ್ಲಿ ವೈಯಕ್ತಿಕ ಹಾಗೂ ಸಾಮೂಹಿಕ ವರ್ತನಗಳು ಕೂಡಿಯೇ ಸಾಗುತ್ತವೆ. ದೊಡ್ಡವನಾದಾಗಲೂ ಈ ಎರಡೂ ನಡತೆಗಳು ಹೀಗೆಯೇ ಕೂಡಿರುವದು ಕಂಡುಬರುತ್ತದೆ. ಆದರೆ ಆಗ ಅವು ಒಂದು ನಿಶ್ಚಿತ ರೂಪವನ್ನು ತಾಳುತ್ತವೆ. ಬಾಲ್ಯದಲ್ಲಿದ್ದ ಚಂಚಲತೆ ಹೋಗಿ ಸ್ಥಿರತೆ ಉಂಟಾಗುತ್ತದೆ. ಹುಟ್ಟಿದ ಕೆಲವು ವಾರಗಳಲ್ಲಿಯೇ ಮಗುವಿನ ಸಾಮಾಜಿಕ ವರ್ತನವು ಪ್ರಾರಂಭವಾಗುತ್ತದೆ. ಮನೆಯವರೊಡನೆ ಅವನ ಸಂಪರ್ಕವು ಬೆಳೆಯುತ್ತದೆ. ಅವರೊಡನೆ ಹೇಗೆ ವ್ಯವಹರಿಸಬೇಕೆಂಬುದನ್ನು ಕ್ರಮೇಣ ಕಲಿಯುತ್ತಾನೆ. ವರುಷಗಳು ತುಂಬಿದ ಹಾಗೆ ಸರಿಕದ ಸಣ್ಣ ಹುಡುಗರೊಡನೆ ಸಂಪರ್ಕ ಬೆಳೆಯುತ್ತದೆ. ಇತ್ತ ಗುಂಪಿನ ವರ್ತನದಲ್ಲಿ ಸಾಂಘಿಕ ಚಟುವಟಿಕೆ, ಸಹಕಾರ, ಸಹಾನುಭೂತಿಗಳು, ಕಂಡುಬರುತ್ತವೆ. ಅತ್ತ ವ್ಯಕ್ತಿಗತ ವರ್ತನದಲ್ಲಿ ಸ್ವಾಭಿಮಾನ, ಸ್ವಾತಂತ್ರ್ಯತೆಯೂ ಕಂಡುಬರುತ್ತವೆ. ಚಿಕ್ಕಮಕ್ಕಳ ಆಟಗಳಲ್ಲಿ ವೈಯಕ್ತಿಕತೆ ಪ್ರಬಲವಾಗಿರುತ್ತದೆಂದು ಮೇಲೆ ಹೇಳಿದೆ. ಆಟಿಗೆಗಳಾಗಲಿ, ಇತರರ ಪ್ರೀತಿಯಾಗಲಿ ತನಗೊಬ್ಬನಿಗೇ ಬೇಕೆಂದು ಹಟ ಹಿಡಿಯುವದು ಹೆಚ್ಚು. ಮಗುವಿನ ಬೆಳವಣಿಗೆಯಲ್ಲಿ ವೈಯಕ್ತಿಕ ಹಾಗೂ ಸಾಮೂಹಿಕ ವರ್ತನಗಳೆರಡೂ ಕೂಡಿಯೇ ಇರುವದು ಸಹಜ ಮತ್ತು ಅನ್ಯೋನ್ಯ ಪೂರಕವಾಗಿರುತ್ತದೆ.

ಇವಲ್ಲದೆ ಮಗುವಿನಲ್ಲಿ ಇತರ ಬಗೆಯ ವರ್ತನಗಳೂ ಕಂಡುಬರುತ್ತವೆ. "ಇದು ಏನು?" "ಅದು ಏನು?" ಎಂದು ಪದಾರ್ಥಗಳ ಹೆಸರನ್ನು ಅವನು ಕೇಳುತ್ತಾನೆ. ಇದು ಕುತೂಹಲ ಪ್ರವೃತ್ತಿ. ಮೂರು ನಾಲ್ಕು ವರುಷದ ಹುಡುಗರಲ್ಲಿ ವಿರೋಧವೃತ್ತಿಯೂ ಕಂಡುಬರುತ್ತದೆ. ದೊಡ್ಡವರು ಅಂಗಿ ತೊಡಿಸಹೋದರೆ ನಾನೇ ತೊಟ್ಟುಕೊಳ್ಳುತ್ತೇನೆಂದು ಅನ್ನುತ್ತಾನೆ. ತುತ್ತು ಇಡಹೋದರೆ ನಾನೇ ಉಣ್ಣುತ್ತೇನೆಂದು ಅನ್ನುತ್ತಾನೆ. ದೊಡ್ಡವರ ಮಾತು ಒಮ್ಮೊಮ್ಮೆ ಕೇಳುತ್ತಾನೆ, ಒಮ್ಮೊಮ್ಮೆ ಕೇಳುವದಿಲ್ಲ. ಬಾಲ್ಯಾವಸ್ಥೆಯಲ್ಲಿ ಮಗುವಿನ ವರ್ತನಗಳು ಅದೇ ಕವಲೊಡೆದು ರೂಪಗೊಳ್ಳಲಿಕ್ಕೆ ಪ್ರಾರಂಭವಾಗಿರುತ್ತವೆ. ಅಸ್ಥಿರತೆ ಅವೆಲ್ಲವುಗಳ ಮುಖ್ಯ ಲಕ್ಷಣ.

## (v) ಶಿಕ್ಷಣದಲ್ಲಿಯ ಉಪಯೋಗ

ಅಮೇರಿಕಾ ಇಂಗ್ಲಂಡಗಳಲ್ಲಿ ಮೂರರಿಂದ ಆರು ವರುಷದ ಚಿಕ್ಕ ಮಕ್ಕಳ ಸಲುವಾಗಿ ವಿಶಿಷ್ಟ ಬಗೆಯ ಶಿಕ್ಷಣ ಯೋಜನೆಯನ್ನು ಮಾಡಿರುತ್ತಾರೆ. 'ಮಕ್ಕಳ ಮನೆ,' 'ಕಿಂಡರ ಗಾರ್ಟನ್,' 'ಮೊಂಟೇಸರಿ ಸಾಲೆ' ಮುಂತಾಗಿ ಶಿಕ್ಷಣ ಸಂಸ್ಥೆಗಳು ಇರುತ್ತವೆ. ಆದರೆ ಇಂಡಿಯಾದಲ್ಲಿ ಇಂಥ ಸಾಲೆಗಳು ಅಲ್ಲೊಂದು ಇಲ್ಲೊಂದು ಮಾತ್ರ ಅಪರೂಪಕ್ಕಾಗಿ ಸಿಗುತ್ತವೆ. ದೊಡ್ಡಪಟ್ಟಣಗಳಲ್ಲಿ ಕೆಲವು ಸಿರಿವಂತರ ಮಕ್ಕಳು ಮಾತ್ರ ಈ ಶಿಕ್ಷಣದ ಲಾಭವನ್ನು ಪಡೆಯುತ್ತಾರೆ. ನಮ್ಮ ಘಟನೆಯ ಪ್ರಕಾರ ಪ್ರಾಥಮಿಕ ಶಿಕ್ಷಣವನ್ನು ಎಲ್ಲ ಮಕ್ಕಳಿಗೆ ಉಚಿತವಾಗಿ ಮತ್ತು ಕಡ್ಡಾಯವಾಗಿ ಪೂರೈಸುವ ಧ್ಯೇಯವನ್ನು ಸರಕಾರವು ಇಟ್ಟುಕೊಂಡಿರುವದು. ಆದರೆ ಪೂರ್ವ-ಪ್ರಾಥಮಿಕ ಶಿಕ್ಷಣದ ಯೋಜನೆಯನ್ನೂ ಎಲ್ಲ ಕಡೆಯಲ್ಲಿ ಪ್ರಚಾರ ಮಾಡುವದು ಅವಶ್ಯ. ಇಂಡಿಯಾ ದೇಶವು ಬಲವಾದ ರಾಷ್ಟ್ರವಾಗಿ ಬೆಳೆಯಬೇಕಾದರೆ ಚಿಕ್ಕ ಮಕ್ಕಳ ಸರಿಯಾದ ಬೆಳವಣಿಗೆಯ ಬಗೆಗೆ ಮತ್ತು ಶಿಕ್ಷಣದ ಸಮಸ್ಯೆಗಳ ಬಗೆಗೆ ಹೆಚ್ಚು ಲಕ್ಷ್ಯ ಪೂರೈಸುವದು ಉಪಯುಕ್ತವೆನಿಸುವದು. ಬಡವರ ಮತ್ತು ಕೂಲಿಕಾರರ ಮಕ್ಕಳೂ ಕೂಡ ಯೋಗ್ಯ ಶಿಕ್ಷಣವನ್ನು ಬಾಲ್ಯದಿಂದಲೇ ಹೊಂದುವಂತೆ ಸಣ್ಣ ಮಕ್ಕಳ ಸಾಲೆಗಳನ್ನು ಪ್ರಾಥಮಿಕ ಸಾಲೆಗಳಿಗೆ ಜೋಡಿಸುವದು ರಾಷ್ಟ್ರದ ದೃಷ್ಟಿಯಿಂದ ಒಳ್ಳೆಯದು.

ಯಾವುದೇ ಮಟ್ಟಿನಲ್ಲಿ ಆಗಲಿ ಮಗುವಿನ ಶಿಕ್ಷಣ ಕ್ರಮವು ಅವನ ಬೆಳವಣಿಗೆಗೆ ಹೊಂದಿಕೆಯಾಗುವಂತೆ ಇರಬೇಕು. ಮಕ್ಕಳ ದೃಷ್ಟಿಯಿಂದ ವಿಚಾರಿಸಿದರೆ ಎಲ್ಲವೂ ಸರಿ ಹೋಗುವದು. ಪೂರ್ವ-ಪ್ರಾಥಮಿಕ ಸಾಲೆಯ ಅಭ್ಯಾಸ ಕ್ರಮವನ್ನು ಯೋಚಿಸುವಾಗ ನಾವು ಇಟ್ಟುಕೊಳ್ಳಬೇಕಾದ ಎರಡು ಮುಖ್ಯ ಸಂಗತಿಗಳೆಂದರೆ ದೇಹದ ಆರೋಗ್ಯ ಮತ್ತು ಸಾಮಾಜಿಕ ವರ್ತನೆ (Socialization). ಇಂಡಿಯಾದಲ್ಲಿ ಸುಮಾರು ನೂರಕ್ಕೆ ಎಪ್ಪತ್ತರಷ್ಟು ಜನ ಬಡತನದ ಬವಣೆಗೆ ತುತ್ತಾಗಿ ಬಳಲುತ್ತಿರುವದರಿಂದ ರಾಷ್ಟ್ರದ ಮುಂದಿನ ಪೀಳಿಗೆಯಾದ ಅವರ ಮಕ್ಕಳು ಸದೃಢ ಕಾಯದವರಾಗಿ ಬೆಳೆಯುವದು ಕಷ್ಟದ ಮಾತು. ಮಕ್ಕಳಿಗೆ ಸತ್ವವುಳ್ಳ ಆಹಾರವನ್ನು ಕೊಡುವದು ತಂದೆತಾಯಿಗಳ

ಮತ್ತು ರಾಷ್ಟ್ರದ ಮೊದಲನೇ ಹೊಣೆ. ನಮ್ಮಲ್ಲಿ ನೂರಕ್ಕೆ ಎಷ್ಟು ಮಡುಗರು ಪ್ರತಿನಿತ್ಯ ಹಾಲು, ಹಣ್ಣು, ಬೆಣ್ಣೆ, ಮೊಸರು, ಬಿಸಿಯಾದ ಕಣ್ಣಾಯ್ಯ, ಹಸನಾದ ಕಾಯಿಪಲ್ಲೆಗಳನ್ನು ಸೇವಿಸುತ್ತಾರೆ? ಮಕ್ಕಳ ಆರೋಗ್ಯವನ್ನು ಕಾಪಾಡುವದೂ ಅವರು ಸಶಕ್ತರಾಗಿ ಬೆಳೆಯುವಂತೆ ನೋಡಿಕೊಳ್ಳುವದೂ ಶಿಶುಶಿಕ್ಷಣದ ಮೊದಲನೇ ಕೆಲಸ. ಬೆಳವಣಿಗೆಗೆ ಆಹಾರವು ಎಷ್ಟು ಮಹತ್ವದ್ದೋ ಆಟವೂ ಅಷ್ಟೇ ಮಹತ್ವದ್ದು. ಕೈಕಾಲುಗಳನ್ನು ಚಲಿಸುವದರಲ್ಲಿ ಸ್ವಾತಂತ್ರ್ಯವು ಹೆಚ್ಚಿದ ಹಾಗೆಲ್ಲ ಮಕ್ಕಳಲ್ಲಿ ಕೃತಿ ಪ್ರೇಮವು ಉಂಟಾಗುವದು. ಅವರು ಸ್ವತಃ ಕೈಮುಟ್ಟಿ ಕೆಲಸ ಮಾಡಲಿಕ್ಕೆ ಹಾತೊರೆಯುವರು. ಅಂತೆಯೇ ಫ್ರೊಬೆಲ್ ಮತ್ತು ಮೊಂಟೇಸರಿ ಅವರು ತಾವು ಕಲ್ಪಿಸಿದ ಶಿಶುಶಿಕ್ಷಣ ಯೋಜನೆಯಲ್ಲಿ ಚಟುವಟಿಕೆಗೆ ಮೊದಲಿನ ಸ್ಥಾನವನ್ನು ಕೊಟ್ಟಿರುವರು. ಜಿಗಿಯುವದು, ಹತ್ತುವದು, ಇಳಿಯುವದು, ಜಾರುವದು, ಓಡುವದು, ಹಾರುವದು, ಹರಿಯುವದು, ಮುರಿಯುವದು ಮಕ್ಕಳಿಗೆ ಸೇರುತ್ತದೆ. ಇವುಗಳನ್ನು ಒಂದು ವ್ಯವಸ್ಥಿತ ರೀತಿಯಲ್ಲಿ ವ್ಯಕ್ತ ಮಾಡಲು ಅವಕಾಶಗಳನ್ನು ಒದಗಿಸಿ ಕೊಡತಕ್ಕದ್ದು. ಸುಮ್ಮನೆ ಕೂತುಕೊಳ್ಳಬೇಕೆಂದರೆ ಮಗುವಿಗೆ ಆಗದು. ಹಾಗೆ ಒತ್ತಾಯಪಡಿಸುವದು ಆರೋಗ್ಯದ ದೃಷ್ಟಿಯಿಂದಲೂ ಮತ್ತು ಮನೋವಿಜ್ಞಾನದ ದೃಷ್ಟಿಯಿಂದಲೂ ಅಹಿತವಾದುದು. ಬಣ್ಣ ಹಚ್ಚುವದು, ಚಿತ್ರ ತೆಗೆಯುವದು, ಅಂಟು ಹಚ್ಚುವದು, ಗೆರೆ ಹಾಕುವದು ಮಕ್ಕಳು ಕಲಿಯಲಿ. ಪ್ರಾಥಮಿಕ ಸಾಲೆಗಳಲ್ಲಿಯೂ ಇಂಥ ಚಟುವಟಿಕೆಗಳನ್ನು ಮುಂದುವರಿಸುವದು ಅವಶ್ಯ. ಮಕ್ಕಳಿಗೆ ಆಟವೆಂದರೆ ಕೆಲಸ, ಕೆಲಸವೆಂದರೆ ಆಟ. ಅವರ ಆಟಗಳು ಅನೇಕ ಬಾರೆ ಅವರ ಭಾವವಿಮೋಚನೆಯ ಸಾಧನಗಳಾಗಿರುತ್ತವೆ. ಗೌಳಿಗನಾಗಿ ಆಡುವದು ಕೇವಲ ಅನುಕರಣವಲ್ಲ. ಬಾಲಕನ ಆತ್ಮಪ್ರತಿಷ್ಠೆ ಎಂಬ ಹುಟ್ಟುಗುಣಕ್ಕೆ ವ್ಯವಹಾರದಲ್ಲಿ ಅನೇಕ ಬಾರೆ ಅಡ್ಡಿ ಆತಂಕಗಳು ಒದಗುತ್ತವೆ. ಅವಕ್ಕೆ ಪ್ರತೀಕಾರವಾಗಿ ಅವನು ನಟನೆಯ ಆಟಗಳಲ್ಲಿ ಸ್ವಪ್ರತಿಷ್ಠೆಯನ್ನು ಸಾಧಿಸಿ ತನ್ನೊಳಗೆ ಆನಂದವನ್ನು ಹೊಂದುತ್ತಾನೆ. ಒಮ್ಮೊಮ್ಮೆ ಅವನು ಪುಸ್ತಕದಲ್ಲಿ ಓದಿದ್ದನ್ನೂ, ಸಿನೇಮಾದಲ್ಲಿ ನೋಡಿದ್ದನ್ನೂ, ಕತೆಯಲ್ಲಿ ಹೇಳಿದ್ದನ್ನೂ ಅಥವಾ ರೇಡಿಯೋದಲ್ಲಿ ಕೇಳಿದ್ದನ್ನೂ ಅನುಕರಿಸುತ್ತಾನೆ. ಸಮಸ್ಯೆಗಳು ತನ್ನನ್ನು ಎದುರಿಸಿದಾಗ

ಮಗುವು ಈ ಬಗೆಯ ನಟನೆಗಳಲ್ಲಿ ಪರಿಹಾರವನ್ನು ಹುಡುಕುತ್ತಾನೆ. ಬಾಲ ಲೀಲೆಗಳಲ್ಲಿ ಆತ್ಮಪ್ರತಿಷ್ಠೆ ಇದ್ದಂತೆ ವಿಧೇಯತೆಯೂ ಇರುತ್ತದೆ. ಅಪರಿಚಿತ ಮನುಷ್ಯರನ್ನು ಅಥವಾ ವಸ್ತುಗಳನ್ನು ಕಂಡು ಅಂಜುವ ಬಾಲಕನು ಅವರು ಅಥವಾ ಅವು ಇಲ್ಲದ ವೇಳೆಯಲ್ಲಿ ಅವರಂತೆ ಅಥವಾ ಅವುಗಳಂತೆ ನಟಿಸಿ ಶೂರನಂತೆ ಆನಂದದಿಂದ ಆಟವಾಡುತ್ತಾನೆ. ಹೃದಯದಲ್ಲಿ ಹುದುಗಿದ್ದ ಬಯಕೆಗಳನ್ನು ಹೊರಹೊಮ್ಮಿಸಲಿಕ್ಕೆ ಅವನು ಇಂತಹ ಕಾಲ್ಪನಿಕ ಆಟಗಳನ್ನು ಹೂಡುತ್ತಾನೆ. ಜೀವನದಲ್ಲಿ ಕಠಿಣ ಪ್ರಸಂಗಗಳು ಒದಗಿದಾಗ ಇಂಥ ಪ್ರತಿಕ್ರಿಯೆಗಳು ಇಲ್ಲದಿದ್ದರೆ ಮಗುವಿಗೇ ಆಗಲಿ ದೊಡ್ಡವರಿಗೇ ಆಗಲಿ ಅವು ಸಹಿಸಲು ಅಸಾಧ್ಯವಾಗುವವು. ಚಿಕ್ಕ ಮಕ್ಕಳಿಗೆ ವಿದ್ಯಾಭ್ಯಾಸವನ್ನು ಮಾಡಿಸುವ ಶಿಕ್ಷಕನು ಇವರ ಮಹತ್ವವನ್ನು ಅರಿತವನಾಗಿರಬೇಕು. ಸಣ್ಣ ಮಕ್ಕಳು ಉತ್ತರ–ಕುಮಾರನ ಪಾತ್ರವನ್ನು ವಹಿಸುವದೇನೂ ಕೆಡಕಾದುದಲ್ಲ. ಅವರು ತಮ್ಮೊಳಗೆ ಬಚ್ಚಿಟ್ಟ ಭಾವಗಳನ್ನು ಹೊರಗೆಡುವಬೇಕಾದರೆ, ಅಂದರೆ ಅವರ ಬೆಳವಣಿಗೆಯು ಯೋಗ್ಯ ರೀತಿಯಲ್ಲಿ ಸಾಗಬೇಕಾದರೆ ಸಾಲೆಯಲ್ಲಿ ಕೃತಕ ನಂಬುಗೆಯ (Make-belief) ಆಟಗಳಿಗೂ, ನಟನೆಗಳಿಗೂ ಸಾಕಷ್ಟು ಅವಕಾಶವನ್ನು ಕೊಡಬೇಕು. ಮಕ್ಕಳಿಗೆ ಹಾಡುವದೂ ಕುಣಿಯುವದೂ ಬಹಳವಾಗಿ ಸೇರುತ್ತದೆ. ಇದಕ್ಕೆ "ತಾಳ–ಪ್ರೇಮ" (Routine Tendency) ಎನ್ನುತ್ತಾರೆ. ಆದುದರಿಂದ ಪ್ರಾಥಮಿಕ ಸಾಲೆಯಲ್ಲಿ ಚಿಕ್ಕಮಕ್ಕಳು ಚಿತ್ರಕಲೆ, ಕೈಕೆಲಸ, ತೋಟದ ಕೆಲಸ, ಕುಣಿತ, ಆಟ, ಹಾಡು ಮುಂತಾದ ಚಟುವಟಿಕೆಯಲ್ಲಿ ಹೆಚ್ಚು ವೇಳೆಯನ್ನು ಕಳೆಯಬೇಕು.

ಮಕ್ಕಳ ಬುದ್ಧಿಯ ಬೆಳವಣಿಗೆಗೆ ಮನೆಯಲ್ಲಿಯ ವಾತಾವರಣವು ಅನುಕೂಲವಿರದಿದ್ದರೂ ಸಾಲೆಯಲ್ಲಿಯಾದರೂ ಅನುಕೂಲವಾಗಿರಬೇಕು. ಕುತೂಹಲ ಪ್ರೇರಿತರಾಗಿ ಮಕ್ಕಳು ಪ್ರಶ್ನೆಗಳನ್ನು ಕೇಳುವದುಂಟು. ಆಗ ಅವರಿಗೆ ತಿಳಿಯುವ ರೀತಿಯಲ್ಲಿ ಉತ್ತರ ಕೊಡಬೇಕಲ್ಲದೆ ಗದ್ದರಿಸಿ ಅದಕ್ಕೆ ತಡೆ ಹಾಕಬಾರದು. ಬೇರೆ ಬೇರೆ ಸನ್ನಿವೇಶಗಳಲ್ಲಿ ಅವರನ್ನು ಇರಿಸಿ ಅವರ ಅನುಭವಗಳನ್ನು ಹೆಚ್ಚಿಸಬೇಕು. ಅನುಭವವು ಹೆಚ್ಚಿದ ಹಾಗೆ ಬುದ್ಧಿಯು ಚುರುಕಾಗುತ್ತದೆ.

ಕಿಡಿಗೇಡಿತನ, ಹಟಮಾರಿತನ ಇವು ಮಕ್ಕಳಿಗೆ ಸ್ವಾಭಾವಿಕವಾದವು. ದೊಡ್ಡವರು ಯಾವಾಗಲೂ ಗಂಟುಮೋರೆಯನ್ನು ಇಟ್ಟುಕೊಂಡು ಮಕ್ಕಳ ಕಡೆಗೆ ನೋಡಬಾರದು. ಅವರ ತಪ್ಪುತಡೆಗಳನ್ನು (ಉದಾ: ಸಾಮಾನು ಚೆಲ್ಲಿದರೆ, ಮುರಿದರೆ) ಕಂಡು ಯಾವಾಗಲೂ ಜಬರಿಸಬಾರದು. ಬೇರೆ ಬೇರೆ ಸ್ನಾಯುಗಳಲ್ಲಿ ಇನ್ನೂ ಜೋಡಣೆ ಆಗದ್ದರಿಂದ ಅವರು ಕೈತಪ್ಪಿ ಹಾಗೆ ಮಾಡುವುದುಂಟು. ಅವರು ಬೇಕೆಂತ ಹಾಗೆ ಮಾಡುವುದಿಲ್ಲ. ಮಗುವು ಉಣ್ಣುವಾಗ ನೀರು ಉರುಳಿಸುತ್ತಾನೆ, ಅನ್ನ ಚೆಲ್ಲುತ್ತಾನೆ. ಇದಕ್ಕಾಗಿ ಅವನನ್ನು ಜಬರಿಸುವುದು ತಪ್ಪು. ಅವನ ಬೇರೆ ಬೇರೆ ಅವಯವಗಳ ಸ್ನಾಯುಗಳಲ್ಲಿ ಹೊಂದಿಕೆ ಇನ್ನೂ ಆಗದ್ದರಿಂದ ಅವನು ಹೀಗೆ ಮಾಡುತ್ತಾನೆ. ಆದರೂ ದೊಡ್ಡವರಾದವರು ಮಕ್ಕಳ ಇಂಥ ಕೆಲಸಗಳನ್ನು ಮೆಚ್ಚುವದಿಲ್ಲ ಎಂಬುದು ಅವರು ತಿಳಿದು ತಮ್ಮ ವರ್ತನಗಳನ್ನು ಸರಿಪಡಿಸಲು ಪ್ರಯತ್ನಿಸಲಿ. ಮಗುವಿನಲ್ಲಿ ನೀತಿಯನ್ನು ಅಪೇಕ್ಷಿಸಕೂಡದು. ಅವನ ವರ್ತನಗಳಲ್ಲಿ ನೀತಿ ಅನೀತಿಗಳ ಪ್ರಶ್ನೆ ಇರುವದಿಲ್ಲ. ಮನೆಯಲ್ಲಿ ತಂದೆತಾಯಿಗಳೊಡನೆ, ಅಕ್ಕ ತಂಗಿಯರೊಡನೆ, ಅಣ್ಣ ತಮ್ಮಂದಿರೊಡನೆ ಮಗುವು ಯಾವ ಸಂಬಂಧವನ್ನು ಇಟ್ಟುಕೊಂಡಿರುತ್ತಾನೆಯೋ ಅದನ್ನೇ ಅವನು ಓಣಿಯಲ್ಲಿಯೂ ಶಾಲೆಯಲ್ಲಿಯೂ ವ್ಯಕ್ತ ಮಾಡಬಹುದು. ಶಾಲೆಯಲ್ಲಿ ಒಬ್ಬ ಮಗುವು ಚಂಡಿತನದಿಂದ ವರ್ತಿಸುತ್ತಿದ್ದರೆ ಮನೆಯಲ್ಲಿ ಅವನ ಪಾಲಕರು ಅವನನ್ನು ಅಕ್ಕರತೆಯಿಂದ ಕಾಣರೆಂದು ನಾವು ಸಹಜವಾಗಿ ಊಹಿಸಬಹುದು. ಮಗುವಿನ ಮನೆಯಲ್ಲಿಯ ವರ್ತನವು ಅವನ ಸಾಮಾಜಿಕ ವರ್ತನದ ಮೇಲೆಯೂ ಪರಿಣಾಮವನ್ನು ಉಂಟು ಮಾಡುವದೆಂದು ಮನೋವಿಶ್ಲೇಷಣಜ್ಞರ ಸಿದ್ಧಾಂತ. ಶಿಕ್ಷಕ–ಶಿಕ್ಷಿಕೆಯರು ತಂದೆತಾಯಂದಿರ ಪಡಿಯಾಳುಗಳು. ಮನೆಯಲ್ಲಿ ನಿರ್ದಯೆಗೆ ಗುರಿಯಾದ ಬಾಲಕನು ತಂದೆಯ ಮೇಲಿನ ಸಿಟ್ಟನ್ನು ಶಿಕ್ಷಕನ ಮೇಲೆ ಹಾಯಿಸಬಹುದು ಮತ್ತು ಶಿಕ್ಷಕನ ಸದುದ್ದೇಶಗಳಿಗೆ ಅಡ್ಡ ಬರಬಹುದು. ಅದರಂತೆ ಬಾಲಿಕೆಯು ತಾಯಿಯ ಮೇಲಿನ ಸಿಟ್ಟನ್ನು ಶಿಕ್ಷಿಕೆಯ ಮೇಲೆ ತೋರಿಸಬಹುದು, ಶಿಕ್ಷಿಕೆಯ ಸದುದ್ದೇಶಗಳಿಗೂ ಅಡ್ಡ ಬರಬಹುದು. ಇಂಥ ಪ್ರಸಂಗಗಳಲ್ಲಿ ಶಿಕ್ಷಕರು ಮತ್ತು ಶಿಕ್ಷಿಕೆಯರು ಮಕ್ಕಳೊಡನೆ ಜಾಗರೂಕತೆಯಿಂದ ವ್ಯವಹರಿಸಬೇಕು.

ಮಗುವಿನ ವ್ಯಕ್ತಿತ್ವವು ಸರಿಯಾಗಿ ಬೆಳೆಯಬೇಕಾದರೆ ಮನೆಯಲ್ಲಿಯೇ ಆಗಲಿ, ಸಾಲಿಯಲ್ಲಿಯೇ ಆಗಲಿ ಪ್ರೇಮಮಯ ವಾತಾವರಣವು ಇರಬೇಕು. ಮಗುವು ಬಯಸುವದು ದೊಡ್ಡವರ ಮರುಕ, ಪ್ರೇಮ. ಅವನ ಕೇವಲ ತುತ್ತು ಗಳಿಂದ ಬೆಳೆಯುವದಿಲ್ಲ ಆದರೆ ಮುದ್ದುಗಳಿಂದ ಬೆಳೆಯುತ್ತಾನೆ. ಮಕ್ಕಳನ್ನು ಪ್ರೀತಿಸುವದು ತಂದೆತಾಯಿಗಳಿಗೆ ಸಹಜವಾದದ್ದು. ಬಡತನವಿದ್ದಲ್ಲಿ ಅಥವಾ ಹೆಚ್ಚು ಮಕ್ಕಳಾದಲ್ಲಿ ತಂದೆತಾಯಿಗಳು ಅಥವಾ ಪಾಲಕರು ಅವರನ್ನು ಅಲಕ್ಷಿಸಬಹುದು. ಆದರೆ ಇದು ಆಗಕೂಡದು ವೈಯಕ್ತಿಕವಾಗಿ ಪ್ರತಿಯೊಬ್ಬ ಮಗುವಿನ ಕ್ಷೇಮಸಮಾಚಾರವನ್ನು ತಕ್ಕೊಳ್ಳಬೇಕು. ಮಗುವಿನ ಸಣ್ಣ ಪುಟ್ಟ ತೊಂದರೆಗಳನ್ನೂ ನೋವುಗಳನ್ನೂ ದೊಡ್ಡದಾಗಿ ಕಾಣಬೇಕೆಂದಲ್ಲ. ಮಗುವು ಅತ್ತಕೂಡಲೆ ಪರಾಂಬರಿಕೆ ಮಾಡುವದು, ಬೇಡಿದುದನ್ನೆಲ್ಲ ತಂದು ಕೊಡುವದು ಪ್ರೀತಿಯಾಗಿ ತೋರಿದರೂ ಅದು ಮುಂದೆ ಅವನಿಗೆ ಅಹಿತವನ್ನು ಉಂಟು ಮಾಡುವ ಸಂಭವವುಂಟು. ಇದರಿಂದ ಅವನ ಪರಾವಲಂಬನ ವೃತ್ತಿಗೆ ಸೊಪ್ಪು ಹಾಕಿದಂತೆ ಆಗುವದು. ಆದರೆ ಅವನು ಕ್ರಮೇಣ ಸ್ವಾವಲಂಬನ ವನ್ನೂ, ಧೈರ್ಯವನ್ನೂ ಕಲಿಯಲಿ. ಮಗುವಿನ ಪ್ರಯತ್ನಗಳನ್ನು ನಾವು ಯಾವಾಗಲೂ ಪ್ರೋತ್ಸಾಹಿಸಬೇಕು. ತನ್ನ ಶಕ್ತಿಗಳನ್ನು ಉಪಯೋಗಿಸ ಬೇಕೆಂಬ ಸಹಜ ಹುಮ್ಮಸ ಅವನಲ್ಲಿ ಇರುತ್ತದೆ. ಇದನ್ನು ಅರಿತು ಮಕ್ಕಳ ತಪ್ಪು ತಡೆಗಳನ್ನು ಸಹಾನುಭೂತಿಯಿಂದ ನೋಡಬೇಕು.

## ಕೌಮಾರ್ಯ—ಆರರಿಂದ ಹನ್ನೆರಡು ವರುಷ

ಮಗುವಿಗೆ ಐದನೇ ವರುಷ ತುಂಬಿದ ಮೇಲೆ ಅವನು ತನ್ನ ಬೆಳವಣಿಗೆಯ ಎರಡನೇ ಮೆಟ್ಟದಲ್ಲಿ ಕಾಲಿಡುವನು. ಇದಕ್ಕೆ ಕುಮಾರಾವಸ್ಥೆ ಎನ್ನುವರು. ಈ ಅವಧಿಯು ಸಾಮಾನ್ಯವಾಗಿ ಆರರಿಂದ ಹನ್ನೆರಡನೇ ವರುಷದ ವರೆಗೆ ಇರುತ್ತದೆ. ವ್ಯವಹಾರದಲ್ಲಿ ಅವನಿಗೆ ಕುಮಾರ, ಹುಡುಗ ಎಂದು ಕರೆವು ದುಂಟು. ಬಾಲ್ಯದ ಎಲ್ಲ ಲಕ್ಷಣಗಳು ಸಂಪೂರ್ಣ ಇಲ್ಲವಾಗಿ ಕುಮಾರನಲ್ಲಿ ಅವನ ಮೊದಲಿನ ಅವಸ್ಥೆಗೆ ಏನೂ ಸಂಬಂಧವಿಲ್ಲದ ಹೊಸ ಲಕ್ಷಣಗಳು

ಒಡಮೂಡುವವೆಂದು ತಿಳಿಯಬಾರದು. ಹಿಂದಲಿದ್ದ ಮಗುವೇ ಅನುಭವ ಮತ್ತು ಪರಿಸ್ಥಿತಿ ಎಂಬ ಸಮಿಯುಕ್ತಿನಲ್ಲಿ ಬೆಳೆದು ಬರುವದರಿಂದ ಅವನ ವ್ಯಕ್ತಿತ್ವವು ವಿಶಿಷ್ಟ ರೂಪವನ್ನು ತಾಳುತ್ತದೆ. ಅವನಲ್ಲಿರುವ ಆಂತರಿಕ ಶಕ್ತಿಗಳು ವಿಶಿಷ್ಟ ರೂಪದಲ್ಲಿ ವ್ಯಕ್ತವಾಗುತ್ತವೆ. ಹುಟ್ಟಿದಂದಿನಿಂದ ಮೊದಲಿನ ಐದು ವರುಷಗಳಲ್ಲಿ ಕ್ರಮೇಣವಾಗಿ ಹಬ್ಬುವ ಜಗತ್ತಿನ ರೀತಿ ನೀತಿಗಳಿಗೆ ಹೊಂದಿಕೊಳ್ಳುವುದರಿಂದ ಕುಮಾರ ಅವಸ್ಥೆಯಲ್ಲಿ ಅವನಿಗೆ ಒಂದು ಬಗೆಯ ಸ್ಥಿರತೆಯು ಉಂಟಾಗಿರುತ್ತದೆ. ಅವನ ಬೆಳವಣಿಗೆಯು ಈ ಅವಧಿಯಲ್ಲಿ ಯಾವ ಯಾವ ಲಕ್ಷಣಗಳು ತೋರುತ್ತವೆ ಎಂಬುದನ್ನು ನೋಡುವ.

### (i) ದೇಹದ ಬೆಳವಣಿಗೆ

ಈ ಅವಧಿಯಲ್ಲಿ ನಿಲುವಿಕೆ, ಗಾತ್ರ ಮತ್ತು ತೂಕವು ಹೆಚ್ಚಾಗುತ್ತ ಹೋಗುವದು. ಅವಯವಗಳು ಪುಷ್ಟಿಯಾಗುತ್ತ ಹೋಗುವವು. ಪ್ರತಿ ವರುಷ ಎತ್ತರವು ಸುಮಾರು ಎರಡು ಇಂಚಿನಷ್ಟು, ತೂಕವು ಸುಮಾರು ನಾಲ್ಕು ಪೌಂಡಿನಷ್ಟು ಹೆಚ್ಚಾಗುತ್ತ ನಡೆಯುವದು. ಹುಡುಗರು ಮತ್ತು ಹುಡುಗಿಯರು ಬಹಳ ಚಟುವಟಿಕೆಯುಳ್ಳವರು ಆಗುವರು. ಸ್ನಾಯುಗಳು ಬಲಪಡುತ್ತವೆ. ಶಕ್ತಿ, ವೇಗ, ಚಪಲತೆ, ಮತ್ತು ನಿಶ್ಚಯತೆ ಹೆಚ್ಚುತ್ತವೆ. ಚಟುವಟಿಕೆ, ಸ್ಪರ್ಧೆ ಮತ್ತು ಕೌಶಲ್ಯಗಳು ಬೇಕಾಗುವ ಆಟಗಳಲ್ಲಿ ಅಭಿರುಚಿ ಹೆಚ್ಚಾಗುತ್ತದೆ. ಹುಡಿಗೆಯರಿಗಿಂತ ಹುಡುಗರು ಹೆಚ್ಚು ಕಸುವುಳ್ಳವರು ಆಗುತ್ತಾರೆ. ಆದರೆ ಹೆಣ್ಣು ಹುಡುಗೆಯರು ಗಂಡು ಹುಡುಗರಿಗಿಂತ ಬೇಗ ಮೈನೆರೆಯುತ್ತಾರೆ. ಆಗ ಅವರ ತೂಕ ಮತ್ತು ಎತ್ತರ ಹುಡುಗರಿಗಿಂತ ಹೆಚ್ಚಾಗುತ್ತದೆ. ಶರೀರದ ಪೋಷಣೆಗಾಗಿ ಕುಮಾರಾವಸ್ಥೆಯಲ್ಲಿಯೂ ಮಕ್ಕಳು ತಂದೆ–ತಾಯಿಗಳ ಮೇಲೆಯೇ ಅವಲಂಬಿಸಿರಬೇಕಾಗುತ್ತದೆ.

### (ii) ಬುದ್ಧಿಯ ಬೆಳವಣಿಗೆ

**ಹೊರನೋಟ**:— ಬಾಲಕನಲ್ಲಿ ತೋರುವ ಮನೋಸಾಮ್ರಾಜ್ಯವು ಕುಮಾರನಾದಾಗ ಮಾಯವಾಗುತ್ತದೆ. ಆಗ ಅವನು ಹಗಲುಗನಸುಗಳನ್ನು ಬಿಟ್ಟು ಮನೆಯ ಹೊರಗಿನ ಆಟನೋಟಗಳಲ್ಲಿ ಆಸಕ್ತನಾಗುತ್ತಾನೆ. ಅಥವಾ

ತರುಣರಂತೆ ಒಂದು ಮೂಲೆಯಲ್ಲಿ ಕೂತು ಅಥವಾ ಹಾಸಿಗೆ ಹಿಡಿದು ಮನದೊಳಗೆ ಏನೇನೋ ಗೇನಿಸುತ್ತ ದಿವಸ ಕಳೆಯುವದಿಲ್ಲ. ಆದರೆ ಮನಸೆಬಿಟ್ಟು ಆಲಿದಾಡುವುದರಲ್ಲಿ ಕಾಲ ಕಳೆಯುತ್ತಾನೆ. ಸೃಷ್ಟಿ ನಿರೀಕ್ಷಣೆಯಲ್ಲಿ ಮತ್ತು ಪ್ರಯೋಗಗಳಲ್ಲಿ ಅವನ ಅಭಿರುಚಿಯು ತೋರುತ್ತದೆ. ನನಗೆ ಪರಿಚಯವಿದ್ದ ಒಬ್ಬ ಹುಡುಗನು ತಾನು ಮಾಡಿದ ಕಾಗದದ ಡೋಣಿಯು ನೀರಿನ ಮೇಲೆ ಹೇಗೆ ತೇಲುತ್ತದೆ, ನೀರಿನಲ್ಲಿ ಏಕೆ ಮುಳುಗುತ್ತದೆ ಎಂಬುದನ್ನು ಪರೀಕ್ಷಿಸುತ್ತಿದ್ದನು. ಹೀಗೆ ವಸ್ತುಸ್ಥಿತಿಯನ್ನು ಅರಿಯಲು ಹುಡುಗರು ಪ್ರಯತ್ನಪಡುತ್ತಾರೆ. ದೊಡ್ಡವರನ್ನು ಪ್ರಶ್ನಿಸಿ ಅನೇಕ ವಿಷಯಗಳ ಜ್ಞಾನ ಮಾಡಿಕೊಳ್ಳುತ್ತಾರೆ. ಕೇವಲ ಕಾಲ್ಪನಿಕ ಮೋಜುಗಳಲ್ಲಿ ಅಭಿರುಚಿಯು ಕಡಿಮೆಯಾಗುತ್ತದೆ. ವ್ಯವಹಾರಿಕ ದೃಷ್ಟಿಯು ಬಲಗೊಳ್ಳುವುದರಿಂದ ಸಮಾಜದಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಅವರು ಕಲಿಯುತ್ತಾರೆ. 'ಈಗ ನಾನು ದೊಡ್ಡವನಾಗಿರುತ್ತೇನೆ, ಸಣ್ಣ ಕೂಸುಗಳಂತೆ ಅಳುವದು, ಹಟ ಮಾಡುವದು ತರವಲ್ಲ' ಎಂಬ ಭಾವವು ಹುಡುಗನಲ್ಲಿ ಒಡಮೂಡುತ್ತದೆ. ಗುರುಹಿರಿಯರು ತನ್ನ ಬಗ್ಗೆ ಯಾವ ಅಭಿಪ್ರಾಯ ತಾಳಬಹುದು ಎಂಬುದನ್ನು ಅವನು ವಿಚಾರಿಸುತ್ತಾನೆ.

**ವಿಚಾರಶಕ್ತಿ:**— ಹುಡುಗರಲ್ಲಿ ಹೊರನೋಟವು ಬೆಳೆಯುತ್ತಾ ಕುತೂಹಲವೂ ಹೆಚ್ಚಾಗುತ್ತದೆ. ಅನುಭವದ ಪರಿಣಾಮವಾಗಿ ಹೆಚ್ಚು ಹೆಚ್ಚು ವಿಚಾರಗಳೂ ತಲೆಯಲ್ಲಿ ಸುಳಿಯಹತ್ತುತ್ತವೆ. ಹುಡುಗರು ತಾವು ಕಂಡ ಅಥವಾ ಅನುಭವಿಸಿದ ವಿಷಯಗಳ ಬಗ್ಗೆ ಹೆಚ್ಚು ಜ್ಞಾನ ಮಾಡಿಕೊಳ್ಳಲು ದೊಡ್ಡವರನ್ನು ಪ್ರಶ್ನಿಸುತ್ತಾರೆ. ಬಾಲ್ಯಾವಸ್ಥೆಯ ಮಕ್ಕಳು 'ಇದು ಏನು?' ಎಂದು ವಸ್ತುಗಳ ಹೆಸರು ಕೇಳಿ ತೃಪ್ತಿಪಡುತ್ತಾರೆ. ಆದರೆ ಕುಮಾರಾವಸ್ಥೆಯ ಹುಡುಗರು ಒಂದು ಹೆಜ್ಜೆ ಮುಂದೆ ಹೋಗಿ 'ಹೇಗೆ?' 'ಏಕೆ?' ಎಂದು ಮತ್ತೆ ಪ್ರಶ್ನೆ ಮಾಡುತ್ತಾರೆ. ಒಂದು ವಸ್ತುವಿನ ಅಥವಾ ಸಂಗತಿಯ ಕಾರಣ—ಪರಿಣಾಮಗಳನ್ನು ತಿಳಿದುಕೊಳ್ಳಬೇಕೆನ್ನುತ್ತಾರೆ. ಇದು ಬುದ್ಧಿ ಬೆಳವಣಿಗೆಯ ಲಕ್ಷಣ. ವಿಜ್ಞಾನದ ಬೆಳವಣಿಗೆಯು ಈ ತರ್ಕಬುದ್ಧಿಯನ್ನೇ ಅವಲಂಬಿಸಿರುತ್ತದೆ. ಹುಡುಗರಲ್ಲಿ ಕ್ರಮೇಣ ಭಾಷಾ ಸಾಮರ್ಥ್ಯವೂ, ತರ್ಕಶಕ್ತಿಯೂ ಬೆಳೆಯುತ್ತವೆ. ನೀರಲ್ಲಿ ಕಲ್ಲು ಏಕೆ ಮುಳುಗುತ್ತದೆ, ಕಟ್ಟಿಗೆ ಏಕೆ ತೇಲುತ್ತದೆ ಎಂಬುದನ್ನು ಅವರು ತರ್ಕಿಸಬಲ್ಲರು. ತಾವು ನೋಡದ ಸಂಗತಿಯ

ಬಗ್ಗೆ ನಿರ್ಣಯವನ್ನು ಕೊಡಬಲ್ಲರು. ಸಮಸ್ಯೆಗಳನ್ನೂ ಒಗಟುಗಳನ್ನೂ ಬಿಡಿಸಲು ಕಲಿಯುವರು. ಈ ವಯಸ್ಸಿನ ಹುಡುಗರು ಸಿನೇಮಾ ನೋಡಲಿಕ್ಕೆ ರೇಡಿಯೋ ಕೇಳಲಿಕ್ಕೆ ಹೆಚ್ಚು ತವಕಪಡುತ್ತಾರೆ. ಸಾಹಸದ ಮತ್ತು ಅದ್ಭುತ ಕೃತಿಗಳನ್ನು ಮೆಚ್ಚುತ್ತಾರೆ. ವಿಶೇಷವಾಗಿ ಸಣ್ಣ ಹುಡುಗರಿಗೆ ಆಧುನಾ ಪ್ರಾಣಿಗಳಿಗೆ ಸಂಬಂಧಪಟ್ಟ ಕತೆಗಳನ್ನು ಕೇಳುವುದರಲ್ಲಿ, ಹೇಳುವುದರಲ್ಲಿ, ಓದುವುದರಲ್ಲಿ ಆನಂದಪಡುತ್ತಾರೆ. ಹುಡುಗರಿಗೆ ಐದು ತುಂಬಿ ಆರರಲ್ಲಿ ಬಿದ್ದಾಗ ಓದು, ಬರಹ ಮತ್ತು ಎಣಿಕೆ ಕಲಿಯಲಿಕ್ಕೆ ತಕ್ಕವರಾಗುತ್ತಾರೆ. ಅದುದರಿಂದ ಪ್ರಾಥಮಿಕ ಶಿಕ್ಷಣವನ್ನು ಮಗುವಿನ ಆರನೆಯ ವರುಷಕ್ಕೆ ಪ್ರಾರಂಭಮಾಡಬೇಕೆಂದು ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಹುಡುಗರು ಸ್ಥೂಲ ವಸ್ತುಗಳ ಮುಖಾಂತರವೇ ವಿಚಾರಿಸುವುದರಿಂದ ಶಿಕ್ಷಕನು ಪಾಠ ಕಲಿಸುವಾಗ ಭಾವವಾಚಕ ಶಬ್ದಗಳನ್ನು ಆದಷ್ಟು ಕಡಿಮೆ ಉಪಯೋಗಿಸ ಬೇಕು. ಚಿತ್ರಗಳನ್ನು ಮತ್ತು ನಿದರ್ಶನಗಳನ್ನು ಹೇರಳವಾಗಿ ಉಪಯೋಗಿಸ ಬೇಕು. ಹುಡುಗರಲ್ಲಿ ಕುತೂಹಲವು ಪ್ರಬಲವಾಗಿರುವಂತೆ ಸಂಗ್ರಹ ಪ್ರೇರ ಣೆಯೂ ಮತ್ತು ರಚನಾ ಪ್ರೇರಣೆಯೂ ಪ್ರಬಲವಾಗಿರುತ್ತವೆ. ಅವರಲ್ಲಿ ಸ್ಮರಣಶಕ್ತಿಯೂ ತುಸು ಮಟ್ಟಿಗೆ ಬೆಳೆದಿರುತ್ತದೆ. ಸಣ್ಣ ಬಾಲಕರಿಗಿಂತ ಅವರು ವಿಷಯದ ಕಡೆಗೆ ಹೆಚ್ಚು ವೇಳೆ ಅವಧಾನವನ್ನು ಪೂರೈಸಬಲ್ಲರು.

### (iii) ಉದ್ವೇಗಗಳ ಬೆಳವಣಿಗೆ

ಬೆಳೆದು ದೊಡ್ಡವರಾದ ಹುಡುಗರ ಉದ್ವೇಗಗಳು ಒಂದು ಹದಕ್ಕೆ ಬಂದಿರುತ್ತವೆ. ಅವರು ಅವುಗಳನ್ನು ಸೌಮ್ಯ ಮತ್ತು ಸೂಕ್ಷ್ಮ ರೀತಿಯಲ್ಲಿ ವ್ಯಕ್ತ ಮಾಡಲು ಸಮರ್ಥರಾಗಿರುತ್ತಾರೆ. ಚಿಕ್ಕಮಕ್ಕಳಂತೆ ಗಟ್ಟಿಯಾಗಿ ಅಳುವದು, ಚೀರಾಡುವದು, ಹೆದರಿ ಓಡಿ ಹೋಗುವದು ಕಡಿಮೆಯಾಗುತ್ತವೆ. ಅವರ ಮುಳಿಸಿನಲ್ಲಿ ಮೊದಲಿನಂತೆ ಆರ್ಭಟ ಇರುವದಿಲ್ಲ. ಹುಡುಗರ ಭಯ ಗಳು ಮತ್ತು ತಿರಸ್ಕಾರಗಳು ಏನಿರುತ್ತವೆ ಎಂಬುದನ್ನು ತಿಳಿಯುವದು ಒಮ್ಮೊಮ್ಮೆ ಕಠಿಣವಾಗುತ್ತದೆ. ಹುಡುಗರು ಹಿರಿಯರ ಕಕ್ಕುಲತೆ, ಆಸ್ಥೆ ಗಳನ್ನು ಅಪೇಕ್ಷಿಸುತ್ತಾರೆ. ಹಿರಿಯರ ಹೊಗಳಿಕೆಯನ್ನು ಪಡೆಯಲಿಕ್ಕೆ ಏನಾದರೊಂದನ್ನು ಮಾಡಿ ತೋರಿಸಬೇಕೆನ್ನುತ್ತಾರೆ. ಹುಡುಗರು ಹುಡುಗಿಯರ

ಗಿಂತ ಹೆಚ್ಚು ಜಗಳಗಂಟರು ಮತ್ತು ದಿಟ್ಟರು ಇರುತ್ತಾರೆ. ಹುಡುಗರು ತಮ್ಮ ಟೋಳಿಗಳಿಗೆ ಅಥವಾ ಗುಂಪುಗಳಿಗೆ ಹೆಚ್ಚು ವಿಧೇಯರಾಗಿ ನಡೆದುಕೊಳ್ಳುತ್ತಾರೆ. ನಾಯಕನ ಬಗ್ಗೆ ಅಭಿಮಾನ ಅಥವಾ ವೀರೋಪಾಸನೆ ಕಂಡು ಬರುತ್ತದೆ. ತಮಗಿಂತ ಸಣ್ಣವರೊಡನೆ ಮತ್ತು ದೊಡ್ಡವರೊಡನೆ ವರ್ತಿಸುವಾಗ ಒಮ್ಮೊಮ್ಮೆ ವಿಧೇಯತೆ, ಸಹಾನುಭೂತಿ ಮತ್ತು ಒಮ್ಮೊಮ್ಮೆ ವಿರೋಧ ವೃತ್ತಿ, ದಬ್ಬಾಳಿಕೆ ಕಂಡುಬರುತ್ತವೆ.

## (iv) ವರ್ತನದ ಬೆಳವಣಿಗೆ

**ಸಂಘವೃತ್ತಿ:—** ಸಣ್ಣವನಿದ್ದಾಗ ಮಗುವಿನಲ್ಲಿ ವೈಯಕ್ತಿಕವಾದ ಸ್ವಾರ್ಥದೃಷ್ಟಿ ಬಲವಾಗಿರುತ್ತದೆ. ಆದರೆ ಬೆಳೆದು ಹುಡುಗನಾದಾಗ ಸಂಘ ವೃತ್ತಿಯು ಬಲವಾಗುತ್ತದೆ. ಈ ಕ್ರಮವು ನಡೆದಾಗ ಅವನ ಮನಸ್ಸು ಅನೇಕ ಬಾರೆ ವ್ಯಕ್ತಿಹಿತ ಮತ್ತು ಸಂಘಹಿತಗಳ ನಡುವೆ ಹೊಯ್ದಾಡುತ್ತದೆ. ಹುಡುಗನು ಓರಿಗೆಯ ಗೆಳೆಯರ ಕೂಡ ಇರಲು ಬಯಸುತ್ತಾನೆ. ಗೆಳೆಯರ ಗುಂಪನ್ನು ಸೇರಿ ಆಡುವದೆಂದರೆ ಅವನಿಗೆ ಬಹಳ ಹಿಗ್ಗು. ಮನೆಯಲ್ಲಿಯೇ ಇರಲು ಒಪ್ಪುವದಿಲ್ಲ. ತನಗೆ ಹೊಂದಿಕೆ ಆಗುವ ಗೆಳೆಯರನ್ನು ಅರಸುತ್ತಾನೆ, ಆರಿಸುತ್ತಾನೆ. ಕೆಲವರ ಚಾಳಿ ಹಿಡಿಯುತ್ತಾನೆ, ಕೆಲವರ ಚಾಳಿ ಬಿಡುತ್ತಾನೆ. ಕುಮಾರಾವಸ್ಥೆಯಲ್ಲಿ ಹುಡುಗರ ಗೆಳೆಯರ ಗುಂಪುಗಳು ಹುಡುಗೆಯರ ಗೆಳತಿಯರ ಗುಂಪುಗಳು ಬೇರೆಯಾಗಿರುತ್ತವೆ. ಹುಡುಗರು ತಮ್ಮ ತಮ್ಮ ಸಂಘದ ಅಭಿಮಾನ ತಾಳುತ್ತಾರೆ. ಅದಕ್ಕೆ ವಿಧೇಯರಾಗಿ ನಡೆದುಕೊಳ್ಳುತ್ತಾರೆ. ಗುಂಪಿನ ಉಡಿಗೆ, ತೊಡಿಗೆ, ಭಾಷೆ, ವಿಚಾರಸರಣಿ ಮತ್ತು ಚಟುವಟಿಕೆಗಳು ಒಂದೇ ಬಗೆಯಾಗಿ ಇದ್ದು ಅದರ ಸದಸ್ಯರು ತಮ್ಮ ಆಚಾರ ವಿಚಾರಗಳನ್ನು ಗುಲಾಮರಂತೆ ಅನುಸರಿಸುತ್ತಾರೆ. ಹುಡುಗನ ನೀತಿ–ನಡಾವಳಿಗಳು ಅವನ ಮೇಳದ ಅಥವಾ ಸಂಘದ ಹೊಗಳಿಕೆ–ತೆಗಳಿಕೆಗಳಿಂದ ಬದಲಾವಣೆಯನ್ನು ಹೊಂದುತ್ತವೆ. ತನ್ನ ಸಂಘದ ನಿಯಮಗಳಿಗೆ ಅಡ್ಡ ಬಂದವರನ್ನು ಅವನು ಪ್ರತಿಭಟಿಸುತ್ತಾನೆ. ತನ್ನ ಸಂಘದ ನಾಯಕನ ಮಾತನ್ನು ಕೇಳುವಂತೆ ಬೇರೆ ಯಾರ ಮಾತನ್ನೂ ಕೇಳುವದಿಲ್ಲ. ತಾಯಿಯ ಮಮತೆಯು ತನಗೇ ಮುಡುಪಾಗಿರಬೇಕೆಂದು ಬಾಲ್ಯದಲ್ಲಿ ಬಯಸುತ್ತಿದ್ದವನು ಈಗ ಅವಳನ್ನು

ವಂಚಿಸಲು ಹಿಂದೆ ಮುಂದೆ ನೋಡುವದಿಲ್ಲ. ಮನೆಯವರ ಕಕ್ಕುಲತೆಯನ್ನು ಲಕ್ಷಿಸುವದಿಲ್ಲ. ತನ್ನ ಸಂಘದ ನಾಯಕನ ಮಾತನ್ನು ಕೇಳಿ ಶಿಕ್ಷಕರನ್ನೂ ಹಿರಿಯರನ್ನೂ ಧಿಕ್ಕರಿಸುತ್ತಾನೆ. ಪಾಲಕರನ್ನು ಮೋಸಗೊಳಿಸಿ ದುಡ್ಡು ಎತ್ತಲಿಕ್ಕೂ, ಅವರಿಗೆ ಸುಳ್ಳು ಹೇಳಿ ಸಾಲೆ ತಪ್ಪಿಸಲಿಕ್ಕೂ ಅವನು ಹಿಂಜರಿಯುವದಿಲ್ಲ. ಇಂಥ ಪ್ರಸಂಗದಲ್ಲಿ ಗುರುಹಿರಿಯರು ಅವನ ವರ್ತನವನ್ನು ಸಹಾನುಭೂತಿಯಿಂದ ನೋಡಬೇಕು.

**ಸ್ವತಂತ್ರ ವೃತ್ತಿ:**— ಬಾಲ್ಯದಲ್ಲಿದ್ದ ಪರಾವಲಂಬನವು ಈಗ ಕ್ರಮೇಣ ಸ್ವತಂತ್ರ ವೃತ್ತಿಯಾಗಿ ಪರಿಣಮಿಸುತ್ತದೆ. ಸ್ವಾವಲಂಬನವು ಬೆಳೆಯತೊಡಗುತ್ತದೆ. ಹುಡುಗನು ತಾನೇ ಮೋರೆ ತೊಳೆದುಕೊಳ್ಳುತ್ತಾನೆ, ತಾನೇ ಜಳಕ ಮಾಡುತ್ತಾನೆ, ತಾನೇ ಊಟ ಮಾಡುತ್ತಾನೆ, ತಾನೇ ಸಾಲೆಗೆ ಹೋಗುತ್ತಾನೆ. ದೊಡ್ಡವರು ಅವನ ಮೇಲೆ ಹಾಕುವ ನಿರ್ಬಂಧಗಳನ್ನೂ, ನಿಯಂತ್ರಣಗಳನ್ನೂ ಅವನು ಸೇರುವದಿಲ್ಲ. ಅವರ ಕಣ್ಣು ತಪ್ಪಿಸಿ ಸ್ವತಂತ್ರವಾಗಿ ವರ್ತಿಸಬೇಕೆನ್ನುತ್ತಾನೆ. ಸಂಘಶಿಸ್ತೆಯು ಬಲವಾಗಿರುವದರಿಂದ ದೊಡ್ಡವರ ಆದೇಶಗಳನ್ನು ಅವನು ಲಕ್ಷಿಸುವದಿಲ್ಲ. ಯಾವುದು ಸರಿ ಯಾವುದು ತಪ್ಪು ಎಂಬುದರ ಬಗೆಗೆ ಸ್ವಂತ ಅಭಿಪ್ರಾಯವನ್ನು ವ್ಯಕ್ತ ಮಾಡಬಲ್ಲನು. ಹೀಗಿದ್ದರೂ ದೊಡ್ಡವರ ಮೆಚ್ಚುಗೆಯನ್ನೂ ಅಪೇಕ್ಷಿಸುತ್ತಾನೆ. ಮನೆಗೆ ಗೆಳೆಯರು ಬಂದಾಗ, ಬೀಗರು ಬಿಜ್ಜರು ಬಂದಾಗ ಅಥವಾ ಅತಿಥಿಗಳು ಬಂದಾಗ ಸಮಯಕ್ಕೆ ತಕ್ಕಂತೆ ವರ್ತಿಸಬಲ್ಲನು. ಪರಿಸ್ಥಿತಿಗೆ ತಕ್ಕಂತೆ ವರ್ತಿಸುವದು ಕುಮಾರರ ಒಂದು ಮುಖ್ಯ ಲಕ್ಷಣ. ಹೀಗೆ ಹತ್ತು ಹನ್ನೊಂದು ವರುಷದ ಹುಡುಗರ ವರ್ತನಗಳು ದೊಡ್ಡವರ ವರ್ತನಗಳನ್ನು ಹೋಲುತ್ತವೆ.

## (v) ಶಿಕ್ಷಣದಲ್ಲಿಯ ಉಪಯೋಗ

ಕುಮಾರಾವಸ್ಥೆಯ ಅವಧಿಯು ಪ್ರಾಥಮಿಕ ಶಿಕ್ಷಣದ ಅವಧಿ. ಮನುಷ್ಯನ ಜೀವನಕ್ಕೆ ಅವಶ್ಯವಾದ ಮತ್ತು ಅತಿ ಕಡಿಮೆ ಎನಿಸಿದ ಸಾಮಾನ್ಯ ಶಿಕ್ಷಣವನ್ನು ಪ್ರಾಥಮಿಕ ಸಾಲೆಯಲ್ಲಿ ಕೊಡುವ ಏರ್ಪಾಟು ಮುಂದುವರಿದ ಎಲ್ಲ ರಾಷ್ಟ್ರಗಳಲ್ಲಿ ಉಂಟು ಈ ಸಾಮಾನ್ಯ ಶಿಕ್ಷಣವೆಂದರೆ ಓದು, ಬರಹ, ಲೆಕ್ಕ, ಸ್ವತಂತ್ರ ವಿಚಾರಶಕ್ತಿ, ನಾಗರಿಕ ನೀತಿ ಮತ್ತು ಕೆಲವು ಉಪಯುಕ್ತ ಮತ್ತು ಆನಂದ

ದಾಯಕ ಚಟುವಟಿಕೆಗಳ ಪರಿಚಯ. ಇದು ಎಲ್ಲ ಶಿಕ್ಷಣದ ತಳಹದಿ. ಈ ಶಿಕ್ಷಣವನ್ನು ಮಗುವಿನ ಬೆಳವಣಿಗೆಯ ವೈಶಿಷ್ಟ್ಯಗಳಿಗೆ ಅಳವಡಿಸಿ ಕೊಟ್ಟರೆ ಅದು ಒಳ್ಳೆಯ ಫಲವನ್ನು ನೀಡುವದು. ಈ ದೃಷ್ಟಿಯಿಂದ ಪ್ರಾಥಮಿಕ ಶಿಕ್ಷಣದ ಯೋಜನೆಯ ರೂಪರೇಷೆಗಳನ್ನು ಸ್ಥೂಲವಾಗಿ ಕೆಳಗೆ ಸೂಚಿಸಿದೆ.

ಮಗುವು ತನ್ನ ಆರನೇ ವಯಸ್ಸಿಗೆ ಪ್ರಾಥಮಿಕ ಸಾಲೆಗೆ ಹೋಗಲು ಪ್ರಾರಂಭಿಸುತ್ತಾನೆ. ಅವನ ಅವಯವಗಳು ಮತ್ತು ಸ್ನಾಯುಗಳು ತುಸು ಮಟ್ಟಿಗೆ ಬಲಿತಿದ್ದು ಇನ್ನೂ ಬೆಳೆಯುವದರಲ್ಲಿಯೇ ಇರುತ್ತವೆ. ಹುಡುಗರಿಗೆ ಈ ಅವಧಿಯಲ್ಲಿ ದೊಡ್ಡ ಸ್ನಾಯುಗಳ ಚಟುವಟಿಕೆಗಳನ್ನು ಕೊಡಬೇಕು. ಓಡುವದು, ಜಿಗಿಯುವದು, ಏರುವದು, ಎತ್ತುವದು, ಹಾರುವದು, ಹತ್ತುವದು ಇದ್ದ ಆಟಗಳನ್ನೂ ಆಡಿಸಬೇಕು. ಗಿಡಮಂಗನ ಆಟ, ಆಸಿಕಿರ್, ಕುದುರೆ ಸವಾರ, ಕುಂಟಾಟ, ಮುಟ್ಟಾಟ, ಚಂಡಿನ ಆಟ ಮುಂತಾದ ಕಸರತ್ತಿನ ಆಟಗಳನ್ನು ಸಾಲೆಯ ಹುಡುಗರು ಆಡಲಿ. ಹುಡುಗರು ಒರಟು ಇರುವದರಿಂದ ಅವರಿಗೆ ಒರಟು ಆಟಗಳು ಸರಿ ಹೋಗುತ್ತವೆ. ಆದರೆ ಹೆಣ್ಣು ಹುಡುಗಿಯರು ಮೃದುವಾಗಿರುವುದರಿಂದ ಅವರ ಆಟಗಳು ಸ್ವಲ್ಪ ಸೌಮ್ಯತರವಿರಬೇಕಾಗುತ್ತದೆ. ಮುಟ್ಟಾಟ, ಕುಂಟ ಹಲಿಪೆ, ಕಣ್ಣು ಮುಚ್ಚಾಣಿಕೆ, ಜಿಮ್ನಾಸ್ಟ್ರಿ ಪಗಡಿ, ಕೋಲಾಟ, ಗರ್ಬಾ ನೃತ್ಯ ಮೊದಲಾದವು ಅವರಿಗೆ ಒಗ್ಗುತ್ತವೆ. ಶರೀರದ ಬೆಳವಣಿಗೆಯ ದೃಷ್ಟಿಯಿಂದ ಇಂಥ ಚಟುವಟಿಕೆಗಳನ್ನು ಕೊಡುವದು ಲೇಸು. ಇನ್ನು ವಿನೋದದ ದೃಷ್ಟಿಯಿಂದ ಮತ್ತು ಉಪಯುಕ್ತತೆಯ ದೃಷ್ಟಿಯಿಂದ ಕೆಲವು ಚಟುವಟಿಕೆಗಳನ್ನೂ, ಕೈಕೆಲಸಗಳನ್ನೂ ಪ್ರಾಥಮಿಕ ಸಾಲೆಯ ಹುಡುಗರಿಗೆ ಕಲಿಸಬೇಕಾಗುತ್ತದೆ. ಚಿತ್ರ ತೆಗೆಯುವದು, ಬಣ್ಣ ಹಚ್ಚುವದು, ಕತ್ತರಿಸುವದು, ಮಡಚುವದು, ಜೋಡಿಸುವದು, ರಟ್ಟಿನ ಸಾಮಾನು ಮಾಡುವದು, ಆರಲಿನ ಸಾಮಾನು ಮಾಡುವದು, ಕಸೂತಿ ತೆಗೆಯುವದು, ಅಡಿಗೆ ಮಾಡುವದು, ಹೊಲಿಯುವದು, ಹೆಣೆಯುವದು ಮುಂತಾದ ಕೆಲಸಗಳನ್ನು ಹುಡುಗರು ಮತ್ತು ಹುಡುಗಿಯರು ಕಲಿಯಲಿ. ಪ್ರಾಥಮಿಕ ಶಿಕ್ಷಣದಲ್ಲಿ ದುಡುಮೆಯ ಅಥವಾ ಲಾಭದ ದೃಷ್ಟಿಯೇ ಮುಖ್ಯವಾಗಿ ಇರಕೂಡದು. ಆದರೆ ಮಕ್ಕಳು ದೊಡ್ಡವರಾಗಿ ತಮಗೆ ಸರಿ

ಕಂಡ ಉದ್ಯೋಗಗಳನ್ನು ಸಾಗಿಸುತ್ತಿರುವಾಗ ಬಿಡುವಿನ ಕಾಲದಲ್ಲಿ ಉಪಯೋಗ ಬೀಳುವ ಚಟುವಟಿಕೆಗಳನ್ನು ಇಟ್ಟುಕೊಂಡರೆ ಸಾಕು. ಚಿಕ್ಕ ವಯಸ್ಸಿನಲ್ಲಿ ಮಕ್ಕಳನ್ನು ಕೂಲಿಕಾರರಂತೆ ಸಾಲೆಯಲ್ಲಿ ದುಡಿಸಿಕೊಳ್ಳುವದು ತಪ್ಪು. ಸಾಲೆಯ ಚಟುವಟಿಕೆಗಳ ಮುಖಾಂತರ ಜ್ಞಾನವನ್ನು ಗಳಿಸಬೇಕೆಂಬ ಉದ್ದೇಶವು ಮುಖ್ಯವಾಗಿರಬೇಕಲ್ಲದೆ ಶ್ರಮದಿಂದ ದುಡ್ಡು ಗಳಿಸಬೇಕೆಂಬ ಉದ್ದೇಶವು ಇರಕೂಡದು. ದುಡಿಮೆಗೆ ಅವಯವಗಳೂ ಕುಮಾರಾವಸ್ಥೆಯಲ್ಲಿ ಇನ್ನೂ ಅಪಕ್ವವಾಗಿರುತ್ತವೆ. ಹುಡುಗರು ಕೈಕೆಲಸಗಳನ್ನು ಮಾಡುತ್ತಿರುವಾಗ ತಪ್ಪುವದು, ಎತ್ತರಪತ್ತರ ಮಾಡುವದು ಸಹಜ. ಕೈಯಲ್ಲಿ ಹಿಡಿದುಕೊಂಡಿದ್ದ ಸಾಮಾನುಗಳನ್ನು ಅವರು ಚಲ್ಲಬಹುದು, ಸೊಟ್ಟ ಡೊಂಕ ಮಡಚಬಹುದು. ಸ್ನಾಯುಗಳಲ್ಲಿ ಬೇಕಾದ ಜೋಡಣೆ ಇಲ್ಲದ್ದರಿಂದ ಹೀಗೆ ಆಗುತ್ತದೆ. ಸ್ವಲ್ಪ ರೂಢಿ ಆದಮೇಲೆ ಈ ತಪ್ಪುಗಳು ಇಲ್ಲದಾಗುತ್ತವೆ. ಇಂಥ ಪ್ರಸಂಗದಲ್ಲಿ ಶಿಕ್ಷಕರು ಸಿಟ್ಟಿಗೆ ಬರದೆ ಸಹಾನುಭೂತಿಯನ್ನು ತಾಳಬೇಕು. ಮಕ್ಕಳಿಗೆ ಎಲ್ಲ ಬಗೆಯ ಆಟಪಾಟಗಳಲ್ಲಿ ಗೆಲವು ಮತ್ತು ಗೌರವ ಪಡೆಯಲಿಕ್ಕೆ ಅವರವರ ಯೋಗ್ಯತೆಗೆ ತಕ್ಕ ಸಂದರ್ಭಗಳನ್ನು ಒದಗಿಸಿಕೊಡಬೇಕು.

ಸಣ್ಣವರಿರುವಾಗಲೇ ಹುಡುಗರಿಗೆ ಆರೋಗ್ಯದ ಚಟಗಳನ್ನು ಹಚ್ಚುವದು ಲೇಸು. ಸಾಲೆಗೆ ಬರುವ ಮೊದಲೇ ಕೈಕಾಲು ಮೋರೆ ತೊಳೆದುಕೊಂಡು ಬರಲಿಕ್ಕೆ ಕಡ್ಡಾಯ ಮಾಡಬೇಕು. ವೈಯಕ್ತಿಕ ಸ್ವಚ್ಛತೆಯಲ್ಲದೆ ಸಾಲೆಯನ್ನು ಓಣಿಯನ್ನು, ಮತ್ತು ಮನೆಯನ್ನು ಹಸನಾಗಿ ಇಡುವ ವೃತ್ತಿಯನ್ನು ಬೆಳೆಸಬೇಕು. ಬೇಸಿಗೆ ಮತ್ತು ಮಳೆಗಾಲಕ್ಕೆ ತಕ್ಕ ಉಡುಪನ್ನು ಹಾಕಿಕೊಳ್ಳಲಿಕ್ಕೆ ಕಲಿಸಬೇಕು. ಸತ್ವವುಳ್ಳ ಆಹಾರವನ್ನು ಕೊಡಬೇಕು. ಬಹಳ ಹೊತ್ತಿನವರೆಗೆ ಸಣ್ಣ ಹುಡುಗರು ಕೂತಲ್ಲಿಯೇ ಕೂತು ಅಭ್ಯಾಸ ಮಾಡುವದು ಒಳಿತಲ್ಲ. ಅವರು ಬೇಗ ದಣಿಯುವದರಿಂದ ಮೇಲಿಂದಮೇಲೆ ವಿಶ್ರಾಂತಿ ಕೊಡಬೇಕು. ಹುಡುಗರಿಗೆ ಹತ್ತು ಹನ್ನೆರಡು ತಾಸು ನಿದ್ರೆ ಬೇಕಾಗುತ್ತದೆ.

ಕುಮಾರಾವಸ್ಥೆಯಲ್ಲಿ ವ್ಯಾವಹಾರಿಕ ದೃಷ್ಟಿಯು ಬೆಳೆದಿರುವದರಿಂದ ಹುಡುಗರು ಮನೆಯಿಂದ ಸಾಲೆಗೆ ತಾವಾಗಿಯೇ ಹೋಗಬಲ್ಲರು. ಸಾಲೆಯಲ್ಲಿ ಓದುಬರೆಹ ಮೊದಲಾದ ವಿಷಯಗಳನ್ನು ವೇಳಾ ಪತ್ರಿಕೆಯ ಪ್ರಕಾ

ಕಲಿಯಲು ಬುದ್ಧಿಯು ಹದವಾಗಿರುತ್ತದೆ. ಆದರೆ ಒಂದೇ ವಿಷಯದಲ್ಲಿ ಹೆಚ್ಚು ಕಾಲ ಅವಧಾನವನ್ನು ನಿಲ್ಲಿಸಲು ಇನ್ನೂ ಸಮರ್ಥರು ಆಗಿರುವದಿಲ್ಲ ವಾದ್ದರಿಂದ ಪಾಠದ ಅವಧಿಗಳು ಸಣ್ಣವಾಗಿರಬೇಕು. ಓದುವ ಪಾಠಗಳು ಮಕ್ಕಳ ಅನುಭವಕ್ಕೆ ಸಂಬಂಧಪಟ್ಟವು ಇರಬೇಕು. ಕಲ್ಪನಾಶಕ್ತಿಯೂ, ಸ್ಮರಣಶಕ್ತಿಯೂ ಮತ್ತು ಅನುಭವವೂ ಕಡಿಮೆ ಇರುವದರಿಂದ ಅಮೂರ್ತವಾದ ಮತ್ತು ದೂರದ ವಿಷಯಗಳನ್ನು ಕಲಿಸಬಾರದು. ಅದು ಹುಡುಗರಿಗೆ ಗಡಚಾಗುತ್ತದೆ. ಇತಿಹಾಸದಲ್ಲಿ ಶತಮಾನದ ಕಲ್ಪನೆ ಹುಡುಗರಿಗೆ ತಿಳಿಯುವ ದಿಲ್ಲ. ದೂರ ದೇಶದ ಜನರ ಜೀವನ ಕ್ರಮದಲ್ಲಿ ಅವರ ಅಭಿರುಚಿ ಇರುವದಿಲ್ಲ. ಕಾರಣ ಇಂಥ ಅಮೂರ್ತವಾದ ವಿಷಯಗಳನ್ನು ಅವರಿಗೆ ಕಲಿಸುವದು ನಿರರ್ಥಕ. ಪ್ರಾಥಮಿಕ ಅಭ್ಯಾಸಪತ್ರಿಕೆಯ ಎಲ್ಲ ವಿಷಯಗಳನ್ನು ನಿತ್ಯ ಜೀವನಕ್ಕೆ ಸಂಬಂಧಿಸಿ ಕಲಿಸಬೇಕು. ಅವುಗಳನ್ನು ವಿಶೇಷವಾಗಿ ಹುಡುಗರ ಅನುಭವ ಗಳಲ್ಲಿ ಬರುವ ಸನ್ನಿವೇಶಗಳಿಗೆ ಹಚ್ಚಿ ಹೇಳಬೇಕು. ಮನೆ, ಅಂಗಡಿ, ಪೇಟೆ, ರೈಲು, ಪೋಸ್ಟ ಆಫೀಸ, ನಾಯಿ, ಬೆಕ್ಕು, ಗಿಳಿ, ಪಾರಿವಾಳ ಮೊದಲಾದ ವಿಷಯಗಳ ಬಗೆಗೆ ಹುಡುಗರು ಓದಲಿ. ಅವರು ಓದುವ ಪುಸ್ತಕಗಳು ಹೇರಳವಾಗಿ ಚಿತ್ರಗಳಿಂದ ತುಂಬಿರಬೇಕು. ಹಿಂದಿನ ಕಾಲದ ಇತಿಹಾಸಕ್ಕಿಂತ ಇಂದಿನ ಕಾಲದ ಲೋಕದ ಆಡಳಿತೆ, ನಾಗರಿಕ ನೀತಿಯ ಬಗೆಗೆ ಪಾಠಗಳು ಇರಬೇಕು. ಸತ್ತವರ ಕತೆಗಿಂತ ಇದ್ದವರ ಹಾಡು ತಿಳಿಸುವದು ಲೇಸು. ಸಾಮಾಜಿಕ ವಿಷಯಗಳನ್ನು ಕಲಿಸುವಾಗ ಶಿಕ್ಷಕರು ಅವುಗಳನ್ನು ಬಾಯಿ ಮಾತಿನಿಂದ ವರ್ಣಿಸುವದಕ್ಕಿಂತ ಮಕ್ಕಳ ನಿದರ್ಶನಕ್ಕೆ ತಂದುಕೊಡಬೇಕು. ಶಿಕ್ಷಕನು ಪಾಠ ಕಲಿಸುವಾಗ ವಸ್ತುವಾಚಕ ಶಬ್ದಗಳನ್ನು ಹೆಚ್ಚಾಗಿ ಉಪಯೋಗಿಸಬೇಕಲ್ಲದೆ ಭಾವವಾಚಕ ಶಬ್ದಗಳನ್ನು ಉಪಯೋಗಿಸಬಾರದು. ಮುನಸಿಪಲ್ ಆಫೀಸ, ಚಾವಡಿ, ಪೇಟೆ, ಸ್ಟೇಶನ್, ದವಾಖಾನೆ, ಹೊಂಡ, ಕಣ, ಸಮೀಪದ ಗುಡ್ಡ, ಹೊಳೆ ಮೊದಲಾದ ಸ್ಥಳಗಳಿಗೆ ಹುಡುಗರನ್ನು ಕರೆದುಕೊಂಡು ಹೋಗಬೇಕು. ಅವುಗಳನ್ನು ನೋಡಿ ಬಂದಮೇಲೆ ಅವುಗಳ ಬಗ್ಗೆ ಚರ್ಚೆಗಳನ್ನು ಏರ್ಪಡಿಸಬೇಕು, ವರ್ಣನೆಗಳನ್ನು ಬರೆಯಿಸಬೇಕು. ಪ್ರತ್ಯಕ್ಷ ಅನುಭವದ ಹಿನ್ನೆಲೆ ಇಲ್ಲದ, ಸ್ಥೂಲ ನಿದರ್ಶನದ ಆಧಾರವಿಲ್ಲದ ಅಭ್ಯಾಸ ಅಥವಾ ಕಲಿಸುವಿಕೆ ಕೇವಲ ಶಬ್ದಾಡಂಬರ. ಹುಡುಗರು ಬೇರೆ ಬೇರೆ

ಅನುಭವಗಳನ್ನು ಹೊಂದಲಿಕ್ಕೆಂದು ಅವರನ್ನು ಸಂಚಾರಕ್ಕೆ ಮತ್ತು ಪ್ರವಾಸಕ್ಕೆ ಕರೆದುಕೊಂಡು ಹೋಗಬೇಕು. ಹೀಗೆ ಅವರ ಅನುಭವಗಳು ಹೆಚ್ಚಿದರೆ ಅವರ ಶಬ್ದಸಂಪತ್ತು ಹೆಚ್ಚುವದು. ಸೃಷ್ಟಿನಿರೀಕ್ಷಣೆಯನ್ನು ಮಾಡಲಿಕ್ಕೆ ಮಕ್ಕಳಿಗೆ ಸಾಕಷ್ಟು ಸಂದರ್ಭಗಳನ್ನು ಒದಗಿಸಿಕೊಡಬೇಕು. ಆಗಾಗ್ಗೆ ಸಂಭಾಷಣೆಗಳನ್ನೂ ನಟನೆಗಳನ್ನೂ ಏರ್ಪಡಿಸಬೇಕು. ಹುಡುಗರ ಕಡೆಯಿಂದ ಕತೆಗಳನ್ನೂ ಒಗಟುಗಳನ್ನೂ ಹೇಳಿಸಿ ಅವರ ಭಾಷೆಯನ್ನು ತಿದ್ದಬೇಕು. ಮಕ್ಕಳಲ್ಲಿರುವ ಕುತೂಹಲ ಪ್ರೇರಣೆಯನ್ನು ಸೂರಿಗೊಳ್ಳಲಿಕ್ಕೆ ಅವರ ಅಭ್ಯಾಸ ಕ್ರಮದಲ್ಲಿ ಸಾಕಷ್ಟು ಇಂಬು ಇಟ್ಟಿರಬೇಕು. ಹುಡುಗರ ವಿಚಾರಶಕ್ತಿಯು ಕ್ರಮೇಣ ಬೆಳೆಯುತ್ತಿರುವುದರಿಂದ ಯಾವದು ವಸ್ತುಸ್ಥಿತಿ ಯಾವದು ಗಾಳಿಗೋಪುರ ಎಂಬುದನ್ನು ಅವರು ಅರಿಯಲಿ. ತೊಡಕಿನ ಸಮಸ್ಯೆಗಳನ್ನು ಬಿಡಿಸಲಿಕ್ಕೆ ಅವರನ್ನು ಪ್ರೋತ್ಸಾಹಿಸಬೇಕು. ಹಿರಿಯರು ಪರಂಪರಾಗತವಾಗಿ ಮೊದಲೇ ಮಾಡಿಟ್ಟುಕೊಂಡ ವಿಚಾರಗಳನ್ನು ಹಾಗೆಯೇ ಕಿರಿಯರಿಗೆ ಸಾಗಿಸುವದು ಹಗುರಾದ ಕೆಲಸ. ಆದರೆ ಮಕ್ಕಳಲ್ಲಿ ವಿಚಾರಸ್ವಾತಂತ್ರ್ಯವನ್ನು ಬೆಳೆಯಿಸಬೇಕು. ಬಾಳುವೆಯ ಪ್ರತಿನಿತ್ಯದ ಸಮಸ್ಯೆಗಳನ್ನು ತಮ್ಮ ಸ್ವಂತ ಬುದ್ಧಿಯಿಂದ ಬಿಡಿಸುವದನ್ನು ಮಕ್ಕಳಿಗೆ ಕಲಿಸುವದು ಶಿಕ್ಷಣದ ಬಹಳ ಬಿಗಿಯಾದ ಪ್ರಶ್ನೆ. ಆದರೆ ಅದು ಅವಶ್ಯ.

ಕುಮಾರಾವಸ್ಥೆಯಲ್ಲಿ ಹುಡುಗರು ಪರಿಸ್ಥಿತಿಗೆ ಹೊಂದಿಕೊಂಡಿರುವದರಿಂದ ದೊಡ್ಡವರಂತೆ ಸಮಾಧಾನದಿಂದ ವರ್ತಿಸುವದುಂಟು. ಅವರ ಉದ್ವೇಗಗಳು ಒಂದು ಹದಕ್ಕೆ ಬಂದಿರುತ್ತವೆ. ಬಾಲಕರಂತೆ ಅವರು ಕೂಡಲೇ ತಳಮಳಿಸುವದಿಲ್ಲ. ಆದರೂ ತಂದೆತಾಯಿಗಳೂ ಶಿಕ್ಷಕರೂ ಅವರೊಡನೆ ವಾತ್ಸಲ್ಯದಿಂದ ನಡೆದುಕೊಳ್ಳಬೇಕು. ಮಗುವು ಹಿರಿಯರಿಂದ ಸ್ವೀಕಾರ ಮತ್ತು ಅಭಯವನ್ನು ಅಪೇಕ್ಷಿಸುತ್ತಾನೆ. ಮನೆಯಲ್ಲಿ ಒಬ್ಬ ಹಿರಿಯರು ಅವನನ್ನು ಪ್ರೀತಿಸುವವರು ಇದ್ದಾರೆ ಎಂದು ಅವನಿಗೆ ಭರವಸೆಯಾಗಿದ್ದರೆ ಅವನ ಮನಸ್ಸು ಸೊಗಸಾಗಿರುತ್ತದೆ. ವ್ಯಕ್ತಿತ್ವದ ಬೆಳವಣಿಗೆಗೆ ದೇಹದ ಆರೋಗ್ಯಕ್ಕಿಂತ ಮನಸ್ಸಿನ ಆರೋಗ್ಯವು ಹೆಚ್ಚು ಮಹತ್ವದ್ದು. ಹುಡುಗರು ಮಾಡುವ ಕೆಲಸಗಳಲ್ಲಿ ನಾವು ಅಭಿರುಚಿಯನ್ನು ತೋರಿಸಬೇಕು. ಅವರ

ಕೃತಿಗಳನ್ನು ಮೆಚ್ಚಬೇಕು. ಚಿತ್ರವನ್ನೇ ತೆಗೆಯಲಿ, ಪಟವನ್ನೇ ಮಾಡಲಿ ಅದು ಹುಡುಗಾಟಿಕೆ ಎಂದು ಹೀಯಾಳಿಸಬಾರದು. ಹುಡುಗರಿಗೆ ಅದೇ ದೊಡ್ಡದು. ಮಕ್ಕಳಿಗೆ ಮೆಚ್ಚುಗೆ ಕೊಡುವಲ್ಲಿ ಹಿರಿಯರು ಜಿಪುಣತನವನ್ನು ತೋರಿಸಬಾರದು. ಅದಕ್ಕೇನು ದುಡ್ಡು ಬೀಳುವದಿಲ್ಲ. ಮಕ್ಕಳ ಬುದ್ಧಿ ಬಲಕ್ಕಿಂತಲೂ ಬಾಹುಬಲಕ್ಕಿಂತಲೂ ಅವರಿಂದ ಹೆಚ್ಚಿಗೆ ನಾವು ಅಪೇಕ್ಷಿಸಿದರೆ, ಅವರಿಗೆ ನೀಗದ ಕೆಲಸವನ್ನು ಹೇಳಿದರೆ ಅವರು ಆಶಾಭಂಗರಾಗಿ ಜರಕೊಳ್ಳುವ ದುಂಟು. ಇದಾಗಕೂಡದು. ಮಕ್ಕಳು ತಮ್ಮ ಕೌಶಲ್ಯಗಳನ್ನೂ ಕಸರತ್ತು ಗಳನ್ನೂ ತೋರಿಸುವ ಸಂದರ್ಭಗಳನ್ನು ಒದಗಿಸಬೇಕು. ಶಿಕ್ಷಕರು ಮತ್ತು ಪಾಲಕರು ಅವರ ಚಟುವಟಿಕೆಗಳನ್ನು ಮೆಚ್ಚಿದರೆ ಪ್ರಗತಿಯನ್ನು ತೋರಿಸು ತ್ತಾರೆ. ತಪ್ಪಲಿ ಶಾಟಲಿ ಧೈರ್ಯದಿಂದ ಮುನ್ನುಗ್ಗಲು ಅವರನ್ನು ಪ್ರೋತ್ಸಾಹಿಸ ಬೇಕು. ಬಿಕ್ಕಟ್ಟಿನ ಪ್ರಸಂಗಗಳನ್ನು ಎದುರಿಸಲು ಎದೆಗಾರಿಕೆಯನ್ನು ಕಲಿಸ ಬೇಕು. ಮಕ್ಕಳ ಸ್ವತಂತ್ರತೆಗೆ ಅಡ್ಡ ಬರಬಾರದು. ಅವರಲ್ಲಿರುವ ಭಯವನ್ನು ತೊಲಗಿಸಿ ಎಚ್ಚರಿಕೆಯಿಂದ ಮುನ್ನಡೆ ಇಡಲು ಹಾದಿ ತೋರಿಸಬೇಕು. ಮಕ್ಕಳು ಹೆದರಿ ಹೇಡಿಯಾಗಕೂಡದು. ಗುರು-ಹಿರಿಯರು ಅವರ ವೈರಿಗಳಾ ಗಿರದೆ ಅವರ ಹಿತಚಿಂತಕರೆಂಬುದನ್ನು ಮಾತಿನಿಂದಲೂ ಕೃತಿಯಿಂದಲೂ ಅವರಿಗೆ ಮನವರಿಕೆ ಮಾಡಿಕೊಡಬೇಕು. ಸನ್ನಿವೇಶಗಳ ಒತ್ತಾಯದ ಮೂಲಕ ಹುಡುಗರು ಒಮ್ಮೊಮ್ಮೆ ಸುಳ್ಳು ಹೇಳಬಹುದು, ಕಳವು ಮಾಡ ಬಹುದು. ಆದರೆ ಶಿಕ್ಷಕರು ಮತ್ತು ಪಾಲಕರು ಇಂಥ ತಪ್ಪುಗಳನ್ನು ಸಹಾನು ಭೂತಿಯಿಂದ ನೋಡಬೇಕು. ಸುಳ್ಳು ಹೇಳುವದು, ಕಳವು ಮಾಡುವದು ಪಾಪದ ಕೆಲಸವೆಂಬ ಭಾವವನ್ನು ತೊಲಗಿಸಬೇಕು.

ಕುಮಾರಾವಸ್ಥೆಯಲ್ಲಿ ಸಾಂಘಿಕ ವರ್ತನವು ಪ್ರಬಲವಾಗಿರುತ್ತದೆ. ಇದನ್ನು ಒಳ್ಳೇ ವ್ಯವಸ್ಥಿತ ರೀತಿಯಿಂದ ಮತ್ತು ಸಮಾಜದ ಹಿತದ ದೃಷ್ಟಿ ಯಿಂದ ಬೆಳೆಯಗೊಡಬೇಕು. ಮಗುವು ತನಗೆ ಬೇಕಾದ ಒಂದು ಗುಂಪಿನ ಸದಸ್ಯನಾಗಲಿ. ಅವನಲ್ಲಿ ಸಂಘನಿಷ್ಠೆ ಬೆಳೆಯಲಿ. ಸ್ವಾರ್ಥ ಸೇವೆಗಿಂತಲೂ ಸಂಘ ಸೇವೆಯು ಹೆಚ್ಚಿನದು. ಸಮಾಜದ ಹಿತದ ಸೇವೆಯಲ್ಲಿ ಸ್ವಾರ್ಥದ ಸಂಕುಚಿತ ಪ್ರವೃತ್ತಿಯು ಉದಾತ್ತಗೊಳ್ಳುತ್ತದೆ. ಆದರೆ ಅವನು ಒಂದು ಉದಾತ್ತ ಧ್ಯೇಯದಿಂದ ಪ್ರೇರಿತನಾಗಿ ಹೀಗೆ ನಡೆಯುವನೆಂದು ತಿಳಿಯ

ಬಾರದು. ಪರೋಪಕಾರ ಸ್ವಾರ್ಥತ್ಯಾಗ ಎಂಬ ಉಚ್ಚತರಗತಿಯ ಸಾಮಾಜಿಕ ಗುಣಗಳು ಅವನಲ್ಲಿ ಬುದ್ಧಿಪೂರ್ವಕವಾಗಿ ಇನ್ನೂ ಹುಟ್ಟಿರುವದಿಲ್ಲ. ಆದರೆ ಆ ಅರಿವು ಕ್ರಮೇಣ ಬೆಳೆಯುತ್ತದೆ. ಪ್ರಾಚೀನ ಕಾಲದ ಬೇಟೆಯಾಡುವ ಟೋಳಿಗಳಂತೆ ಹುಡುಗರು ಹಿಂಡು ಕಟ್ಟಿಕೊಂಡು ಅಲೆದಾಡುತ್ತಾರೆ. ಆದರೂ ಅವರ ಗುಂಪಿನಲ್ಲಿ ಒಂದು ವ್ಯವಸ್ಥೆಯು ಕಂಡುಬರುತ್ತದೆ. ಅವರಲ್ಲಿ ಕೆಲವರು ಮುಂದಾಳುಗಳಾಗಿರುತ್ತಾರೆ, ಕೆಲವರು ಹಿಂದಾಳುಗಳಾಗಿರುತ್ತಾರೆ. ಸಂಘದಲ್ಲಿ ತನ್ನ ಪಾತ್ರವಾವುದೆಂಬುದನ್ನು ಹುಡುಗನು ತಿಳಿದುಕೊಳ್ಳಲಿ. ಅಂದರೆ ಅವನು ದೊಡ್ಡವನಾದಾಗ ಸಮಾಜದಲ್ಲಿ ತನ್ನ ಸ್ಥಾನವನ್ನು ಅರಿತುಕೊಂಡು ಹೇಗೆ ವರ್ತಿಸಬೇಕೆಂಬುದನ್ನು ಕಲಿಯುವನು. ಅವನಲ್ಲಿ ಸಂಘದ ಅಭಿಮಾನವು ಹೆಚ್ಚಾಗಿರುವದರಿಂದ ತನ್ನ ಸಂಘದ ಆದೇಶಗಳನ್ನು ಪೂರ್ತಿಗೊಳಿಸುವಲ್ಲಿ ಹಿರಿಯರು ಹಾಕಿಕೊಟ್ಟ ನಿಯಮಗಳನ್ನು ಮುರಿಯಬಹುದು. ತಾಯಂದಿರೂ ಉಪಾಧ್ಯಾಯರೂ ಇದನ್ನು ಬೇರೆ ಭಾವಿಸದೆ ಕರುಣೆಯಿಂದ ನಡೆದುಕೊಳ್ಳಬೇಕು. ಸಾಲೆಯ ಕಟ್ಟಳೆಗಳನ್ನು ಹುಡುಗರು ಮುರಿಯಬಹುದು, ಸಂಪನ್ನು ಹೂಡಬಹುದು. ಇಂತಹ ಪ್ರಸಂಗಗಳಲ್ಲಿ ಶಿಕ್ಷಕನು ಅಕ್ಕಲು ಹಾಕಿ ಶಾಂತ ರೀತಿಯಿಂದ ಹುಡುಗರ ಒಲವುಗಳನ್ನೂ ಕಾರ್ಯರಭಸವನ್ನೂ ಬೇರೆ ನಿಟ್ಟಿನಲ್ಲಿ ಪರಿವರ್ತಿಸಬೇಕು. ತಾನು ಗುಂಪಿನ ವೈರಿಯಲ್ಲವೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಬೇಕು. ಸಾಲೆಯೆಂಬ ದೊಡ್ಡ ಸಂಘದ ಸೇವೆಯಲ್ಲಿ ಅವರ ಚಟುವಟಿಕೆಗಳನ್ನು ತೊಡಗಿಸಲು ಅವಕಾಶ ಕಲ್ಪಿಸಬೇಕು. ಹುಡುಗರ ಯೋಗ್ಯತೆ ಮತ್ತು ಅಭಿರುಚಿಗಳನ್ನು ಅರಿದು ಅವರವರಿಗೆ ತಕ್ಕ ಸಂಘಗಳನ್ನು ಸಾಲೆಯಲ್ಲಿ ಸ್ಥಾಪಿಸಬೇಕು. ಕೆಲವರು ಆಟದ ಸಂಘಗಳನ್ನು ಸೇರಲಿ, ಕೆಲವರು ನಾಟ್ಯಸಂಘಗಳನ್ನು ಸೇರಲಿ, ಬೇರೆ ಕೆಲವರು ಸಾಹಿತ್ಯ ಸಂಘ, ಆಲೋಚನಾ ಸಂಘ, ಸೇವಾ ಸಂಘ ಮುಂತಾದವುಗಳನ್ನು ಸೇರಲಿ. ಈಗಿನ ಸಾಲೆಗಳಲ್ಲಿ ವಾದವಿವಾದ ಅಥವಾ ವಕ್ತೃತ್ವ ಸಂಘಗಳು ಹೆಚ್ಚಾಗಿ ಪ್ರಚಾರದಲ್ಲಿ ಇರುವವು. ಆದರೆ ಈ ವಾದವಿವಾದ ಸಂಘಗಳಿಂದ ನಾವಾಗಿಯೇ ಕೂತು ಹುಡುಗರಲ್ಲಿ ನಿಷ್ಪ್ರಯೋಜಕ ಮನೋವೃತ್ತಿಯನ್ನು ಬೆಳೆಸಿದಂತೆ ಆಗುವದು. ಕೇವಲ ಮಾತಾಡುವದೇ ಒಂದು ಶೂರತನವೆಂದು ಅವರು ಭಾವಿಸತೊಡಗುತ್ತಾರೆ. ಆಲೋಚನೆ,

ವಿಚಾರ, ನಿರ್ಣಯ, ಪ್ರಯೋಗ ಮತ್ತು ಕೃತಿಗಳ ಕಡೆಗೆ ಮಕ್ಕಳ ಮನೋವೃತ್ತಿಗಳನ್ನು ನಾವು ಸೆಳೆಯಿಸಬೇಕು. ನಮ್ಮ ನಾಡು ಮುನ್ನಡೆ ಇಡಬೇಕಾದರೆ ಮಾತಿನ ಬಂಟರು ಬೇಕಾಗಿಲ್ಲ; ಕೆಲಸದ ಬಂಟರು ಬೇಕು. ವಕ್ತೃತ್ವ ಸಂಘದ ಬದಲು ವಿದ್ಯಾರ್ಥಿಗಳ ಪಾರ್ಲಿಮೆಂಟು ಅಥವಾ ವಿದ್ಯಾರ್ಥಿಗಳ ಕೌನ್ಸಿಲ್ಲು ಸ್ಥಾಪಿಸುವದು ಲೇಸು. ಮಕ್ಕಳಲ್ಲಿ ವಕ್ತೃತ್ವಶಕ್ತಿ ಬೆಳೆಸುವದಕ್ಕಿಂತ ಕರ್ತೃತ್ವ ಶಕ್ತಿ ಬೆಳೆಸುವದು ಅವಶ್ಯ. ಉದ್ಯೋಗದ ಗೌರವ ಮತ್ತು ಸೇವಾ ಭಾವನೆಗಳು ಬೆಳೆಯಲಿಕ್ಕೆ ಶ್ರಮದಾನದ ಕಾರ್ಯಕ್ರಮಗಳನ್ನೂ ಕೈಕೊಳ್ಳಬೇಕು. ಇಂಡಿಯಾ ದೇಶವು ಇದೀಗ ಸ್ವಾತಂತ್ರ್ಯವನ್ನು ಗಳಿಸಿದ್ದರಿಂದ ನಾಳೆಯ ನಾಗರಿಕರಾದ ಮಕ್ಕಳಿಗೆ ಲೋಕಸತ್ತೆಯ ಪದ್ಧತಿಗಳನ್ನು ಸಾಲೆಯಲ್ಲಿ ಕಲಿಸಬೇಕು. ಎಲ್ಲರೂ ಸರಿಸಮಾನರೆಂದು ಭಾವಿಸುವದು, ಎಲ್ಲರನ್ನೂ ಗೌರವದಿಂದ ಕಾಣುವದು, ಆಡಳಿತೆಯಲ್ಲಿ ಭಾಗ ವಹಿಸುವದು, ತನಗೆ ಬೇಕಾದ ಕಾಯಕವನ್ನು ಆರಿಸಿಕೊಳ್ಳುವದು, ಹಕ್ಕು ಹೊಣೆಗಾರಿಕೆಗಳನ್ನು ತಿಳಿದುಕೊಳ್ಳುವದು—ಇವು ಲೋಕಸತ್ತೆಯ ಮೂಲ ತತ್ವಗಳು. ಮಕ್ಕಳ ನಾನಾ ಬಗೆಯ ಸಾಂಘಿಕ ಚಟುವಟಿಕೆಗಳಲ್ಲಿ ಈ ತತ್ವಗಳ ಆಚರಣೆಯು ಬರುವಂತೆ ಸಾಲೆಯ ಎಲ್ಲ ಕಾರ್ಯಕ್ರಮಗಳನ್ನು ಯೋಚಿಸಬೇಕು.

## ತಾರುಣ್ಯ—ಹದಿಮೂರರಿಂದ ಹದಿನೆಂಟು ವರುಷ

ಮನೋವಿಜ್ಞಾನದ ದೃಷ್ಟಿಯಿಂದ ನೋಡಿದರೆ ಬಾಲ್ಯ ಮತ್ತು ತಾರುಣ್ಯದಲ್ಲಿ ಹೆಚ್ಚು ಹೋಲಿಕೆ ಇದ್ದದ್ದು ಕಂಡುಬರುತ್ತದೆ. ಬಾಲಕರ ಸಮಸ್ಯೆಗಳಂತೆ ತರುಣರ ಸಮಸ್ಯೆಗಳು ಇರುವವು. ಆತ್ಮಸಂಯಮನ, ಇಂದ್ರಿಯ ನಿಗ್ರಹ, ಸಮಾಜದ ರೂಢಿಗಳಿಗೆ ಹೊಂದಿಕೊಂಡು ನಡೆಯುವದು ಮುಂತಾದ ಸಮಸ್ಯೆಗಳು ಬಾಲಕನಿಗೆ ಎದುರಾಗುವಂತೆ ತರುಣನಿಗೂ ಎದುರಾಗುತ್ತವೆ. ತಾರುಣ್ಯದ ಕಾಲಕ್ಕೆ ತರುಣ–ತರುಣಿಯರಲ್ಲಿ ಯಾವ ಬದಲಾವಣೆಗಳು ಕಂಡುಬರುತ್ತವೆ ಎಂಬುದನ್ನು ಕೆಳಗೆ ವಿವರಿಸಿದೆ.

## ( i ) ದೇಹದ ಬೆಳವಣಿಗೆ

ಹುಡುಗರಿಗಿಂತ ಹುಡುಗಿಯರಿಗೆ ಯೌವನವು ಒಂದೆರಡು ವರುಷ ಮೊದಲೇ ಪ್ರಾಪ್ತವಾಗುತ್ತದೆ. ಇಂಡಿಯಾದ ಉಷ್ಣ ಹವಾಮಾನದ ಪ್ರಕಾರ ಹೆಣ್ಣು ಹುಡುಗರು ಸುಮಾರು ಹನ್ನೊಂದು ಹನ್ನೆರಡು ವರುಷಕ್ಕೆ ಗಂಡು ಹುಡುಗರು ಸುಮಾರು ಹದಿಮೂರು ಹದಿನಾಲ್ಕು ವರುಷಕ್ಕೆ ದೊಡ್ಡವರಾಗುತ್ತಾರೆ. ಹದಿಮೂರು ಹದಿನಾಲ್ಕು ವರುಷದ ಹುಡುಗಿಯರು ಹುಡುಗರಿಗಿಂತ ಹೆಚ್ಚು ಎತ್ತರವಾಗಿಯೂ ಹೆಚ್ಚು ಸ್ಥೂಲವಾಗಿಯೂ ಕಾಣುವರು. ಆ ವಯಸ್ಸಿನ ನಂತರ ಹುಡುಗರ ಬೆಳವಣಿಗೆಯು ಹೆಚ್ಚು ಭರದಿಂದ ಸಾಗುವದು. ಆಗ ಅವರು ಹೆಚ್ಚು ಎತ್ತರ ಕಾಣುವರು, ಅವರ ತೂಕ ಮತ್ತು ಶಕ್ತಿ ಹೆಚ್ಚಾಗುವದು. ತಾರುಣ್ಯದಲ್ಲಿ ದನಿಯು ಬದಲಾಗುತ್ತದೆ, ಮೊಗಮೀಸೆ ಒಡೆಯುತ್ತವೆ, ಚಟುವಟಿಕೆಯಲ್ಲಿ ಉತ್ಸುಕತೆ ಹೆಚ್ಚುತ್ತದೆ. ತರುಣ ವಯಸ್ಸಿನಲ್ಲಿ ಸ್ನಾಯುಗಳು ಬಲಪಡುವುದರಿಂದ ಹೆಚ್ಚು ವ್ಯಾಯಾಮ ಮಾಡಲಿಕ್ಕೂ ಹುತುತು, ಖೋಖೋ, ಹಾಕಿ, ಫುಟ್‌ಬಾಲ್ ಮೊದಲಾದ ಆಟಗಳನ್ನು ಆಡಲಿಕ್ಕೂ ಅವರು ಶಕ್ತರಾಗುವರು.

## ( ii ) ಉದ್ವೇಗಗಳ ಬೆಳವಣಿಗೆ

**ಉದ್ರೇಕ:—** ಬಾಲಕನಂತೆ ತರುಣನು ಉದ್ರೇಕ ಸ್ವಭಾವದವನು. ಕುಮಾರಾವಸ್ಥೆಯ ಸ್ಥಿರತೆ ಮತ್ತು ನಿಧಾನ ವೃತ್ತಿಗಳು ತಾರುಣ್ಯದಲ್ಲಿ ಅಡಗಿ ಹೋಗುತ್ತವೆ. ಅವನಿಗೆ ಎರಡನೇ ಬಾರೆ ಬಾಲ್ಯವು ಉಂಟಾಗುತ್ತದೆ. ಜಗತ್ತು ವಿಲಕ್ಷಣವಾಗಿ ಕಾಣುತ್ತದೆ. ಅದಕ್ಕೆ ಹೊಂದಿಕೊಂಡು ಹೋಗುವದನ್ನು ಬಾಲಕನಂತೆ ಅವನು ಮತ್ತೆ ಕಲಿಯಬೇಕಾಗುತ್ತದೆ. ತರುಣ–ತರುಣಿಯರಲ್ಲಿ ಲಜ್ಜೆಯು ತಲೆದೋರುತ್ತದೆ. ಯಾವ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕೆಂಬುದನ್ನು ಹೊಸದಾಗಿ ಅವರು ಕಲಿಯುತ್ತಾರೆ. ತಾರುಣ್ಯದ ಅವಧಿಯಲ್ಲಿ ಬುದ್ಧಿ ಬೆಳವಣಿಗೆಯು ಪೂರ್ಣತೆಯನ್ನು ಹೊಂದುತ್ತಿದ್ದರೂ ವಿವೇಕಕ್ಕಿಂತ ಭಾವೋದ್ರೇಕವೇ ಪ್ರಧಾನವಾಗಿರುತ್ತದೆ. ತಾರುಣ್ಯವು ಉದ್ವೇಗಗಳ ತವರು ಮನೆಯು. ಸುಖದುಃಖಗಳನ್ನು ತರುಣರು ಮನಸ್ಸಿಗೆ ಬಹಳ ಹಚ್ಚಿಕೊಳ್ಳು

ತ್ತಾರೆ. ಕೆಲವರಲ್ಲಿ ಉಗುರು ಕಡಿಯುವದು ಅಥವಾ ಉಗ್ಗುವದು ಕಂಡು ಬರುತ್ತದೆ. ವರ್ತನದಲ್ಲಿ ಇನ್ನೂ ಹೊಂದಿಕೆ ಆಗದ್ದರಿಂದ ಅವರು ಹಾಗೆ ಮಾಡುತ್ತಾರೆ. ಗೆಲುವನ್ನು ಸಂಪಾದಿಸಲಿಕ್ಕೆ, ಮೆಚ್ಚುಗೆಯನ್ನು ಪಡೆಯಲಿಕ್ಕೆ ತರುಣರು ಹಂಬಲಿಸುತ್ತಾರೆ. ಶುಕನಾಸ ಮಂತ್ರಿಯು ಚಂದ್ರಾಪೀಡನಿಗೆ ಮಾಡಿದ ಉಪದೇಶದಲ್ಲಿ ತಾರುಣ್ಯವು ಒದಗಿದಾಗ ಯುವಕರು ಹೇಗೆ ವರ್ತಿಸುವರೆಂಬುದನ್ನು ಚನ್ನಾಗಿ ವಿವರಿಸಿದ್ದಾನೆ.

**ಕಾಮುಕತೆ:—** ಶರೀರವು ಪರಿಪಕ್ವವಾಗಿ ಬೆಳೆದಿರುವುದರಿಂದ ತಾರುಣ್ಯದಲ್ಲಿ ಕಾಮ ಪ್ರವೃತ್ತಿಯು ಪ್ರಬಲವಾಗಿರುತ್ತದೆ. ಕಾಮನ ಹೂಬಾಣಗಳನ್ನು ತಡೆಯುವದು ಬಹಳ ಕಷ್ಟದ ಕೆಲಸ. ಕಾಮ ಪ್ರೇರಣೆಯು ಬಾಲ್ಯದಲ್ಲಿ ತಂದೆ ತಾಯಂದಿರ ಪ್ರೇಮದ ರೂಪವನ್ನು ತಾಳುತ್ತದೆ. ಅನಂತರ ಕುಮಾರಾವಸ್ಥೆಯಲ್ಲಿ ಸ್ತಬ್ಧವಾಗಿದ್ದು ತಾರುಣ್ಯದಲ್ಲಿ ಸ್ತ್ರೀಪುರುಷರ ಅನ್ಯೋನ್ಯ ಪ್ರೇಮದಲ್ಲಿ ವ್ಯಕ್ತವಾಗುತ್ತದೆ ಎಂದು ಡಾ|| ಜೋನ್ಸ್‌ನು ಹೇಳುವದು ನಿಜವೆಂದು ತೋರುತ್ತದೆ. ಯುವಕರ ಕಾಮ ಪ್ರೇರಣೆಯು ಮೂರು ತೆರನಾಗಿ ವ್ಯಕ್ತವಾಗುತ್ತದೆ— (೧) ಸ್ವದೇಹ ಪ್ರೇಮ (೨) ಸಜಾತಿ ಪ್ರೇಮ ಮತ್ತು (೩) ವಿಜಾತಿ ಪ್ರೇಮ. ಕಾಮುಕತೆ ಎಂದರೆ ಆಸಕ್ತಿ ಅಥವಾ ಮೋಹ. ಯುವಕರು—ಯುವತಿಯರು ತಮ್ಮ ದೇಹ ಲಾವಣ್ಯಕ್ಕಾಗಿ ಅಭಿಮಾನ ತಾಳುತ್ತಾರೆ. ಸೌಂದರ್ಯದ ಡಂಭಾಚಾರವನ್ನು ನಟಿಸುತ್ತಾರೆ. ತಾವೇ ಚಲುವ ಚನ್ನಿಗರೆಂದು ಭ್ರಮಿಸುತ್ತಾರೆ. ಯುವತಿಯು ತಾನು ಮೋಹಿನಿಯ ಅವತಾರವೆಂದೂ ಯುವಕನು ತಾನು ಮನ್ಮಥನ ಅವತಾರವೆಂದೂ ಭಾವಿಸುತ್ತಾರೆ. ಹುಡುಗೆಯರು ತಮ್ಮ ಗೆಳತಿಯರಲ್ಲಿ ಪ್ರೇಮ ಇಡುವದು ಸಜಾತಿ ಪ್ರೇಮವೆನಿಸಿಕೊಳ್ಳುತ್ತದೆ. ಗೆಳೆಯರ ಗುಂಪುಗಳನ್ನೂ ಗೆಳತಿಯರ ಗುಂಪುಗಳನ್ನೂ ನಾವು ನೋಡುತ್ತೇವೆ. ಪುರುಷನು ಸ್ತ್ರೀಯನ್ನು ಮೋಹಿಸುವದು, ಸ್ತ್ರೀಯು ಪುರುಷನನ್ನು ಮೋಹಿಸುವದು ವಿಜಾತಿ ಪ್ರೇಮವೆನಿಸುವದು. ತಾರುಣ್ಯವು ಪ್ರಣಯದ ಕಾಲವು. ಅಕ್ಕ ಮಹಾದೇವಿಯು ಹೇಳುವಂತೆ ಪುರುಷನ ಮುಂದೆ ಸ್ತ್ರೀಯು ಮಾಯೆ, ಸ್ತ್ರೀಯ ಮುಂದೆ ಪುರುಷನು ಮಾಯೆ.

## ( iii ) ಬುದ್ಧಿಯ ಬೆಳವಣಿಗೆ

ಮನುಷ್ಯನು ಹದಿನೆಂಟು ವರುಷದವನಾಗುವವರೆಗೆ ಬುದ್ಧಿಯ ಬೆಳವಣಿಗೆಯು ಸಾಗುತ್ತದೆಂದು ಮತ್ತು ಆ ಮೇಲೆ ಅದು ಕ್ವಚಿತ್ತಾಗಿ ಬೆಳೆಯುತ್ತದೆಂದು ಮನೋವಿಜ್ಞಾನಿಗಳ ಮತ. ತಾರುಣ್ಯದಲ್ಲಿ ಬೆಳೆಯುವ ಕಲ್ಪನೆ ಮತ್ತು ತರ್ಕ ಇವು ಬುದ್ಧಿಯ ಮುಖ್ಯ ಲಕ್ಷಣಗಳು.

**ಕಲ್ಪನಾ ಸಾಮ್ರಾಜ್ಯ:—** ಬಾಲಕನಂತೆ ತರುಣನೂ ಕಲ್ಪನಾ ಸಾಮ್ರಾಜ್ಯದಲ್ಲಿ ಓಲಾಡುತ್ತಾನೆ. ಜೀವನದ ಸಮಸ್ಯೆಗಳು ಕಠಿಣವೆಂದು ತೋರಿದಾಗ ತಾನೇ ಕಟ್ಟಿಕೊಂಡ ಮನೋರಾಜ್ಯದಲ್ಲಿ ತರುಣನು ಆಶ್ರಯ ಹೊಂದುತ್ತಾನೆ. ಹಿರಿಯರಿಂದ ಛೀ ಥೂ ಅನ್ನಿಸಿಕೊಳ್ಳಬಹುದು, ತನ್ನ ಬಯಕೆಗಳು ಈಡೇರದೇ ಇರಬಹುದು, ಆಗ ಅವನು ಹಗಲುಗನಸುಗಳನ್ನು ಕಾಣುತ್ತಾನೆ. ಶೇಕಮಹಮ್ಮದನಂತೆ ಏನೇನೋ ತನ್ನೊಳಗೆ ಆಲೋಚಿಸುತ್ತ ಸುಮ್ಮನೆ ಕೂಡ್ರುತ್ತಾನೆ. ಮೈಯಲ್ಲಿ ನೆಟ್ಟಗಿಲ್ಲವೆಂದು ಸುಳ್ಳು ಹೇಳಿ ಮುಸುಕು ಹಾಕಿಕೊಂಡು ಮಲಗುತ್ತಾನೆ. ಸತ್ಯ ಜಗತ್ತಿನಲ್ಲಿ ಮನಸ್ಸಿಗೆ ಸೊಗಸು ಅನಿಸದ್ದರಿಂದ ಅವನು ಮಿಥ್ಯ ಜಗತ್ತಿನಲ್ಲಿ ವಿಶ್ರಾಂತಿಯನ್ನು ಹುಡುಕುತ್ತಾನೆ. ಆಗ ಅವನನ್ನು ತಡವಿದರೆ ಅವನು ಸಿಟ್ಟಿಗೆ ಬರುತ್ತಾನೆ.

**ಪೂರ್ಣ ವಿವೇಕ:—** ಮಕ್ಕಳಿಗೆ ಹದಿನೆಂಟು ವಯಸ್ಸು ಮುಗಿಯುತ್ತ ಬಂದಹಾಗೆ ವಿವೇಕವು ಪೂರ್ಣ ವಿಕಾಸ ಹೊಂದುತ್ತದೆ. ಅದರ ಪರಿಣಾಮವಾಗಿ ತರ್ಕ, ಊಹೆ, ಕಲ್ಪನೆ, ವಿಚಾರ ಮತ್ತು ಸಿದ್ಧಾಂತ ಹೊರಡಿಸುವ ಸಾಮರ್ಥ್ಯಗಳು ಅವನಲ್ಲಿ ಬೆಳೆಯುತ್ತವೆ. ಬೌದ್ಧಿಕ ಚಟುವಟಿಕೆಗಳಲ್ಲಿ ಅಭಿರುಚಿಯು ಹೆಚ್ಚುತ್ತದೆ. ಶಾಲೆಯ ಅಭ್ಯಾಸ ಮಾಡುವಾಗ ಉದ್ದೇಶವಿಲ್ಲದೆ ಕೇವಲ ಬಾಯಿಪಾಠ ಮಾಡುವದು ಅವನಿಗೆ ಸೇರುವದಿಲ್ಲ. ನೈಸರ್ಗಿಕ ಮತ್ತು ಯಾಂತ್ರಿಕ ಚಮತ್ಕಾರಗಳನ್ನು ಕಂಡು ಅವನ ಕುತೂಹಲವು ಕೆರಳುತ್ತದೆ; ಅವುಗಳ ಕಾರಣ ಪರಿಣಾಮಗಳನ್ನು ಊಹಿಸುತ್ತಾನೆ. ಸಮಾಜದಲ್ಲಿ ಕಂಡುಬರುವ ಮೂಢ ನಂಬುಗೆಗಳನ್ನು ಅವನು ಅಲ್ಲಗಳೆಯುತ್ತಾನೆ. ಅವು ವಿವೇಕದ ಒರೆಗೆ ನಿಲ್ಲನೆಂದು ವಾದಿಸುತ್ತಾನೆ. ಆಧ್ಯಾತ್ಮಿಕ ಆಚರಣೆಗಳನ್ನು

ಮತ್ತು ನಂಬುಗೆಗಳನ್ನು ಕುರಿತು ಪ್ರಶ್ನೆ ಕೇಳುತ್ತಾನೆ. ವಿದ್ಯಾಭ್ಯಾಸವನ್ನು ಮುಗಿಸಿದನಂತರ ದೊಡ್ಡವನಾದ ಮೇಲೆ ಹೇಗೆ ಉಪಜೀವನವನ್ನು ಸಾಗಿಸ ಬೇಕು ಎಂಬ ಪ್ರಾಪಂಚಿಕ ವಿಚಾರಗಳು ಅವನ ತಲೆಯಲ್ಲಿ ಸುಳಿದಾಡ ಹತ್ತುತ್ತವೆ. ತರುಣನು ಸಾಲೆಯ ಪುಸ್ತಕದ ಪಾಠಗಳನ್ನು ಕಲಿಯುವದರಲ್ಲಿ ಹಿಂದೆ ಉಳಿಯಬಹುದು; ಆದರೆ ಅವನು ಬದುಕು ಬಾಳುವಿನ ಪಾಠಗಳನ್ನು ಕಲಿಯುವದರಲ್ಲಿ ಮುಂದುವರಿಯುತ್ತಾನೆ. ಆರ್ಥಿಕ ರೀತಿಯಿಂದ ಸ್ವತಂತ್ರ ನಾಗುವ ಬಗೆಯನ್ನು ವಿಚಾರಿಸುತ್ತಾನೆ.

## (iv) ವರ್ತನದ ಬೆಳವಣಿಗೆ

**ಕ್ರಾಂತಿಕಾರ:**— ತರುಣನು ಸ್ವಭಾವತಃ ಕ್ರಾಂತಿಕಾರ. ಬಾಲ್ಯದಲ್ಲಿ ಕಂಡುಬರುವ ಅವನ ಸ್ವತಂತ್ರ ವೃತ್ತಿಯು ಈಗ ಬಲಗೊಂಡು ಕ್ರಾಂತಿಯ ರೂಪವನ್ನು ತಾಳುತ್ತದೆ. ತರುಣನು ಗುರುಹಿರಿಯರ ಉಪದೇಶದಂತೆ ನಡೆಯುವದು ಕಡಿಮೆ. ಅವನು ಮನೆಯನ್ನೂ ಮನೆಯವರನ್ನೂ ನಂಬುವದಿಲ್ಲ. ಸಾಲೆಯನ್ನೂ ಶಿಕ್ಷಕರನ್ನೂ ನಂಬುವದಿಲ್ಲ. ಗುರುಹಿರಿಯರ ಆದೇಶಗಳನ್ನು ಲೆಕ್ಕಿಸದೆ ತನ್ನದನ್ನೇ ಸಾಧಿಸುತ್ತಾನೆ. ದೊಡ್ಡವರನ್ನು ಟೀಕಿಸುತ್ತಾನೆ, ಅವರೊಡನೆ ವಾದ ಹೂಡುತ್ತಾನೆ, ಪರಟು ಮಾತಾಡುತ್ತಾನೆ, ವರ್ತನದಲ್ಲಿ ಉದ್ಧಾಮತನ, ಕೆಲಸದಲ್ಲಿ ದುಡುಕುತನ ಕಂಡುಬರುತ್ತದೆ. ಸಂಘಪ್ರೇರಣೆಯು ಈಗ ಉದಾತ್ತ ರೂಪವನ್ನು ತಾಳುತ್ತದೆ. ಪರೋಪಕಾರ ಬುದ್ಧಿಯು ತಾರುಣ್ಯದಲ್ಲಿ ಉದಯವಾಗುತ್ತದೆ. ಸ್ವಾರ್ಥತ್ಯಾಗ, ಸಮಾಜಸೇವೆ, ಸ್ವದೇಶಾಭಿಮಾನ, ಮಾನವ ಬಂಧುತ್ವ ಎಂಬ ದೊಡ್ಡ ದೊಡ್ಡ ಧ್ಯೇಯಗಳಿಂದ ತರುಣನ ಹೃದಯವು ಕುದಿಯುತ್ತಿರುತ್ತದೆ. ಹೊಸ ಸಮಾಜ ಕಟ್ಟುವ ಕನಸು ಕಾಣುತ್ತಾನೆ. ಸಮಾಜದಲ್ಲಿಯ ಕುಂದುಕೊರತೆಗಳನ್ನು ಹೋಗಲಾಡಿಸ ಬೇಕೆಂದು ಸಂಘಗಳನ್ನು ಕಟ್ಟುತ್ತಾನೆ.

**ವಿರೋಪಾಸಕ:**— ತರುಣನು ಒಬ್ಬ ಆದರ್ಶ ಮೂರ್ತಿಯನ್ನು ಹುಡುಕಿಕೊಂಡು ಅವನ ಹಾದಿಯನ್ನೇ ತುಳಿಯಲು, ಅವನಂತೆಯೇ ಆಗಲು ಹವಣಿಸುತ್ತಾನೆ. ಬಾಲಕನಂತೆ ತರುಣನೂ ಪರಾವಲಂಬಿಯು. ಬಾಲಕನು

ತಂದೆತಾಯಿಗಳನ್ನು ಆಶ್ರಯಿಸದೆ ತರುಣನು ಬೇರೆ ಪುರುಷರನ್ನು ಆಶ್ರಯಿಸುತ್ತಾನೆ. ಜಗತ್ತಿನಲ್ಲಿ ಜೀವಿಸುತ್ತಿದ್ದ ಮಹಾವ್ಯಕ್ತಿಗಳಾಗಲಿ, ಸಾಹಿತ್ಯ, ವಿಜ್ಞಾನ, ಇತಿಹಾಸ, ಸಮಾಜಕ್ಷೇತ್ರಗಳಲ್ಲಿ ಹೆಸರುಗೊಂಡ ಮಹಾಪುರುಷರಾಗಲಿ ತರುಣರ ಮನಸ್ಸನ್ನು ಆಕರ್ಷಿಸುತ್ತಾರೆ. ದೊಡ್ಡವರ ಜೀವನ ಚರಿತ್ರೆಯನ್ನು ಓದಿ ತಾನೂ ಅವರಂತೆ ಒಬ್ಬ ಮಹಾಪುರುಷನಾಗಬೇಕೆಂದು ತರುಣನು ಬಯಸುತ್ತಾನೆ. ತಾನೂ ಒಬ್ಬ ಸಮಾಜಸುಧಾರಕ, ಲೋಕ ಕಾರಣಪಟು, ಬರೆಹಗಾರ, ಕವಿ, ವಿಜ್ಞಾನಿ ಅಥವಾ ತತ್ತ್ವಜ್ಞಾನಿ ಆಗಬೇಕೆಂಬ ಮಹತ್ವಾಕಾಂಕ್ಷೆಯನ್ನು ಇಟ್ಟುಕೊಳ್ಳುತ್ತಾನೆ. ತರುಣನ ವೀರಪೂಜಾಭಾವನೆಯ ವೃತ್ತಿಯು ಅವನ ಇಡೀ ಬಾಳುವೆಗೆ ಬೆಳಕನ್ನು ಕೊಡಬಲ್ಲದು.

## (v) ಶಿಕ್ಷಣದಲ್ಲಿಯ ಉಪಯೋಗ

ತಾರುಣ್ಯದಲ್ಲಿ ಎಲ್ಲ ಅವಯವಗಳು ಪೂರ್ಣ ಬೆಳವಣಿಗೆಯನ್ನು ಹೊಂದುವದರಿಂದ ಅವುಗಳ ಸ್ನಾಯುಗಳು ಬಲಪಟ್ಟಿರುತ್ತವೆ. ಒಳ್ಳೇ ಮೈಕಟ್ಟಿನವರಾಗಬೇಕೆಂದೂ ಕಸುವುಳ್ಳವರಾಗಬೇಕೆಂದೂ ತರುಣರು ಬಯಸುತ್ತಾರೆ. ಕಾರಣ ಅವರಿಗೆ ವ್ಯಕ್ತಿಗತ ಆರೋಗ್ಯ ಪಾಠಗಳನ್ನು ಕಲಿಸುವದು ಅವಶ್ಯ. ಸತ್ವವುಳ್ಳ ಆಹಾರ, ವ್ಯಾಯಾಮ, ಕೆಲಸ, ವಿಶ್ರಮ, ಆಟ ಇವುಗಳ ಮಹತ್ವವನ್ನು ಹುಡುಗರಿಗೆ ತಿಳಿಸಿಕೊಡಬೇಕು. ಶಾಲೆಯ ಕಾರ್ಯಕ್ರಮದಲ್ಲಿ ಸುವ್ಯವಸ್ಥಿತ ಶಾರೀರಿಕ ಚಟುವಟಿಕೆಗಳನ್ನು ಸೇರಿಸಬೇಕು. [illegible] ಆಟಗಳನ್ನು ಆಡಿಸಬೇಕು. ತರುಣರಿಗೆ ಎಂಟು ಹತ್ತು ತಾಸು ನಿದ್ದೆ ಅವಶ್ಯ. ಅವಯವಗಳೂ ಬುದ್ಧಿಯೂ ಪಕ್ವವಾಗಿರುವದರಿಂದ ಈ ಅವಧಿಯಲ್ಲಿ ಉದ್ಯೋಗಗಳಿಗೆ ಸಂಬಂಧಿಸಿದ ಚಟುವಟಿಕೆಗಳನ್ನು ಕಲಿಸುವದು ಅವಶ್ಯ. ಹುಡುಗರು ಈ ಅವಧಿಯಲ್ಲಿ ಹಾಯಸ್ಕೂಲಿನಲ್ಲಿ ಅಭ್ಯಾಸ ಮಾಡುತ್ತಿರುತ್ತಾರೆ. ಹಾಯಸ್ಕೂಲ ಅಭ್ಯಾಸ ಕಾರ್ಯಕ್ರಮದಲ್ಲಿ ನಾನಾಬಗೆಯ ವ್ಯವಸಾಯಗಳ ಪರಿಚಯವನ್ನು ಮಕ್ಕಳಿಗೆ ಮಾಡಿಕೊಡುವದು ಅವಶ್ಯ. ಅಮೇರಿಕೆಯ ಹಾಯಸ್ಕೂಲ ಶಿಕ್ಷಣದಲ್ಲಿ ವಿದ್ಯಾರ್ಥಿಗಳಿಗೆ ಸುಮಾರು ಎರಡ ನೂರು ಮೇಲ್ಪಟ್ಟು ಚಿಕ್ಕ ಪುಟ್ಟ ಉದ್ಯೋಗಗಳ ಪರಿಚಯವನ್ನು ಮಾಡಿ ಕೊಡುವ ಏರ್ಪಾಟು ಇಟ್ಟುಕೊಂಡಿರುವರು. ಆದರೆ ಪ್ರತಿಯೊಬ್ಬ ಹುಡುಗನು

ತನಗೆ ಬೇಕಾದ ಐದಾರು ಉದ್ಯೋಗಗಳನ್ನು ಅವುಗಳಲ್ಲಿ ಆರಿಸಿಕೊಳ್ಳುವನು. ಈ ಬಗೆಯ ಏರ್ಪಾಟು ನಮ್ಮಲ್ಲಿ ಇಲ್ಲದೇ ಇರುವದು ನಮ್ಮ ಶಿಕ್ಷಣದ ದೊಡ್ಡ ಕೊರತೆಯಾಗಿದೆ. ಹಸ್ತಕಲೆಗೂ ಯಾಂತ್ರಿಕ ಉದ್ಯೋಗಗಳಿಗೂ ಸಂಬಂಧಿಸಿದ ಚಟುವಟಿಕೆಗಳನ್ನು ನಮ್ಮ ಹಾಯಸ್ಕೂಲ ಕಾರ್ಯಕ್ರಮದಲ್ಲಿ ಸೇರಿಸುವದು ಅವಶ್ಯ.

ತರುಣನು ಕೂಡಲೇ ಉದ್ರೇಕಗೊಳ್ಳುವದು ಸಹಜ. ಹಿರಿಯರು ಅದನ್ನು ಕಂಡು ಸಿಟ್ಟಿಗೇಳುವದು ತಪ್ಪು. ತರುಣರು ಆತ್ಮಸಂಯಮನ ಕಲಿಯುವಂತೆ ಹಿರಿಯರು ಅವರಿಗೆ ಮಾರ್ಗಸೂಚನೆ ಮಾಡಲು ನೆರವಾಗ ಬೇಕು. ಕೇವಲ ಉದ್ರೇಕಗೊಳ್ಳುವುದರಿಂದ ತನ್ನ ಕಾರ್ಯವು ಸಾಧಿಸುವದಿಲ್ಲ ಎಂಬುದನ್ನು ತರುಣನು ತಿಳಿದುಕೊಳ್ಳಲಿ. ತಾನೊಬ್ಬನೇ ಸಿನೇಮಾ ನೋಡ ಲಿಕ್ಕೆ ಹೋಗುವ ಹಟ ಹಿಡಿದರೆ ಮನೆಯಲ್ಲಿರುವ ಇತರ ಹುಡುಗರೂ ಅದೇ ಸವಲತ್ತು ಬೇಡುವರೆಂಬುದನ್ನು ಅವನು ವಿಚಾರಿಸಲಿ. ಎಲ್ಲರಿಗೂ ಸಮನಾದ ಹಕ್ಕು ಉಂಟು, ಎಲ್ಲರೂ ಸರತಿಯ ಪ್ರಕಾರ ಸಿನೇಮಾ ನೋಡಲಿಕ್ಕೆ ಹೋಗಬಹುದು, ಮುಂತಾಗಿ ಅವನೇ ನಿರ್ಣಯಿಸಲಿ. ಈ ರೀತಿಯ ಅನುಭವ ಗಳಿಂದ ಉದ್ವೇಗಗಳನ್ನು ತರಬೇತುಗೊಳಿಸುವದು ಅವಶ್ಯ. ಶಾಲೆಯಲ್ಲಿಯೇ ಆಗಲಿ, ಮನೆಯಲ್ಲಿಯೇ ಆಗಲಿ ದೊಡ್ಡವರಂತೆ ಹೊಣೆಗಾರಿಕೆಯ ಕೆಲಸ ಗಳನ್ನು ಹುಡುಗರಿಗೆ ಒಪ್ಪಿಸಬೇಕು. ಇಂಥ ವೇಳೆಯಲ್ಲಿ ಗುರುಹಿರಿಯರು ಕೇವಲ ಮೇಲ್ವಿಚಾರಕರಾಗಿರತಕ್ಕದ್ದು. ಕಠಿಣ ಪ್ರಸಂಗಗಳಲ್ಲಿ ಹಿರಿಯರ ಆಶ್ರಯವು ಇದ್ದೇ ಇರುವದೆಂದು ಅವರಿಗೆ ಭರವಸೆಯಾಗಿರಲಿ. ತರುಣರು ವಿಚಾರಮಗ್ನರಾಗಿ ಗುಂಗಿನಲ್ಲಿ ಇರುವದು ಬಹಳ. ಕಾರಣ ಸರಿಕದ ಗೆಳೆಯರನ್ನು ಕೂಡಿಕೊಂಡಿರಲಿಕ್ಕೆ ಮತ್ತು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲಿಕ್ಕೆ ಅವರನ್ನು ಪ್ರೋತ್ಸಾಹಿಸಬೇಕು.

ಕಾಮಪ್ರೇರಣೆಯು ಸಂಪೂರ್ಣ ಬೆಳವಣಿಗೆ ಹೊಂದುವದು ತಾರುಣ್ಯಾ ಅವಸ್ಥೆಯಲ್ಲಿಯೇ. ಕಾರಣ ತರುಣರಿಗೆ ಕಾಮವಿಜ್ಞಾನದ ಪರಿಚಯ ಮಾಡಿಕೊಡುವದು ಶಿಕ್ಷಣದ ಹೊಣೆಗಾರಿಕೆಯ ಕೆಲಸ. ಸ್ತ್ರೀ ಪುರುಷರ ಜನನೇಂದ್ರಿಯಗಳ ವ್ಯಾಪಾರಗಳ ವಿವರಣೆ ಮಾತ್ರ ಕಾಮವಿಜ್ಞಾನವೆಂದು

ತಿಳಿಯುವದು ಆದರ ಸಂಕುಚಿತ ಅರ್ಥ. ಕಾಮವಿಜ್ಞಾನವೆಂಬುದು ಪ್ರಾಣಿ ವಿಜ್ಞಾನ, ಶರೀರವಿಜ್ಞಾನ, ಆರೋಗ್ಯವಿಜ್ಞಾನ ಮತ್ತು ಸಮಾಜವಿಜ್ಞಾನ ಎಂಬ ಮೂರು ನಾಲ್ಕು ಬಗೆಯ ಶಾಸ್ತ್ರಗಳಿಗೆ ಸಂಬಂಧಪಟ್ಟ ವಿಷಯ. ಇವೆಲ್ಲವುಗಳ ಜ್ಞಾನವು ಯುವಕರಿಗೆ ಮತ್ತು ಯುವತಿಯರಿಗೆ ಅವಶ್ಯ ವಾದದ್ದು. ಸರಿಯಾದ ರೀತಿಯಲ್ಲಿ ಕಾಮಶಿಕ್ಷಣವು ದೊರಕದ್ದರಿಂದ ಎಷ್ಟೋ ತರುಣ ತರುಣಿಯರು ತಮ್ಮ ಜೀವನವನ್ನೇ ಹಾಳುಮಾಡಿಕೊಳ್ಳುತ್ತಾರೆ. ಇಂದ್ರಿಯಗಳ ವ್ಯಾಪಾರಗಳ ಜ್ಞಾನವನ್ನು ವೈಜ್ಞಾನಿಕ ದೃಷ್ಟಿಯಿಂದ ಪಡೆಯು ಬೇಕು. ಶರೀರವಿಜ್ಞಾನದ ಜೊತೆಗೆ ನೈತಿಕ ಶಿಕ್ಷಣವನ್ನು ಕೊಡಬೇಕು. ನಂಬಿಗೆಯುಳ್ಳ ಹಿರಿಯರಿಂದ ಕಾಮಕೇಳಿಯ ಜ್ಞಾನವನ್ನು ಪ್ರತ್ಯೇಕವಾಗಿ ಒದಗಿಸುವದು ಒಳ್ಳೆಯದು. ಮದುವೆಯಾಗುವದು, ಮಕ್ಕಳನ್ನು ಪಡೆಯು ವದು, ಕುಟುಂಬ ಸಾಗಿಸುವದು ಇವು ಸಮಾಜವಿಜ್ಞಾನದ ವಿಷಯಗಳು. ಶೃಂಗಾರಕ್ಕೆ ಮನಸ್ಸು ಸೋತು ಸಮಾಜದಲ್ಲಿ ಹೊರಗೆಟ್ಟು ವರ್ತಿಸುವದು ದಡ್ಡತನ. ಸ್ತ್ರೀ–ಪುರುಷರ ಕಾಮಕೇಳಿಯು, ಗಂಡು ಹೆಣ್ಣುಗಳ ಕೂಟವು ಸ್ವಾಭಾವಿಕವೆಂಬ ವೈಜ್ಞಾನಿಕ ದೃಷ್ಟಿಯೂ ಬೆಳೆಯಬೇಕು. ಕಾಮ ವ್ಯವಹಾರದ ಬಗೆಗೆ ಮೂಢ ನಂಬುಗೆಗಳನ್ನು ಇಟ್ಟುಕೊಳ್ಳುವದಕ್ಕಿಂತ ವಿವೇಕ ದೃಷ್ಟಿಯನ್ನು ತಳೆಯುವದು ಮನಸ್ಸಿನ ಆರೋಗ್ಯವನ್ನು ಜಪ್ಪಿಸಲಿಕ್ಕೆ ಅವಶ್ಯವಾದದ್ದು. ಕಾಮ ವಿಜ್ಞಾನದ ಪರಿಚಯವಿಲ್ಲದ್ದರಿಂದ ಎಷ್ಟೋ ಯುವಕರೂ ಯುವತಿಯರೂ ತಮ್ಮ ಬಾಳುವೆಯನ್ನೇ ಹಾಳು ಮಾಡಿಕೊಳ್ಳುತ್ತಾರೆ. ತಾರುಣ್ಯದ ಮಬ್ಬು ತಲೆಗೇರಿ ಹುಚ್ಚರಂತೆ ವ್ಯವಹರಿಸುತ್ತಾರೆ. ಆದರೆ ಅವರು ಆತ್ಮ ಸಂಯಮನವನ್ನೂ ಇಂದ್ರಿಯ ನಿಗ್ರಹವನ್ನೂ ಸಾಧಿಸಬೇಕು. ಸ್ತ್ರೀ–ಪುರುಷರ ಸಂಭೋಗದ ವ್ಯವಹಾರವು ಪಾಪದ ಕೆಲಸವೆಂದು ಕೆಲವರು ತಿಳಿಯುತ್ತಾರೆ. ಆದರೆ ಅವರ ಈ ತಿಳುವಳಿಕೆಯು ತಪ್ಪು. ಕೆಲವು ಸನ್ನಿವೇಶಗಳಲ್ಲಿ ರತಿ ಕ್ರೀಡೆಯು ಅಸಾಮಾಜಿಕ ವರ್ತನ ಅಥವಾ ಅಪರಾಧವಾಗಿರಬಹುದು. ಆದರೆ ಶರೀರದ ಅನೇಕ ವ್ಯಾಪಾರಗಳಲ್ಲಿ ರತಿಕ್ರೀಡೆಯೂ ಒಂದು. ಅದರ ಬಗೆಗೆ ಪಾಪದ ಕಲ್ಪನೆಯನ್ನು ತಳೆಯುವದು ವ್ಯಕ್ತಿತ್ವ ವಿಕಾಸಕ್ಕೆ ತೊಡಕನ್ನು ಉಂಟು ಮಾಡುವುದರಿಂದ ಅದನ್ನು ಮನಸ್ಸಿನೊಳಗಿಂದ ತೆಗೆದು ಹಾಕಬೇಕು. ಸಮಾಜವು ಒಪ್ಪುವ ಇತರ ಚಟುವಟಿಕೆಗಳಲ್ಲಿ ಮನಸ್ಸನ್ನು ತೊಡಗಿ

ಕಾಮಪ್ರವೃತ್ತಿಯನ್ನು ಉದಾತ್ತಗೊಳಿಸಬಹುದೆಂದು ಫ್ರಾಯಿಡ್ ಮೊದಲಾದವರು ಹೇಳುತ್ತಾರೆ. ಚಿಕ್ಕಮಕ್ಕಳ ಜೋಪಾನ, ಬೇನೆಯವರ ಆರೈಕೆ, ಸಾಲೆ ಕಲಿಸುವದು, ಗೆಳೆತನ, ಸಮಾಜಸೇವೆ, ಆಧ್ಯಾತ್ಮಿಕ ಚಟುವಟಿಕೆ ಮೊದಲಾದ ಚಟುವಟಿಕೆಗಳಲ್ಲಿ ಯುವಕರನ್ನು ತೊಡಗಿಸಿ ಅವರ ಕಾಮ ಪ್ರೇರಣೆಯನ್ನು ಉದಾತ್ತಗೊಳಿಸಬೇಕು. ಕಾಮುಕತೆಯು ಮಾನಸಿಕ ಬಲವು. ಅದನ್ನು ಮಾನಸಿಕ ರೀತಿಯಿಂದಲೇ ಹತೋಟಿಯಲ್ಲಿ ಇಟ್ಟುಕೊಳ್ಳಲು ಸಾಧ್ಯ. ಕಾಮೇಂದ್ರಿಯ ವ್ಯವಹಾರದ ಆಗುಹೋಗುಗಳ ಬಗೆಗೆ ವಿವೇಕಾತ್ಮಕ ಜ್ಞಾನ ಪಡೆಯುವದು ಸರಿಯಾದ ಹಾದಿ. ಈ ಸಂದರ್ಭದಲ್ಲಿ ಮುಪ್ಪಿನ ಷಡಕ್ಷರಿಯವರು ಹೇಳುವ ಬುದ್ಧಿಯ ಮಾತು— "ವಿರತಿ ವಿರತಿ ಎಂಬರಯ್ಯ, ವಿರತಿ ಸುಲಭವಲ್ಲವಯ್ಯ; ವಿರತಿ ತನುವಿನಾಶೆ ಅಳಿದಡಾತ ವಿರತನು" —ಎಂಬುದು ಮಾರ್ಗಸೂಚಕವಾಗಿದೆ. ಪರವಧುವನು ಮಹಾದೇವಿ ಎಂದು ಕಾಣಬೇಕು. ಕಾಮಪ್ರಚೋದನೆಯ ಸಂದರ್ಭಗಳನ್ನು ತಪ್ಪಿಸಬೇಕು. ಆತ್ಮಸಂಯಮನವನ್ನು ಕಲಿಯಬೇಕು. ಇವೆಲ್ಲವು ಕಾಮೋದ್ರೇಕಗಳನ್ನು ಶಾಂತಗೊಳಿಸುವ ಪರಿಹಾರಗಳು.

ತಾರುಣ್ಯದಲ್ಲಿ ಮಾನಸಿಕ ಬೆಳವಣಿಗೆಯು ಕೊನೆಯ ಮಟ್ಟವನ್ನು ಸಮೀಪಿಸಿರುವದರಿಂದ ತರುಣರಲ್ಲಿ ವಿಚಾರಶಕ್ತಿ, ಅವಧಾನಶಕ್ತಿ, ಮುಂದಾಲೋಚನೆಯ ಶಕ್ತಿ ಮೊದಲಾದ ಬುದ್ಧಿಸಾಮರ್ಥ್ಯಕ್ಕೆ ಸಂಬಂಧಿಸಿದ ಶಕ್ತಿಗಳು ಬೆಳೆದಿರುತ್ತವೆ. ಹುಡುಗರ ಈ ಬುದ್ಧಿ ಬೆಳವಣಿಗೆಗೆ ತಕ್ಕಂತೆ ಕಲಿಸುವ ಪದ್ಧತಿಗಳನ್ನು ಹೊಂದಿಸಬೇಕು. ಪ್ರಾಥಮಿಕ ಸಾಲೆಯ ಹುಡುಗರು ತೋಟದ ಕೆಲಸವನ್ನು ಮಾಡುವಾಗ ಕಳೆ ತೆಗೆಯುವದು, ಬೀಜ ಬಿತ್ತುವದು, ನೀರು ಹಣಿಸುವದು ಮುಂತಾದ ಪ್ರತ್ಯಕ್ಷ ಅನುಭವದಲ್ಲಿ ಅಭಿರುಚಿ ಉಳ್ಳವರಾಗುವರು. ಆದರೆ ಅದೇ ತೋಟದ ಕೆಲಸವನ್ನು ಹಾಯಸ್ಕೂಲಿನಲ್ಲಿ ಮಾಡುವಾಗ ದೊಡ್ಡವರಾದ ಹುಡುಗರು ಅದರ ಬಗೆಗೆ ಸಂಗತಿಗಳನ್ನು ವಿಚಾರದಿಂದ ತಿಳಿದುಕೊಳ್ಳಬಲ್ಲರು. ಬೀಜ ಬಿತ್ತಲಿಕ್ಕೆ ಸರಿಯಾದ ಕಾಲ, ಬೆಳೆಯ ರೋಗಗಳು, ಕಾಯಿಪಲ್ಲೆಯ ಸಾಗಾಟ ಮತ್ತು ಮಾರಾಟ, ಈ ಉದ್ಯೋಗದಿಂದ ಆಗುವ ಲಾಭ ಹಾನಿ ಮೊದಲಾದ ಸಂಗತಿಗಳನ್ನು ಅವರು ವಿಚಾರಿಸಬಲ್ಲರು. ವಯಸ್ಸು ಹೆಚ್ಚಿದ ಹಾಗೆ ಸೂಕ್ಷ್ಮ ಸಂಗತಿಗಳನ್ನು

ವಿವೇಚಿಸುವ ಸಾಮರ್ಥ್ಯವು ಬೆಳೆಯುವದರಿಂದ ಕಲಿಸುವ ಪದ್ಧತಿಯ ಕೆಲವು ಸಾಮಾನ್ಯ ನಿಯಮಗಳನ್ನು ಇಲ್ಲಿ ಸೂಚಿಸಿದೆ. ಅವು ಯಾವೆಂದರೆ—ಸ್ಥೂಲದಿಂದ ಸೂಕ್ಷ್ಮಕ್ಕೆ ಸಾಗು; ವಿಶೇಷದಿಂದ ಸಾಮಾನ್ಯಕ್ಕೆ ಸಾಗು; ಪ್ರತ್ಯಕ್ಷದಿಂದ ಅಪ್ರತ್ಯಕ್ಷಕ್ಕೆ ಸಾಗು; ಮೂರ್ತದಿಂದ ಅಮೂರ್ತಕ್ಕೆ ಸಾಗು; ಸಮೀಪದ ಸ್ಥಳದ ವಿಷಯದಿಂದ ದೂರದ ವಿಷಯಕ್ಕೆ ಸಾಗು; ವರ್ತಮಾನಕಾಲದಿಂದ ಭೂತ ಮತ್ತು ಭವಿಷತ್ತು ಕಾಲಕ್ಕೆ ಸಾಗು; ಮತ್ತು ವ್ಯಕ್ತಿಗಿಂತ ವ್ಯಕ್ತಿಯು ಆಚರಿಸುವ ತತ್ವಕ್ಕೆ ಸಾಗು. ಪ್ರತ್ಯಕ್ಷ ಅನುಭವ ಕೊಟ್ಟು ಕಲಿಸುವದು ಎಲ್ಲಕ್ಕೂ ಮಿಗಿಲಾದ ನಿಯಮ. ನಿದರ್ಶನ ಪದ್ಧತಿಯು ಹೆಚ್ಚು ಪರಿಣಾಮಕಾರಕವಾದುದು. ಸ್ಥೂಲವಾದ ನಿದರ್ಶನಗಳನ್ನು ಹುಡುಕುವದು ಮತ್ತು ತೋರಿಸುವದು ಸ್ವಲ್ಪ ಶ್ರಮದ ಕೆಲಸವಾದ್ದರಿಂದ ಕೇವಲ ಶಬ್ದಗಳ ವಿವರಣೆಯಿಂದ ಪಾಠವನ್ನು ಸಾಗಿಸುವ ಒಲವು ಶಿಕ್ಷಕರಲ್ಲಿ ಹೆಚ್ಚು. ಹೀಗೆ ಮಾಡುವುದರಿಂದ ಶಿಕ್ಷಕನು ತನ್ನ ಕರ್ತವ್ಯವನ್ನು ತಾನು ಮಾಡದೇ ಬಿಟ್ಟಂತೆ ಆಗುವದು. ಉದಾಹರಣೆಗಾಗಿ ದ್ರವ ಮತ್ತು ಘನ ಪದಾರ್ಥಗಳಲ್ಲಿಯ ವ್ಯತ್ಯಾಸವನ್ನು ಬರ್ಫ, ನೀರು ಮತ್ತು ಉಗಿ ಇವುಗಳನ್ನು ಪ್ರತ್ಯಕ್ಷ ತೋರಿಸಿ ಕಲಿಸಬೇಕು. ಪ್ರಾಥಮಿಕ ಶಿಕ್ಷಣ ಮೊದಲು ಮಾಡಿಕೊಂಡು ಕಾಲೇಜ ಶಿಕ್ಷಣದ ಕೊನೆಯ ವರೆಗೂ ವಿದ್ಯಾರ್ಥಿಗಳಿಗೆ ಪ್ರತ್ಯಕ್ಷ ಅನುಭವಗಳನ್ನು ಪೂರೈಸುವದು ಮಹತ್ವವಾದದ್ದು ಮತ್ತು ಅವಶ್ಯವಾದದ್ದು. ದೊಡ್ಡ ಹುಡುಗರಿಗೆ ಪ್ರಾಯೋಗಿಕ ಉದ್ದೇಶಯುತ ಮತ್ತು ರಚನಾತ್ಮಕ ಚಟುವಟಿಕೆಗಳನ್ನು ಹೇರಳವಾಗಿ ಒದಗಿಸಿ ಕೊಡಬೇಕು. ಅವರ ಪಾಠದ ಅವಧಿಗಳು ಮೂವತ್ತು ಮಿನಿಟಿನಿಂದ ನಾಲ್ವತ್ತು ಮಿನಿಟುಗಳ ವರೆಗೆ ಇದ್ದರೆ ನಡೆಯುವದು. ಕಾರ್ಯಕ್ರಮವನ್ನು ಯೋಜಿಸುವಲ್ಲಿ ಮತ್ತು ಯೋಜಿಸಿದಂತೆ ಕೆಲಸವನ್ನು ನೆರವೇರಿಸುವಲ್ಲಿ ಹೊಣೆಗಾರಿಕೆಯನ್ನು ಹೆಚ್ಚಾಗಿ ಅವರ ಮೇಲೆಯೇ ಇರಿಸಬೇಕು. ತರುಣರ ಅತಿ ದೊಡ್ಡ ಮೂರು ಸಮಸ್ಯೆಗಳೆಂದರೆ—ಕಾಮವರ್ತನೆಯನ್ನು ಹೇಗೆ ಇಟ್ಟುಕೊಳ್ಳಬೇಕು, ಶಿಕ್ಷಣವು ಮುಗಿದ ಮೇಲೆ ಯಾವ ಉದ್ಯೋಗವನ್ನು ಆರಿಸಿಕೊಂಡು ಪ್ರಪಂಚವನ್ನು ಸಾಗಿಸಬೇಕು ಮತ್ತು ಮುಂದೆ ಪ್ರೌಢಾವಸ್ಥೆಯ ನಾಗರಿಕ ಜೀವನವನ್ನು ಹೇಗೆ ಪ್ರಾರಂಭಿಸಬೇಕು. ಈ ಬಗೆಯ ಸ್ಥಿತಿಯಲ್ಲಿ ಶಿಕ್ಷಣವು ಅವರಿಗೆ ಸರಿಯಾದ ಹಾದಿಯನ್ನು

ತೋರಿಸಬೇಕು. ಕಾಮಶಿಕ್ಷಣದ ಬಗೆಗೆ ಮೇಲೆ ಕೆಲವು ಸೂಚನೆಗಳನ್ನು ಕೊಟ್ಟಿದೆ. ತರುಣರನ್ನು ಕುರಿತು ಹಾಯಸ್ಕೂಲಿನಲ್ಲಿ ಉದ್ಯೋಗ ಶಿಕ್ಷಣ, ನಾಗರಿಕ ಶಿಕ್ಷಣ, ಸಾಂಸ್ಕೃತಿಕ ಶಿಕ್ಷಣ ಮತ್ತು ಲೋಕದ ಆಡಳಿತೆಯ ಶಿಕ್ಷಣದ ಬಗೆಗೆ ಏರ್ಪಾಟು ಇಟ್ಟುಕೊಳ್ಳಬೇಕು.

ತಾರುಣ್ಯದಲ್ಲಿ ರೂಢಿಗೊಂಡ ನೀತಿನಡಾವಳಿಗಳು ಕಡೆತನಕ ಉಳಿಯುವವು. ತರುಣರಲ್ಲಿರುವ ಸ್ವಾತಂತ್ರ್ಯವೃತ್ತಿಯು ಅನೇಕ ರೂಪವನ್ನು ತಾಳುತ್ತದೆ. ಮಡುಕುತನ, ಉದ್ದಾಮತನ, ದೊಡ್ಡವರ ಟೀಕೆ ಮಾಡುವದು, ಗೊಂದಲ ಹಾಕುವದು, ವಾದ ಮಾಡುವದು, ವರಟು ನುಡಿಯುವದು, ಆಜ್ಞೆಯನ್ನು ಉಲ್ಲಂಘಿಸುವದು, ಆದೇಶಗಳನ್ನು ಪ್ರತಿಭಟಿಸುವದು ಮುಂತಾದವು ಸ್ವಾತಂತ್ರ್ಯಪ್ರೇರಣೆಯ ರೂಪಾಂತರಗಳು. ಈ ವೃತ್ತಿಯನ್ನು ಸತ್ಯಶೋಧನೆ ಮತ್ತು ಸಮಾಜದ ಹಿತದ ಕಡೆಗೆ ಪರಿವರ್ತಿಸಬೇಕು. ತರುಣರಲ್ಲಿ ವಿವೇಕವೃತ್ತಿಯನ್ನು ಬೆಳೆಯಿಸಬೇಕು. ಅವರಲ್ಲಿ ಕ್ರಾಂತಿ ಕಿಡಿಯು ಪ್ರಖರವಾಗಿರುತ್ತದೆ. ಅದನ್ನು ಪರೋಪಕಾರದಲ್ಲಿಯೂ ಸಮಾಜಸೇವೆಯಲ್ಲಿಯೂ ಉಪಯೋಗಿಸುವಂತೆ ತರುಣರಿಗೆ ಹಾದಿಯನ್ನು ತೋರಿಸಬೇಕು. ಆದರ್ಶಮಯವಾದ ಹೊಸ ಸಮಾಜವನ್ನು ಕಟ್ಟಬೇಕೆಂದು ಯುವಕರು ಹಂಬಲಿಸುತ್ತಾರೆ. ಸ್ವಭಾವತಃ ತರುಣರು ಸಮಾಜಸುಧಾರಕರು. ಜಾಣನಾದ ಶಿಕ್ಷಕನು ತರುಣರಲ್ಲಿ ಮೊಳೆಯುತ್ತಿರುವ ಪರೋಪಕಾರ, ಸ್ವಾರ್ಥತ್ಯಾಗ, ಸಮಾಜಸೇವೆ ಎಂಬ ಸಾಮಾಜಿಕ ವೃತ್ತಿಗಳನ್ನು ಸಾಲೆಯ ಹಿತಕ್ಕೆ ನೆರವಾಗುವಂತೆ ಪರಿವರ್ತಿಸಲು ಪ್ರಯತ್ನಿಸಬೇಕು. ಮಹಾತ್ವಾಕಾಂಕ್ಷೆಯುಳ್ಳವರಾಗಿ ದೊಡ್ಡ ದೊಡ್ಡ ಧ್ಯೇಯಗಳನ್ನು ಮುಂದಿಟ್ಟುಕೊಳ್ಳುವಾಗ ಯಾವನಾದರೊಬ್ಬ ಆದರ್ಶ ವ್ಯಕ್ತಿಯನ್ನು ತರುಣರು ಹುಡುಕುತ್ತಾರೆ. ಪ್ರಪಂಚದಲ್ಲಿ ಜೀವಿಸುತ್ತಿರುವ ಮಹಾತ್ಮರಾಗಲಿ, ಸಮಾಜ ಸುಧಾರಕರಾಗಲಿ, ವೈಜ್ಞಾನಿಕರಾಗಲಿ ಅಥವಾ ಇತಿಹಾಸ ಮತ್ತು ಸಾಹಿತ್ಯದಲ್ಲಿ ಹೆಸರುಗೊಂಡ ಮಹಾಪುರುಷರಾಗಲಿ ತರುಣರ ಮನಸ್ಸನ್ನು ಸೆಳೆಯುತ್ತಾರೆ. ಪ್ರಾಯದ ಶಿಕ್ಷಕರೂ, ಶಿಕ್ಷಿಕೆಯರೂ ಒಮ್ಮೊಮ್ಮೆ ಅವರಿಗೆ ಆದರ್ಶ ವ್ಯಕ್ತಿಗಳಾಗಬಹುದು. ಈ ತರದವ ವೀರೋಪಾಸನೆಯು ತರುಣರಲ್ಲಿ ಕಂಡು ಬರುತ್ತದೆ. ಆದರೆ ವ್ಯಕ್ತಿಗಳ ಆರಾಧನೆಗಿಂತ ವ್ಯಕ್ತಿಗಳಲ್ಲಿರುವ ಗುಣಗಳ ಆರಾಧನೆಯ ಕಡೆಗೆ

ತರುಣರ ದೃಷ್ಟಿಯನ್ನು ಹೊರಳಿಸುವದು ಉಪಾಧ್ಯಾಯರ ಪರಮ ಕರ್ತವ್ಯ. ಭೌತಿಕ ವಿಜ್ಞಾನ, ತತ್ವಜ್ಞಾನ, ಲೋಕಕಾರ್ಯ, ಸಮಾಜ ಸುಧಾರಣೆ, ಸಾಹಿತ್ಯ, ಕಲೆ, ಸರಲ ಜೀವನ, ಆಧ್ಯಾತ್ಮಿಕ ಸಾಧನ ಮೊದಲಾದ ಯಾವುದಾದರೊಂದು ಧ್ಯೇಯಸಾಧನೆಯಲ್ಲಿ ಆತ್ಮಪ್ರಕಾಶನವನ್ನು ಹೊಂದುತ್ತ ಎಷ್ಟೋ ಯುವಕರು ದೊಡ್ಡವರಾದ ಮೇಲೆ ತಮ್ಮ ಜೀವನವನ್ನು ಸಾಗಿಸುತ್ತಾರೆ. ತರುಣರ ವೀರೋಪಾಸನೆಯ ವೃತ್ತಿಯನ್ನು ವೀರರ ನೈತಿಕ ಗುಣಗಳ ಅನುರಾಗದಲ್ಲಿ ( ಸ್ಥಿರವೃತ್ತಿಯಲ್ಲಿ ) ಮಾರ್ಪಡಿಸಬೇಕು. ಈ ಗುಣಗಳು ತರುಣರ ಸ್ವಂತ ವ್ಯಕ್ತಿತ್ವದಲ್ಲಿ ಬೆರೆಯಬೇಕು. ಆಗ ಅವರ ವ್ಯಕ್ತಿತ್ವವು ಒಂದು ಸ್ಥಿರವಾದ ರೂಪವನ್ನು ಹೊಂದುತ್ತದೆ. ನೈತಿಕ ಶ್ರೇಷ್ಠ ಗುಣಗಳು ವ್ಯಕ್ತಿತ್ವದಲ್ಲಿ ನಿಶ್ಚಲವಾಗಿ ನೆಲೆಗೊಂಡರೆ ಇಚ್ಛಾಶಕ್ತಿಯು ಬಲಪಡುತ್ತದೆ. ಸಾಮಾಜಿಕ ಸ್ತುತಿ ನಿಂದೆಗಳಿಗಿಂತ ಉದಾತ್ತ ಧ್ಯೇಯಗಳಿಂದ ಪ್ರೇರಿಸಲ್ಪಟ್ಟ ವರ್ತನವು ಅತ್ಯಂತ ಮೇಲುಮಟ್ಟದ ನೈತಿಕ ಆಚರಣೆ :

"ಆರು ಮುನಿದು ಎಮ್ಮನೇನು ಮಾಡುವರು ?
ಊರು ಮುನಿದು ಎಮ್ಮನೆಂತು ಮಾಡುವರು ?....
ಲೋಕ ವಿರೋಧಿ! ಶರಣನಾರಿಗಂಜುವನಲ್ಲ !
ಕೂಡಲ ಸಂಗಮದೇವನ ರಾಜತೇಜದಲ್ಲಿಪ್ಪನಾಗಿ !"

—ಬಸವ

ಹೀಗೆಂದು ಬಸವಣ್ಣನವರು ಸಾರುವಾಗ ಅವರು ಉದಾತ್ತ ಧ್ಯೇಯಕ್ಕೆ ಮನ್ನಣೆ ಕೊಟ್ಟರಲ್ಲದೆ ಜನರ ಹೊಗಳಿಕೆ ತೆಗಳಿಕೆಗಳಿಗೆ ಅಥವಾ ಲೋಕದ ಹಂಗಿಗೆ ಮಹತ್ವ ಕೊಡಲಿಲ್ಲ. ಲೋಕದವರ ಸ್ತುತಿ ನಿಂದೆಗಳನ್ನು ಲೆಕ್ಕಿಸದೆ ಧೈರ್ಯದಿಂದ ಮತ್ತು ಸಮಾಧಾನದಿಂದ ನಡೆಯುತ್ತ ತಮ್ಮಲ್ಲಿ ಇರುವ ಒಳಬೆಳಕನ್ನು ಉಜ್ವಲಿಸುವವರು ಅತಿ ವಿರಳ. ಆದರೆ ಅವರೇ ಜಗತ್ತಿನ ಮಹಾ ವಿಭೂತಿಗಳು. " ಜನಮೆಚ್ಚಿ ನಡೆಕೊಂಡರೇನುಂಟು ಲೋಕದ ಮನಮೆಚ್ಚಿ ನಡೆಕೊಂಬುವುದೇ ಚಂದವು. "

## ಪ್ರೌಢಾವಸ್ಥೆ—ಹದಿನೆಂಟರಿಂದ ಮುಂದೆ

ಮಗುವು ತನ್ನ ಹದಿನೆಂಟನೇ ವಯಸ್ಸಿಗೆ ತಾರುಣ್ಯವನ್ನು ದಾಟಿ ಪ್ರೌಢಾವಸ್ಥೆಯಲ್ಲಿ ಕಾಲಿಡುತ್ತಾನೆ. ಆಗ ಅವನು ಮತ್ತೆ ಹೊರಗಿನ ಪ್ರಪಂಚದಲ್ಲಿ ಆಸಕ್ತನಾಗುತ್ತಾನೆ. ತಾರುಣ್ಯದ ಕಾಲಕ್ಕೆ ಅವನಲ್ಲಿ ಮನೆ ಮಾಡಿಕೊಂಡಿದ್ದ ದೊಡ್ಡ ದೊಡ್ಡ ಧ್ಯೇಯಗಳೂ, ಮನಸ್ಸಿನ ಮಂಡಿಗೆಗಳೂ ಬಾಳುವೆಯ ಬಿರುಗಾಳಿಯ ಹೊಡೆತಕ್ಕೆ ಕೊಚ್ಚಿ ಹೋಗುತ್ತವೆ. ಜಗತ್ತಿನ ಜಂಜಾಟದಲ್ಲಿ ಮನೋಭ್ರಮೆಯು ಮಾಯವಾಗುತ್ತದೆ; ವ್ಯವಹಾರ ದೃಷ್ಟಿಯು ಬಲಗೊಳ್ಳುತ್ತದೆ. ಸಂಸಾರವನ್ನು ಸಾಗಿಸಲಿಕ್ಕೆ ಅವನು ಒಂದು ಕಾಯಕವನ್ನು ಕೈಕೊಳ್ಳುತ್ತಾನೆ. ಕಾರಣ ಅವನನ್ನು ನಾಗರಿಕ ಜೀವನಕ್ಕೆ ಸಿದ್ಧಗೊಳಿಸಲು ಶಿಕ್ಷಣದ ಹೆಗ್ಗುರಿಯಾಗಿರಬೇಕು. ಪ್ರತಿನಿತ್ಯದ ಬದುಕು ಬಾಳುವೆಯಲ್ಲಿ ಸಹಕಾರಕ್ಕಿಂತ ಸ್ಪರ್ಧೆಯೇ ಹೆಚ್ಚಾಗಿರುತ್ತದೆ; ಅನೇಕ ಸಮಸ್ಯೆಗಳು ಎದುರಾಗುತ್ತವೆ. ಎಡರುತೊಡರುಗಳೂ, ಅನುವು ಆಪತ್ತುಗಳೂ ಬಂದೊದಗುತ್ತವೆ. ಅಧಿಕಾರಲಾಲಸೆ ಮತ್ತು ಇತರರನ್ನು ಮೀರಬೇಕೆಂಬ ಆಶೆ ಒಡೆದು ಕಾಣುತ್ತದೆ. ತನ್ನ ಉದ್ಯೋಗ ವ್ಯವಸಾಯದಲ್ಲಿ ಮುಂದುವರಿಯಬೇಕು, ಹೆಚ್ಚು ಹಣ ಗಳಿಸಬೇಕು, ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆಯಬೇಕು ಮುಂತಾಗಿ ಇವರು ಬಯಸುತ್ತಾರೆ. ಪ್ರೌಢಾವಸ್ಥೆಯಲ್ಲಿ ಜೀವನದೃಷ್ಟಿ ಮತ್ತು ಶೀಲವು ಸ್ಥಿರತೆಯನ್ನು ಹೊಂದುವದು. ಈ ಎಲ್ಲ ಸಂಗತಿಗಳದೃಷ್ಟಿಯಿಂದ ಸಾಲೆ ಕಾಲೇಜಗಳ ಅಭ್ಯಾಸಕ್ರಮವನ್ನು ಮಾರ್ಪಡಿಸಬೇಕು. ನಿಜವಾದ ಶಿಕ್ಷಣವು ಜೀವನದ ಮಾರ್ಗವನ್ನು ತೋರಿಸಬೇಕು. ಅನೇಕ ಜನರು ತಮ್ಮ ಯೌವನದ ಕಾಲದಲ್ಲಿ ಆದರ್ಶ ವ್ಯಕ್ತಿಗಳಾಗಿದ್ದವರನ್ನು ಅನುಕರಿಸುತ್ತ ಇಹಲೋಕದ ಯಾತ್ರೆಯನ್ನು ಮುಗಿಸುತ್ತಾರೆ.

## ಬೆಳವಣಿಗೆಗೆ ತಕ್ಕ ಶಿಕ್ಷಣದ ಯೋಜನೆ

ಈಗ ಸಾಲೆಯಲ್ಲಿ ನಡೆಯುತ್ತಿರುವ ಶಿಕ್ಷಣವು ಸರಿಯಾಗಿ ಇರುವದಿಲ್ಲವೆಂದು ಪಾಲಕರೂ ಮತ್ತು ಶಿಕ್ಷಣ ತಜ್ಞರೂ ಅನ್ನುತ್ತಿರುವರು. ಇಂಡಿಯಾದ

ಶಿಕ್ಷಣ ಯೋಜನೆಯಲ್ಲಿ ಸಂಪೂರ್ಣ ಬದಲಾವಣೆ ಆಗಬೇಕೆಂದು ಎಲ್ಲರೂ ಅಭಿಪ್ರಾಯಪಡುತ್ತಾರೆ. ಈಗಿರುವ ಕುಂದುಕೊರತೆಗಳು ಯಾವವು ಮತ್ತು ಅವುಗಳನ್ನು ಹೋಗಲಾಡಿಸುವ ಬಗೆಗಳು ಯಾವವು ಎಂಬುದನ್ನು ನಾವು ಮನೋವಿಜ್ಞಾನದ ದೃಷ್ಟಿಯಿಂದ ವಿಚಾರಿಸಬೇಕಾಗಿದೆ. ಮಗುವಿನ ಬೆಳವಣಿಗೆಯ ಮಟ್ಟಗಳನ್ನು ಮತ್ತು ಆ ಆ ಅವಧಿಗಳಲ್ಲಿ ಪ್ರಬಲವಾಗಿರುವ ಅವನ ಅಭಿರುಚಿಗಳನ್ನು ಅನುಸರಿಸಿ ಶಿಕ್ಷಣದ ಯೋಜನೆಯನ್ನು ಮಾಡಿದರೆ ಮಾತ್ರ ಅದು ಸರಿಯಾದ ಹಾದಿಯಲ್ಲಿ ಸಾಗುವದು. ಬೆಳೆಯುತ್ತಿರುವ ಮಗುವಿನ ಲಕ್ಷಣಗಳು ಮತ್ತು ಲೋಕಸತ್ತೆಯ ಸಾಮಾಜಿಕ ಬೇಡಿಕೆಗಳು ಹೀಗೆ ಎರಡೂ ದೃಷ್ಟಿಗಳನ್ನು ಕೂಡಿಸಿಕೊಂಡು ಸಾಲೆಯ ಅಭ್ಯಾಸ ಕ್ರಮವನ್ನು ರಚಿಸಿದರೆ ಅದು ಪ್ರಯೋಜನಕಾರಿಯಾಗುವದು.

ಮಗುವು ಬೇರೆ ಬೇರೆ ಮಟ್ಟದಲ್ಲಿ ಅಥವಾ ಸ್ಥಳದಲ್ಲಿ ಇರುವಾಗ ಅವನಲ್ಲಿ ಬೇರೆ ಬೇರೆ ಲಕ್ಷಣಗಳು ಒಡೆದು ಕಾಣುತ್ತವೆಂದು ಮೇಲೆ ವಿವರಿಸಿದೆ. ಆ ಆ ಅವಧಿಯ ಸಾಮಾನ್ಯ ಲಕ್ಷಣಗಳನ್ನು ಮುಂದಿಟ್ಟುಕೊಂಡು ಶಿಕ್ಷಣ ಯೋಜನೆಯಲ್ಲಿ ಕೆಲವು ಹಂತಗಳನ್ನು ಮಾಡುತ್ತಾರೆ. ಆ ಹಂತಗಳ ಸ್ಥೂಲ ರೂಪವನ್ನು ಕೆಳಗೆ ಕೊಟ್ಟಿರುತ್ತದೆ:

| ಹೆಸರು | ತರಗತಿ | ವಯ |
|---|---|---|
| ೧. ಮನೆ | — | ೧—೬ |
| ೨. ಶಿಶು ಸಾಲೆ (ಪೂರ್ವ ಪ್ರಾಥಮಿಕ ಸಾಲೆ) | ಕಿಂಡರ ಗಾರ್ಟನ್ | ೩—೬ |
| ೩. ಪ್ರಾಥಮಿಕ ಶಿಕ್ಷಣ | ೧—೬ | ೭—೧೨ |
| (ಅ) ಪ್ರಾಥಮಿಕ ಸಾಲೆ | ೧—೩ | ೭—೧೦ |
| (ಆ) ಮಾಧ್ಯಮಿಕ ಸಾಲೆ | ೪—೬ | ೧೦—೧೨ |
| ೪. ಹಾಯಸ್ಕೂಲ ಶಿಕ್ಷಣ | ೭—೧೨ | ೧೪—೧೮ |
| ಜ್ಯೂನಿಯರ ಹಾಯಸ್ಕೂಲ | ೭—೯ | ೧೩—೧೫ |
| ಸೀನಿಯರ ಹಾಯಸ್ಕೂಲ | ೧೦—೧೨ | ೧೬—೧೮ |
| ೫. ಕಾಲೇಜ (ಮೇಲಿನ) ಶಿಕ್ಷಣ | ೧೩—೧೬ | ೧೯—೨೨ |
| ೬. ಪೋಸ್ಟ ಗ್ರಾಜುಯೇಟ ಶಿಕ್ಷಣ | ೧೭—೨೨ | ೨೩—೨೮ |

ಇದು ಅಮೇರಿಕೆಯಲ್ಲಿ ಈಗ ಇರುವ ಶಿಕ್ಷಣ ನಿಚ್ಚಣಿಕೆ. ಈ ತರಹದ ಶಿಕ್ಷಣ ವ್ಯವಸ್ಥೆಯು ತುಸು ಹೆಚ್ಚು ಕಡಿಮೆ ಎಲ್ಲ ದೇಶಗಳಲ್ಲಿ ಇರುತ್ತದೆ. ಚಿಕ್ಕ ಮಕ್ಕಳ ಆರಂಭದ ಶಿಕ್ಷಣಕ್ಕಾಗಿ ಮೊಂಟೀಸರಿ ಸಾಲೆಗಳು, ಕಿಂಡರಗಾರಟನ್ ಸಾಲೆಗಳು, ಅಥವಾ ನರಸರಿ ಸಾಲೆಗಳು ಇಂಗ್ಲಂಡ ಅಮೇರಿಕೆಗಳಲ್ಲಿ ಹಬ್ಬಿದಂತೆ ನಮ್ಮ ದೇಶದಲ್ಲಿ ಅಷ್ಟೊಂದು ಪ್ರಚಾರಕ್ಕೆ ಬಂದಿಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಕೇವಲ ಶ್ರೀಮಂತರ ಮಕ್ಕಳಿಗಾಗಿ ಇಂಥ ಸಾಲೆಗಳು ಅಲ್ಲೊಂದು ಇಲ್ಲೊಂದು ಇರುತ್ತವೆ. ಆದರೆ ಪೂರ್ವ ಪ್ರಾಥಮಿಕ ಶಿಕ್ಷಣವು ಕೂಡ ದೇಶದ ಎಲ್ಲ ಜನರ ಮಕ್ಕಳಿಗೆ ಉಚಿತವಾಗಿ ದೊರಕುವಂತೆ ಅನುಕೂಲ ಮಾಡಿಕೊಡುವದು ಒಳ್ಳೆಯದು. ಈ ಅವಧಿಯ ಅಭ್ಯಾಸಕ್ರಮವೆಂದರೆ ಆರೋಗ್ಯದ ಚಟಗಳು, ಚಟುವಟಿಕೆ, ಆಟ, ಚಿತ್ರಕಲೆ ಮತ್ತು ಸಾಮಾಜಿಕ ವರ್ತನ. ನಮ್ಮಲ್ಲಿ ಈಗ ಏಳರಿಂದ ಹದಿನಾಲ್ಕು ವಯಸ್ಸಿನ ವರೆಗೆ ಪ್ರಾಥಮಿಕ ಶಿಕ್ಷಣದ ಅವಧಿ. ಇಂಡಿಯಾದಲ್ಲಿರುವ ಎಲ್ಲ ಜನರ ಎಲ್ಲ ಮಕ್ಕಳಿಗೆ ೧೯೬೦ರೊಳಗೆ ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿಯೂ ಮತ್ತು ಕಡ್ಡಾಯವಾಗಿಯೂ ಕೊಡಬೇಕೆಂದು ನಮ್ಮ ಹೊಸ ಘಟನೆಯು ಪ್ರಾಂತೀಯ ಸರಕಾರಗಳಿಗೆ ಆದೇಶವನ್ನು ಕೊಟ್ಟಿರುತ್ತದೆ. ಅದರಂತೆ ಆ ನಿಟ್ಟಿನಲ್ಲಿ ಪ್ರಯತ್ನಗಳೂ ನಡೆದಿವೆ. ಪ್ರಾಥಮಿಕ ಶಿಕ್ಷಣವು ಲೋಕಸತ್ತೆಯ ತಳಹದಿ. ನಾಗರಿಕ ಜೀವನಕ್ಕೆ ಅತಿ ಅವಶ್ಯವಾದ ವಿಷಯಗಳನ್ನು ಈ ಅವಧಿಯಲ್ಲಿ ಕಲಿಸುತ್ತಾರೆ. ಓದು, ಬರೆಹ, ಲೆಕ್ಕ, ಭಾಷೆ, ಸಾಮಾಜಿಕ ವಿಷಯ, ಸಾಮಾನ್ಯವಿಜ್ಞಾನ, ಗಾಯನ, ಚಿತ್ರಕಲೆ, ಕೈಕೆಲಸ, ಮತ್ತು ಶಾರೀರಿಕ ಶಿಕ್ಷಣಗಳು ಪ್ರಾಥಮಿಕ ಸಾಲೆಯ ಅಭ್ಯಾಸಕ್ರಮವಾಗಿರುತ್ತದೆ. ಇದಕ್ಕೆ ಸಾಮಾನ್ಯ ಶಿಕ್ಷಣ ( General Education )ವೆಂದೂ ಅನ್ನುವದುಂಟು. ಉದ್ದೇಶಯುತ ಚಟುವಟಿಕೆಗಳ ಮುಖಾಂತರ ಈ ವಿಷಯಗಳನ್ನು ಕಲಿಸಬೇಕು. ಹಾಯಸ್ಕೂಲಿನ ಅವಧಿಯಲ್ಲಿ ಸಾಮಾನ್ಯ ಶಿಕ್ಷಣವು ಮುಂದುವರಿಯುವದಲ್ಲದೆ ಕೆಲವು ಉದ್ಯೋಗಗಳ ಪರಿಚಯವನ್ನೂ ಹುಡುಗರಿಗೆ ಮಾಡಿಕೊಡಬೇಕಾಗುತ್ತದೆ. ಹಾಯಸ್ಕೂಲಿನ ವಿದ್ಯಾರ್ಥಿಗಳಲ್ಲಿ ಬೇರೆ ಬೇರೆ ಒಲವುಗಳು ಮತ್ತು ಸಾಮರ್ಥ್ಯಗಳು ಇರುವದು ಒಡೆದು ಕಾಣುತ್ತದೆ. ಸೆಕೆಂಡರಿ ಎಜ್ಯುಕೇಶನಲ್ ಕಮಿಶನ್ ವರದಿಯು (೧೯೫೩)ಲ್ಲಿ ಸೂಚಿಸಿದ ಪ್ರಕಾರ, ವಿದ್ಯಾರ್ಥಿಗಳ ಈ ಬೇಡಿಕೆಗಳನ್ನು

ಪೂರೈಸಲಿಕ್ಕೆ, ಈಗ ಪ್ರತಿಯೊಂದು ಜಿಲ್ಲೆಯಲ್ಲಿ ವಿವಿಧೋದ್ದೇಶದ ಶಾಲೆಗಳನ್ನು (Multipurpose Schools) ತೆರೆಯುತ್ತಾರೆ. ಇದು ಅವಶ್ಯವಾಗಿ ಬೇಕಾಗಿದ್ದ ಸುಧಾರಣೆ. ಇಂಗ್ಲಂಡ, ಅಮೇರಿಕೆಗಳಲ್ಲಿ ವೃತ್ತಿಶಿಕ್ಷಣ ಕೊಡುವ ಶಾಲೆಗಳು ಹೇರಳವಾಗಿವೆ. ಹಾಯಸ್ಕೂಲನ್ನು ಬಿಡುವ ಪೂರ್ವದಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯು ಒಂದೆರಡು ಉದ್ಯೋಗಗಳ ಪರಿಚಯವನ್ನು ಅವಶ್ಯವಾಗಿ ಮಾಡಿಕೊಳ್ಳಬೇಕು. ಇವಲ್ಲದೆ ಹೆಚ್ಚಿನ ಅಭ್ಯಾಸಕ್ಕೆಂದು ಪ್ರತ್ಯೇಕವಾಗಿ ಔದ್ಯೋಗಿಕ ಶಾಲೆಗಳೂ ಇರಬೇಕು. ನೂರಕ್ಕೆ ಎಂಬತ್ತು ಎಂಬತ್ತೈದರಷ್ಟು ಹುಡುಗರು ಹಾಯಸ್ಕೂಲಿನ ಶಿಕ್ಷಣವನ್ನು ಅಥವಾ ಉದ್ಯೋಗದ ಶಿಕ್ಷಣವನ್ನು ಮುಗಿಸಿಕೊಂಡು ಪ್ರಪಂಚವನ್ನು ಸಾಗಿಸುವಂಥವರು ಆಗಬೇಕು. ವಿಶ್ವವಿದ್ಯಾಲಯಗಳಲ್ಲಿ ಹೆಚ್ಚಿನ ಶಿಕ್ಷಣವು ಮುಂದುವರಿಯುತ್ತದೆ. ಆದರೆ ಈ ಅವಧಿಯಲ್ಲಿಯೂ ಕೂಡ ಬಗೆಬಗೆಯ ಉಚ್ಚ ಮಟ್ಟದ ವೃತ್ತಿಶಿಕ್ಷಣವು ಕೊಡಲ್ಪಡಬೇಕು. ವಿಶ್ವವಿದ್ಯಾಲಯದ ಎಲ್ಲ ಪ್ರಕಾರದ ಸಂಸ್ಥೆಗಳಲ್ಲಿ ಸಾಮಾಜಿಕ ವಿಷಯಗಳನ್ನು ಮತ್ತು ಸಾಮಾನ್ಯವಿಜ್ಞಾನವನ್ನು ಕಲಿಸುವದು ಅವಶ್ಯವೆಂದು ಈಗಿನ ಶಿಕ್ಷಣ ತಜ್ಞರು ಅಭಿಪ್ರಾಯಪಡುತ್ತಾರೆ. ಒಟ್ಟಿನಲ್ಲಿ, ಬೆಳೆಯುತ್ತಿರುವ ವಿದ್ಯಾರ್ಥಿಯ ವೈಶಿಷ್ಟ್ಯಗಳನ್ನು ಮತ್ತು ಲೋಕಸತ್ತೆಯ ಸಮಾಜದ ಬೇಡಿಕೆಗಳನ್ನು ಅನುಲಕ್ಷಿಸಿ ಪ್ರತಿಯೊಂದು ಹಂತದ ಅಭ್ಯಾಸಕ್ರಮವನ್ನು ರಚಿಸಬೇಕು. ಪ್ರತಿಯೊಬ್ಬನಲ್ಲಿ ವೈಯಕ್ತಿಕವಾಗಿ ಕಂಡುಬರುವ ಒಲವುಗಳು, ಅಭಿರುಚಿಗಳು ಮತ್ತು ಸಾಮರ್ಥ್ಯಗಳು ವ್ಯಕ್ತಿತ್ವ ವಿಕಾಸದಲ್ಲಿ ಬರುವವು. ಈ ಎಲ್ಲ ದೃಷ್ಟಿಯಿಂದ ಯೋಚಿಸಲ್ಪಟ್ಟ ಶಿಕ್ಷಣಕ್ರಮವು ಪೂರ್ಣ ಶಿಕ್ಷಣವೆಂದು ಕರೆಯಲ್ಪಡುವದು.

## ಅಭ್ಯಾಸಕ್ರಮದ ಮೂಲ ತತ್ವಗಳು

ಅಭ್ಯಾಸದ ವಿಷಯಗಳನ್ನು ಆರಿಸುವಾಗ ಮುಖ್ಯವಾಗಿ ಮೂರು ತತ್ವಗಳನ್ನು ಮುಂದಿಟ್ಟುಕೊಳ್ಳುವದುಂಟು—ಸಂಸ್ಕೃತಿ, ಉಪಯುಕ್ತತೆ, ಮತ್ತು ಬೆಳವಣಿಗೆಯ ವೈಶಿಷ್ಟ್ಯಗಳು. ಕೆಲವರು ಮಾನವ ಸಂಸ್ಕೃತಿಗೆ ಹೆಚ್ಚು ಮಹತ್ವ ಕೊಟ್ಟರೆ ಬೇರೆ ಕೆಲವರು ಉಪಯುಕ್ತತೆಗೆ ಹೆಚ್ಚು ಮಹತ್ವ ಕೊಡುವರು. ಮತ್ತೆ ಕೆಲವರು ಮಗುವಿನ ತಾತ್ಕಾಲಿಕ ಬೇಡಿಕೆಗಳಿಗೆ ಲಕ್ಷ್ಯ ಪೂರೈಸುವರು. ಜನಾಂಗದ ಪರಂಪರಾಗತ ಆಚಾರ ವಿಚಾರಗಳು, ನಂಬುಗೆ ನಡಾವಳಿಗಳು

ಅದರ ಸಂಸ್ಕೃತಿ ಎನ್ನಿಸಿಕೊಳ್ಳುತ್ತದೆ. ಆದರೆ ದೇಶ ಮತ್ತು ಕಾಲದ ಪರಿಸ್ಥಿತಿಗೆ ಅನುಸರಿಸಿ ಸಂಸ್ಕೃತಿಯು ಬದಲಾಗುತ್ತ ಹೋಗುತ್ತದೆ. ಇದು ಪ್ರಗತಿಯ ಲಕ್ಷಣ. ಪ್ರಾಥಮಿಕ ಶಾಲೆಗಳಲ್ಲಿ ಮತ್ತು ಹಾಯಸ್ಕೂಲಗಳಲ್ಲಿ ಜೀವನಕ್ಕೆ ಉಪಯೋಗ ಬೇಕಾದ ವಿಷಯಗಳನ್ನು ಕಲಿಸುವದಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟು ಹಿಂದಿನ ಸಂಸ್ಕೃತಿಗೆ ಸಂಬಂಧಿಸಿದ ವಿಷಯಗಳಿಗೆ ತಕ್ಕಮಟ್ಟಿಗೆ ಸ್ಥಾನವನ್ನು ಕೊಡಬೇಕೆಂದು ಪ್ರಗತಿಪರ ಶಿಕ್ಷಣ ತಜ್ಞರು ಅಭಿಪ್ರಾಯ ಪಡುತ್ತಾರೆ. ಉಚ್ಚ ಶಿಕ್ಷಣವನ್ನು ಕೊಡುವದು ವಿಶ್ವವಿದ್ಯಾಲಯಗಳ ಧ್ಯೇಯವಾಗಿರುವದರಿಂದ ಕಾಲೇಜಗಳಲ್ಲಿ ಸಾಂಸ್ಕೃತಿಕ ವಿಷಯಗಳಿಗೆ ಹೆಚ್ಚು ಸ್ಥಾನವನ್ನು ಕೊಡುವದು ಉಚಿತವೆನಿಸುವದು. ಸಾಹಿತ್ಯ, ವಿಜ್ಞಾನ, ಇತಿಹಾಸ ಮೊದಲಾದವು ಸಂಸ್ಕೃತಿಯ ವಿಷಯಗಳಲ್ಲಿ ಬರುವವು. ಓದು, ಬರಹ, ಲೆಕ್ಕ, ನಾಗರಿಕತೆ, ಉದ್ಯೋಗ ಮೊದಲಾದವು ಉಪಯುಕ್ತ ವಿಷಯಗಳಲ್ಲಿ ಬರುವವು. ಇನ್ನು ಶಾಲೆಯಲ್ಲಿ ಯಾವ ವಿಷಯವನ್ನೇ ಕಲಿಸಲಿ ಅದನ್ನು ಮಕ್ಕಳ ಅನುಭವಕ್ಕೆ ಹೊಂದಿಸಿಕೊಂಡು ಚಟುವಟಿಕೆಗಳ ಮುಖಾಂತರ ಕಲಿಸಬೇಕು. ಇಡೀ ಶಿಕ್ಷಣದ ಯೋಜನೆಯನ್ನು ಬೇರೆ ದೃಷ್ಟಿಯಿಂದಲೂ ವಿಚಾರಿಸಬಹುದು. ಜ್ಞಾನ, ನಾಗರಿಕತೆ, ಕೆಲಸ, ವ್ಯಕ್ತಿತ್ವ ಮತ್ತು ವಿಕಾಸ ಇವುಗಳನ್ನು ಮೂಲತತ್ತ್ವಗಳನ್ನಾಗಿ ಇಟ್ಟುಕೊಂಡು ಪ್ರಾಥಮಿಕ ಶಾಲೆ ಮೊದಲುಗೊಂಡು ವಿಶ್ವವಿದ್ಯಾಲಯದ ಕೊನೆಯವರೆಗಿನ ಶಿಕ್ಷಣ ಕ್ರಮವನ್ನು ಯೋಚಿಸಬೇಕು. ಜ್ಞಾನದಲ್ಲಿ ಮಗುವಿನ ಸ್ವತಂತ್ರ ವಿಚಾರ ಶಕ್ತಿ ಮತ್ತು ಮನುಷ್ಯನು ತನ್ನ ಬುದ್ಧಿ ಸಾಮರ್ಥ್ಯದಿಂದ ಗಳಿಸಿದ ವಿಜ್ಞಾನಗಳು ಬರುವವು. ನಾಗರಿಕತೆಯಲ್ಲಿ ಲೋಕಸತ್ತೆಯ ತರಬೇತು ಮತ್ತು ಸಮಾಜ ವಿಜ್ಞಾನಕ್ಕೆ ಸಂಬಂಧಿಸಿದ ವಿಷಯಗಳು ಬರುವವು. ಕೆಲಸದಲ್ಲಿ ಸಾಮಾನ್ಯ ಚಟುವಟಿಕೆಯಿಂದ ನಿಶ್ಚಿತ ಉದ್ಯೋಗಗಳ ಶಿಕ್ಷಣವು ಬರುವದು.

### ಜೀವನ ಶಿಕ್ಷಣ

ಈಗಿನ ಶಿಕ್ಷಣವು ಬುಡದಿಂದ ತುದಿತನಕ ವಾಸ್ತವಿಕ ಜೀವನಕ್ಕೆ ದೂರವಾಗಿರುವದರಿಂದಲೇ ಅದು ಟೀಕೆಗೆ ಗುರಿಯಾಗಿದೆ. ಅಭ್ಯಾಸ ಪತ್ರಿಕೆಯ ವಿಷಯಗಳಲ್ಲಿಯೂ ಅವುಗಳನ್ನು ಕಲಿಸುವ ರೀತಿಯಲ್ಲಿಯೂ ಪ್ರಾಥಮಿಕ

ಶಿಕ್ಷಣದಿಂದ ವಿಶ್ವವಿದ್ಯಾಲಯ ಶಿಕ್ಷಣದ ವರೆಗೆ ಸಂಪೂರ್ಣ ಬದಲಾವಣೆಯು ಅವಶ್ಯವಾಗಿದೆ. ಶಿಕ್ಷಣವು ಮುಗಿದ ಮೇಲೆ ಮಗುವು ಜೀವನಸಂಗ್ರಾಮವನ್ನು ಪ್ರವೇಶಿಸುತ್ತಾನೆ. ಅವನನ್ನು ಈ ಸಂಗ್ರಾಮಕ್ಕೆ ಅಣಿ ಮಾಡುವವೇ ಶಿಕ್ಷಣದ ಧ್ಯೇಯ. ಅವನು ಉಪಜೀವನದ ಯಾವುದೇ ಮಾರ್ಗ ಕೈಕೊಳ್ಳಲಿ ಅದಕ್ಕೆ ಉಪಯೋಗ ಬೀಳುವ ವಿಷಯಗಳನ್ನು ಸಾಲೆ ಕಾಲೇಜುಗಳಲ್ಲಿ ಕಲಿಸದಿದ್ದರೆ ಅಂಥ ಸಂಸ್ಥೆಗಳಿಂದ ಪ್ರಯೋಜನವಾದರೂ ಏನು ? ಉಪಯೋಗ ಬೀಳುವ ವಿಷಯಗಳನ್ನು ಎರಡು ತೆರನಾಗಿ ವಿಂಗಡಿಸಬಹುದು—**ಸಾಮಾನ್ಯ** ಮತ್ತು **ವಿಶೇಷ** ಎಂದು. ಒಂದು ನಿಶ್ಚಿತವಾದ ಕಲೆ, ವಿಜ್ಞಾನ ಅಥವಾ ಉದ್ಯೋಗದ ಬಗೆಗೆ ವಿಶೇಷ ಶಿಕ್ಷಣವನ್ನು ಕೊಡುವದು ಒಂದು ಬಗೆ. ಇದಕ್ಕೆ **ವಿಶೇಷ ಶಿಕ್ಷಣ** (Special Education) ಅಥವಾ **ಉದ್ಯೋಗ ಶಿಕ್ಷಣ** (Vocational Education) ಎಂದು ಅನ್ನುವರು. ಮತ್ತು ಜೀವನದಲ್ಲಿ ಯಾವುದೇ ಸ್ಥಾನದಲ್ಲಿ ಇರಲಿ, ಯಾವುದೇ ವ್ಯವಸಾಯವನ್ನು ಮಾಡುತ್ತಿರಲಿ ಅವಕ್ಕೆಲ್ಲ ಕೆಲವು ವಿಷಯಗಳ ಪರಿಚಯವು ಅವಶ್ಯವಾಗಿರುತ್ತದೆ. ಆ ವಿಷಯಗಳು ಯಾವವೆಂದರೆ— ಓದು, ಬರೆಹ, ಲೆಕ್ಕ, ಸ್ವತಂತ್ರ ವಿಚಾರ ಮತ್ತು ಸಾಮಾಜಿಕ ನಡತೆ. ಇವುಗಳನ್ನು ಕಲಿಸುವ ಶಿಕ್ಷಣಕ್ಕೆ **ಸಾಮಾನ್ಯ ಶಿಕ್ಷಣ** (General Education) ಎನ್ನುವರು. ಇದನ್ನು ಪಡೆಯುವ ಹಕ್ಕು ಪ್ರತಿಯೊಬ್ಬ ನಾಗರಿಕನಿಗೆ ಇರುತ್ತದೆ. ಈ ಸಾಮಾನ್ಯ ಶಿಕ್ಷಣವನ್ನು ಉಚಿತವಾಗಿ ಕೊಡುವದು ಸರಕಾರದ ಹೊಣೆ. ಎಲ್ಲ ದೇಶದ ಪ್ರಾಥಮಿಕ ಸಾಲೆಗಳಲ್ಲಿ ಸಾಮಾನ್ಯ ಶಿಕ್ಷಣಕ್ಕೆ ಪ್ರಾಮುಖ್ಯವಾದ ಸ್ಥಾನವಿರುತ್ತದೆ.

ಇನ್ನು ಕಲಿಸುವ ವಿಷಯಗಳನ್ನು ಜೀವನ ಸನ್ನಿವೇಶಗಳಿಗೂ, ಪ್ರಚಲಿತ ವಿಷಯಗಳಿಗೂ, ಮಕ್ಕಳ ಬುದ್ಧಿಮಟ್ಟ ಮತ್ತು ಅನುಭವಗಳಿಗೂ ಹಚ್ಚಿ ಹೇಳಬೇಕು. ಆರಂಭದ ಓದು ಬರೆಹವು ಮಕ್ಕಳ ಅಭಿರುಚಿಗೆ ಸಂಬಂಧಿಸಿದ ವಿಷಯಗಳ ಬಗ್ಗೆಯೇ ಇರಬೇಕು. ಸಾಹಿತ್ಯವು ಜೀವನದ ವಿಮರ್ಶೆ. ಬೆಳೆಯುತ್ತಿರುವ ಇಂಥ ಸಾಹಿತ್ಯದ ಪರಿಚಯವನ್ನು ಮಕ್ಕಳಿಗೆ ವಿಶೇಷವಾಗಿ ಮಾಡಿಕೊಡಬೇಕು. ರಾಮಾಯಣ, ಮಹಾಭಾರತದಂಥ ಹಿಂದಿನ ಅರಸರ ಕತೆಗಳನ್ನು ಕಲಿಸುವದನ್ನು ಬಹಳವಾಗಿ ಕಡಿಮೆ ಮಾಡಬೇಕು. ಲೆಕ್ಕಗಳನ್ನು

ವ್ಯಾವಹಾರಿಕ ಉದಾಹರಣೆಗಳಿಂದ ತಿಳಿಸಿ ಹೇಳಬೇಕು. ವ್ಯವಹಾರಕ್ಕೆ ಸಂಬಂಧವಿಲ್ಲದ ಬೀಜಗಣಿತ ಮತ್ತು ಭೂಮಿತಿಯನ್ನು ಕಲಿಸುವದು ಅನಾವಶ್ಯಕ. ಆಗಿಹೋದ ಇತಿಹಾಸಕ್ಕಿಂತ ಈಗ ನಡೆಯುತ್ತಿರುವ ಸಂಗತಿಗಳನ್ನೂ ನಾಗರಿಕ ನೀತಿಯನ್ನೂ ಕಲಿಸುವದು ಹೆಚ್ಚು ಮಹತ್ವದ್ದು. ಸತ್ತವರ ಕತೆಗಿಂತ ಇದ್ದವರ ಹಾಡನ್ನು ತಿಳಿದುಕೊಳ್ಳುವದು ಹೆಚ್ಚು ಉಪಯುಕ್ತವಾದದ್ದು. ಸಾಯನ್ಸ ವಿಷಯವನ್ನು ಪ್ರತಿನಿತ್ಯ ಜೀವನದ ಬಳಿಕೆಯ ಉದಾಹರಣೆಗಳಿಗೆ ಸಂಬಂಧಿಸಿ ಹೇಳಬೇಕು. ಅಂತು ಯಾವದೇ ವಿಷಯವನ್ನು ಕಲಿಸಲಿ ಅದು ಮಕ್ಕಳ ನಾಳಿನ ಜೀವನಕ್ಕೆ ಅವಶ್ಯವೋ ಅನಾವಶ್ಯವೋ ಎಂಬುದನ್ನು ವಿಚಾರಿಸಿ ಅದನ್ನು ಉಪಯುಕ್ತತೆಯ ಒರೆಗಲ್ಲಿಗೆ ಹಚ್ಚಿ ನೋಡುವದು ಅವಶ್ಯ. ಇದುವೇ ಜೀವನ ಶಿಕ್ಷಣ.

## ಉದ್ಯೋಗದ ಶಿಕ್ಷಣ

ಸಾಮಾನ್ಯವಾಗಿ ಕುಮಾರಾವಸ್ಥೆಯು ಪ್ರಾಥಮಿಕ ಶಿಕ್ಷಣದ ಅವಧಿಯು, ಮತ್ತು ತಾರುಣ್ಯವು ಹಾಯಸ್ಕೂಲ ಶಿಕ್ಷಣದ ಅವಧಿಯು. ತಾರುಣ್ಯವು ಮುಗಿಯುತ್ತ ಬಂದ ಹಾಗೆ ಸಾಲೆಯ ಶಿಕ್ಷಣದ ಅವಧಿಯೂ ಮುಗಿಯುತ್ತ ಬರುವದು. ಆಗ ತರುಣರ ನೋಟವು ವ್ಯಾವಹಾರಿಕ ಪ್ರಪಂಚದ ಕಡೆಗೆ ಹೊರಳುತ್ತದೆ. ಜೀವನವನ್ನು ಸಾಗಿಸಬೇಕಾದರೆ ಯಾವುದಾದರೊಂದು ಉದ್ಯೋಗವನ್ನು ಕೈಕೊಳ್ಳುವದು ಅವಶ್ಯವೆಂಬುದು ಅವನಿಗೆ ಅನಿಸಹತ್ತುತ್ತದೆ. ಆದ್ದರಿಂದ ಆ ಸಮಯಕ್ಕೆ ಅವನಿಗೆ ಉದ್ಯೋಗ ಶಿಕ್ಷಣ ಕೊಡುವದು ಅವಶ್ಯ. ಉದ್ಯೋಗ ಶಿಕ್ಷಣವನ್ನು ಪಡೆದ ಮೇಲೆಯೇ ಅವನ ಶಿಕ್ಷಣವು ಪೂರ್ತಿಯಾದಂತಾಗುವದು. ಹಾಯಸ್ಕೂಲಿನಲ್ಲಿ ಪ್ರಾಥಮಿಕ ಸಾಲೆಯ ಸಾಮಾನ್ಯ ಶಿಕ್ಷಣವೂ ಮುಂದುವರಿಯುತ್ತದೆ. ಆದ್ದರಿಂದ ಅದಕ್ಕೆ ಬಾಧೆ ಬರದಂತೆ ಮಕ್ಕಳಿಗೆ ಆಗ ಕೆಲವು ಉದ್ಯೋಗಗಳ ಪರಿಚಯವನ್ನು ಮಾತ್ರ ಮಾಡಿಕೊಡುವದು ಅವಶ್ಯ. ಮುಂದೆ ಅವರು ಸ್ವತಂತ್ರವಾದ ಔದ್ಯೋಗಿಕ ಸಾಲೆಗಳಲ್ಲಿ ನಿಶ್ಚಿತವಾದ ಒಂದು ಅಥವಾ ಎರಡು ಉದ್ಯೋಗಗಳನ್ನು ಆರಿಸಿಕೊಂಡು ಅವುಗಳಲ್ಲಿ ಅವರು ಪ್ರಾವೀಣ್ಯತೆಯನ್ನು ಸಂಪಾದಿಸಬಹುದು. ಮಕ್ಕಳ ಒಲವು ಮತ್ತು ಅಭಿರುಚಿಗಳಿಗೆ ತಕ್ಕಂತೆ ಉದ್ಯೋಗ ಶಿಕ್ಷಣದ ಏರ್ಪಾಡನ್ನು

ಮೇಲಿನ ಇಯತ್ತೆಗಳಲ್ಲಿ ಮಾಡಬೇಕಾಗುವದು. ಆದರೆ ಪ್ರಾಥಮಿಕ ಶಾಲೆಗಳಲ್ಲಿ ಕೇವಲ ಉದ್ಯೋಗ ಶಿಕ್ಷಣಕ್ಕೆ ಸ್ಥಾನವು ದೊರಕದು. ಅವರ ಸ್ಥಳದಲ್ಲಿ ಕೆಲವು ಉದ್ದೇಶಯುತ ಚಟುವಟಿಕೆಗಳನ್ನು, ಹಸ್ತಕೌಶಲ್ಯಗಳನ್ನು ಕಲಿಸಬಹುದು. ಹಾಯಸ್ಕೂಲ ಶಿಕ್ಷಣದ ಕೊನೆಯ ಎರಡು ವರುಷಗಳಲ್ಲಿ ಉದ್ಯೋಗ ಶಿಕ್ಷಣವನ್ನು ಪ್ರಾರಂಭಿಸುವದು ಸಮಂಜಸ. ಆ ಆ ಜಿಲ್ಲೆಯ ಹುಡುಗರಿಗೆ ಆ ಆ ಜಿಲ್ಲೆಗಳಲ್ಲಿ ನಡೆಯುತ್ತಿರುವ ಉದ್ಯೋಗಗಳ ಮತ್ತು ಇತರ ಒಂದೆರಡು ವ್ಯವಸಾಯಗಳ ಪರಿಚಯವನ್ನು ಮಾಡಿಕೊಡುವದು ಲೇಸು. ಮುಂದೆ ಅವುಗಳಲ್ಲಿ ಪ್ರಾವೀಣ್ಯತೆಯನ್ನು ಪಡೆಯುವಿಕ್ಕೆ ಮಹಾವಿದ್ಯಾಲಯದಲ್ಲಿ ನಾನಾಬಗೆಯ ಉದ್ಯೋಗ ಶಿಕ್ಷಣವನ್ನು ಕೊಡುವ ಏರ್ಪಾಟು ಇರಬೇಕು.

## ಆಧ್ಯಾತ್ಮಿಕ ಶಿಕ್ಷಣ

ವೈಜ್ಞಾನಿಕ ಯುಗವಾದ ಈಗಿನ ಕಾಲದಲ್ಲಿ 'ಧರ್ಮ' ಎಂಬ ಶಬ್ದದ ವ್ಯಾಖ್ಯೆಯನ್ನು ಮತ್ತು ವ್ಯಾಪ್ತಿಯನ್ನು ನಿಶ್ಚಯಗೊಳಿಸುವದು ಅವಶ್ಯ. ಇಲ್ಲವಾದರೆ ವೈಜ್ಞಾನಿಕ ಪ್ರಗತಿ ಮತ್ತು ಸಾಮಾಜಿಕ ಪ್ರಗತಿ ಇವು ಕುಂಠಿತವಾಗುತ್ತವೆ. ಜಗತ್ತಿನ ಇತಿಹಾಸದ ಘಟನಗಳನ್ನು ಪರಿಕಿಸಿ ನೋಡಿದರೆ ಧರ್ಮದ ಹೆಸರಿನಲ್ಲಿ ಮಾನವ ಸೇವೆಯ ಪ್ರಗತಿಗಿಂತ ಹಿನ್ನಡೆ, ಅನರ್ಥಗಳೇ ಹೆಚ್ಚಾಗಿ ಆದಂತೆ ಕಂಡುಬರುತ್ತದೆ. ಅದ್ದರಿಂದ 'ಧರ್ಮ'ದ ವ್ಯಾಪ್ತಿಯನ್ನು ಪರಿಮಿತಿಗೊಳಿಸಿದರೆ ಹೆಚ್ಚು ಪ್ರಯೋಜನವಾಗುವದು. ಮನುಷ್ಯ ಮತ್ತು ಪರತತ್ತ್ವ ಅಥವಾ ದೇವರು ಇವುಗಳ ಸಂಬಂಧವನ್ನು ಹೇಳುವದು ಮಾತ್ರ 'ಧರ್ಮ'. ಇದಕ್ಕೆ 'ಆತ್ಮವಿಜ್ಞಾನ' (Spiritualism or Spirituology) ಎಂದು ಅನ್ನುವದು ಹೆಚ್ಚು ಸಮಂಜಸ. ಸ್ಥೂಲವಾಗಿ ಇದನ್ನೇ ಪೂಜಾಪದ್ಧತಿ ಅಥವಾ ಮತ, ಮಾರ್ಗ, ಪಥ, ಪಂಥ ಎಂದು ಅನ್ನಬಹುದು. ಇದು ವೈಯಕ್ತಿಕ ಮತ್ತು ಖಾಸಗಿ ವಿಷಯ. ಇದನ್ನು ಸಾಮಾಜಿಕ ವಿಷಯಗಳಲ್ಲಿ, ಮತ್ತು ಲೋಕಕಾರಣದಲ್ಲಿ ತೊಡಕಿಸಬಾರದು. ಊಟ, ಉಡಿಗೆ, ಮದುವೆ, ಆಸ್ತಿ, ಉದ್ಯೋಗ, ವ್ಯವಸಾಯ, ಲೋಕವಾಡಳಿತೆ, ರಾಜಕಾರಣ ಮೊದಲಾದ ಸಾಮಾಜಿಕ ವಿಜ್ಞಾನದಿಂದಲೂ, ಭೌತಿಕ ವಿಜ್ಞಾನದಿಂದಲೂ ಧರ್ಮವನ್ನು ಬೇರ್ಪಡಿಸಬೇಕು. ಇದಕ್ಕೂ ಮಿಗಿಲಾದ ಮಾರ್ಗವೆಂದರೆ 'ಧರ್ಮ' ಶಬ್ದವನ್ನೇ

ಬಳಕೆಯಿಂದ ತೆಗೆದುಹಾಕಿ ಅದರ ಸ್ಥಳದಲ್ಲಿ "ಆತ್ಮವಿಜ್ಞಾನ", "ಅಧ್ಯಾತ್ಮ", "ಪಾರಮಾರ್ಥ", "ಪರತತ್ವ" ಎಂಬ ಪದಗಳನ್ನು ಉಪಯೋಗಿಸುವದು ಹೆಚ್ಚು ಒಳ್ಳೆಯದು. ಧರ್ಮವೆಂದರೆ ನೀತಿಯೆಂದು ತಿಳಿಯುವದೂ ತಪ್ಪು. ನೀತಿ ಮತ್ತು ಸದಾಚಾರಗಳು ದೇಶ—ಕಾಲಪರಿಸ್ಥಿತಿಗೆ ಅನುಸರಿಸಿ ಬದಲಾಗುತ್ತವೆ. ಅವು ಸಮಾಜವಿಜ್ಞಾನದ ವಿಷಯಗಳು; ಸಮಾಜದ ಸಂಪ್ರದಾಯಗಳು.

ಸಾಲೆಯಲ್ಲಿ "ಧಾರ್ಮಿಕ" ಶಿಕ್ಷಣವನ್ನು ಕೊಡಬೇಕೆಂದು ಕೆಲವರು ಪ್ರತಿಪಾದಿಸುತ್ತಾರೆ. ಹೀಗೆ ಹೇಳುವವರಲ್ಲಿ ಧರ್ಮದ ಬಗ್ಗೆ ಅಸ್ಪಷ್ಟ ಕಲ್ಪನೆ ಅಥವಾ ಅತಿ ವ್ಯಾಪ್ತಿ ಕಲ್ಪನೆ ಇರುತ್ತದೆ. ದೇಶವು ಮುಂದುವರಿಯಬೇಕಾದರೆ ಧರ್ಮಾತೀತ ಅಥವಾ ಲೌಕಿಕ ಶಿಕ್ಷಣವನ್ನು (Secular Education) ಮಾತ್ರ ಸಾರ್ವಜನಿಕ ಸಾಲೆಗಳಲ್ಲಿ ಕೊಡಬೇಕು. ಆತ್ಮಬೋಧೆಯನ್ನು ಕೊಡಲಿಕ್ಕೆ ಯೋಗ್ಯವಾದ ಸ್ಥಳವೆಂದರೆ ಮಠ; ಸಾಲೆಯಲ್ಲ. ಆದರೆ ಇತಿಹಾಸ ಮತ್ತು ಸಾಹಿತ್ಯದ ಪಾಠಗಳಲ್ಲಿ ಸಂದರ್ಭಾನುಸಾರ ಮಹಾಪುರುಷರ ಆಧ್ಯಾತ್ಮಿಕ ವಿಚಾರಗಳನ್ನೂ ಸಾಧನ ಮಾರ್ಗಗಳನ್ನೂ ತಿಳಿಸಲು ಯಾವ ತರಹದ ಅಡ್ಡಿ ಆತಂಕಗಳು ಇರಕೂಡದು. ಆದರೆ ಸಂಕುಚಿತ ದೃಷ್ಟಿ, ದ್ವೇಷ, ಜಾತೀಯತೆ, ಭೇದಭಾವ ಮೊದಲಾದ ಅನಿಷ್ಟ ವೃತ್ತಿಗಳಿಗೆ ಎಡೆಗೊಡದಂತೆ ಎಚ್ಚರ ಪಡಬೇಕು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಮಗುವಿನ ಬೆಳವಣಿಗೆಯಲ್ಲಿ ಮುಖ್ಯ ಮಟ್ಟಗಳು ಯಾವವು? ಮತ್ತು ಅಭ್ಯಾಸಕ್ರಮವನ್ನು ರಚಿಸುವಾಗ ಈ ಮಟ್ಟಗಳ ವಿಚಾರಗಳು ನಿಮಗೆ ಹೇಗೆ ಸಹಾಯಕವಾಗುವವು?

೨. ಕುಮಾರಾವಸ್ಥೆಯಲ್ಲಿ ಮಕ್ಕಳ ಶಾರೀರಕ ಬೌದ್ಧಿಕ ಮತ್ತು ಸಾಮಾಜಿಕ ಬೆಳವಣಿಗೆಯ ಮುಖ್ಯ ಲಕ್ಷಣಗಳನ್ನು ಉದಾಹರಣೆ ಸಹಿತ ವಿವರಿಸಿರಿ. ಇವರಲ್ಲಿ ಯಾವ ಸಂಗತಿಗಳು ಪ್ರಾಥಮಿಕ ಶಿಕ್ಷಕರಿಗೆ ಹೆಚ್ಚು ನೆರವಾಗುವವು?

೩. ಕೆಳಗೆ ಕಾಣಿಸಿದ ಕೆಲಸಗಳನ್ನು ಬೇರೆ ಬೇರೆ ವಯಸ್ಸಿನ ಹುಡುಗರು ಮಾಡುವಾಗ ಅವರ ಚಲನಗಳಲ್ಲಿ ಕಂಡು ಬರುವ ಸಾಮ್ಯವೈಷಮ್ಯಗಳು ಯಾವವು ? (ಅ) ಚೆಂಡು ಒಗೆಯುವದು: ಮೂರು ವರುಷದ, ಐದು ವರುಷದ, ಮತ್ತು ಹತ್ತು ವರುಷದ ಹುಡುಗರ ಕೃತಿಗಳು. (ಆ) ಪೆನ್ಸಿಲ್ ಅಥವಾ ಖಡುವಿನಿಂದ ಬರೆಯುವದು ಅಥವಾ ಗೀಚುವದು: ಮೂರು ವರುಷದ, ಏಳು ವರುಷದ ಮತ್ತು ಹತ್ತು ವರುಷದ ಹುಡುಗರ ಕೃತಿಗಳು.

೪. ಕೆಳಗೆ ಕಾಣಿಸಿದ ಹಸ್ತಕೌಶಲ್ಯಗಳಲ್ಲಿ ಯಾವ ಕೆಲಸಗಳನ್ನು ಯಾವ ತರಗತಿಯ ಶಿಕ್ಷಣ ಸಂಸ್ಥೆಗಳಲ್ಲಿ—ಪ್ರಾಥಮಿಕ, ಮಾಧ್ಯಮಿಕ, ಹಾಯಸ್ಕೂಲ, ಅಥವಾ ಕಾಲೇಜುಗಳಲ್ಲಿ—ಆರಂಭಿಸಲು ಸರಿ ಎನಿಸುವದು ? :—

(ಅ) ಕಾಗದ ಮತ್ತು ರಟ್ಟು ಕತ್ತರಿಸುವದು (ಆ) ಹಲಿಗೆಗಳಿಂದ ಪೆಟ್ಟಿಗೆ ಮಾಡುವದು (ಇ) ಮಣ್ಣಿನ ಗಡಿಗೆ ಮಾಡುವದು (ಈ) ನೂಲುವದು (ಉ) ನೇಯುವದು (ಊ) ತೋಟದ ಕೆಲಸ (ಎ) ಶಸ್ತ್ರತ್ತುಗಳು.

೫. ಎಷ್ಟೋ ಜನರು ತಾವು ಮುಖ್ಯ ಉದ್ಯೋಗಗಳನ್ನು ಕೈಕೊಂಡಿದ್ದರೂ ಮನೆಯಲ್ಲಿ ಕೆಲವು ಹಸ್ತಕೌಶಲ್ಯದ ಕೆಲಸಗಳನ್ನು ಮಾಡುವರು. ಅಂಥ ಉಪಯುಕ್ತ ಅಥವಾ ವಿನೋದಕರ ಕೆಲಸಗಳ ಯಾದಿಯನ್ನು ತಯಾರಿಸಿರಿ. ಮತ್ತು ಅವುಗಳನ್ನು ಸಾಲೆಯಲ್ಲಿ ಯಾವ ಯಾವ ಇಯತ್ತೆಗಳಿಗೆ ಕಲಿಸಬೇಕೆಂದು ನಿಮ್ಮ ಅಭಿಪ್ರಾಯವಿರುತ್ತದೆ ?

೬. ಮಕ್ಕಳ ಬೇರೆ ಬೇರೆ ವಯಸ್ಸಿನಲ್ಲಿ ಅವರು ಆಡುವ ಆಟಗಳು ಬದಲಾಗುತ್ತವೆ. ಇಂಥ ಆಟಗಳ ಹೆಸರುಗಳನ್ನು ಮತ್ತು ಸ್ವರೂಪಗಳನ್ನು ವಿವರಿಸಿರಿ. ಗಂಡು ಹುಡುಗರ ಮತ್ತು ಹೆಣ್ಣು

ಹುಡುಗಿಯರ ಆಟಗಳಲ್ಲಿ ನಿಮಗೆ ಯಾವ ಹೆಚ್ಚು ಕಡಿಮೆ ಕಂಡುಬರುತ್ತದೆ ?

೭. ಮಕ್ಕಳ ಹೆದರಿಕೆಗಳು ಯಾವವು ? ಅವರಲ್ಲಿ ಪ್ರೇಮ ಮತ್ತು ಆತ್ಮವಿಶ್ವಾಸವನ್ನು ಹುಟ್ಟಿಸಬೇಕಾದರೆ ತಂದೆತಾಯಿಗಳು ಮತ್ತು ಶಿಕ್ಷಕರು ಅವರೊಡನೆ ಹೇಗೆ ವರ್ತಿಸಬೇಕು ? ಉದಾಹರಣೆ ಕೊಟ್ಟು ವಿವರಿಸಿರಿ.

೮. ಮಕ್ಕಳಲ್ಲಿ ಕಂಡುಬರುವ ಅಧಿಕಾರ ವಿರೋಧದ ವರ್ತನಗಳ ಕೆಲವು ಉದಾಹರಣೆಗಳನ್ನು ಕೊಡಿರಿ. ಅಂಥ ಪ್ರಸಂಗಗಳಲ್ಲಿ ಶಿಕ್ಷಕರು ಹೇಗೆ ವ್ಯವಹರಿಸಬೇಕು ಎಂಬುದನ್ನು ಸೂಚಿಸಿರಿ.

೯. ಶಾಲೆಗಳಲ್ಲಿ ಕಂಡುಬರುವ ಸಹಕಾರದ ಮತ್ತು ಸ್ಪರ್ಧೆಯ ಕೆಲವು ಉದಾಹರಣೆಗಳನ್ನು ಕೊಡಿರಿ. ಸ್ಪರ್ಧೆಯನ್ನು ಗುಂಪಿನ ಹಿತಕ್ಕಾಗಿ ಅಥವಾ ಸ್ವಂತ ಸಮರ್ಥನೆಯನ್ನು ಬೆಳೆಸುವದಕ್ಕಾಗಿ ಹೇಗೆ ಉಪಯೋಗಿಸಬಹುದೆಂಬುದನ್ನು ಉದಾಹರಣೆ ಕೊಟ್ಟು ವಿವರಿಸಿರಿ. ಸ್ಪರ್ಧೆಯಿಂದ ಆಗುವ ಲಾಭ–ಹಾನಿಗಳನ್ನು ತೋರಿಸಿರಿ.

೧೦. ಮಕ್ಕಳಿಗೆ ಮುಂದಾಳುತನದ ತರಬೇತು ಕೊಡುವಾಗ ನೀವು ಯಾವ ಮುಖ್ಯ ಸಂಗತಿಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು? ಬೆಳೆಯುವ ಮುಂದಾಳುಗಳಿಗೆ ಯಾವ ಸಂದರ್ಭಗಳು ಪ್ರತಿಬಂಧಕ ವಾಗಿರುತ್ತವೆ ?

೧೧. ಮಕ್ಕಳಲ್ಲಿ ಕಂಡುಬರುವ ಕೆಳಗಿನ ಸಾಮಾಜಿಕ ವರ್ತನಗಳನ್ನು ಉದಾಹರಣೆ ಕೊಟ್ಟು ವಿವರಿಸಿರಿ:—

(ಅ) ಮುಂದಾಳುತನ (ಆ) ದುಡುಕುತನ (ಇ) ಹೆದರಿಕೆ (ಈ) ಸ್ಪರ್ಧೆ ಮತ್ತು (ಉ) ಸಹಕಾರ.

೧೨. ವಿದ್ಯಾರ್ಥಿಗಳೊಡನೆ ವ್ಯವಹರಿಸುವಾಗ "ಸರ್ವಾಧಿಕಾರದ" ("Autocratic") ಪದ್ಧತಿಗಿಂತ "ಲೋಕಸತ್ತೆಯ" ("Democratic") ಪದ್ಧತಿಯು ಹೆಚ್ಚು ಅನುಕೂಲವಾದದ್ದು ಎಂಬುದು ಪ್ರಯೋಗದಿಂದ ಸಿದ್ಧವಾಗಿದೆ. ಶಾಲೆಯ ಶಿಕ್ಷಣ ಕಾರ್ಯಕ್ರಮದಲ್ಲಿ ಈ ಸಿದ್ಧಾಂತವನ್ನು ಹೇಗೆ ಉಪಯೋಗಿಸುವಿರಿ ?

೧೩. ತಂದೆ–ತಾಯಿಗಳ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿಯು ಮಕ್ಕಳ ಬುದ್ಧಿ ಬೆಳವಣಿಗೆಯ ಮೇಲೆ, ಭಾಷೆಯ ಸಾಮರ್ಥ್ಯದ ಮೇಲೆ, ಮತ್ತು ನಡೆನುಡಿಗಳ ಮೇಲೆ ಹೇಗೆ ಪರಿಣಾಮವನ್ನು ಉಂಟು ಮಾಡುತ್ತದೆ ಎಂಬುದನ್ನು ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ.

೧೪. ಮಗುವಿನ ಬೆಳವಣಿಗೆಯ ದೃಷ್ಟಿಯಿಂದ ಈಗಿನ ಅಭ್ಯಾಸ ಪತ್ರಿಕೆಯ ವಿಷಯಗಳನ್ನು ಯಾವ ವರ್ಗಗಳಿಗೆ ಬದಲಾಯಿಸಬೇಕು ಎಂಬುದರ ಬಗ್ಗೆ ನಿಮ್ಮ ವಿಚಾರಗಳು ಏನು ಇರುತ್ತವೆ ? ಕಾರಣಗಳನ್ನು ಕೊಟ್ಟು ಸ್ಪಷ್ಟಮಾಡಿರಿ.

೧೫. ಈಗ ಸಾಲೆಯಲ್ಲಿ ಕಲಿಸಲ್ಪಡುವ ಹಸ್ತವ್ಯವಸಾಯ (Craft), ಬೀಜಗಣಿತ, ಭೂಮಿತಿ, ಮತ್ತು ಸಾಯನ್ಸದ ಪಾಠಗಳನ್ನು ಆಯಾ ವರ್ಗದ ವಿದ್ಯಾರ್ಥಿಗಳು ತಿಳಿದುಕೊಳ್ಳಲು ಸಮರ್ಥರಿರುವರೋ? ಇಲ್ಲವಾದರೆ ಯಾವ ವಯಸ್ಸಿನ ಹುಡುಗರಿಗೆ ಅವುಗಳನ್ನು ಕಲಿಸಬೇಕು ? ಪ್ರತಿಯೊಂದು ವಿಷಯದ ಬಗೆಗೆ ಎರಡೆರಡು ಉದಾಹರಣೆಗಳನ್ನು ಕೊಟ್ಟು ವಿವೇಚಿಸಿರಿ.

೧೬. ನೀತಿಯ ವಿಚಾರಗಳು ಬಾಲ್ಯ, ಕೌಮಾರ್ಯ, ಮತ್ತು ತಾರುಣ್ಯ ಅವಸ್ಥೆಗಳಲ್ಲಿ ಹೇಗೆ ಮಾರ್ಪಡುತ್ತ ಹೋಗುತ್ತವೆ ಎಂಬುದನ್ನು ವಿವರಿಸಿರಿ.

## ಅಧ್ಯಾಯ ೫

# ಅಂತಃಪ್ರೇರಣೆ ಮತ್ತು ಶಿಕ್ಷಣ

### ಕಲಿಯುವಿಕೆ ಅಂದರೇನು?

ಮಗುವು ತಾನು ಹುಟ್ಟಿದಾಗಿನಿಂದಲೇ ಕಲಿಯುವದನ್ನು ಪ್ರಾರಂಭಿಸುತ್ತಾನೆಂದೂ ಮತ್ತು ಅವನ ಅನುಭವವೇ ಅವನ ಗುರುವೆಂದೂ ನಾವು ಹಿಂದೆ ಹೇಳಿದ್ದೇವೆ. ಇತರರು ಕಲಿಸಲಿ ಅಥವಾ ಬಿಡಲಿ ಮಗುವು ಮಾತ್ರ ತಾನು ಕಲಿಯುವದನ್ನು ಎಂದೂ ಬಿಡುವದಿಲ್ಲ. ಜೀವನದಲ್ಲಿ ಅನೇಕ ವಿಷಯಗಳು ಇರುತ್ತವೆ. ಆದರೆ ಅವುಗಳಲ್ಲಿ ತನಗೆ ಅವಶ್ಯ ಬಿದ್ದುದನ್ನು ಅಥವಾ ತನಗೆ ಅಭಿರುಚಿ ಅನಿಸಿದ್ದನ್ನು ಮಗುವು ಕಲಿಯಲು ಹವಣಿಸುತ್ತಾನೆ. ಅವನ ಈ ಸ್ವಂತ ಪ್ರಯತ್ನಕ್ಕೆ ಸರಿಯಾದ ಮಾರ್ಗ ತೋರಿಸುವದೇ ಶಿಕ್ಷಣದ ಪದ್ಧತಿ. ಕಲಿಯುವದಕ್ಕೆ ಉತ್ತೇಜನ ಕೊಟ್ಟು ಅದಕ್ಕೆ ಸುಲಭ ಮತ್ತು ಸರಳವಾದ ಹಾದಿಯನ್ನು ತೋರಿಸುವದು ಕಲಿಸುವುದರ ಅಥವಾ ಶಿಕ್ಷಣದ ಮುಖ್ಯ ಉದ್ದೇಶ. ಶಿಕ್ಷಕನು ಪ್ರಶ್ನೆಗಳನ್ನೇ ಕೇಳಲಿ, ಉದಾಹರಣೆಗಳನ್ನೇ ಕೊಡಲಿ, ನಿದರ್ಶನಗಳನ್ನೇ ತೋರಿಸಲಿ, ಪ್ರಯೋಗಗಳನ್ನೇ ನಡೆಯಿಸಲಿ, ಮತ್ತು ಬೇರೆ ಯಾವ ಪದ್ಧತಿಯನ್ನೇ ಅನುಸರಿಸಲಿ ಅವು ವಿದ್ಯಾರ್ಥಿಯನ್ನು ಚಟುವಟಿಕೆಯಲ್ಲಿ ತೊಡಗಿಸದಿದ್ದರೆ ಅವುಗಳಿಂದ ಪ್ರಯೋಜನವೇನು ? ಕೇವಲ ಮಾತುಗಳ ಬೋಧನೆಯಿಂದ ವಿಷಯವನ್ನು ಸಾಗಿಸುವದು ಪರಿಣಾಮಕಾರಕವಲ್ಲವೆಂದೂ ಕಲಿಯುವಿಕೆಗೆ ಚಟುವಟಿಕೆಯೇ ಪ್ರಾಧಾನ್ಯವೆಂದೂ ಹೊಸ ಶಿಕ್ಷಣವು ಸಾರಿ ಹೇಳುತ್ತದೆ. ಶಿಕ್ಷಕನು ಉದ್ದಕ್ಕೆ ಭಾಷಣ ಮಾಡುವದು

ಕಲಿಸುವಿಕೆಯಲ್ಲ ಮತ್ತು ಮಗುವು ಸುಮ್ಮನೇ ಕೂತು ಕೇಳುವದು ಕಲಿಯುವಿಕೆಯಲ್ಲ. ಶಿಕ್ಷಕನು ತನ್ನ ಕಲೆಯಲ್ಲಿ ನಿಪುಣನಾಗಬೇಕಾದರೆ ಮಗುವು ಹುಟ್ಟಿದಾಗಿನಿಂದ ತಾನಾಗಿಯೇ ಹೇಗೆ ಕಲಿಯಲು ಹವಣಿಸುತ್ತಾನೆ ಎಂಬುದನ್ನು ತಿಳಿದುಕೊಳ್ಳುವದು ಅವಶ್ಯ. ಮನುಷ್ಯನ ಕಲಿಯುವ ಉದ್ದೇಶಗಳನ್ನು ಮುಖ್ಯವಾಗಿ ಮೂರು ತೆರನಾಗಿ ವಿಭಾಗಿಸಬಹುದು—ಜ್ಞಾನ, ಕೌಶಲ್ಯ ಮತ್ತು ನಡತೆ. ವಿಷಯವು ಎಷ್ಟೇ ಕಠಿಣವಿದ್ದರೂ ಪ್ರಬಲವಾದ ಪ್ರೇರಣೆ ಇದ್ದರೆ ವಿದ್ಯಾರ್ಥಿಯು ಅದನ್ನು ಕಲಿಯದೇ ಬಿಡನು. ಆದರೆ ಕಲಿಯುವಿಕೆಯಲ್ಲಿ ವೇಳೆಯ ಮತ್ತು ಶ್ರಮದ ಉಳಿತಾಯವಾಗಬೇಕಾದರೆ ಯೋಗ್ಯ ಮಾರ್ಗದರ್ಶನ ಬೇಕಾಗುತ್ತದೆ. ಮಿತವ್ಯಯದ ಮತ್ತು ಪರಿಣಾಮಕಾರಕವಾದ ಕಲಿಯುವ ಪದ್ಧತಿಯನ್ನು ವಿದ್ಯಾರ್ಥಿಗೆ ತೋರಿಸಿಕೊಡುವದೇ ಶಿಕ್ಷಣದ ಮುಖ್ಯ ಕೆಲಸ.

## ವರ್ತನದ ಮಾರ್ಪಾಟವೇ ಶಿಕ್ಷಣ

ಶಿಕ್ಷಣ ಅಂದರೆ ಸಾಲೆಯಲ್ಲಿ ಶಿಕ್ಷಕನು ಹೇಳಿದ್ದನ್ನು ಕೇಳುವದು ಮತ್ತು ಪುಸ್ತಕಗಳನ್ನು ಓದುವದು ಎಂದು ತಿಳಿಯುವದು ತಪ್ಪು. ಶಿಕ್ಷಣದ ಅರ್ಥವು ಶಿಕ್ಷಕನ ದೃಷ್ಟಿಯಿಂದ ಕಲಿಸುವದು ಎಂದು ಆದರೆ ಮಗುವಿನ ದೃಷ್ಟಿಯಿಂದ ಕಲಿಯುವಿಕೆ ಎಂದು ಆಗುತ್ತದೆ. ಶಿಕ್ಷಣದ ಮೂಲ ಅರ್ಥ ವರ್ಚಸ್ಸು, ಮತ್ತು ಕಲಿಸುವದು ಅಂದರೆ ವರ್ಚಸ್ಸು ಬೀರುವದು. ಕಲಿಯುವಿಕೆಯು ಇಡೀ ಜೀವನವನ್ನೇ ವ್ಯಾಪಿಸಿರುತ್ತದೆ. ಮನೆಯಲ್ಲಿ, ಮಠದಲ್ಲಿ, ಸಾಲೆಯಲ್ಲಿ, ಓಣಿಯಲ್ಲಿ, ಸಂಘದಲ್ಲಿ, ಸಂತೆಯಲ್ಲಿ, ಹೊಲದಲ್ಲಿ, ಕಾರ್ಖಾನೆಯಲ್ಲಿ ಹೀಗೆ ಎಲ್ಲೆಡೆಯಲ್ಲಿ ಮನುಷ್ಯನು ಕಲಿಯುವದನ್ನು ಯಾವಾಗಲೂ ನಡೆಸಿಯೇ ಇರುತ್ತಾನೆ. ಒಟ್ಟಿನಲ್ಲಿ, ಅನುಭವವನ್ನು ಹೊಂದುವದೇ ಕಲಿಯುವಿಕೆಯು. ಕಲಿಯುವವನು ತೋರಿಸುವ ಸ್ವಂತ ಚಟುವಟಿಕೆಯೇ ಕಲಿಯುವಿಕೆಯ ಮುಖ್ಯ ಲಕ್ಷಣ.

**ಅನುಭವದ ಮುಖಾಂತರ ವರ್ತನವನ್ನು ಮಾರ್ಪಡಿಸುವದೇ ಶಿಕ್ಷಣ ಅಥವಾ ಕಲಿಯುವಿಕೆ.** ಮನೋವಿಜ್ಞಾನಿಗಳು ಕಲಿಯುವಿಕೆಯ ವ್ಯಾಖ್ಯೆಯನ್ನು ಹೀಗೆಯೇ ಹೇಳುತ್ತಾರೆ. 'ವರ್ತನ' ಅಂದರೆ ಬೇರೆ ಬೇರೆ

ಸಂದರ್ಭಗಳಲ್ಲಿ ಬೇರೆ ಬೇರೆ ರೀತಿಯಾಗಿ ವ್ಯಕ್ತವಾಗುವ ಶಾರೀರಿಕ ಪ್ರತಿಕ್ರಿಯೆ. ಮಗುವು ಆಶ್ಚರ್ಯಚಕಿತನಾಗಿ ಮಿನುಗುವ ದೀಪವನ್ನು ಮುಟ್ಟುತ್ತಾನೆ. ಆಗ ಬೆರಳುಗಳಿಗೆ ಬಿಸಿ ತಾಗಿದ ಕೂಡಲೇ ಕೈಯನ್ನು ಹಿಂದಕ್ಕೆ ತಕ್ಕೊಳ್ಳುತ್ತಾನೆ. ಆ ಮೇಲೆ ಮತ್ತೊಮ್ಮೆ ದೀಪವನ್ನು ಮುಟ್ಟಲು ಅಂಜುತ್ತಾನೆ. ಮೊದಲು ಬಾರೆ ದೀಪವನ್ನು ಮುಟ್ಟುವಾಗ ವ್ಯಕ್ತವಾದ ವರ್ತನವು (ಅಂದರೆ ಕುತೂಹಲ ಪ್ರೇರಿತನಾಗುವದು, ಕೈ ಚಾಚುವದು ಮತ್ತು ದೀಪವನ್ನು ಮುಟ್ಟುವದು) ಮತ್ತು ಎರಡನೆಯ ಬಾರೆ ದೀಪವನ್ನು ಕಂಡಾಗ ವ್ಯಕ್ತವಾಗುವ ವರ್ತನವು (ಅಂದರೆ ಅಂಜಿ ಎಚ್ಚರನಾಗುವದು, ಮತ್ತು ದೀಪವನ್ನು ಬಿಟ್ಟು ಹಿಂದಕ್ಕೆ ಸರಿಯುವದು) ಬದಲಾಗುತ್ತದೆ. ಹೀಗೆ ಅನುಭವದಿಂದ ಅವನ ವರ್ತನವು ಮಾರ್ಪಡುತ್ತದೆ. ಹೊರಗೆ ಕಾಣುವ ಕೃತಿ ಅಲ್ಲದೆ ಮನಸ್ಸಿನಲ್ಲಿ ನಡೆಯುವ ವಿಚಾರ ಮತ್ತು ಕಲ್ಪನೆಗಳೂ ಹೃದಯದಲ್ಲಿ ನಡೆಯುವ ಉದ್ವೇಗಗಳೂ ವರ್ತನದಲ್ಲಿ ಸಮಾವೇಶವಾಗುತ್ತವೆ. ಮೇಲೆ ಕೊಟ್ಟ ಉದಾಹರಣೆಯಲ್ಲಿ ಕುತೂಹಲ, ಭಯ, ಎಚ್ಚರಿಕೆ, ದೀಪವು ಒಂದು ಅಪಾಯಕಾರಕ ವಸ್ತು ಎಂಬ ವಿಚಾರ, ಮುಂತಾದ ಎಲ್ಲ ಸಂಗತಿಗಳು ವರ್ತನದಲ್ಲಿ ಬರುತ್ತವೆ.

ಒಂದೇ ಪ್ರಯತ್ನಕ್ಕೆ ಕಲಿಯುವಿಕೆಯು ಪೂರ್ತಿಯಾಗುವದಿಲ್ಲ. ಇದು ಎಲ್ಲರ ಅನುಭವಕ್ಕೆ ಬಂದ ಮಾತು. ಮಗುವು ಚಿತ್ರ ತೆಗೆಯುವದನ್ನು ಅಥವಾ ಬರೆಯುವದನ್ನು ಕಲಿಯುತ್ತಾನೆ. ಅವನ ಕೃತಿಯು ಯಾವುದಾದರೊಂದು ರೂಪವನ್ನು ತಾಳುತ್ತದೆ. ಆದರೆ ಸುಂದರವಾದ ಚಿತ್ರವು ಅಥವಾ ಬರಹವು ಅವನಿಂದ ಹೊರಡಬೇಕಾದರೆ ಅದನ್ನು ಅವನು ಅನೇಕ ಸಾರೆ ತೆಗೆದು, ತೀಡಿ ತಿದ್ದಿ ರೂಢಿ ಮಾಡಿಕೊಳ್ಳಬೇಕಾಗುತ್ತದೆ. ರೂಢಿಯು ಹೆಚ್ಚಿದ ಹಾಗೆ ಕೌಶಲ್ಯವೂ ಹೆಚ್ಚುತ್ತದೆ; ವೇಗವೂ ಹೆಚ್ಚುತ್ತದೆ. ಮೊದಮೊದಲು ಅನಾವಶ್ಯಕ ವಾದ ಕೃತಿಗಳೂ, ಅಡ್ಡಾತಿಡ್ಡಿ ಚಲನಗಳೂ ಮತ್ತು ಅಸಮಾಧಾನತೆಯೂ ಕಂಡುಬರುತ್ತವೆ. ಆದರೆ ರೂಢಿಯು ಹೆಚ್ಚಾದ ಹಾಗೆ ಇವು ಕ್ರಮೇಣ ಕಡಿಮೆ ಯಾಗುತ್ತ ಕೃತಿಯಲ್ಲಿ ಸುಧಾರಣೆಯೂ ಮತ್ತು ಮನಸ್ಸಿನಲ್ಲಿ ಆತ್ಮವಿಶ್ವಾಸವೂ ಉಂಟಾಗುತ್ತವೆ. ಬರೆಯುವದನ್ನು ಕಲಿಯುವಾಗ ಮಗುವು ಆರಂಭದಲ್ಲಿ ಮೋರೆ ಕಿವುಚುವದನ್ನು, ಮೈ ಹೊರಳಿಸುವದನ್ನು, ನಾಲಿಗೆ ಚಾಚುವದನ್ನು ಅಥವಾ ಕೈ ಸೊಟ್ಟ ಹಿಡಿಯುವದನ್ನು, ಇಡೀ ತೋಳನ್ನು ಚಲಿಸುವದನ್ನು

ಮಾಡುತ್ತಾನೆ. ಇವು ಅನಾವಶ್ಯಕ. ಆಗ ಜರಿಯುವ ಬಗ್ಗೆ ಅಸಂತೋಷ ಅಥವಾ ಜಿಗುಪ್ಸೆಯನ್ನು ವ್ಯಕ್ತಮಾಡಬಹುದು. ಆದರೆ ಸಂಬಂಧಿತ ಮಾರ್ಗವನ್ನು ತೋರಿಸಿ ಕೊಟ್ಟರೆ ಇಂಥ ಪ್ರತಿಕ್ರಿಯೆಗಳು ಮಾಯವಾಗುತ್ತವೆ.

ಕಲಿಯುವಿಕೆಯ ಚಟುವಟಿಕೆಗಳು ಅನೇಕ ತರನಾಗಿ ಇರುತ್ತವೆ. ಬಾಯಿಪಾಠ ಮಾಡುವದು, ಸಂಗತಿಗಳನ್ನು ತಿಳಿದುಕೊಳ್ಳುವದು, ವಿಚಾರಗಳನ್ನು ತಿಳಿದುಕೊಳ್ಳುವದು, ಸಂಬಂಧಗಳನ್ನು ಹಚ್ಚಿ ತಪ್ಪ ಮಾಡುವದು, ಸಮಸ್ಯೆಗಳನ್ನು ಬಿಡಿಸುವದು, ಉದ್ವೇಗಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳುವದು ಮತ್ತು ವ್ಯಕ್ತಮಾಡುವದು, ಅಭಿರುಚಿಗಳನ್ನೂ ಮನೋವೃತ್ತಿಗಳನ್ನೂ ಬೆಳೆಯಿಸುವದು, ಧ್ಯೇಯಗಳನ್ನು ನಿರ್ಧರಿಸುವದು, ನವತೆಯನ್ನು ತಿದ್ದಿಕೊಳ್ಳುವದು, ಮುಂತಾದವು ಕಲಿಯುವಿಕೆಯ ಬೇರೆ ಬೇರೆ ರೂಪಗಳು. ಇವುಗಳೊಳಗೆ ಸಮಸ್ಯೆಗಳನ್ನು ಬಿಡಿಸುವ ಚಟುವಟಿಕೆಗಳಲ್ಲಿ ಬುದ್ಧಿಯ ಉಪಯೋಗವು ವಿಶೇಷವಾಗಿ ತೋರುತ್ತದೆ. ಪ್ರಾಣಿಗಳ ಮೇಲೆ ನಡೆಯಿಸಿದ ಪ್ರಯೋಗಗಳ ಮೇಲಿಂದ ಈ ಮಾತು ಸ್ಪಷ್ಟವಾಗುತ್ತದೆ. ಥಾರ್ನ್‌ಡಾಯ್ಕನು ನಡೆಯಿಸಿದ ಒಂದು ಪ್ರಸಿದ್ಧ ಪ್ರಯೋಗವನ್ನು ಇಲ್ಲಿ ವಿವರಿಸಿದೆ. ಹಸಿವೆಯಾಗಿದ್ದ ಒಂದು ಬೆಕ್ಕನ್ನು ಪಂಜರದಲ್ಲಿ ಇಟ್ಟಿರುತ್ತಾರೆ. ಆ ಪಂಜರದ ಹೊರಗೆ ಬೆಕ್ಕಿಗೆ ಕಾಣುವಂತೆ ಆಹಾರವನ್ನು ಇಟ್ಟಿರುತ್ತಾರೆ. ಮೊದಲು ಆ ಬೆಕ್ಕು ಪಂಜರದ ಸುತ್ತಲು ತಿರುಗಾಡಿ ತನ್ನ ಮುಂಗಾಲಿನಿಂದ ಪಂಜರದ ಸಲಾಕಿಗಳನ್ನು ಜಗ್ಗುತ್ತದೆ ಅಥವಾ ದೂಡುತ್ತದೆ; ಅನೇಕ ಸಾರೆ ಪ್ರಯತ್ನ ಮಾಡುತ್ತದೆ, ಅನೇಕ ಸಾರೆ ತಪ್ಪುತ್ತದೆ; ಮತ್ತೆ ಮತ್ತೆ ಪ್ರಯತ್ನ ಮಾಡುತ್ತದೆ. ಅದು ಹೊರಗೆ ಬರುವ ಉದ್ದೇಶದಿಂದ ಹಾಗೊಮ್ಮೆ ಹೀಗೊಮ್ಮೆ ಮಾಡಿ ಕೊನೆಗೆ ಸರಿಯಾದ ಮಾರ್ಗವನ್ನು ಹುಡುಕಿ ಅಗಳಿಗಳನ್ನು ಸರಿಸಿ ಪಂಜರವನ್ನು ತೆರೆದು ಹೊರಗೆ ಬಂದು ಆಹಾರವನ್ನು ತಿಂದು ತನ್ನ ಹಸಿವೆಯನ್ನು ಹಿಂಗಿಸಿಕೊಳ್ಳುತ್ತದೆ. ಮುಂದಿನ ಪ್ರಯೋಗದ ಅಂಥ ಬಿಕ್ಕಟ್ಟಿನ ಪ್ರಸಂಗಗಳಲ್ಲಿ ಆ ಬೆಕ್ಕು ಕಡಿಮೆ ಪ್ರಯತ್ನದಿಂದ ಬಹುಬೇಗ ಯಶಸ್ವಿಯಾಗುತ್ತದೆ. ಕಟ್ಟಕಡೆಗೆ ಯಾವ ವಿಲಂಬವೂ ಇಲ್ಲದೆ ನೇರವಾಗಿ ಅಗಳಿಯನ್ನು ತೆಗೆದು ಹೊರಗೆ ಬರುತ್ತದೆ. ಆಹಾರವನ್ನು ದೊರಕಿಸುವ ಉದ್ದೇಶವು ಅದನ್ನು ಪ್ರೇರಿಸಿದ್ದರಿಂದಲೇ ಆ ಬೆಕ್ಕು ಪಂಜರದ ಬಾಗಿಲ ತೆರೆಯುವದನ್ನು ಕಲಿಯಿತು

ಇದರಿಂದ ಹೊರಡುವ ಸಿದ್ಧಾಂತವೇನೆಂದರೆ, **ಉದ್ದೇಶ ಅಥವಾ ಪ್ರೇರಣೆ ಇದ್ದಲ್ಲಿ ಕಲಿಯುವಿಕೆ ಇರುತ್ತದೆ; ಮತ್ತು ಉದ್ದೇಶ ಅಥವಾ ಪ್ರೇರಣೆ ಇಲ್ಲದಲ್ಲಿ ಕಲಿಯುವಿಕೆ ಇರುವದಿಲ್ಲ.** ಮಗುವು ಪ್ರಯತ್ನಶೀಲನಾಗುವಂತೆ ಮಾಡಬೇಕಾದರೆ ಯಾವ ಪರಿಣಾಮಕಾರಕ ಉದ್ದೇಶವನ್ನು ಅವನ ಮುಂದೆ ಇಡಬೇಕು ಎಂಬುದೇ ಶಿಕ್ಷಕನ ಸಮಸ್ಯೆ. ಯಾವುದಾದರೊಂದು ಉದ್ದೇಶವನ್ನು ಸಾಧಿಸುವುದಿದ್ದರೆ ಮಾತ್ರ ಮಗುವು ಕೆಲಸಕ್ಕೆ ತೊಡಗುತ್ತಾನೆ. ಪ್ರೋತ್ಸಾಹದ ಕೊರತೆಯಿಂದ ವಿದ್ಯಾರ್ಥಿಗಳಲ್ಲಿ ಇರುವ ಎಷ್ಟೋ ಶಕ್ತಿಗಳು ಸುಪ್ತವಾಗಿ ಇರುತ್ತವೆ. ಉತ್ತೇಜನ ಅಥವಾ ಪ್ರೇರಣೆ ಇಲ್ಲದ ಮಗುವು ಹೊಟ್ಟೆತುಂಬಿದ ಬೆಕ್ಕಿನ ಹಾಗೆ. ಮಾನ, ಮೆಚ್ಚುಗೆ, ಜ್ಞಾನ, ಪ್ರಶಂಸೆ ಮೊದಲಾದವುಗಳನ್ನು ಬಯಸುವ ಮಗುವು ಹಸಿದ ಬೆಕ್ಕಿನ ಹಾಗೆ. ಏಕೆಂದರೆ ಅವನನ್ನು ಕಾರ್ಯದಲ್ಲಿ ತೊಡಗಿಸುವ ಮತ್ತು ಅವನ ಶಕ್ತಿಗಳನ್ನು ಪ್ರಕಾಶನಗೊಳಿಸುವ ಪ್ರೇರಣೆಯು ಇವುಗಳಲ್ಲಿ ಉಂಟು.

## ಅಂತಃಪ್ರೇರಣೆ ಅಂದರೇನು ?

ಮಡಿಕೆಯನ್ನು ಮಾಡಲಿಕ್ಕೆ ಮಣ್ಣೇ ಮೊದಲು ಇದ್ದಂತೆ ಕಲಿಯುವಿಕೆಯನ್ನು ಜೀವಂತಿಸಲಿಕ್ಕೆ ಅಂತಃಪ್ರೇರಣೆಯೇ ಮೊದಲು. ಅಂತಃಪ್ರೇರಣೆಯು ಇಲ್ಲದಿದ್ದರೆ ಕಲಿಯುವಿಕೆಯು ಸಾಧ್ಯವೇ ಇಲ್ಲ. ಪ್ರೇರಣೆಯು ಚೇತನವನ್ನು ಕೊಟ್ಟು ಮನುಷ್ಯನನ್ನು ಕೆಲಸಕ್ಕೆ ಹುರಿದುಂಬಿಸುತ್ತದೆ. ಕಲಿಯಬೇಕೆಂಬ ಪ್ರಯತ್ನಕ್ಕೆ ಚೇತನವು ಬೆಂಬಲವಾಗಿರುತ್ತದೆ. ಈ ಚೇತನವು ಎಷ್ಟು ಪ್ರಬಲವಾಗಿರುತ್ತದೆಯೋ ಕಲಿಯುವಿಕೆಯು ಅಷ್ಟು ಮುನ್ನಡೆ ಇಡುತ್ತದೆ.

ಸಂಸ್ಕಾರ ಮತ್ತು ಚೇತನ ಎಂಬವು ಮನಸ್ಸಿನ ಎರಡು ಮುಖ್ಯ ಲಕ್ಷಣಗಳೆಂದು ಹಿಂದಿನ ಅಧ್ಯಾಯದಲ್ಲಿ ಹೇಳಿದೆ. ಸಂಸ್ಕಾರವೆಂದರೆ ಆಗಿಹೋದ ಅನುಭವ ಶೇಷಗಳನ್ನು ಹಿಡಿದು ಇಡುವ ಮನಸ್ಸಿನ ಶಕ್ತಿ; ಚೇತನ ಎಂದರೆ ಮನಸ್ಸಿನ ಉದ್ದೇಶಯುತ ಚಟುವಟಿ ಈ ಎರಡೂ ಶಕ್ತಿಗಳು ಯಾವಾಗಲೂ ಕೂಡಿಯೇ ಇರುತ್ತವೆ. ಸಂಸ್ಕಾರದಲ್ಲಿ ಬೇರೂರಿದ ಚೇತನವು ವಿಶಿಷ್ಟ ಸನ್ನಿವೇಶಗಳಲ್ಲಿ ವಿಶಿಷ್ಟ ರೂಪಗಳನ್ನು ತಾಳುತ್ತವೆ. ಅವುಗಳಿಗೆ ಮೂಲ ಪ್ರವೃತ್ತಿಗಳು ಅಥವಾ ಅಂತಃಪ್ರೇರಣೆಗಳೆಂದು ಹೆಸರು.

ಪ್ರಾಣಿಯನ್ನು ಕೆಲಸಕ್ಕೆ ಹಚ್ಚುವ ಮನಸ್ಸಿನ ಶಕ್ತಿಗೆ ಅಂತಃಪ್ರೇರಣೆ (Motivation) ಎಂದು ಅನ್ನುತ್ತಾರೆ. ಈ ಶಕ್ತಿಯು ಅಥವಾ ಪ್ರಚೋದನೆಯು ಪ್ರಾಣಿಯಲ್ಲಿಯೇ ಹುಟ್ಟುತ್ತದೆ. ಈ ಅಂತಃಪ್ರೇರಣೆಯು ಹೊರಗೆ ಪ್ರಕಟವಾದಾಗ್ಗೆ ಅದು ಬೇರೆ ಬೇರೆ ರೂಪಗಳನ್ನು ತಾಳುವುದರಿಂದ ಅದನ್ನು ಆಗ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಬಯಕೆ, ಬೇಡಿಕೆ, ಆಶೆ, ಅಭಿಮತ, ಇಚ್ಛೆ, ಒಲವು, ಅಭಿರುಚಿ, ಆಸಕ್ತಿ, ಮನೋವೃತ್ತಿ, ಪ್ರಚೋದನೆ, ಪ್ರೇರಣೆ ಮುಂತಾದವು ಪರ್ಯಾಯ ಶಬ್ದಗಳು. ಪ್ರಾಣಿಯು ಸಾಧಿಸಬೇಕೆಂಬ ಉದ್ದೇಶಗಳು ಬೇರೆ ಬೇರೆಯಾದಂತೆ ಅಂತಃಪ್ರೇರಣೆಯ ರೂಪಗಳೂ ಮತ್ತು ಆ ರೂಪಗಳ ಹೆಸರುಗಳೂ ಬೇರೆ ಬೇರೆಯಾಗುತ್ತವೆ.

ಮನುಷ್ಯನು ಪ್ರಾಣಿವರ್ಗಕ್ಕೆ ಸೇರಿದರೂ ಅವನ ವರ್ತನಗಳಲ್ಲಿಯೂ ಇತರ ಪ್ರಾಣಿಗಳ ವರ್ತನಗಳಲ್ಲಿಯೂ ಬಹಳ ಅಂತರ ಉಂಟು. ಪ್ರಾಣಿಯು ಅದೇ ಸನ್ನಿವೇಶದಲ್ಲಿ ಪ್ರತಿ ಸಲ ಅದೇ ರೀತಿಯಾಗಿ ವರ್ತಿಸುವದು ಕಂಡು ಬರುತ್ತದೆ. ಹೀಗಿದ್ದರೂ ಅವುಗಳ ಸ್ವಾಭಾವಿಕ ಕ್ರಿಯೆಗಳಲ್ಲಿ ಬುದ್ಧಿಯ ಅಂಶವು ಇದ್ದೇ ಇರುತ್ತದೆ. ಜೇಡಹುಳದ ಬಲೆಯನ್ನು ಯಾರಾದರೂ ತುಸು ಮುಕ್ಕು ಮಾಡಿದರೆ ಆ ಕೊರತೆಯನ್ನು ಅದು ತಿದ್ದಿ ಸರಿಪಡಿಸಿಕೊಳ್ಳುತ್ತದೆ. ಕಡಜಿಗ ಹುಳವು ತನ್ನ ಮನೆ ಕಟ್ಟುವಾಗ ಅದಕ್ಕೆ ನಾವು ಒಂದು ಬೆಜ್ಜವನ್ನು ತೆಗೆದರೆ ಅದು ಮತ್ತೆ ಆ ರಂಧ್ರವನ್ನು ಮಣ್ಣಿನಿಂದ ಮುಚ್ಚುತ್ತದೆ. ಕೋತಿಯು ಪಂಜರದಲ್ಲಿ ಮೇಲೆ ಕಟ್ಟಿದ್ದ ಬಾಳೆಯ ಹಣ್ಣುಗಳನ್ನು ಕೋಲಿನಿಂದ ಕೆಡವಿ ತಿನ್ನುತ್ತದೆ. ಪ್ರಾಣಿಗಳ ಇಂಥ ಕ್ರಿಯೆಗಳು ಬುದ್ಧಿಯ ಲಕ್ಷಣಗಳು. ಆದರೆ ಮನುಷ್ಯನ ಕ್ರಿಯೆಗಳಲ್ಲಿ ಬುದ್ಧಿಯು ಹೆಚ್ಚು ಪ್ರಮಾಣದಲ್ಲಿ ಇರುತ್ತದೆ. ಅವನ ವರ್ತನವು ಪ್ರಾಣಿಗಳಂತೆ ಒಂದೇ ತೆರನಾಗಿ ಇರುವದಿಲ್ಲ. ಅದೇ ಸಂದರ್ಭದಲ್ಲಿ ಅದೇ ಮನುಷ್ಯನು ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆಯಾಗಿ ವರ್ತಿಸಬಹುದು ಮತ್ತು ಬೇರೆ ಬೇರೆ ಜನರೂ ಅದೇ ಕಾಲಕ್ಕೆ ಅದೇ ಸನ್ನಿವೇಶದಲ್ಲಿ ಬೇರೆ ಬೇರೆಯಾಗಿ ವರ್ತಿಸಬಹುದು. ಒಂದೇ ವರ್ಗದ ಹಕ್ಕಿಗಳು ಒಂದೇ ತೆರನಾಗಿ ಗೂಡು ಕಟ್ಟುತ್ತವೆ. ಆದರೆ ಮನುಷ್ಯನು ಕಟ್ಟಿದ ಮನೆಯ ರೂಪಗಳು ನಾನಾವಿಧವಾಗಿ ಇರುತ್ತವೆ. ಆಹಾರಕ್ಕಾಗಿ ಪಂಜರವನ್ನು ತೆರೆಯಲು ಕಲಿತ ಬೆಕ್ಕು ಅಥವಾ ಇಲಿಯು ಒಂದು ವೇಳೆ ಭಯದ

ಪ್ರಸಂಗದಲ್ಲಿ ತನ್ನ ರಕ್ಷಣೆಯ ಸಲುವಾಗಿ ಪಂಜರವನ್ನು ತೆರೆಯುವುದೆಂಬುದು ಸಂಶಯ. ಆದರೆ ಆಹಾರವನ್ನು ದೊರಕಿಸಲಿಕ್ಕೆ ಇಂಥ ಪೆಟ್ಟಿಗೆಯನ್ನು ತೆರೆಯಲು ಕಲಿತಿರುವ ಮಗುವು ಭಯದ ಸನ್ನಿವೇಶದಲ್ಲಿ ಆ ಪೆಟ್ಟಿಗೆಯನ್ನು ತೆರೆಯಬಹುದು. ತನ್ನ ರಕ್ಷಣೆಗಾಗಿ ಬಾಂಬಿನ ಸಪ್ಪಳವನ್ನು ಕೇಳಿ ಮನುಷ್ಯನು ಓಡಿಹೋಗಬಹುದು, ಅಡಗಿಕೊಳ್ಳಬಹುದು ಅಥವಾ ಸುರಕ್ಷತೆಯ ಸಲುವಾಗಿ ಇನ್ನಾವ ಉಪಾಯವನ್ನಾದರೂ ಕೈಕೊಳ್ಳಬಹುದು. ಅಲ್ಲದೆ ಇದಕ್ಕೂ ಮಹತ್ವದ ಸಂಗತಿ ಏನಂದರೆ ಸಂಯುಕ್ತರಾಷ್ಟ್ರ ಸಭೆಯವರು (U. N. O.) ಎಟಂಬಾಂಬಿನ ನಿಯಂತ್ರಣವನ್ನು ಯೋಚಿಸಬಹುದು. ಈ ತರಹದ ದೀರ್ಘ ಆಲೋಚನೆ ಮತ್ತು ಕಾರ್ಯಸ್ವೈವಿಧ್ಯತೆ ಮನುಷ್ಯನನ್ನು ಬಿಟ್ಟು ಇತರ ಪ್ರಾಣಿಗಳ ವರ್ತನದಲ್ಲಿ ಇರುವದಿಲ್ಲ. ಇದನ್ನು ಅರಿತು ಇತ್ತೀಚಿಗೆ ಮನೋವಿಜ್ಞಾನಿಗಳು **'ಮೂಲಪ್ರವೃತ್ತಿ'** ಅಥವಾ 'ಹುಟ್ಟುಗುಣ' (Instinct) ಎಂಬ ಪದವನ್ನು ಕೆಳತರಗತಿಯ ಪ್ರಾಣಿಗಳ ವರ್ತನವನ್ನು ಕುರಿತು ಮತ್ತು **"ಅಂತಃಪ್ರೇರಣೆ" ಅಥವಾ "ಪ್ರೇರಣೆ"** (Motive) ಎಂಬ ಪದವನ್ನು ಮನುಷ್ಯನ ವರ್ತನವನ್ನು ಕುರಿತು ಉಪಯೋಗಿಸುವದುಂಟು. ಮನುಷ್ಯನ ವರ್ತನವನ್ನು ಕುರಿತು ವಿವೇಚಿಸುವಾಗ ಮೂಲಪ್ರವೃತ್ತಿಗಳ (ಇನ್‌ಸ್ಟಿಂಕ್ಟ) ವಾದವನ್ನು ಇತ್ತೀಚಿಗೆ ಮನೋವಿಜ್ಞಾನಿಗಳು ಬಿಟ್ಟುಕೊಟ್ಟಿದ್ದಾರೆ.

'ಮೂಲಪ್ರವೃತ್ತಿ'ಗಳ ಸಂಖ್ಯೆಯು ಎಷ್ಟೆಂಬುದರ ಬಗ್ಗೆ ಭಿನ್ನಾಭಿಪ್ರಾಯವಿರುತ್ತದೆ. ಅವುಗಳಲ್ಲಿ ಮುಖ್ಯವಾದವುಗಳು ಎರಡು ಎಂದು ಕೆಲವರು, ನಾಲ್ಕು ಎಂದು ಕೆಲವರು, ಹದಿನಾಲ್ಕು ಎಂದು ಕೆಲವರು ಅನ್ನುತ್ತಾರೆ. ಮ್ಯಾಕ್‌ಡೂಗಲ್‌ನ ಅಭಿಪ್ರಾಯದ ಪ್ರಕಾರ ಮನುಷ್ಯವರ್ಗದಲ್ಲಿ ಕಂಡುಬರುವ ಮೂಲಪ್ರವೃತ್ತಿಗಳನ್ನು ಇಲ್ಲಿ ಕೊಟ್ಟಿವೆ:— ಆಹಾರ-ಶೋಧನೆ, ಕಾಮ, ಜುಗುಪ್ಸೆ, ಭಯ, ಕುತೂಹಲ, ಪಾಲನೆ, ಸಂಘ, ಆತ್ಮಪ್ರತಿಷ್ಠೆ, ವಿಧೇಯತೆ, ಕ್ರೋಧ ಅಥವಾ ಯುದ್ಧ, ಪ್ರಾರ್ಥನೆ, ರಚನೆ, ಸಂಗ್ರಹ, ಮತ್ತು ಹಾಸ್ಯ. ವಿಶಿಷ್ಟ ಸನ್ನಿವೇಶದಲ್ಲಿ ವಿಶಿಷ್ಟ ರೀತಿಯಿಂದ ವರ್ತಿಸುವವನ್ನು ಈ ಪ್ರವೃತ್ತಿಗಳು ನಿರ್ಧರಿಸುತ್ತವೆ. ಇವುಗಳನ್ನು ಸ್ಪಷ್ಟವಾಗಿ ಗುರುತಿಸಲಿಕ್ಕೆ ಬಂದರೂ ಇವು ಪ್ರತ್ಯೇಕವಾಗಿರದೆ ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಈ ಪ್ರವೃತ್ತಿಗಳು ನಾವು ಹುಟ್ಟುವಾಗಲೇ ನಮ್ಮೊಡನೆ ಇರುತ್ತವೆಂದೂ, ಇವು ಕಲಿಯದೇ ಬಂದ

ಅನುವಂಶಿಕವಾದ ನೈಸರ್ಗಿಕ ಗುಣಗಳೆಂದೂ ಕೆಲವು ಮನೋವೈಜ್ಞಾನಿಕರು ಪ್ರತಿಪಾದಿಸುತ್ತಾರೆ. ಆದರೆ ಪ್ರವೃತ್ತಿಗಳು ಮನುಷ್ಯನ ಹುಟ್ಟುಗುಣಗಳೆಂಬ ತತ್ವವನ್ನು ಇತ್ತೀಚೆಗೆ ಪ್ರಖ್ಯಾತ ಮನೋವಿಜ್ಞಾನಿಗಳು ಒಪ್ಪುವದಿಲ್ಲ. ಪ್ರವೃತ್ತಿಗಳೆಂದರೆ ಮನಸ್ಸಿನ ಒಲವುಗಳು. ಒಬ್ಬ ವ್ಯಕ್ತಿಯನ್ನು ಬೆಳೆಸಿರುವ ಸಂಸ್ಕೃತಿಯಿಂದ ಅಥವಾ ಸಾಮಾಜಿಕ ಪರಿಸ್ಥಿತಿಯಿಂದ ಈ ಒಲವುಗಳು ಮಾರ್ಪಡುತ್ತವೆಂದು ಈಗಿನವರ ಸಿದ್ಧಾಂತ. ಇವು 'ಸಹಜ' ಒಲವುಗಳು ಮತ್ತು ಇವು 'ಸಂಪಾದಿತ' ಒಲವುಗಳು ಎಂದು ವಿಂಗಡಿಸಿ ಹೇಳುವದು ನಿಷ್ಪ್ರಯೋಜಕವೆಂದು ಆಧುನಿಕ ಮನೋವಿಜ್ಞಾನಿಗಳು ಸಾಮಾನ್ಯವಾಗಿ ಅಭಿಪ್ರಾಯಪಡುತ್ತಾರೆ. ಮನುಷ್ಯನ ವರ್ತನದ ಕಾರಣಗಳನ್ನು ತಿಳಿದುಕೊಳ್ಳುವಾಗ ಅವನ ಅಭಿರುಚಿಗಳು ಅಥವಾ ಉದ್ದೇಶಗಳು ಯಾವವು ಎಂಬುದನ್ನು ವಿಚಾರಿಸುವದು ಹೆಚ್ಚು ಸಮಂಜಸವಾಗುವದು. ಈ ದೃಷ್ಟಿಯಿಂದ ಪ್ರವೃತ್ತಿ ಎಂಬ ಶಬ್ದದ ಬದಲು **'ಪ್ರೇರಣೆ'** (Motive) ಅಥವಾ **'ಪ್ರಚೋದನೆ'** (Drive) ಎಂಬ ಶಬ್ದವನ್ನು ಇತ್ತಿತ್ತಲಾಗಿ ಉಪಯೋಗಿಸಹತ್ತಿದ್ದಾರೆ. ಅಭಿರುಚಿಗಳು ಅಸಂಖ್ಯವಾದುದರಿಂದ ಅವುಗಳನ್ನು ಎಣಿಸಲು ಬರುವಂತಿಲ್ಲ. ವಯಸ್ಸು, ಕಾಲ, ಸನ್ನಿವೇಶ, ಸಂಸ್ಕೃತಿ, ಶಿಕ್ಷಣ, ಪರಿಸ್ಥಿತಿ ಮೊದಲಾದವು ಭಿನ್ನವಾದಂತೆ ಮನುಷ್ಯನ ಅಭಿರುಚಿಗಳು ಮತ್ತು ಪ್ರೇರಣೆಗಳು ಭಿನ್ನವಾಗುತ್ತವೆ.

ಶಿಕ್ಷಕನು ವಿದ್ಯಾರ್ಥಿಗಳೊಡನೆ ವ್ಯವಹರಿಸುವಾಗ ಮೂಲಪ್ರವೃತ್ತಿಗಳ ವಿಚಾರವನ್ನು ಬಿಟ್ಟು ಪ್ರೇರಣೆಯ ದೃಷ್ಟಿಯನ್ನು ಇಟ್ಟುಕೊಳ್ಳಬೇಕು; ಮಕ್ಕಳ ಅಭಿರುಚಿಗಳ, ಬೇಡಿಕೆಗಳ ಮತ್ತು ಸಮಸ್ಯೆಗಳ ದೃಷ್ಟಿಯನ್ನು ಇಟ್ಟುಕೊಳ್ಳಬೇಕು. ಆದರೆ ವಿದ್ಯಾರ್ಥಿಗಳ ಕೇವಲ ತಾತ್ಕಾಲಿಕ ಅಭಿರುಚಿಗಳನ್ನು ಮತ್ತು ಪ್ರೇರಣೆಗಳನ್ನು ತೃಪ್ತಿಗೊಳಿಸುವ ಹವಣಿಕೆಯು ಸಂಕುಚಿತ ದೃಷ್ಟಿ ಎನಿಸುವದು. ಮಗುವಿನ ಪೂರ್ಣ ವ್ಯಕ್ತಿತ್ವದ ಮತ್ತು ಅವನ ನಾಗರಿಕ ಜೀವನದ ದೂರದೃಷ್ಟಿಯನ್ನು ಇಟ್ಟುಕೊಳ್ಳುವದು ಅವಶ್ಯ. ಪ್ರಾಥಮಿಕ ಶಾಲೆಯಲ್ಲಿ ಚಿಕ್ಕ ಮಗುವಿಗೆ ಓದು ಕಲಿಸುವಾಗ ಕೇವಲ ಅಕ್ಷರ ಪರಿಚಯ ಮಾಡಿಕೊಡುವ ಶಿಕ್ಷಕನ ಉದ್ದೇಶವು ಸಂಕುಚಿತವಾದುದು. ಓದಿನ ವಿಷಯವು ಮಗುವಿಗೆ ಅರ್ಥವುಳ್ಳದ್ದಾಗಬೇಕು. ಓದಿನ ವಿಷಯವು ಮಗುವಿನಲ್ಲಿ

ಅಭಿರುಚಿಯನ್ನು ಹುಟ್ಟಿಸುವಂತಹದು ಆಗಿರಬೇಕು. ಮತ್ತು ಕಲಿಸುವ ಪದ್ಧತಿಯು ಮಗುವಿನ ತಿಳುವಳಿಕೆಯನ್ನು ಮತ್ತು ಗ್ರಹಣ ಶಕ್ತಿಯನ್ನು ಬೆಳೆಯಿಸುವಂತಹದು ಆಗಿರಬೇಕು. ಶಾಲೆಯಲ್ಲಿ ಸಾಮಾಜಿಕ ವಿಷಯಗಳನ್ನು ಕಲಿಸುವಾಗ ಇಂದಿನ ಸಮಸ್ಯೆಗಳಿಗೆ ಅವುಗಳನ್ನು ಸಂಬಂಧಿಸಿ ಹೇಳುವದಲ್ಲದೆ ಉತ್ತಮ ನಾಗರಿಕ ಜೀವನವು ಹೇಗೆ ಇರತಕ್ಕದ್ದು ಎಂಬುವದನ್ನು ಹುಡುಗರು ವಿಚಾರಿಸುವಂತೆ ಮಾಡಬೇಕು. ಹೀಗೆ ಅಭ್ಯಾಸ ಕ್ರಮದ ಪ್ರತಿಯೊಂದು ವಿಷಯವನ್ನು ಪ್ರತಿನಿತ್ಯದ ಜೀವನ ಸಮಸ್ಯೆಗಳಿಗೆ ಸಂಬಂಧಿಸಬೇಕು. ಅಂದರೆ ಅದರಿಂದ ಪ್ರಯೋಜನವಾಗುವದು. ಮಕ್ಕಳಿಗೆ ಸಣ್ಣದೊಂದು ಗಾಳಿಪಟ ಮಾಡುವದನ್ನು ಕಲಿಸುವದಿದ್ದರೂ ಶಿಕ್ಷಕನು ವಿಶಾಲ ದೃಷ್ಟಿಯನ್ನು ಇಟ್ಟು ಕೊಂಡಿರಬೇಕು. ಪಟವನ್ನು ಮಾಡುವದು ಒಂದು ಕಲೆ ಎಂದು ಭಾವಿಸಬೇಕು. ಅದನ್ನು ನೀಟಾಗಿ ಕತ್ತರಿಸುವದರಲ್ಲಿ ಮತ್ತು ಅದಕ್ಕೆ ಬೇರೆ ಬೇರೆ ಬಣ್ಣದ ಹಾಳೆಗಳನ್ನು ಹಚ್ಚುವದರಲ್ಲಿ ಸೌಂದರ್ಯದ ಬಗ್ಗೆ ಮಕ್ಕಳ ಅಭಿರುಚಿಯನ್ನು ಹುಟ್ಟಿಸಬೇಕು. ಪಟವು ಸಮತೋಲವಾಗಿ ಆಕಾಶದಲ್ಲಿ ದೂರದ ವರೆಗೆ ಹಾರಬೇಕಾದರೆ ಗಾಳಿ, ವೇಗ ಗುರುತ್ವಾಕರ್ಷಣ ಶಕ್ತಿ ಮೊದಲಾದ ಭೌತಿಕ ನಿಯಮಗಳ ಅಭ್ಯಾಸವನ್ನು ಮಕ್ಕಳ ಯೋಗ್ಯತೆಯನ್ನು ನೋಡಿ ಮಾಡಿಸ ಬೇಕು. ಚಾಣಾಕ್ಷನಾದ ಶಿಕ್ಷಕನು ತಾನು ಕಲಿಸುವ ವಿಷಯಗಳನ್ನು ಮನರಂಜನ ಮಾಡುವದಲ್ಲದೆ ಅವುಗಳ ಮುಖಾಂತರ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯ ದೃಷ್ಟಿಯನ್ನು ಇಟ್ಟುಕೊಳ್ಳಬಲ್ಲನು. ಅವರ ಇಂದಿನ ಅಭಿರುಚಿ ಮತ್ತು ಮುಂದಿನ ಗುರಿಗಳಲ್ಲಿ ಸಂಬಂಧವನ್ನು ಕಲ್ಪಿಸಬಲ್ಲನು.

## ಪ್ರೇರಣೆ ಮತ್ತು ಶಿಕ್ಷಣ

ಶಿಕ್ಷಣದಲ್ಲಿ ಪ್ರೇರಣೆಗಳ ಕಾರ್ಯವು ಯಾವುದೆಂಬುವನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ. ಪ್ರೇರಣೆಗಳು ಮೂರು ಬಗೆಯಾಗಿ ಕೆಲಸವನ್ನು ನಡೆಯಿಸುತ್ತವೆ. ಮೊದಲನೆಯದಾಗಿ ಅವು ವರ್ತನಕ್ಕೆ ಚೇತನವನ್ನು ಕೊಡು ತ್ತವೆ. ಪ್ರೇರಣೆಗಳು ಹುರುಪನ್ನು ತುಂಬಿ ಮನುಷ್ಯನನ್ನು ಕೆಲಸಕ್ಕೆ ಹಚ್ಚುತ್ತವೆ. ಹೊಗಳಿಕೆ, ತೆಗಳಿಕೆ, ದುಡ್ಡು, ಆಹಾರ ಮೊದಲಾದವು ಪ್ರೇರಕ ವಸ್ತುಗಳು. ಅವುಗಳನ್ನು ಹೊಂದುವುದಕ್ಕಾಗಿ ಅವನು ಕಾರ್ಯದಲ್ಲಿ ತೊಡಗುತ್ತಾನೆ. ಶಾಲೆಯ ಅಭ್ಯಾಸದಲ್ಲಿ ಅಥವಾ ಆಟಪಾಟಗಳಲ್ಲಿ ವಿದ್ಯಾರ್ಥಿಯು ಮೇಲ್ಮೆಯನ್ನು

ಪಡೆದರೆ ಶಿಕ್ಷಕರು ಅವನಿಗೆ ಬೆಳ್ಳಿಯ ಪದಕವನ್ನು ಅಥವಾ ಪ್ರಶಂಸಾ ಪತ್ರವನ್ನು ಕೊಡುತ್ತಾರೆ. ಸಾಲೆಯ ಪರೀಕ್ಷೆಯ ಕಾಲಕ್ಕೆ ಪ್ರಗತಿಯನ್ನು ಸೂಚಿಸಲಿಕ್ಕೆ ಗುಣಗಳನ್ನು ಕೊಡುತ್ತಾರೆ. ಇವು ಮಕ್ಕಳನ್ನು ಪ್ರಯತ್ನಶೀಲರನ್ನಾಗಿ ಮಾಡಲು ಕಲ್ಪಿಸಿದ 'ತಾತ್ಕಾಲಿಕ' ಪ್ರೋತ್ಸಾಹಗಳು. ಆದರೆ ಕಲಿಯುವ ವಿಷಯಗಳಲ್ಲಿ ಮಕ್ಕಳ ಅಭಿರುಚಿಯನ್ನು ಸಾಲೆಯ ವಿದ್ಯಾಭ್ಯಾಸವು ಮುಗಿದ ಮೇಲೆಯೂ ಪ್ರೌಢಜೀವನದಲ್ಲಿ ನಿರಂತರವಾಗಿ ಮುಂದುವರಿಯುವಂತೆ ಹುಟ್ಟಿಸ ಬೇಕು. ಪ್ರೇರಣೆಗಳನ್ನು ಹೀಗೆ ಪರಿವರ್ತಿಸುವದು ನಿಜವಾದ ಶಿಕ್ಷಣದ ಕೆಲಸ.

ಎರಡನೆಯದಾಗಿ ಪ್ರೇರಣೆಗಳು ವಿಶಿಷ್ಟ ಪ್ರತಿಕ್ರಿಯೆಗಳನ್ನು ಅಥವಾ ನಿರ್ಧಾರಗಳನ್ನು ಆರಿಸುತ್ತವೆ. ವರ್ತಮಾನಪತ್ರವನ್ನು ಓದಲಿಕ್ಕೆ ತಕ್ಕೊಂಡಾಗ ಬೇರೆ ಬೇರೆ ಜನರು ಬೇರೆ ಬೇರೆ ವಿಷಯಗಳನ್ನು ಮೊದಲು ಆರಿಸಿಕೊಂಡು ಓದುತ್ತಾರೆ. ಕೆಲವರು ವ್ಯಾಪಾರದ ಧಾರಣೆಯ ಸುದ್ದಿಗಳನ್ನು, ಕೆಲವರು ಆಟಪಾಟಗಳ ಸುದ್ದಿಗಳನ್ನು, ಕೆಲವರು ಲೋಕಕಾರಣದ ಸುದ್ದಿಗಳನ್ನು ಮೊದಲು ಓದುವರು. ಅವರು ಈ ರೀತಿಯಾಗಿ ವಿಷಯಗಳನ್ನು ಆರಿಸಬೇಕಾ ದರೆ ಅವರವರ ಸಂಪಾದಿತ ಅಭಿರುಚಿಗಳೇ ಅದಕ್ಕೆ ಕಾರಣಗಳಾಗಿರುತ್ತವೆ. ಇದರಂತೆ ಒಂದು ಭಾಷಣದ ವರದಿಯನ್ನು ಬೇರೆ ಬೇರೆ ಜನರು ಬೇರೆ ಬೇರೆ ಯಾಗಿ ಕೊಡುತ್ತಾರೆ. ಇದಕ್ಕೆ ಕಾರಣವೇನಂದರೆ ಅವರವರ ಅಭಿರುಚಿಗಳು, ಉದ್ದೇಶಗಳು ಅಥವಾ ಅನುಭವದ ಹಿನ್ನೆಲೆಗಳು ಬೇರೆ ಬೇರೆಯಾಗುತ್ತವೆ. ಪ್ರಾಣಿಗಳು ಕೂಡ ಸಂದರ್ಭಕ್ಕೆ ತಕ್ಕ ಪ್ರತಿಕ್ರಿಯೆಗಳನ್ನು ಆರಿಸುವವು ಎಂಬುದು ಪ್ರಯೋಗದಿಂದ ಕಂಡುಬಂದಿದೆ. ಒಂದು ನಿಟ್ಟಿನಿಂದ ಹೋದರೆ ಆಹಾರ ದೊರಕುವದೆಂದೂ ಮತ್ತೊಂದು ನಿಟ್ಟಿನಿಂದ ಹೋದರೆ ನೀರು ದೊರಕುವದೆಂದೂ ಇಲಿಗಳು ಮೊದಲು ಕಲಿತಿದ್ದವು. ಆಮೇಲೆ ಅವು ಹಸಿವೆ ಯಾದಾಗ ಆಹಾರವಿದ್ದ ಹಾದಿಯ ಕಡೆಗೆ ಮತ್ತು ನೀರಡಿಕೆಯಾದಾಗ ನೀರಿದ್ದ ಹಾದಿಯ ಕಡೆಗೆ ತಾವಾಗಿಯೇ ಹೋಗುವದು ಕಂಡುಬಂದಿತು. ಇಲಿಗಳಾಗಲಿ ಮನುಷ್ಯರಾಗಲಿ ತಾವು ಮೊದಲು ಕಲಿತ ಅನುಭವಗಳನ್ನು ಉಪಯೋಗಿಸುತ್ತಾರೆ. **ಎಂಥ ಪ್ರತಿಕ್ರಿಯೆಗಳು ಪ್ರೇರಣೆಗಳನ್ನು ತೃಪ್ತಿಪಡಿಸುತ್ತವೆಯೋ ಮತ್ತು ಬೇಡಿಕೆಗಳನ್ನು ಪೂರೈಸುತ್ತವೆಯೋ ಅಂಥವು ಆರಿಸಲ್ಪಡುತ್ತವೆ ಮತ್ತು ಉಪಯೋಗಿಸಲ್ಪಡುತ್ತವೆ.**

ಇದರಿಂದ ಹೊರಡುವ ಶಿಕ್ಷಣ ತತ್ವವೇನಂದರೆ ಕಲಿಯುವವನು ಯಾವ ಕೆಲಸವನ್ನು ಮಾಡಬೇಕು ಮತ್ತು ಅದರ ಉದ್ದೇಶವೇನು ಎಂಬುದು ಅವನಿಗೆ ಸ್ಪಷ್ಟವಾಗಿ ಗೊತ್ತಾಗಬೇಕು. ಶಿಕ್ಷಣ ಚಟುವಟಿಕೆಗಳೆಲ್ಲ ಉದ್ದೇಶಯುತವಾಗಿರಬೇಕು. "ಈ ಪಾಠವನ್ನು ಓದಿರಿ, ಈ ಅಕ್ಷರಗಳನ್ನು ತಿದ್ದಿರಿ, ಇದನ್ನು ರೂಢಿ ಮಾಡಿರಿ" ಎಂದು ಕೇವಲ ಹೇಳಿ ಕೊಡುವುದು ಶಿಕ್ಷಣ ಪದ್ಧತಿಯಲ್ಲ. ಅದರಿಂದ ಮಕ್ಕಳು ಅಷ್ಟೊಂದು ಕಲಿಯಲಾರರು. ಅಭ್ಯಾಸವು ಫಲವನ್ನು ಕೊಡಬೇಕಾದರೆ ಅದು ಒಂದು ನಿಶ್ಚಿತ ಗುರಿಯ ಕಡೆಗೆ ಸಾಗಬೇಕು.

ಹಾದಿಯನ್ನು ತೋರಿಸುವದು ಪ್ರೇರಣೆಗಳ ಮೂರನೇ ಕೆಲಸ. ಯಾವ ಗುರಿಯನ್ನು ಮುಟ್ಟಬೇಕಾಗಿದೆ ಮತ್ತು ಯಾವ ಮಾರ್ಗದಿಂದ ಹೋದರೆ ಆ ಗುರಿಯು ಸಾಧ್ಯವಾಗುತ್ತದೆ ಎಂಬುದನ್ನು ಪ್ರೇರಣೆಗಳು ನಿರ್ಧರಿಸುತ್ತವೆ. ಸ್ಪಷ್ಟವಾದ ಗುರಿಯ ಕಡೆಗೆ ಚೇತನವು ಅಥವಾ ಶಕ್ತಿಗಳು ಹರಿಯುತ್ತಿದ್ದರೆ ಮಾತ್ರ ಕಲಿಯುವಿಕೆಯಲ್ಲಿ ಸುಧಾರಣೆಯು ಮತ್ತು ಮುನ್ನಡೆಯು ಕಾಣುತ್ತದೆ. ಹಸಿವೆ ಎಂಬ ಪ್ರೇರಣೆಯಿಂದ ಜಾಗ್ರತವಾದ ಪ್ರಾಣಿಯು ಹಸಿವೆಯನ್ನು ತೃಪ್ತಿಪಡಿಸುವ ವಸ್ತುವಿನ ಕಡೆಗೆ ಅಥವಾ ಆಹಾರದ ಕಡೆಗೆ ಹರಿಯುತ್ತದೆ. ಹೀಗೆ ಬೇರೆ ಬೇರೆ ಬೇಡಿಕೆಗಳನ್ನು ತೃಪ್ತಿಗೊಳಿಸಲಿಕ್ಕೆ ಯಾವ ಹಾದಿಯನ್ನು ಹಿಡಿಯಬೇಕು ಅಥವಾ ಯಾವ ಪ್ರತಿಕ್ರಿಯೆಗಳನ್ನು ಕೈಕೊಳ್ಳಬೇಕು ಎಂಬುದನ್ನು ಅಂತಃಪ್ರೇರಣೆಗಳು ನಿರ್ಧರಿಸುವವು.

ಪ್ರತಿಯೊಂದು ಪ್ರೇರಣೆಯ ಎದುರಿಗೆ ಒಂದು ಗುರಿ ಇರುತ್ತದೆ. ಈ ಗುರಿಯ ವಿಚಾರವು ಶಿಕ್ಷಣದಲ್ಲಿ ಮಹತ್ವದ ಮಾರ್ಗದರ್ಶನ ಮಾಡುವದು. ವಿದ್ಯಾರ್ಥಿಗಳು ಒಳ್ಳೇ ಪ್ರಬಂಧಗಳನ್ನು ಬರೆಯಬೇಕಾದರೆ ಅವುಗಳ ಪ್ರಯೋಜನವು ಅವರಿಗೆ ಗೊತ್ತಾಗಬೇಕು. ವ್ಯಾಕರಣದ ಯಾವ ನಿಯಮಗಳನ್ನು ಪಾಲಿಸಿದರೆ ಬರವಣಿಗೆಯು ಪರಿಣಾಮಕಾರಕವಾಗುವದು ಎಂಬುದು ವಿದ್ಯಾರ್ಥಿಗಳಿಗೆ ಸ್ಪಷ್ಟವಾಗಿ ಗೊತ್ತಾಗಬೇಕು. ಅರ್ಥವಿಲ್ಲದೆ ಅನೇಕ ಸಾರೆ ತಪ್ಪುಗಳನ್ನು ತಿದ್ದಿ ತಿದ್ದಿ ಬರೆಯಲು ಹೇಳುವದು ಅಥವಾ ಉಚ್ಚರಿಸಲು ಹೇಳುವದು ಏನನ್ನೂ ಸಾಧಿಸದು. ಪತ್ರ ಬರೆಯುವ ಪದ್ಧತಿಗಳನ್ನು ಕಲಿಸುವಾಗ ಜೀವನ ಸನ್ನಿವೇಶಗಳನ್ನು ಆರಿಸುವದು ಪರಿಣಾಮಕಾರಕವಾಗುವದು

ಶಾಲೆ ಕಾಲೇಜುಗಳಲ್ಲಿ ಯಾವ ವಿಷಯವನ್ನು ಕಲಿಯುವದರಿಂದ ಆಗುವ ಲಾಭವೇನು ಎಂಬುದನ್ನು ವಿದ್ಯಾರ್ಥಿಗಳಿಗೆ ಶಿಕ್ಷಕರು ಮನವರಿಕೆ ಮಾಡಿ ಕೊಡಬೇಕು. ಟ್ರೇನಿಂಗ ಕಾಲೇಜದ ಅವಧಿಯಲ್ಲಿ ಶಿಕ್ಷಕರು ಟ್ರೇನಿಂಗಿನಿಂದ ಲಾಭವನ್ನು ಪಡೆಯಬೇಕಾದರೆ ತಾವು ಕಲಿಯುವ ವಿಷಯಗಳ ಸಿದ್ಧಾಂತಗಳೂ ಶಿಕ್ಷಣ ಸಮಸ್ಯೆಗಳಿಗೆ ಹೇಗೆ ಸಂಬಂಧಪಟ್ಟಿವೆ ಮತ್ತು ಅವುಗಳನ್ನು ಅವರು ತಿಳಿದುಕೊಂಡರೆ ತಾವು ಕಲಿಸುವ ವಿಧಾನಗಳಲ್ಲಿ [illegible] ಸುಧಾರಣೆಯನ್ನು ಹೊಂದುತ್ತವೆ ಎಂಬುದು ಅವರಿಗೆ ಗೊತ್ತಾಗಬೇಕು. ಹೀಗೆ ಶಿಕ್ಷಣ ಚಟುವಟಿಕೆಗಳಲ್ಲಿ ನಿರ್ದಿಷ್ಟ ಗುರಿಯು ಇರಲೇಬೇಕು.

ಶಿಕ್ಷಣದಲ್ಲಿ ಪ್ರೇರಣೆಗಿಂತ ಅತಿ ಮಹತ್ವದ ಸಂಗತಿಯು ಇನ್ನಾವುದೇ ಇಲ್ಲ. ಮಕ್ಕಳು ಯಾವ ಗುರಿಯನ್ನು ಮುಟ್ಟಬೇಕು ಎಂಬುದನ್ನು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಕೂಡಿಯೇ ಗೊತ್ತುಪಡಿಸಬೇಕು. ಅಭ್ಯಾಸದ ಉದ್ದೇಶಗಳು ಯಾವವು ಮತ್ತು ಅವುಗಳನ್ನು ಸಾಧಿಸುವ ಸಾಧನೆಗಳು ಯಾವವು ಎಂಬುದನ್ನು ಅವರು ಕೂಡಿಯೇ ಚರ್ಚಿಸಬೇಕು. ಹೀಗೆ ಯೋಜನೆ ಮಾಡಲಿಕ್ಕೆ ವೇಳೆಯು ಹತ್ತುವದು. ಆದರೆ ಆ ವೇಳೆಯು ವ್ಯರ್ಥ ಹೋದಂತೆ ಅಲ್ಲ. ಇದು ಕಲಿಯುವಿಕೆಯ ಪೂರ್ವ ತಯಾರಿಯು. ಉದ್ದೇಶದಿಂದ ಕೂಡಿದ ಪ್ರಯತ್ನವು ಬಿಟ್ಟೂ ಬಿಡದೆ ಸಾಗಿದರೆ ಮಾತ್ರ ಕಲಿಯುವಿಕೆಯು ಯಶಸ್ವಿಯಾಗುವದು. ಇದರ ಸೂತ್ರವೆಲ್ಲ ಅಭಿರುಚಿ ತತ್ತ್ವದಲ್ಲಿ ಅಡಕವಾಗಿದೆ. ಕಲಿಯುವವನಿಗೆ ವಿಷಯವು ಅಭಿರುಚಿಯುಳ್ಳದ್ದಾಗಿ ಮಾಡುವದೇ ಶಿಕ್ಷಕನ ಕರ್ತವ್ಯ. ಅಭಿರುಚಿಯು ಪ್ರೇರಣೆಯನ್ನು ಜಾಗ್ರತಗೊಳಿಸುತ್ತದೆ.

ಮ್ಯಾಕ್‌ಡೂಗಲ್‌ನ ಸಿದ್ಧಾಂತದ ಪ್ರಕಾರ ಮನುಷ್ಯನಲ್ಲಿ ಮತ್ತು ಮೇಲು ತರಗತಿಯ ಎಲ್ಲ ಪ್ರಾಣಿಗಳಲ್ಲಿ ಕೆಲವು ಪ್ರೇರಣೆಗಳು ಸಾಮಾನ್ಯವಾಗಿರುತ್ತವೆ. ಆದರೆ ಕೆಲವೊಂದು ಪ್ರೇರಣೆಗಳು ಮನುಷ್ಯನಲ್ಲಿ ಮಾತ್ರ ವಿಶೇಷವಾಗಿ ಕಂಡುಬರುತ್ತವೆ. ಮನುಷ್ಯನಲ್ಲಿ ಸುಮಾರು ಹದಿನೆಂಟು ವಿಶಿಷ್ಟ ಸ್ವರೂಪದ ಪ್ರೇರಣೆಗಳು ಉಂಟೆಂದು ಮ್ಯಾಕ್‌ಡೂಗಲ್‌ನು ಅಭಿಪ್ರಾಯಪಡುತ್ತಾನೆ. ಅವು ಯಾವವೆಂದರೆ:—ಆಹಾರ ಶೋಧನೆ, ಕುತೂಹಲ, ಯುದ್ಧ, ಭಯ, ಜುಗುಪ್ಸೆ, ರಚನೆ, ಸಂಗ್ರಹ, ಶರಣು; ಕಾಮ, ಪಾಲನ; ಸಂಘ,

ಆತ್ಮಪ್ರತಿಷ್ಠೆ, ವಿಧೇಯತೆ, ಪ್ರಾರ್ಥನೆ ಮತ್ತು ಹಾಸ್ಯ. ಅಮೇರಿಕೆಯ ಪ್ರಖ್ಯಾತ ಶಿಕ್ಷಣತಜ್ಞನಾದ ಡ್ಯೂಯಿ ಎಂಬವನು ಮಕ್ಕಳಲ್ಲಿ ಮುಖ್ಯವಾದ ನಾಲ್ಕು ಬಗೆಯ ಪ್ರೇರಣೆಗಳು ಇರುತ್ತವೆ ಎಂದು ಹೇಳುವನು:—ಸಂಭಾಷಣೆ, ವಿಚಾರಣೆ ಅಥವಾ ಕುತೂಹಲ, ರಚನೆ ಮತ್ತು ಕಲಾಕೌಶಲ್ಯ. ಇತ್ತಿತ್ತಲಾಗಿ ಮನೋ ವಿಜ್ಞಾನಿಗಳು ಹೀಗೆ ಪ್ರತ್ಯೇಕವಾಗಿ ಹೆಸರಿಡಲ್ಪಡುವ ಅಂತಃಪ್ರೇರಣೆಗಳು ಮನುಷ್ಯನಲ್ಲಿ ಇರುತ್ತವೆಂಬ ವಾದವನ್ನು ಒಪ್ಪುವದಿಲ್ಲ. ಆದರೂ ವ್ಯವಹಾರ ದೃಷ್ಟಿಯಿಂದ ಶಿಕ್ಷಣದಲ್ಲಿ ಈ ಪ್ರೇರಣೆಗಳನ್ನು ಹೇಗೆ ಉಪಯೋಗಿಸಬಹುದು ಎಂಬುದರ ಸ್ಥೂಲ ಕಲ್ಪನೆಯನ್ನು ಶಿಕ್ಷಕನು ಮಾಡಿಕೊಳ್ಳುವದು ಒಳ್ಳೆಯದು. ಪ್ರೇರಣೆಗಳು ಎಚ್ಚರಗೊಂಡಾಗ ಮಕ್ಕಳಲ್ಲಿ ಹುದುಗಿಕೊಂಡಿರುವ ಸಹಜ ಶಕ್ತಿಗಳು (Innate Abilities) ಹೊರಹೊಮ್ಮಿ ಕೆಲಸಕ್ಕೆ ತೊಡಗುತ್ತವೆ. ಶಿಕ್ಷಣದ ಅನೇಕ ಸಮಸ್ಯೆಗಳಿಗೆ ಪ್ರೇರಣೆಗಳು ಪರಿಹಾರ ನೀಡುವುದರಿಂದ ಶಿಕ್ಷಕನು ಅವುಗಳ ಜ್ಞಾನ ಮಾಡಿಕೊಳ್ಳುವದು ಅವಶ್ಯ. ಮುಖ್ಯವಾದ ಕೆಲವು ಪ್ರೇರಣೆಗಳ ವಿವೇಚನೆಯನ್ನು ಕೆಳಗೆ ಕೊಡಲಾಗಿದೆ.

**ಸಂಭಾಷಣೆ** (Conversation)

ಮಕ್ಕಳು ಹುಟ್ಟಿದಾಗಿನಿಂದ ಮನೆಯವರು ಆಡುತ್ತಿರುವ ಭಾಷೆಯನ್ನು ಕೇಳುತ್ತಿರುತ್ತಾರೆ. ತಾವೂ ಅವರಂತೆ ಮಾತಾಡಲಿಕ್ಕೆ, ತಮ್ಮ ಬೇಡಿಕೆಗಳನ್ನು ಅವರಿಗೆ ತಿಳಿಸಲಿಕ್ಕೆ ಹಾತೊರೆಯುತ್ತಾರೆ. ಮಾತಾಡುವದು ಅವರಿಗೆ ಅವಶ್ಯ ಬೀಳುತ್ತದೆ. ಅದಕ್ಕಾಗಿ ಅವರು ಮಾತಾಡುವದನ್ನು ಕಲಿಯುತ್ತಾರೆ. ತಮ್ಮ ಬೇಡಿಕೆಗಳನ್ನು ಇತರರಿಗೆ ತಿಳಿಸಲಿಕ್ಕೆ, ಮತ್ತು ಇತರರ ವಿಚಾರಗಳನ್ನು ತಾವು ತಿಳಿದುಕೊಳ್ಳಲಿಕ್ಕೆ ಓದು, ಬರಹವು ಒಂದು ಸಾಧನವಾಗುತ್ತದೆ. ಈ ಸಾಮಾಜಿಕ ಉದ್ದೇಶವನ್ನು ನೆರವೇರಿಸುವದಕ್ಕಾಗಿ ಓದು, ಬರಹವನ್ನು ಕಲಿಸಿದರೆ ಅದು ಮಕ್ಕಳಿಗೆ ಅರ್ಥ ಉಳ್ಳದ್ದು ಆಗುವದು. ಚಿಕ್ಕಮಕ್ಕಳ ಸಲು ವಾಗಿ ಪುಸ್ತಕವನ್ನು ಬರಿಯುವವರು ಅರ್ಥ ಮತ್ತು ಅಭಿರುಚಿ ತತ್ವವನ್ನು ಮರೆಯಲಾಗದು. ಬಾಲಕ ವರ್ಗದ ಶಿಕ್ಷಕರು ಮಕ್ಕಳ ಸಂಭಾಷಣೆಗೋಸುಗ ಅನೇಕ ಸಂದರ್ಭಗಳನ್ನು ಕಲ್ಪಿಸಿ ಅವರ ತೊದಲು ನುಡಿಗಳನ್ನು ತಿದ್ದಬೇಕು. ಓದು ಬರೆಹ ಕಲಿಸುವ ಪದ್ಧತಿಯೂ ಅಭಿರುಚಿ ತತ್ವವನ್ನೇ ಅನುಸರಿಸಬೇಕು.

ಎಲ್ಲ ತರಗತಿಯ ವಾಚನ ಪಾಠಗಳ ವಿಷಯಗಳು ಮಕ್ಕಳ ಅಭಿರುಚಿಗಳಿಗೆ ಸಂಬಂಧಪಟ್ಟವು ಇರತಕ್ಕದ್ದು.

## ವಿಚಾರಣೆ ಅಥವಾ ಕುತೂಹಲ (Inquiry or Curiosity)

ಮಕ್ಕಳು ಪ್ರಶ್ನೆಗಳ ಸುರಿಮಳೆಯನ್ನು ಕರೆಯುವುದು ತಂದೆ ತಾಯಿಗಳಿಗೂ ಪಾಲಕರಿಗೂ ಗೊತ್ತಿದ್ದ ಮಾತು. "ಇದು ಏನು? ಇದರ ಹೆಸರು ಏನು? ನೀನು ಎಲ್ಲಿಗೆ ಹೋಗುತ್ತಿ?" ಮುಂತಾಗಿ ನಾಲ್ಕೈದು ವರುಷದ ಹುಡುಗರು ದೊಡ್ಡವರನ್ನು ವಿಚಾರಿಸುವದುಂಟು. ಒಂದು ವಸ್ತುವಿನ ಬಗ್ಗೆ ಅಥವಾ ವಿಷಯದ ಬಗ್ಗೆ ಹೆಚ್ಚು ಜ್ಞಾನ ಮಾಡಿಕೊಳ್ಳಬೇಕೆಂಬ ಪ್ರೇರಣೆಯು ಅವರಲ್ಲಿ ಉಂಟಾಗುತ್ತದೆ. ಈ ಪ್ರೇರಣೆಗೆ ಕುತೂಹಲ ಅಥವಾ ಜಿಜ್ಞಾಸೆ ಎಂದೂ ಕರೆಯುತ್ತಾರೆ. ಪ್ರಾಣಿಗಳಲ್ಲಿಯೂ ಕುತೂಹಲ ಪ್ರವೃತ್ತಿಯು ಜಾಗ್ರತವಾಗುತ್ತದೆ. ಹರಿದಾಡುವ ವಸ್ತುವು ಕಣ್ಣಿಗೆ ಬಿದ್ದಕೂಡಲೇ ಬೆಕ್ಕು ಅದರೊಡನೆ ಚಿನ್ನಾಟವಾಡುತ್ತದೆ. ಗ್ರ್ಯಾಮೋಫೋನ ಕೇಳುತ್ತಿದ್ದ ಮಗುವು 'ಹಾಡುವನು ಎಲ್ಲಿ ಇದ್ದಾನೆ?' ಎಂದು ಪ್ರಶ್ನೆ ಕೇಳುತ್ತ ಫೋನೊ ಪೆಟ್ಟಿಗೆಯನ್ನು ಎಲ್ಲ ಕಡೆಯಿಂದ ನಿರೀಕ್ಷಿಸಹತ್ತಬಹುದು. ಹೀಗೆ ಮಾಡುವಲ್ಲಿ ಅವನು ಕುತೂಹಲದಿಂದ ಪ್ರೇರಿತನಾಗಿರುತ್ತಾನೆ. ಅಪರಿಚಿತ ವಸ್ತುವನ್ನು ಕಂಡಾಗ ಕುತೂಹಲ ಪ್ರೇರಣೆಯು ಕೆರಳುತ್ತದೆ, ಆಶ್ಚರ್ಯವು ಉಂಟಾಗುತ್ತದೆ. ಅದರ ಬಗೆಗೆ ಹೆಚ್ಚು ಜ್ಞಾನ ಪಡೆಯಬೇಕೆಂಬ ಉದ್ದೇಶದಿಂದ ಅದರ ಸಮೀಪಕ್ಕೆ ಹೋಗಿ ಅದನ್ನು ಪರಿಶೋಧಿಸುವ ಪ್ರಯತ್ನಗಳು ನಡೆಯುತ್ತವೆ.

ಜ್ಞಾನಕ್ಕೆ ಈ ಬಗೆಯ ಕುತೂಹಲವೇ ತಳಗಲ್ಲು; ಪ್ರಶ್ನೆಯೇ ಅದರ ಬಾಹ್ಯ ಪ್ರತಿಕ್ರಿಯೆ. ವಿಜ್ಞಾನ, ತತ್ವಜ್ಞಾನ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಈ ಕುತೂಹಲವೇ ಕಾರಣವಾಗಿದೆ. ಮಕ್ಕಳಲ್ಲಿ ಬೀಜರೂಪವಾಗಿ ಕಂಡುಬರುವ ಈ ವಿಚಾರ ಮಾಡುವ ವೃತ್ತಿಯನ್ನು ತಡೆಗಟ್ಟದೆ ಅವರು ಅದನ್ನು ಪ್ರೋತ್ಸಾಹಿಸಬೇಕು. ಪ್ರಶ್ನೆಗಳನ್ನು ಕೇಳಿದರೆ ಅವರನ್ನು ಗದರಿಸದೆ ಅವರಿಗೆ ತಿಳಿಯುವ ರೀತಿಯಲ್ಲಿ ಉತ್ತರಗಳನ್ನು ಕೊಡಬೇಕು. ಮಕ್ಕಳು ತಾವಾಗಿಯೇ ಸಮಸ್ಯೆಗಳನ್ನು ಬಿಡಿಸುವದನ್ನೂ ಮತ್ತು ಸಂಶೋಧನೆಗಳನ್ನು ಮಾಡುವ

ದನ್ನೂ ಶಿಕ್ಷಕರು ಪ್ರೋತ್ಸಾಹಿಸಬೇಕು. ಸಮಯಕ್ಕೆ ತಕ್ಕಂತೆ ಕುತೂಹಲ ವನ್ನು ಪ್ರೇರಿಸಿ ಮಕ್ಕಳನ್ನು ತಾತ್ಕಾಲಿಕವಾಗಿ ಕೆಲಸಕ್ಕೆ ತೊಡಗಿಸುವದು ಸಂಕುಚಿತ ದೃಷ್ಟಿ. ಆದರೆ ಅವರು ಕಲಿಯಬೇಕಾದ ವಿಷಯಗಳ ಬಗೆಗೆ ಅವರ ಜಿಜ್ಞಾಸೆಯ ಒಲವು ಮತ್ತು ವಿಚಾರಣೆಯ ಬುದ್ಧಿಯು ಬೆಳೆಯುವಂತೆ ಮಾಡುವದು ನಿಜವಾದ ಶಿಕ್ಷಣ. ಅಭ್ಯಾಸ ಮಾಡಬೇಕೆಂಬ ವಿಷಯದಲ್ಲಿ ಅಭಿರುಚಿಯು ಸ್ಥಿರಗೊಂಡರೆ ಕಲಿಯುವಿಕೆಯು ತಾನಾಗಿಯೇ ಮುನ್ನಡೆ ಇಡುತ್ತದೆ. ನಮ್ಮ ದೇಶದ ಸಾಲೆಗಳಲ್ಲಿಯಾಗಲಿ ಅಥವಾ ಸಮಾಜದಲ್ಲಿಯಾಗಲಿ ಈ ಸಂಶೋಧನ ವೃತ್ತಿಗೆ ಪೋಷಣೆ ಬುನಾದಿ ಕಾಲದಿಂದ ಇಲ್ಲದ್ದರಿಂದ ಭೌತಿಕ ವಿಜ್ಞಾನದಲ್ಲಿ ಅಥವಾ ಸಾಮಾಜಿಕ ವಿಜ್ಞಾನದಲ್ಲಿ ಹೊಸ ಹೊಸ ಶೋಧಗಳು ಇಂಡಿಯಾದಲ್ಲಿ ಆಗಿರುವದಿಲ್ಲ. ಆದರೆ ರಶಿಯಾ, ಅಮೇರಿಕಾ, ಇಂಗ್ಲಂಡ ಮೊದಲಾದ ದೇಶಗಳಲ್ಲಿ ಸಂಶೋಧನ ವೃತ್ತಿಗೆ ಹೆಚ್ಚು ಪ್ರೋತ್ಸಾಹ ಇರುವದರಿಂದ ಎಲ್ಲ ಬಗೆಯ ವಿಜ್ಞಾನ (ಸಾಯನ್ಸ) ಗಳಲ್ಲಿ ಅವರು ಈಗ ಮುಂದುವರೆದಿರುತ್ತಾರೆ.

## ರಚನೆ (Construction)

"ಆಡೋನು ಬಾ, ಕೆಡಿಸೋನು ಬಾ" ಎಂಬ ಗಾದೆಯ ಮಾತು ಮಕ್ಕಳನ್ನು ಕುರಿತು ಹೇಳಲಾಗಿದೆ. ಮಕ್ಕಳ ಕೈಗಳು 'ಕೆಲಸವನ್ನು' ಮಾಡಲಿಕ್ಕೆ ಹಾತೊರೆಯುತ್ತವೆ. ಕೈಗೆ ಸಿಕ್ಕ ಸಾಮಾನುಗಳನ್ನು ಚಲ್ಲುವದು, ಮುರಿಯು ವದು, ದೂಡುವದು, ಒಗೆಯುವದು, ಅತ್ತಿತ್ತ ಹೊರಳಾಡಿಸುವದು, ಮುಟ್ಟಿ ಪರೀಕ್ಷಿಸುವದು ಅವರಿಗೆ ಬಹಳ ಸೇರುತ್ತದೆ. ಈ 'ಕಿಡಿಗೇಡಿ'ತನಕ್ಕೆ ರಚನಾ ಪ್ರೇರಣೆಯೇ ಮೂಲವು. ಮಕ್ಕಳ ಬಗೆಬಗೆಯ ಆಟಗಳಿಗೆ ಕೂಡ ಈ ಪ್ರೇರಣೆಯೇ ಮುಖ್ಯ ಕಾರಣವು.

ಏನನ್ನಾದರೂ ಮಾಡಬೇಕೆಂಬ ಪ್ರಬಲವಾದ ಪ್ರೇರಣೆಯು ಮಕ್ಕಳನ್ನು ಮತ್ತು ದೊಡ್ಡವರನ್ನು ಒಂದು ಚಟುವಟಿಕೆಯಲ್ಲಿ ಅಥವಾ ಕಾರ್ಯದಲ್ಲಿ ತೊಡಗಿಸುತ್ತದೆ. ಈ ಬದುಕು ಬಾಳುವಿನ ಕುರುಹು. ಮಕ್ಕಳ ಈ ಕಾರ್ಯ ಪ್ರೇರಣೆಯನ್ನು ತಡೆಗಟ್ಟಿದರೆ ಅವರ ಬೆಳವಣಿಗೆಯು ಯೋಗ್ಯ ರೀತಿಯಿಂದ

ಸಾಗಲಾರವು. ಶಾಲೆಯಲ್ಲಿಯೂ ಮನೆಯಲ್ಲಿಯೂ ಮಕ್ಕಳ ಈ ಕೃತಿಪ್ರೇಮಕ್ಕೆ ಯೋಗ್ಯ ಅನುಕೂಲತೆಗಳನ್ನು ಒದಗಿಸಿಕೊಡಬೇಕು. ಕಾಗದ, ಅರಳು, ಮಣ್ಣು, ಉಸುಕು ಮೊದಲಾದ ಸಾಮಗ್ರಿಗಳನ್ನು ಅವರಿಗೆ ಒದಗಿಸಿ ಅವರಿಂದ ನಾನಾ ಬಗೆಯ ಕೃತಿಗಳನ್ನು ಮಾಡಿಸಬೇಕು. ಅತ್ತಿಂದಿತ್ತ ಸಾಮಾನುಗಳನ್ನು ಒಯ್ಯಲಿಕ್ಕೆ ತರಲಿಕ್ಕೆ ಅವರಿಗೆ ಹೇಳಬೇಕು. ಮನೆಗೆ ಸಾಮಾನುಗಳನ್ನು ಒದಗಿಸಿ ಅವರನ್ನು ಆಟಕ್ಕೆ ಹಚ್ಚಬೇಕು. ಅವರಿಗೆ ತಿಳಿಯುವ ಸಣ್ಣ ಪುಟ್ಟ ಕೆಲಸಗಳನ್ನು—ಕಸ ಉಡುಗುವದು, ಆರಿಸುವದು, ನೀರು ತರುವದು, ನೀಡುವದು ಮೊದಲಾದ ಕೆಲಸಗಳನ್ನು—ಅವರಿಂದ ಮಾಡಿಸಬೇಕು. ಶಾಲೆಗಳಲ್ಲಿ ಚಟುವಟಿಕೆಯ ಕಾರ್ಯಕ್ರಮಗಳಿಗೆ ಹೆಚ್ಚು ಅವಕಾಶವನ್ನು ಮತ್ತು ಮಹತ್ವವನ್ನು ಕೊಡಬೇಕು. ಮಕ್ಕಳಿಗೆ ತರತರದ ಹಸ್ತಕೌಶಲ್ಯಗಳನ್ನು ಕಲಿಸುವ ಏರ್ಪಾಡು ಮಾಡಬೇಕು. ಫ್ರೋಬೆಲ್ ಮತ್ತು ಮೊಂಟೇಸರಿ ಪದ್ಧತಿಯ ಶಿಶು-ಶಾಲೆಗಳಲ್ಲಿ ರಚನಾ ಪ್ರೇರಣೆಯು ಸೂರೆಗೊಂಡಿದೆ. ವಾರ್ಧಾ ಶಿಕ್ಷಣ ಯೋಜನೆಯಲ್ಲಿಯೂ ಚಟುವಟಿಕೆಯ ತತ್ವಕ್ಕೆ ಪ್ರಾಧಾನ್ಯ ಕೊಡಲಾಗಿದೆ. ಕಲಾಕೌಶಲ್ಯವೂ ರಚನೆಯಲ್ಲಿ ಬರುತ್ತದೆ. ಚಿತ್ರ ತೆಗೆಯುವದು ಮಕ್ಕಳಿಗೆ ಬಹಳ ಸೇರುತ್ತದೆ. ಇದಕ್ಕಾಗಿ ಸಣ್ಣ ವರ್ಗದ ಹುಡುಗರಿಗೂ ಕೂಡ ಬಣ್ಣ, ಮಸಿ, ಖಡು, ಹಲಿಗೆ, ಕುಂಚ, ಕಾಗದ ಮೊದಲಾದವುಗಳನ್ನು ಒದಗಿಸಿಕೊಡಬೇಕು. ಅಂದರೆ ಅವರ ಕಲಿಯುವ ಚಟುವಟಿಕೆಗೆ ಪುಟ ಕೊಟ್ಟಂತೆ ಆಗುವದು.

## ಸಂಪಾದನೆ ಅಥವಾ ಸಂಗ್ರಹ (Acquisition)

ತಮಗೆ ಅಭಿರುಚಿಯುಳ್ಳ ವಸ್ತುಗಳನ್ನು ಕೂಡಿಹಾಕುವದು ಸಣ್ಣ ಹುಡುಗರಲ್ಲಿಯೂ ಮತ್ತು ದೊಡ್ಡವರಲ್ಲಿಯೂ ಕಂಡುಬರುತ್ತದೆ. ಮಕ್ಕಳು ಗಜಗ, ಗೋಲಿ, ಗುಂಡು, ತಿಕೀಟು, ಬಳೆಚೂರು, ಚಿತ್ರ ಮೊದಲಾದ ವಸ್ತುಗಳನ್ನು ಕಲೆಹಾಕುತ್ತಾರೆ. ಅವು ಅವರ ಕುತೂಹಲವನ್ನಾಗಲಿ, ಹೆಮ್ಮೆಯನ್ನಾಗಲಿ ತೃಪ್ತಿಗೊಳಿಸುತ್ತವೆ. ಗಣಪತಿ ಹಬ್ಬಗಳಲ್ಲಿ ಹಲಕೆಲವು ಹಿರಿಯರು ತಾವು ಸಂಗ್ರಹಿಸಿದ ಮನೋರಂಜಕ ವಸ್ತುಗಳನ್ನು ಪ್ರದರ್ಶಿಸುತ್ತಾರೆ.

ಹಣವನ್ನು ಸಂಪಾದಿಸಬೇಕು ಎಂಬುದೊಂದು ಮನುಷ್ಯನ ಬಲವಾದ ಆಶೆ. ಇದರಿಂದ ಐಹಿಕ ಸುಖಗಳು ದೊರಕುವವೆಂದು ಅವನ ನಂಬುಗೆ. ಜೇನುನೊಣಗಳು ಹೂವಿನೊಳಗಿನ ಮಕರಂದವನ್ನು ಕೂಡಿಹಾಕುತ್ತವೆ. ಅದು ಅವುಗಳ ಆಹಾರ. ಅಂದರೆ ಕೂಡಿ ಇಡುವದು ಕೇವಲ ಸಂಗ್ರಹಕ್ಕಾಗಿ ಅಲ್ಲ, ಆದರೆ ಮತ್ತೊಂದು ಉದ್ದೇಶವನ್ನು ಪೂರ್ತಿಗೊಳಿಸಲಿಕ್ಕೆ. ಶಿಕ್ಷಣದಲ್ಲಿ ಸಂಪಾದನೆಯ ವೃತ್ತಿಯನ್ನು ಜ್ಞಾನ ಗಳಿಸುವದಕ್ಕಾಗಿ ಉಪಯೋಗಿಸಬೇಕು. ಚಿತ್ರಗಳನ್ನು, ನಾಣ್ಯಗಳನ್ನು, ವೃತ್ತಪತ್ರಿಕೆಗಳಲ್ಲಿಯ ಲೇಖನಗಳನ್ನು, ಆಶ್ಚರ್ಯಕಾರಕ ವಸ್ತುಗಳನ್ನು ಸಂಗ್ರಹಿಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವಾಗ ಅವರಿಗೆ ಇತಿಹಾಸ, ಭೂಗೋಲ, ಶಾಸ್ತ್ರ ಮೊದಲಾದ ವಿಷಯಗಳ ಜ್ಞಾನವು ಹೆಚ್ಚಾಗುವ ದೃಷ್ಟಿಯನ್ನು ಇಟ್ಟುಕೊಂಡಿರಬೇಕು. ಈ ಪ್ರೇರಣೆಯ ಸದುಪಯೋಗದಿಂದ ಪ್ರತಿಯೊಂದು ಶಾಲೆಯಲ್ಲಿ ಒಂದು ವಸ್ತುಸಂಗ್ರಹಾಲಯ ವನ್ನು ಕಟ್ಟಬಹುದು.

### ಭದ್ರತೆ ಅಥವಾ ಅಭಯ (Security)

ಅಪಾಯಕಾರಕ ವಸ್ತುಗಳು ನಮ್ಮಲ್ಲಿ ಭಯವನ್ನು ಹುಟ್ಟಿಸುತ್ತವೆ. ಬಾಂಬಿನ ಸಪ್ಪಳ, ಕ್ರೂರ ಪ್ರಾಣಿ, ನಿರ್ಜನ ಪ್ರದೇಶ, ಹಾವು, ಕತ್ತಲೆ ಮೊದಲಾದವು ಹೆದರಿಕೆಯನ್ನು ಹುಟ್ಟಿಸುತ್ತವೆ. ಆಗ ಅಂಜಿ ಓಡಿಹೋಗುವದು, ಅಡಗಿಕೊಳ್ಳುವದು, ಸುರಕ್ಷಿತ ಸ್ಥಳವನ್ನು ಹುಡುಕುವದು ಅಥವಾ ಭದ್ರವೆನಿಸುವ ಮತ್ತಾವುದಾದರೂ ಉಪಾಯಗಳನ್ನು ಕೈಕೊಳ್ಳುವದು ಮನುಷ್ಯನಿಗೆ ಸಹಜವಾದುದು.

ಮಕ್ಕಳು ನಿಷ್ಕಾರಣವಾಗಿ ಭಯಪಡುವದು ಒಳಿತಲ್ಲ. ಅಂಜುಬುರಕತನವೂ, ಭಯವೂ ಅವರಲ್ಲಿ ಮನೆಮಾಡಿದರೆ ಅವರ ವಿಚಾರಶಕ್ತಿಗಳು ಕುಂಠಿತವಾಗುತ್ತವೆ. ಧೈರ್ಯ ಮತ್ತು ಆತ್ಮವಿಶ್ವಾಸ ಇಲ್ಲದವರಾಗಿ ಕೈಕಟ್ಟಿಕೊಂಡು ಕೂಡ್ರುವರು. ಅವರು ಮುನ್ನುಗ್ಗಿ ಕೆಲಸ ಮಾಡುವದಿಲ್ಲ; ಅವರು ಸಮಾಜದಲ್ಲಿ ಮುಂದುವರಿ ಯುವದಿಲ್ಲ. ಭಯದ ಪ್ರಸಂಗದಲ್ಲಿ ಹಿಂಜರಿಯುವದಕ್ಕಿಂತ ಎಚ್ಚರಿಕೆಯಿಂದ ಕೆಲಸ ಮಾಡುವ ವೃತ್ತಿಯು ಬೆಳೆಯಬೇಕು. ಸೈನಿಕರು ಅಂಜಿ ಓಡಿ

ಹೋಗುವದಕ್ಕಿಂತ ಎಚ್ಚರಿಕೆಯಿಂದ ಮುಂದೆ ಸಾಗುವದನ್ನು ಕಲಿಯಬೇಕು. ಶಿಕ್ಷಕರಾಗಲಿ ಪಾಲಕರಾಗಲಿ ಸಣ್ಣ ಹುಡುಗರನ್ನು ಯಾವಾಗಲೂ ದಂಡಿಸುತ್ತ ಜಬರಿಸುತ್ತ ಇರಬಾರದು. ಮಕ್ಕಳಿಗೆ ಅಪಾಯಗಳು ಸಂಭವಿಸದಂತೆ ಮುಂಜಾಗ್ರತೆಯ ಉಪಾಯಗಳನ್ನು ಕೈಕೊಳ್ಳಬೇಕು. ಶಾಲೆಯಲ್ಲಿಯೂ ಮನೆಯಲ್ಲಿಯೂ ಪ್ರೇಮಮಯ ವಾತಾವರಣವು ಇರಬೇಕು. ಹುಡುಗರಲ್ಲಿ ದೇಹದಂಡನೆಯ ಭಯಕ್ಕಿಂತ ಸಮಾಜದ ಭಯವನ್ನು ಮತ್ತು ನೀತಿಯ ಭಯವನ್ನು ಉಂಟುಮಾಡುವದು ಹೆಚ್ಚು ಒಳ್ಳೆಯದು.

## ಆತ್ಮಪ್ರತಿಷ್ಠೆ (Self-assertion)

"ನಾನು! ನನ್ನದು!" ಎಂದು ಹೇಳಿಕೊಳ್ಳುವದು ಆತ್ಮಪ್ರತಿಷ್ಠೆಯು. ಈ ಸ್ವಾಭಿಮಾನವು ಸಣ್ಣವರಲ್ಲಿಯೂ ದೊಡ್ಡವರಲ್ಲಿಯೂ ಕೂಡಲೇ ಎಚ್ಚರಗೊಳ್ಳುತ್ತದೆ. ವೈಯಕ್ತಿಕ ಅಭಿಮಾನವು ಎಲ್ಲರಲ್ಲಿಯೂ ಕಂಡುಬರುತ್ತದೆ. ತನಗಿಂತ ಕಡಿಮೆಯಾದವರ ಎದುರಿನಲ್ಲಿ ತನ್ನ ಶ್ರೇಷ್ಠತೆಯನ್ನು ತೋರಿಸಲು ಪ್ರತಿಯೊಬ್ಬನು ಬಯಸುತ್ತಾನೆ. ತಾನೇ ಚೆಲುವನೆಂದು ಹೆಮ್ಮೆಪಡುತ್ತಾನೆ. ಜಾಣನೆಂದು ಜಂಬಕೊಚ್ಚುತ್ತಾನೆ. ತನ್ನಲ್ಲಿ ಹೆಚ್ಚು ಜ್ಞಾನ, ಸಾಮರ್ಥ್ಯ, ಕೌಶಲ್ಯ, ಬುದ್ಧಿ, ಅಧಿಕಾರ, ದುಡ್ಡು ಮೊದಲಾದವು ಇರುತ್ತವೆಂದು ತೋರಿಸುತ್ತಾನೆ.

ಆತ್ಮಪ್ರತಿಷ್ಠೆಯ ಪ್ರೇರಣೆಯಿಂದ ಸ್ಪರ್ಧೆಗೆ ಕಳೆ ಬರುತ್ತದೆ. ಜನ ಮೆಚ್ಚುಗೆ ಪಡೆಯುವದು ಎಲ್ಲರಿಗೂ ಸೇರುತ್ತದೆ. ಶಿಕ್ಷಕರ, ತಂದೆತಾಯಿಗಳ ಹಾಗೂ ಗೆಳೆಯರ ಮೆಚ್ಚುಗೆಯನ್ನು ಪಡೆಯಬೇಕೆಂದು ಮಕ್ಕಳು ಅಪೇಕ್ಷಿಸುತ್ತಾರೆ. ಪ್ರಯತ್ನಶೀಲನಾದ ಮಗುವನ್ನು ನಾವು ಯಾವಾಗಲೂ ಪ್ರೋತ್ಸಾಹಿಸಬೇಕು. ಅವರ ಬೆನ್ನು ಚಪ್ಪರಿಸಿ ಅವರಿಂದ ಹೆಚ್ಚು ಕೆಲಸ ಮಾಡಿಸಬೇಕು. ವೈಯಕ್ತಿಕ ಸ್ಪರ್ಧೆಗಿಂತ ಸಾಮೂಹಿಕ ಸ್ಪರ್ಧೆಯನ್ನು ಬಹಳವಾಗಿ ಪ್ರೋತ್ಸಾಹಿಸಬೇಕು. ಮಕ್ಕಳಲ್ಲಿ ವರ್ಗದ ಅಭಿಮಾನ, ಶಾಲೆಯ ಅಭಿಮಾನ, ಸಮಾಜದ ಅಭಿಮಾನ ಮತ್ತು ದೇಶದ ಅಭಿಮಾನ ಬೆಳೆಯಲಿ. ಸ್ವಪ್ರತಿಷ್ಠೆಯ ಪ್ರೇರಣೆಯಿಂದ ಮಕ್ಕಳು ಕೆಲಸದಲ್ಲಿ ತೊಡಗುತ್ತಾರೆ; ಅವರ ಶಕ್ತಿಗಳು ಹರಿತಾಗುತ್ತವೆ. ಬಹುಮಾನ

ಮೆಚ್ಚುಗೆಯ ಪತ್ರ, ಪ್ರೋತ್ಸಾಹದ ಮಾತುಗಳಿಂದ ಈ ಪ್ರೇರಣೆಯು ಪುಟಗೊಳ್ಳುತ್ತವೆ. ಆದರೆ ಇದರ ದುರುಪಯೋಗದಿಂದ ಗರ್ವ ಮತ್ತು ದುರಭಿಮಾನಗಳು ಬಂದು ಸೇರದಂತೆ ಎಚ್ಚರಪಡಬೇಕು.

## ವಿಧೇಯತೆ (Self-abasement)

ಆತ್ಮಪ್ರತಿಷ್ಠೆ ಮತ್ತು ವಿಧೇಯತೆ ಇವು ಒಂದಕ್ಕೊಂದು ವಿರೋಧವಾದ ಪ್ರೇರಣೆಗಳು. ತನಗಿಂತ ಶ್ರೇಷ್ಠರಾದವರ ಎದುರಿನಲ್ಲಿ ಮನುಷ್ಯನು ವಿಧೇಯನಾಗಿ ವರ್ತಿಸುತ್ತಾನೆ. ಬಾಗಿ ನಿಲ್ಲುವದು, ಕೆಳಗೆ ಕೂಡ್ರುವದು, ಬಹುವಚನದಿಂದ ಮಾತಾಡುವದು, ಸೇವೆಯನ್ನು ಮಾಡುವದು, ಆದರವನ್ನು ತೋರಿಸುವದು, ನಮ್ರತೆಯಿಂದ ನಡೆದುಕೊಳ್ಳುವದು ಮುಂತಾದವು ವಿಧೇಯತೆಯ ಲಕ್ಷಣಗಳು. ಶಕ್ತಿ, ಅಧಿಕಾರ, ವಿದ್ಯೆ, ಗುಣ, ಸಿರಿ, ಸಂಪತ್ತು ಮೊದಲಾದವು ಯಾರಲ್ಲಿ ನಮಗಿಂತಲೂ ಮಿಗಿಲಾಗಿ ಇರುವವೋ ಅವರ ಎದುರಿನಲ್ಲಿ ನಾವು ವಿಧೇಯರಾಗಿ ವರ್ತಿಸುತ್ತೇವೆ.

ಮಕ್ಕಳು ವಿನಯಶೀಲರಾಗಿ ನಡೆಯುವದು ಒಳ್ಳೇ ಗುಣ. ವರ್ಗದಲ್ಲಿ ಅಥವಾ ಸಮಾಜದಲ್ಲಿ ಒಂದು ವ್ಯವಸ್ಥೆ ಅಥವಾ ಕ್ರಮ ಇರುವದು ಅವಶ್ಯ. ಯೋಗ್ಯರೆಂದು ಅಧಿಕಾರ ಸ್ಥಾನಕ್ಕೆ ಆರಿಸಿದವರನ್ನು ಮನ್ನಿಸಬೇಕಾಗುವದು. ಇದಕ್ಕೆಲ್ಲ ವಿಧೇಯತೆಯೇ ಆಧಾರ. ಆದರೆ ವಿದ್ಯೆ ಅಧಿಕಾರ ಮತ್ತು ದುಡ್ಡು ಇವು ಕೇಂದ್ರೀಕೃತವಾದಲ್ಲಿ ಅವುಗಳ ವಿರುದ್ಧ ಜಗತ್ತಿನ ಎಲ್ಲ ಭಾಗದಲ್ಲಿ ಹೋರಾಟ ನಡೆದಿದೆ. ಇದು ಅನ್ಯೋನ್ಯ ವಿಚಾರಿಸಿ ನಿರ್ಣಯಿಸುವ ವಿಷಯ. ತಾವಾಗಿ ಹಾಕಿಕೊಂಡ ಕಟ್ಟು ನಿಟ್ಟುಗಳಿಗೆ ಅಥವಾ ಘಟನೆಗೆ ವಿಧೇಯರಾಗಿ ನಡೆದುಕೊಳ್ಳುವದು ಅವಶ್ಯ. ಆದರೆ ಮೂಢ ವಿಧೇಯತೆಯನ್ನು ಉಪದೇಶಿಸಿದರೆ ಪ್ರಗತಿ ಮತ್ತು ಸುಧಾರಣೆಗಳು ಇಲ್ಲದಾಗುವವು. ಅಲ್ಲದೆ ವಿದ್ಯೆ ಮತ್ತು ಗುಣಗಳಿಗೆ ಯಾವಾಗಲೂ ಮನ್ನಣೆ ದೊರೆಯಬೇಕು. ಇವು ಪ್ರಯತ್ನಪಟ್ಟು ಗಳಿಸಿದರೆ ಅಥವಾ ಸಾಧಿಸಿದರೆ ದೊರಕುವವು. ವಿಧೇಯತೆಯು ಅಡ್ಡದಾರಿಯನ್ನು ಹಿಡಿದರೆ ಆತ್ಮನಿಕೃಷ್ಟತೆ, ಕೀಳು ಭಾವನೆಗಳು ಬೆಳೆಯುತ್ತವೆ. ಈ ಕೀಳು ಭಾವನೆಯು ಮಾನವನ ಏಳ್ಗೆಯನ್ನು ಎಳೆದು ಹಿಡಿಯುತ್ತವೆ. ಹಿಂದುಳಿದ ಜನಾಂಗವಾಗಲಿ ಸಮಾಜವಾಗಲಿ ತಾವು ಕೀಳು

ಎಂಬ ಭಾವನೆಯನ್ನು ತೆಗೆದು ಹಾಕಿ ಸ್ವಾಭಿಮಾನವನ್ನು ಪ್ರವರ್ತಿಸಬೇಕು. ವಿಧೇಯ ಪ್ರೇರಣೆಯನ್ನು ಉಪಯೋಗ ಮಾಡಿಕೊಳ್ಳುವಾಗ ಶಿಕ್ಷಕರು ಅತಿ ಜಾಗರೂಕರಾಗಿರಬೇಕು. ತಾನು ಕೀಳು ಎಂಬ ಭಾವವು ವಿದ್ಯಾರ್ಥಿಯಲ್ಲಿ ತಲೆದೋರದಂತೆ ನೋಡಿಕೊಳ್ಳಬೇಕು. ವಿಧೇಯತೆಯೂ ನಮ್ರತೆಯೂ ಬೇಕು; ಆದರೆ ತನ್ನನ್ನು ತಾನೇ ಹಳಿದುಕೊಳ್ಳುವ ಅಥವಾ ತಾನು ಕಡಿಮೆಯವನೆಂಬುವ ಭಾವನೆಗಳು ಎಳೆಯ ಮಕ್ಕಳಲ್ಲಿ ಬೆಳೆಯಕೂಡದು. ಮಕ್ಕಳು ಆತ್ಮಗೌರವವನ್ನು ಕಾಯ್ದುಕೊಳ್ಳಲು ಮತ್ತು ನೈತಿಕ ಧೈರ್ಯವನ್ನು ಗಳಿಸಿ ಕೊಳ್ಳಲು ಕಲಿಯಲಿ.

## ಸಂಘಪ್ರೇರಣೆ (Gregariousness)

ಮನುಷ್ಯನು ಸಂಘಜೀವಿ. ಅವನು ಒಂದು ಕುಟುಂಬ ಕಟ್ಟಿಕೊಂಡು ಇರುತ್ತಾನೆ. ಕುಲ, ಗೋತ್ರ, ಬಂಧು, ಬಳಗ, ಆಪ್ತೇಷ್ಟರನ್ನು ಮಾಡಿಕೊಳ್ಳು ತ್ತಾನೆ. ಸಂಘ, ಸಂಸ್ಥೆ, ಮನೆ, ಮಠ, ಊರು, ಸಮಾಜ ಮತ್ತು ರಾಷ್ಟ್ರಗಳನ್ನು ಕಟ್ಟುತ್ತಾನೆ. ಅದೇ ವರ್ಗದ ಪಶುಪಕ್ಷಿಗಳು ಸಹ ಕೂಡಿಕೊಂಡು ಇರುವದ ಕಂಡುಬರುತ್ತದೆ. ಕಾಗೆ, ಕೋಳಿ, ಚಿಗರೆ, ಆನೆ, ಇರುವೆ, ಜೇನುಹುಳ ಮೊದಲಾ ಪ್ರಾಣಿಗಳು ಗುಂಪುಗುಂಪಾಗಿ ಜೀವಿಸುವದನ್ನು ಮತ್ತು ಅಲೆದಾಡುವದನ್ನು ನಾವು ನೋಡುತ್ತೇವೆ.

ಓರಿಗೆಯ ಗೆಳೆಯರ ಕೂಡ ಗುಂಪು ಕಟ್ಟಿಕೊಂಡು ಅಲೆದಾಡುವದ ಮಕ್ಕಳಿಗೆ ಬಹಳ ಇಷ್ಟವಾದುದು. ಗುಂಪಿನಲ್ಲಿ ಸೇರಿ ಕೆಲಸ ಮಾಡುವದರಿಂ ಬೇಸರ ಅನಿಸುವದಿಲ್ಲ. ಮತ್ತೊಬ್ಬರ ಕೆಲಸವನ್ನು ನೋಡಿ ಆತ್ಮಪ್ರತಿಷ್ಠೆ ಸ್ಪರ್ಧೆಗಳಿಂದ ಮಗುವು ಪ್ರೇರಿತನಾಗುತ್ತಾನೆ. ಸಂಘ ಮತ್ತು ಆತ್ಮಪ್ರತಿಷ್ಠಾ ಪ್ರೇರಣೆಗಳು ಆಟಗಳಲ್ಲಿ ತುಂಬ ಪ್ರಕಟವಾಗುತ್ತವೆ. ಸಂಗದಿಂದ ಒಳಿತೂ ಉಂಟು, ಕೆಡಕೂ ಉಂಟು. ಜತೆಯಂತೆ ಮತಿ ಎಂಬ ಗಾದೆಯ ಮಾತುಂಟ ಮಕ್ಕಳ ಸ್ವಭಾವವನ್ನು ತಿದ್ದಲು ಸಂಘದ ವರ್ಚಸ್ಸು ಬಹಳ ಸಹಾಯವಾಗುವದ ಸರ್ವಜ್ಞನು ಹೇಳುವಂತೆ ಮಕ್ಕಳು ದುರ್ಜನರ ಸಂಗವನ್ನು ಬಿಟ್ಟು ಸಜ್ಜನ ಸಂಗವನ್ನು ಸೇರುವದರಿಂದ ಅವರಲ್ಲಿ ಸದ್ಗುಣಗಳು ಬೆಳೆಯುವವು. ಮಕ್ಕಳಿ

ಸಾಮಾಜಿಕ ವರ್ತನವನ್ನು ಮತ್ತು ನಾಗರಿಕ ಜೀವನವನ್ನು ಕಲಿಸಲು ಸಂಘ ಪ್ರೇರಣೆಯು ತುಂಬಾ ನೆರವಾಗುತ್ತದೆ. ನಾಗರಿಕ ಜೀವನವು ಸಂಘ ಜೀವನವೇ ಆಗಿರುತ್ತದೆ. ಶಾಲೆಯು ಒಂದು ಚಿಕ್ಕ ಸಮಾಜವಾಗಿರಬೇಕು. ವಿಷಯುಗಳ ಜ್ಞಾನ ಮಾಡಿಕೊಡುವದಷ್ಟೇ ಶಾಲೆಯ ಕೆಲಸವಲ್ಲ. ಮಕ್ಕಳ ಸಾಮಾಜಿಕ ವರ್ತನವನ್ನು ಹದಗೊಳಿಸುವದು ಶಿಕ್ಷಕರ ಮುಖ್ಯ ಕೆಲಸ. ಇದಕ್ಕಾಗಿ ಶಾಲೆಗಳಲ್ಲಿ ಬೇರೆ ಬೇರೆ ಉದ್ದೇಶಗಳ ಸಾಧನೆಗಾಗಿ ಬೇರೆ ಬೇರೆ ಸಂಘಗಳನ್ನು ನಡೆಯಿಸಬೇಕು. ವಿದ್ಯಾರ್ಥಿ ಪಾರ್ಲಿಮೆಂಟ, ವಿದ್ಯಾರ್ಥಿ ಕೌನ್ಸಿಲ್, ಮಂತ್ರಿ ಮಂಡಳ, ಆಟದ ಗುಂಪುಗಳು, ಸ್ಕಾವುಟ, ಕ್ಲಬ್, ನಾಟ್ಯ ಸಂಘ, ಸಹಕಾರಿ ಸಂಘ, ಮುಂತಾದ ಸಂಘಗಳನ್ನು ಶಾಲೆಗಳಲ್ಲಿ ಸ್ಥಾಪಿಸಬೇಕು. ಇದರಿಂದ ಮಕ್ಕಳಲ್ಲಿ ಮುಂದಾಳುತನ, ಸಹಕಾರ, ಸೇವಾವೃತ್ತಿ, ಸಂಘಟನೆ, ಹೊಣೆಗಾರಿಕೆ ಮುಂತಾದ ಸಾಮಾಜಿಕ ಗುಣಗಳು ನೆಲೆಗೊಳ್ಳುತ್ತವೆ.

## ಯುದ್ಧ ಪ್ರೇರಣೆ (Pugnacity)

ಮನುಷ್ಯನು ಎಷ್ಟೇ ಸುಧಾರಿಸಿದರೂ ಯುದ್ಧ ಮಾಡುವದನ್ನು ಬಿಟ್ಟಿರುವದಿಲ್ಲ. ಒಂದು ಗುರಿಯನ್ನು ಮುಟ್ಟುವಾಗ ಅಥವಾ ಒಂದು ಉದ್ದೇಶವನ್ನು ಸಾಧಿಸುವಾಗ ಅಡತಡೆಗಳು ಬಂದಲ್ಲಿ ಅವುಗಳ ನಿವಾರಣೆಯನ್ನು ಕೈಕೊಳ್ಳುವದೇ ಯುದ್ಧ. ವಿರೋಧಗಳ ಪ್ರತಿಭಟನೆಯು ಹಿಂಸಾತ್ಮಕವಾಗಿರಬಹುದು ಅಥವಾ ಅಹಿಂಸಾತ್ಮಕವಾಗಿರಬಹುದು. ಯುದ್ಧ ಪ್ರೇರಣೆಯು ಜಾಗ್ರತವಾದಾಗ ಸಿಟ್ಟಿನ ಉದ್ವೇಗವನ್ನು ಮನುಷ್ಯನು ಅನುಭವಿಸುತ್ತಾನೆ. ಮತ್ತು ಪ್ರತಿಬಂಧಕ ವಸ್ತುವನ್ನು ತೆಗೆದುಹಾಕಲು ಪ್ರಯತ್ನಿಸುತ್ತಾನೆ. ಒಬ್ಬ ವ್ಯಕ್ತಿ, ಸಂಘ, ಸಮಾಜ, ನಾಡು, ದೇಶ ಅಥವಾ ಜನಾಂಗದ ಹಿತದ ಸೇವೆಯಲ್ಲಿ ಯುದ್ಧಪ್ರೇರಣೆಯು ನೆರವಾಗುತ್ತದೆ.

ಶಸ್ತ್ರಾಸ್ತ್ರಗಳ ಉಪಯೋಗವನ್ನು ಬಿಟ್ಟು ಸುಸಂಸ್ಕೃತ ರೀತಿಯಲ್ಲಿ ಯುದ್ಧಮಾಡುವವನ್ನು ನಾವು ಕಲಿಯಬೇಕಾಗಿದೆ. ಸಮಾಜದಲ್ಲಿಯ ಕುಂದು ಕೊರತೆಗಳನ್ನು ಮತ್ತು ಕೊಳಚೆಗಳನ್ನು ತೆಗೆದುಹಾಕಲಿಕ್ಕೆ ಟೊಂಕ ಕಟ್ಟುವದು ಅವಶ್ಯ. ನಿರಕ್ಷರತೆ, ಬಡತನ, ದಾಸ್ಯ, ಸುಲಿಗೆ ಮುಂತಾದ ಸಾಮಾಜಿಕ

ದೋಷಗಳನ್ನು ತೊಡೆದು ಹಾಕಲಿಕ್ಕೆ ಮಕ್ಕಳು ಕಲಿಯುವದು ಅವಶ್ಯ. ಸಮಾಜದ ಸುಧಾರಕರು ಸಾತ್ವಿಕ ಮಾರ್ಗವನ್ನು ಅನುಸರಿಸಬೇಕು. ಸಭೆ, ಸಮ್ಮೇಲನಗಳನ್ನು ಮಾಡುವದು, ನಿಷೇಧಿಸುವದು, ಅಸಹಕಾರ ಹೂಡುವದು; ವೃತ್ತಪತ್ರಿಕೆ, ರೇಡಿಯೋ, ಚಲಚಿತ್ರಗಳಿಂದ ಪ್ರಚಾರ ಮಾಡುವದು; ಪ್ರಚಾರ ಕಾಯದೆ, ಕಾನೂನುಗಳನ್ನು ಹೊರಡಿಸುವದು ಮತ್ತು ಇತರ ಘಟನಾತ್ಮಕ ರೀತಿಯಿಂದ ಸಮಾಜ ಸುಧಾರಣೆಯ ಕೆಲಸಗಳನ್ನು ಕೈಕೊಳ್ಳುವದು ಉದಾತ್ತ ಮಾರ್ಗವೆನಿಸುವದು. ಮಹಾತ್ಮಾ ಗಾಂಧಿ ಅವರು ಅಸಹಕಾರದ ಚಳವಳಿಯಿಂದ ಸ್ವಾತಂತ್ರ್ಯವನ್ನು ಗಳಿಸಿದ್ದು ಅಹಿಂಸಾತ್ಮಕ ಯುದ್ಧದ ಮಹತ್ವದ ಉದಾಹರಣೆಯು. ಈಗ ನಮ್ಮ ಮುಖ್ಯ ಮಂತ್ರಿಗಳಾದ ನೆಹರು ಅವರು ಜಗತ್ತಿನ ಶಾಂತಿಗಾಗಿ ಪ್ರತಿಪಾದಿಸುತ್ತಿರುವ "ಪಂಚಶೀಲ"ವು ಯುದ್ಧಪ್ರೇರಣೆಯನ್ನು ಉದಾತ್ತಗೊಳಿಸುವ ಉಪಾಯವು.

## ಪಾಲನೆ (Parental protection)

ಮಕ್ಕಳನ್ನು ಮಮತೆಯಿಂದ ಪ್ರೀತಿಸುವದೂ ಜೋಪಾನ ಮಾಡುವದೂ ತಂದೆತಾಯಿಗಳಿಗೆ ಹೊರತಾದುವಲ್ಲ. ಮಕ್ಕಳಿಗೆ ಆದ ಅಪಾಯವನ್ನೂ ಅಹಿತವನ್ನೂ ಕಂಡು ಕನಿಕರ ಹುಟ್ಟುವದು ಪಾಲನ ಪ್ರೇರಣೆಯ ಲಕ್ಷಣ. ಸಣ್ಣ ಹುಡುಗರ ಅಸಹಾಯ ಸ್ಥಿತಿಯನ್ನು ನೋಡಿ ಹಿರಿಯರು ಅವರನ್ನು ರಕ್ಷಿಸುವದು ಮತ್ತು ಸಮಾಧಾನಪಡಿಸುವದು ಈ ಪ್ರೇರಣೆಯ ಕೆಲಸ. ದೊಡ್ಡವರು ಬೇರೆಯವರ ಚಿಕ್ಕ ಮಕ್ಕಳನ್ನು ಎತ್ತಿಕೊಳ್ಳುವದನ್ನು, ಅವರಿಗೆ ಪೆಪ್ಪರಮಿಂಟು ಅಥವಾ ದುಡ್ಡು ಕೊಡುವದನ್ನು ನಾವು ನೋಡುತ್ತೇವೆ.

ಈ ಪಾಲನ ಪ್ರೇರಣೆಯು ನೀತಿಯ ಉಗಮಸ್ಥಾನವು. ಪರೋಪಕಾರಕ್ಕೆ ಈ ಪ್ರೇರಣೆಯೇ ಕಾರಣವು. ಪ್ರಾಣಿಹಿಂಸೆಯ ಬಗ್ಗೆ, ಕೂಲಿಕಾರರ ಮತ್ತು ಹುಡುಗರ ದುಡಿತದ ಬಗ್ಗೆ ನಿರ್ಬಂಧದ ಕಾಯಿದೆ ಮಾಡುವದು, ಅನಾಥ ಮಂದಿರಗಳನ್ನು, ಕಲ್ಯಾಣ ಕೇಂದ್ರಗಳನ್ನು ಸ್ಥಾಪಿಸುವದು ಮುಂತಾದವು ಪಾಲನಾ ಪ್ರೇರಣೆಯ ಕಾರ್ಯಗಳು. ಶಿಕ್ಷಕರು ವಿದ್ಯಾರ್ಥಿಗಳನ್ನು ಮಕ್ಕಳಂತೆ ಕಾಣಬೇಕು.

**ಅನುಕರಣ** (Imitation)

ಪ್ರೇರಣೆಗಳ ಸಂಖ್ಯೆಯ ಬಗ್ಗೆ ಮನೋವಿಜ್ಞಾನಿಗಳಲ್ಲಿ ಒಮ್ಮತವಿಲ್ಲ. ವಿಶಿಷ್ಟ ಸನ್ನಿವೇಶದಲ್ಲಿ ವಿಶಿಷ್ಟ ರೀತಿಯಿಂದ ವರ್ತಿಸುವದನ್ನು ನಿರ್ಧರಿಸುವ ಸ್ವಾಭಾವಿಕ ಪ್ರವೃತ್ತಿಯೇ ಅಥವಾ ಒಲವೇ ಪ್ರೇರಣೆಯು. ಮನುಷ್ಯನ ಎಲ್ಲ ಬಗೆಯ ಚಟುವಟಿಕೆಗಳಿಗೆ ಅಥವಾ ಕ್ರಿಯೆಗಳಿಗೆ ಈ ಸಹಜ ಪ್ರೇರಣೆಗಳೇ ತಳಹದಿಯಾಗಿರುತ್ತವೆ. ಈ ಪ್ರೇರಣೆಗಳ ಹೊರತಾಗಿ ಮನುಷ್ಯನಲ್ಲಿ ಅನುಕರಣ, ಸಹಾನುಭೂತಿ, ಸೂಚನೆ, ಪುನರುಕ್ತಿ ಮತ್ತು ಆಟ ಎಂಬ ವೃತ್ತಿಗಳು ಅಥವಾ ಒಲವುಗಳು ಕಂಡುಬರುತ್ತವೆ. ಪ್ರೇರಣೆಗಳಂತೆ ಈ ಸಾಮಾನ್ಯ ಒಲವುಗಳು ಕೂಡ ಸಹಜವಾಗಿರುತ್ತವೆ. ಇವು ಸಂಘ ಮತ್ತು ವಿಧೇಯತೆಯ ಪ್ರೇರಣೆಗಳಿಗೆ ತೀರ ಸಂಬಂಧಪಟ್ಟಿರುತ್ತವೆ. ಶಿಕ್ಷಣಕ್ಷೇತ್ರದಲ್ಲಿ ಇವುಗಳ ಸಹಾಯವನ್ನು ಹೇಗೆ ತಕ್ಕೊಳ್ಳಬಹುದೆಂಬುದನ್ನು ನೋಡುವ.

ಎರಡನೆಯವರನ್ನು ನೋಡಿ ಅವರಂತೆ ಆಡುವದು ಮಾಡುವದು ಅಥವಾ ಅಣಕಿಸುವದು ಅನುಕರಣವು. ಗೆಳೆಯರು ಅಥವಾ ದೊಡ್ಡವರು ಅಂದ ಹಾಗೆ ಅನ್ನುವದು, ಮಾಡಿದ ಹಾಗೆ ಮಾಡುವದು ಚಿಕ್ಕ ಮಕ್ಕಳಲ್ಲಿ ಕಂಡುಬರುತ್ತದೆ. ಜಾಣನಾದ ಸಿಂಪಿಗನೊಬ್ಬನು ಅನುಕರಣವೃತ್ತಿಯನ್ನು ಕುಚೇಷ್ಟೆಯ ಮಂಗಗಳಲ್ಲಿ ಪ್ರಚೋದಗೊಳಿಸಿ ಅವು ದೋಚಿಕೊಂಡು ಹೋಗಿದ್ದ ಅವನ ಟೊಪ್ಪಿಗೆಗಳನ್ನು ಮರಳಿ ಪಡೆದನೆಂಬ ಕತೆಯನ್ನು ನಾವು ಕೇಳಿದ್ದೇವೆ. ಭಾಷೆಯನ್ನು, ಸಾಮಾಜಿಕ ರೀತಿ-ನೀತಿಗಳನ್ನು, ಸಂಪ್ರದಾಯಗಳನ್ನು ಮತ್ತು ಉಡುಗೆ-ತೊಡುಗೆಗಳ ಶೈಲಿಯನ್ನು ಮಕ್ಕಳು ಅನುಕರಣದಿಂದಲೇ ಕಲಿಯುತ್ತಾರೆ. ಅನುಕರಣದಲ್ಲಿ ಎರಡು ಪ್ರಕಾರಗಳಿವೆ:—(i) ಅರಿತು ಅನುಕರಿಸುವದು ಮತ್ತು (ii) ಅರಿಯದೆ ಅನುಕರಿಸುವದು. ಎರಡನೆಯ ಪ್ರಕಾರದ ಅನುಕರಣವು ವಿಶೇಷವಾಗಿ ಪ್ರಾಣಿಗಳಲ್ಲಿ ಮತ್ತು ಚಿಕ್ಕ ಮಕ್ಕಳಲ್ಲಿ ಕಂಡುಬರುತ್ತದೆ. ಕೋಳಿಯ ಮರಿಯು ದೊಡ್ಡ ಕೋಳಿಯನ್ನು ನೋಡಿ ತಾನೂ ತಿಪ್ಪೆಯನ್ನು ಕೆದರುತ್ತದೆ. ಕತೆಯಲ್ಲಿಯ ಸಿಂಪಿಗನು ಟೊಪ್ಪಿಗೆಯನ್ನು ಒಗೆದುದನ್ನು ಕಂಡು ಮಂಗಗಳೂ ತಾವು ಒಯ್ದ ಟೊಪ್ಪಿಗೆಗಳನ್ನು ಒಗೆದವು. ನರ್ತನವನ್ನು ಕಲಿಯುತ್ತಿರುವ ಬಾಲಿಕೆಯು ಕಲಿಸುವವನ ತಾಳ ಗತ್ತುಗಳನ್ನು ಬುದ್ಧಿಪೂರ್ವಕವಾಗಿ

ಅನುಕರಿಸುವದು ಅರಿತು ಮಾಡುವ ಅನುಕರಣವು. ಇಲ್ಲಿ ಕಲಿಯುವಿಕೆಯು ಪ್ರಯತ್ನ-ಪ್ರಮಾದ ಪದ್ಧತಿಯಿಂದ ನಡೆಯುತ್ತವೆ. ಶಿಕ್ಷಣದಲ್ಲಿ ಅನುಕರಣಕ್ಕೆ ಒಂದು ಸ್ಥಾನವುಂಟು. ವರ್ಗದ ಹಿರೀಮಣಿಗಳನ್ನು, ಶಾಲೆಯಲ್ಲಿಯ ಮುಂದಾಳು ಹುಡುಗರನ್ನು, ಶಿಕ್ಷಕರನ್ನು, ತಂದೆತಾಯಿಗಳನ್ನು, ಸಮಾಜದಲ್ಲಿಯ ಪ್ರಮುಖ ರನ್ನು ಮತ್ತು ಇತಿಹಾಸದಲ್ಲಿಯ ಪ್ರಸಿದ್ಧ ಪುರುಷರನ್ನು ವಿದ್ಯಾರ್ಥಿಗಳು ಸಾಮಾನ್ಯವಾಗಿ ಅನುಕರಣ ಮಾಡುತ್ತಾರೆ. ಕಾರಣ ಶಿಕ್ಷಕರು ಮತ್ತು ತಂದೆತಾಯಿಗಳು ಆದರ್ಶ ವ್ಯಕ್ತಿಗಳಾಗಬೇಕು. ಮುಂದಾಳುತನವುಳ್ಳ ಹುಡುಗ ರನ್ನು ಸರಿಯಾದ ಹಾದಿಗೆ ಹಚ್ಚಬೇಕು. ಏಕೆಂದರೆ ಉಳಿದವರು ಇವರನ್ನು ಅನುಕರಿಸುವರು. ಒಳ್ಳೆಯವರ ಸಂಗದಲ್ಲಿದ್ದ ಗಿಳಿಯು ಸಾಧು ನುಡಿಗಳನ್ನು ಮತ್ತು ಕೆಟ್ಟವರ ಸಂಗದಲ್ಲಿದ್ದ ಗಿಳಿಯು ಬಿರುನುಡಿಗಳನ್ನು ಕಲಿಯುತ್ತವೆಂದು ಹೇಳುವದುಂಟು. ಅನುಕರಣವು ಸ್ವತಂತ್ರಪ್ರವೃತ್ತಿಯನ್ನು ತಡೆಗಟ್ಟುವದೆಂದು ಹಲವರು ಆಕ್ಷೇಪಿಸುತ್ತಾರೆ. ಆದರೆ ಈ ಆರೋಪವು ಸರಿಯಾದುದಲ್ಲ. ಏಕೆಂದರೆ ಅನುಕರವು ಸ್ವತಂತ್ರ ಕ್ರಿಯೆಯ ಪೂರ್ವಸಾಧನೆಯು. ಹೆಸರಾದ ಸಾಹಿತಿಗಳು, ವಿಜ್ಞಾನಿಗಳು ಮತ್ತು ರಾಜಕಾರಣ ಪಟುಗಳು ಮೊದಮೊದಲು ತಾವು ಆರಿಸಿಕೊಂಡ ಆದರ್ಶ ವ್ಯಕ್ತಿಗಳನ್ನು ಅನುಕರಿಸುತ್ತಾರೆ. ನ್ಯೂಟನ್‌ನನ್ನು ಮೊದಲು ಅನುಸರಿಸಿಯೇ ಐನಸ್ಟೀನನು ಮುನ್ನಡೆ ಇಡುತ್ತಾನೆ. ಗಾಯಕನು ತನ್ನ ಗುರುವನ್ನು ಮೊದಲು ಅನುಕರಿಸಿಯೇ ಆ ಮೇಲೆ ತನ್ನ ಮೇಲ್ಮೆಯನ್ನು ತೋರಿಸುತ್ತಾನೆ. ಆದ್ದರಿಂದ ವಿದ್ಯಾರ್ಥಿಗಳು ತಮ್ಮ ಭಾಷಾಶೈಲಿಯನ್ನು, ಕಲಾಕೃತಿಗಳನ್ನು ಅಥವಾ ವರ್ತನವನ್ನು ಉತ್ತಮಗೊಳಿಸಬೇಕಾದರೆ ಮೊದಲು ಅವರು ಶ್ರೇಷ್ಠ ಸಾಹಿತಿಗಳ, ಕಲಾನಿಪುಣರ ಅಥವಾ ಗಣ್ಯವ್ಯಕ್ತಿಗಳ ರೀತಿಯನ್ನು ಅನುಕರಿಸಬೇಕು. ಈ ವಿಷಯದಲ್ಲಿ ಮಕ್ಕಳನ್ನು ಪ್ರೋತ್ಸಾಹಿಸಲು ಹಿಂದೆ ಮುಂದೆ ನೋಡುವ ಕಾರಣವಿಲ್ಲ.

## ಸಹಾನುಭೂತಿ (Sympathy)

ಅನುಕರಣವು ಕೃತಿಯ ಅನುಕರಣವಾದರೆ ಸಹಾನುಭೂತಿಯು ಭಾವನೆಯ ಅನುಕರಣವು. ಎರಡನೆಯವರ ಸುಖದುಃಖಗಳಲ್ಲಿ ಭಾಗಿಯಾಗುವದೇ ಸಹಾನುಭೂತಿಯು. ಪರೋಪಕಾರಕ್ಕೆ ಸಹಾನುಭೂತಿಯೇ ಮೂಲ. ಪರರು

ಉಲ್ಲಾಸ, ಉತ್ಸಾಹ, ಭಯ, ಚಿಂತೆಯಲ್ಲಿ ಇದ್ದುದನ್ನು ನೋಡಿ ಅವೇ ಭಾವನೆಗಳು ನಮ್ಮಲ್ಲಿಯೂ ಮೂಡುತ್ತವೆ. ಎರಡನೆಯವರಲ್ಲಿ ಪ್ರಕಟವಾದ ಪ್ರೇರಣೆಗಳು ಅವರ ಜೊತೆಯಲ್ಲಿ ಇದ್ದವರಲ್ಲಿಯೂ ಪ್ರಕಟವಾಗುತ್ತವೆ. ಒಂದು ಚಿಕ್ಕ ಮಗುವು ಅಳಹತ್ತಿದರೆ ಅದನ್ನು ನೋಡಿ ಅದರ ಗೆಳೆಯರೂ ಅಳಹತ್ತುತ್ತಾರೆ. ಅನೇಕ ವ್ಯಕ್ತಿಗಳನ್ನು ಕೂಡಿಸಿ ಒಂದು ಸಂಘವನ್ನು ಮಾಡುವ ಸಾಮರ್ಥ್ಯವು ಸಹಾನುಭೂತಿಯಲ್ಲಿ ಉಂಟು. ಸಾಮೂಹಿಕ ಸಂವೇದನೆಯು ಅತ್ಯಂತ ಶೌರ್ಯದ ಕೆಲಸವನ್ನೂ ಮಾಡಿಸಬಲ್ಲದು ಅಥವಾ ಅತ್ಯಂತ ಘಾತಕದ ಕೆಲಸವನ್ನೂ ಮಾಡಿಸಬಲ್ಲದು. ರಾಜಕೀಯ ಚಳವಳಿಗಾರರು, ಚುನಾವಣೆಯ ಉಮೇದವಾರರು, ವೃತ್ತಪತ್ರಿಕೆಗಳ ಸಂಪಾದಕರು, ಭಾಷಣಕಾರರು ಮತ್ತು ಸಮಾಜ ಸುಧಾರಕರು ಇದೇ ತತ್ತ್ವದ ಆಧಾರದ ಮೇಲಿಂದ ಜನರ ಮನಸ್ಸನ್ನು ತಮ್ಮ ಧೋರಣೆಯ ಕಡೆಗೆ ಸೆಳೆದುಕೊಳ್ಳುವರು. ಸಹಾನುಭೂತಿಯ ಬೇರೆ ರೂಪಗಳಾದ ಸ್ವದೇಶಾಭಿಮಾನ ಮತ್ತು ಬಂಧುಪ್ರೇಮವನ್ನು ಪ್ರಚೋದಗೊಳಿಸಿ ಒಂದು ಸಮಾಜವನ್ನಾಗಲಿ, ದೇಶವನ್ನಾಗಲಿ ಅಥವಾ ಸೈನ್ಯವನ್ನಾಗಲಿ ಯುದ್ಧಕ್ಕೆ ಹುರಿದುಂಬಿಸಬಹುದು.

ಶಾಲೆಯ ಸಾಂಘಿಕ ಜೀವನದಲ್ಲಿ ಸಹಾನುಭೂತಿಗೆ ಸ್ಥಾನವುಂಟು. ವಿಷಯಗಳಲ್ಲಿ ಪಾಂಡಿತ್ಯವುಳ್ಳ ಶಿಕ್ಷಕನಿಗಿಂತ ಮಕ್ಕಳಲ್ಲಿ ಪ್ರೇಮ ಮತ್ತು ಸಹಾನುಭೂತಿಯುಳ್ಳ ಶಿಕ್ಷಕನೇ ಮೇಲು. ಸಹಾನುಭೂತಿ ಇಲ್ಲದವನು ಶಿಕ್ಷಕನಾಗಲು ಅನರ್ಹನು. ಪ್ರೇಮ ಭಾವವು ಹೆಚ್ಚಿದ ಹಾಗೆ ಮಕ್ಕಳ ಮೇಲಿನ ಶಿಕ್ಷಕನ ವರ್ಚಸ್ಸು ಹೆಚ್ಚುತ್ತದೆ; ಮತ್ತು ಪ್ರೇಮ ಭಾವವು ಕಡಿಮೆಯಾದ ಹಾಗೆ ಅವನ ವರ್ಚಸ್ಸು ಕಡಿಮೆಯಾಗುತ್ತದೆ. ಸಹಾನುಭೂತಿ ಇಲ್ಲದ ಶಿಕ್ಷಕನು ವಿದ್ಯಾರ್ಥಿಗಳ ದೃಷ್ಟಿಕೋನವನ್ನು ತಿಳಿದುಕೊಳ್ಳಲಾರನು. ಗುರು-ಶಿಷ್ಯರ ಸಂಬಂಧದಲ್ಲಿ ಅನುರಾಗವು ತುಂಬಿರಬೇಕು. ಶಿಕ್ಷಕನು ಬಾಲಕರೊಡನೆ ಬಾಲಕನಾಗಿಯೂ ತರುಣರೊಡನೆ ತರುಣನಾಗಿಯೂ ವರ್ತಿಸಬೇಕು. ಮಕ್ಕಳ ನಂಬುಗೆಯನ್ನೂ ಗೌರವವನ್ನೂ ಗಳಿಸಲು ಶಿಕ್ಷಕನಿಗೆ ಸಹಾಯವಾಗುವದು. ಶಿಕ್ಷಕನ ಭಾವನೆಗಳು ವಿದ್ಯಾರ್ಥಿಗಳಲ್ಲಿ ಒಡಮೂಡುತ್ತವೆ. ಶಿಕ್ಷಕನಲ್ಲಿ ವ್ಯಕ್ತವಾಗುವ ಸಿಡುಕು, ಸಮಾಧಾನ, ಚಿಂತೆ, ಉಲ್ಲಾಸಗಳು ವಿದ್ಯಾರ್ಥಿಗಳಲ್ಲಿಯೂ ಪಸರಿಸುತ್ತವೆ. ಶಿಕ್ಷಕನು ತಾನು ಕಲಿಸುವ ವಿಷಯದಲ್ಲಿ ಅಥವಾ ಸೂಚಿಸುವ ಯೋಜನೆಯಲ್ಲಿ ಅಭಿರುಚಿಯನ್ನು ತೋರಿಸುವರು; ಶಿಕ್ಷಕನು

ತಾನು ಕಲಿಸುವ ವಿಷಯದಲ್ಲಿ ಬೇಸರವನ್ನು ತೋರಿಸಿದರೆ ವಿದ್ಯಾರ್ಥಿಗಳೂ ಬೇಸರವನ್ನು ತೋರಿಸುವರು. "ಗುರುವಿನಂತೆ ಶಿಷ್ಯ, ತಂದೆಯಂತೆ ಮಗ" ಎಂಬ ನಾಣ್ಣುಡಿಯು ಇದೇ ತತ್ವವನ್ನು ಹೇಳುತ್ತದೆ. ಸಹಾನುಭೂತಿಯು ಸಾಂಕ್ರಾಮಿಕವಾದುದು.

**ಸೂಚನೆ** (Suggestion)

ಸಹಾನುಭೂತಿಯು ಭಾವದ ಅನುಕರಣವಾದರೆ ಸೂಚನೆಯು ವಿಚಾರದ ಅನುಕರಣ. ಒಬ್ಬನ ಮನಸ್ಸು ಮತ್ತೊಬ್ಬನ ಮನಸ್ಸಿನ ಮೇಲೆ ಗೊತ್ತಾಗದ ರೀತಿಯಲ್ಲಿ ಕಾರ್ಯ ನಡೆಯಿಸುವುದಕ್ಕೆ ಸೂಚನೆ ಎನ್ನುತ್ತಾರೆ. ಜನರ ಎಷ್ಟೋ ನಂಬುಗೆಗಳೂ, ಆಚಾರ ವಿಚಾರಗಳೂ ಸೂಚನೆಯ ಮುಖಾಂತರವೇ ಕಲಿಯಲ್ಪಟ್ಟಿರುತ್ತವೆ. ಮಾರಾಟ ಮಾಡುವ ವಸ್ತುಗಳನ್ನು ಜಾಹೀರಾತ ಮಾಡುವಲ್ಲಿ ಸೂಚನೆಯ ತತ್ವವನ್ನೇ ಅನುಸರಿಸುತ್ತಾರೆ. ವ್ಯಕ್ತಿಯ ವರ್ಚಸ್ಸು ಸೂಚನೆಯ ತಿರುಳು. ನಾವು ಶ್ರೇಷ್ಠರೆಂದು ಒಪ್ಪಿದವರ, ನಮ್ಮ ಗೌರವಕ್ಕೆ ಪಾತ್ರರಾದವರ, ಮತ್ತು ನಮಗಿಂತ ಹೆಚ್ಚಿನ ಸ್ಥಾನದಲ್ಲಿ ಇರುವವರ ಸೂಚನೆಗಳನ್ನು ನಾವು ಸ್ವೀಕರಿಸುತ್ತೇವೆ. ನಮ್ಮಲ್ಲಿರುವ ವಿಧೇಯತಾ ಪ್ರೇರಣೆಯೇ ಇದಕ್ಕೆ ಕಾರಣ. ಆದರೆ ಅದೇ ರೀತಿಯಾಗಿ ನಮ್ಮ ಅನಾದರಕ್ಕೆ ಪಾತ್ರರಾದವರ ಸೂಚನೆಗಳನ್ನು ನಾವು ತಕ್ಕೊಳ್ಳುವದಿಲ್ಲ.

ಸೂಚನೆಯ ಉಪಯೋಗವು ಶಿಕ್ಷಕನಿಗೆ ಗೊತ್ತಿರಬೇಕಾದುದು ಅವಶ್ಯ. ಶಿಕ್ಷಕನು ಅಧಿಕಾರದಿಂದಲೂ, ಅನುಭವದಿಂದಲೂ ಮತ್ತು ವಯಸ್ಸಿನಿಂದಲೂ ಮೇಲಿನ ಸ್ಥಾನದಲ್ಲಿ ಇರುವುದರಿಂದ ಮಕ್ಕಳು ಅವನ ಸೂಚನೆಗಳನ್ನು ಅನುಸರಿಸುತ್ತಾರೆ. ಮಕ್ಕಳಲ್ಲಿ ಗುರುಭಕ್ತಿ ಎಂಬುದು ಅಂಕುರಿಸುತ್ತದೆ. ಶಿಕ್ಷಕನ ಮಾತಿನಲ್ಲಿ ಅವರು ನಂಬುಗೆಯನ್ನು ಇಟ್ಟಿರುತ್ತಾರೆ. ಆದುದರಿಂದ ಅವರು ಶಿಕ್ಷಕನ ವಿಚಾರಸರಣಿಯನ್ನು ಮತ್ತು ಮನೋವೃತ್ತಿಯನ್ನು ಪ್ರತ್ಯಕ್ಷವಾಗಿಯೂ ಮತ್ತು ಅಪ್ರತ್ಯಕ್ಷವಾಗಿಯೂ ಕಲಿಯುತ್ತಾರೆ. ಪಾಠ ಗಳನ್ನು ಕಲಿಸುವಾಗ ಶಿಕ್ಷಕನು ಸೂಚಕ ಪ್ರಶ್ನೆಗಳನ್ನು ಕೇಳಬಾರದು. ಅವು ಮಕ್ಕಳ ವಿಚಾರಶಕ್ತಿಗೆ ಅವಕಾಶವನ್ನು ಕೊಡುವದಿಲ್ಲ. ಬಣ್ಣದ ರಟ್ಟಿ ಗುಂಡಿಯನ್ನು ಅಂಟಿಸಿ "ಇದನ್ನು ಯಾವ ಬಣ್ಣದ ದಾರದಿಂದ ರಟ್ಟಿ

ಹೊಲೆದಿರುತ್ತಾರೆ?" ಎಂಬ ಪ್ರಶ್ನೆಯಲ್ಲಿ "ಹೊಲೆ" ಎಂಬ ತಪ್ಪು ಸೂಚನೆಯು ಇದ್ದುದರಿಂದ ಮಕ್ಕಳು ತಮ್ಮ ಉತ್ತರ ಕೊಡುವಲ್ಲಿ "ಅಂಟಿಸಿರುವ" ವಿಚಾರವನ್ನು ಬಿಟ್ಟು "ಹೊಲೆದಿರುವ" ವಿಚಾರವನ್ನು ಮಾಡುವರು. ಕಾಗೆ-ಹಾವು-ಸರದ ಕತೆಯಲ್ಲಿ ಅರಸನ ಶಿಪಾಯಿಯು ಹಾವನ್ನು ಹೊಡೆದು ಸರವನ್ನು ಒಯ್ಯುತ್ತಾನೆ. ಆದರೆ ಶಿಕ್ಷಕನು ಪ್ರಶ್ನೆ ಕೇಳುವಾಗ "ಕಾಗೆಯನ್ನು ಯಾರು ಹೊಡೆದರು? ಎಷ್ಟು ಬಾರೆ ಹೊಡೆದರು?" ಎಂದು ಕೇಳಿದರೆ ಮಕ್ಕಳು ಆ ತಪ್ಪು ಸೂಚನೆಯ ಪ್ರಕಾರವೇ ತಮ್ಮ ಉತ್ತರವನ್ನು ಕೊಡುತ್ತಾರೆ. ಶಿಕ್ಷಕನ ಪ್ರಶ್ನೆಯೇ ತಪ್ಪು ಎಂದು ವಿಚಾರಿಸುವ ವಿದ್ಯಾರ್ಥಿಗಳು ವಿರಳ. ಶಿಕ್ಷಕನು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುತ್ತಿದ್ದರೆ ಅವರ ಅಭ್ಯಾಸದ ಪ್ರಗತಿಯು ಮುಂದುವರಿಯುವದು, ಆದರೆ ಅವರನ್ನು ನಿರುತ್ಸಾಹಗೊಳಿಸುತ್ತಿದ್ದರೆ ಅವರ ಪ್ರಗತಿಯು ಕುಂಠಿತವಾಗುವದು. ಒಬ್ಬ ಮಗನನ್ನು ಕುರಿತು "ನೀನು ದಡ್ಡ!", "ನೀನು ತುಂಟ!", "ನೀನು ತುಡುಗ!" ಎಂದು ಶಿಕ್ಷಕರು, ಹಿರಿಯರು ಪದೇ ಪದೇ ತಿರಸ್ಕರಿಸುತ್ತಿದ್ದರೆ ಅವನು ಅದರ ಪರಿಣಾಮವಾಗಿ ಹಾಗೆ ಆಗುವ ಸಂಭವವೇ ಹೆಚ್ಚು. ನೀತಿಶಿಕ್ಷಣದಲ್ಲಿ ಸೂಚನೆಯ ಪ್ರಭಾವವು ವಿಶೇಷವಾಗಿ ಕಂಡುಬರುವದು. ಪ್ರತ್ಯಕ್ಷ ಉಪದೇಶಕ್ಕಿಂತ ಅಪ್ರತ್ಯಕ್ಷ ಸೂಚನೆಯು ಮಕ್ಕಳ ಮನಸ್ಸಿನ ಮೇಲೆ ಹೆಚ್ಚು ಪರಿಣಾಮವನ್ನು ಉಂಟುಮಾಡುವದು. "ಇದನ್ನು ಮಾಡು", "ಇದನ್ನು ಬಿಡು", "ಹೀಗೆ ಮಾಡು", "ಹಾಗೆ ಮಾಡು" ಎಂಬ ಉಪದೇಶಗಳು ಎಷ್ಟೋ ಬಾರೆ ವಿರೋಧ ಸೂಚನೆಗಳಾಗಿ ಪರಿಣಮಿಸಬಹುದು. ಪರೋಪಕಾರ, ಸ್ವಾಮಿನಿಷ್ಠೆ, ಉದಾರತನ, ಧೈರ್ಯ, ಸಾಹಸ, ಸಹಕಾರ, ಸ್ವದೇಶಾಭಿಮಾನ ಮೊದಲಾದ ಸದ್ಗುಣಗಳು ಮಕ್ಕಳಲ್ಲಿ ಬೆಳೆಯಬೇಕಾದರೆ ಆ ಆ ಗುಣಗಳುಳ್ಳ ಮಹಾಪುರುಷರ ಜೀವನ ಚರಿತ್ರೆಗಳ ಅಭ್ಯಾಸ, ಶಿಕ್ಷಕನ ವ್ಯಕ್ತಿತ್ವ ಮತ್ತು ಸಾಲೆಯ ಆಡಳಿತ ಮೊದಲಾದ ಅಪ್ರತ್ಯಕ್ಷ ಉಪಾಯಗಳು ಹೆಚ್ಚು ಫಲದಾಯಕವಾಗುವವು. ನೀತಿಯ ಬಗೆಗೆ ನೇರವಾದ ಪಾಠಗಳು ಅಥವಾ ಭಾಷಣಗಳು ಅಷ್ಟೊಂದು ಪ್ರಯೋಜನಕಾರಕವಾಗಲಾರವು. ಶಿಕ್ಷಕನ ವರ್ಚಸ್ಸು ಮಕ್ಕಳ ಮೇಲೆ ಸಹಜವಾಗಿ ಬಿದ್ದೇ ಬೀಳುವದು. ಮಕ್ಕಳು ಅಶಿಕ್ಷಿತರ ಅನಿಷ್ಟ ಸೂಚನೆಗಳಿಗೆ ಒಳಗಾಗುವದಕ್ಕಿಂತ ತಜ್ಞ ಗುರುವಿನ ಹೆಚ್ಚಿನ ಜ್ಞಾನದ ಮತ್ತು ಅನುಭವದ ಲಾಭವನ್ನು ಪಡೆಯುವದು ಒಳ್ಳೆಯದು.

ಶಾಲೆಯ ಬಗೆಗೆ ಗೌರವವನ್ನು ಮತ್ತು ಅಭಿಮಾನವನ್ನು ಹುಟ್ಟಿಸಲು ಶಾಲೆಯ ಪತ್ರಿಕೆಗಳು, ಸ್ಮಾರಕಗಳು, ಸಂಘಗಳು, ಹಳೆಯ ವಿದ್ಯಾರ್ಥಿಗಳ, ಕೂಟಗಳು ಮೊದಲಾದ ಸಂಪ್ರದಾಯಗಳು ಒಳ್ಳೆಯ ಸಾಧನಗಳು. ಸರ್. ಟಿ. ಪರ್ಸಿ. ನನ್‌ಸ ಹೇಳುವಂತೆ ಶಿಕ್ಷಕನು ಸತ್ಯಶೋಧನದ ಚಿಕಿತ್ಸಕ ಬುದ್ಧಿಯನ್ನು ಮತ್ತು ಮಾನವ ಕುಲವು ಅನೇಕ ವರುಷಗಳ ಅನುಭವದಿಂದ ಕಂಡುಹಿಡಿದ ಉದಾತ್ತ ಧ್ಯೇಯಗಳನ್ನು ಸೂಚಿಸಬೇಕು.

## ಪುನರುಕ್ತಿ (Routine Tendency)

ಮತ್ತೆ ಮತ್ತೆ ಅದನ್ನೇ ಮಾಡಲಿಕ್ಕೆ ಬೇಸರವಾಗುತ್ತದೆಂದು ನಾವು ಅನ್ನುವದುಂಟು. ಆದರೆ ಅನೇಕ ಪ್ರಸಂಗಗಳಲ್ಲಿ ಅದು ಆಕರ್ಷಕವಾಗಿಯೂ ತೋರುತ್ತದೆ ಎಂಬುವದನ್ನು ಮರೆಯಲಾಗದು. ಹಾಡಿದ್ದೇ ಹಾಡುವಲ್ಲಿ ಮತ್ತು ಮಾಡಿದ್ದೇ ಮಾಡುವಲ್ಲಿ ಅನೇಕ ಬಾರಿ ಮಕ್ಕಳು ಆಸಕ್ತಿಯನ್ನು ತೋರಿಸುವದುಂಟು. ಒಂದೇಸವನೆ ಜೋಕಾಲಿ ಜೀಕುವದನ್ನು "ಕಳ್ಳಿ ಮಳ್ಳಿ ಕಪಾಟ ಮಳ್ಳಿ" ಅನ್ನುತ್ತ ದುಂಡು ಸುತ್ತುವದನ್ನು, ಕಣ್ಣುಮುಚ್ಚಾಲೆಯಲ್ಲಿ "ಅದಲು ಬದಲು ಕಂಚೀ ಬದಲು, ಇವರ ಬಿಟ್ಟು ಇವರಾರು ?" ಎಂದು ಪ್ರಶ್ನಿಸಲು ಅನ್ನುವದನ್ನು ನಾವು ನೋಡುತ್ತೇವೆ. ಗಾಯಕರು ಮತ್ತು ಕೀರ್ತನಕಾರರು ಅದೇ ಪಲ್ಲವಿಯನ್ನು ಬಾರಿಬಾರಿಗೆ ಅನ್ನುತ್ತಾರೆ. ಇವು ಪುನರುಕ್ತಿಯ ಉದಾಹರಣೆಗಳು. ಇವಕ್ಕೆ "**ಪರಿಪಾಠ ವೃತ್ತಿ**" ಎಂದು ಪ್ರೊ. ನನ್‌ಸ ಕರೆಯುತ್ತಾನೆ. ಈ ಕ್ರಮವು ಸೃಷ್ಟಿಯಲ್ಲಿಯೂ ಮತ್ತು ನಮ್ಮ ಪ್ರತಿನಿತ್ಯದ ವ್ಯವಹಾರಗಳಲ್ಲಿಯೂ ಕಂಡುಬರುತ್ತದೆ. ಹಗಲಿರುಳುಗಳು, ಋತುಗಳು ಮತ್ತು ವರ್ಷಗಳು ಕಾಲ ಚಕ್ರದ ಕ್ರಮದಲ್ಲಿ ಮರಳಿ ಬರುತ್ತವೆ. ಪ್ರತಿದಿನ ಏಳುವದು, ಕೆಲಸ ಬೊಗಸೆಗಳಲ್ಲಿ ತೊಡಗುವದು, ವಿಶ್ರಾಂತಿಯನ್ನು ಹೊಂದುವದು, ಮಲಗುವದು ಮತ್ತೆ ಏಳುವದು ಹೀಗೆ ನಾವಾಗಿ ಹಾಕಿಕೊಂಡ ಕಾರ್ಯಕ್ರಮದಂತೆ ನಡೆಯಲು ನಮಗೆ ಇಷ್ಟವಾದುದು. ಆದುದರಿಂದ ಪುನರುಕ್ತಿಯು ಇಡೀ ಜೀವನದ ಒಂದು ಮುಖ್ಯ ಲಕ್ಷಣವೇ ಆಗಿದೆಯೆಂದು ತೋರುತ್ತದೆ.

ಮನುಷ್ಯನಲ್ಲಿ ಕಂಡುಬರುವ ಪುನರುಕ್ತಿಗೆ ಅವನಲ್ಲಿ ಸ್ವಾಭಾವಿಕವಾಗಿ ಇರುವ ಆತ್ಮಪ್ರತಿಷ್ಠಾ ಪ್ರೇರಣೆಯೇ ಕಾರಣವಾಗಿರುತ್ತದೆ. ಯಾವ

ಕೆಲಸವನ್ನು ನಾವು ಚೆನ್ನಾಗಿ ಮಾಡುತ್ತೇವೋ ಅಥವಾ ಯಾವ ಕೆಲಸದಲ್ಲಿ ನಾವು ನಿಪುಣರಿರುವೆವೋ ಅವನ್ನು ಮೇಲಿಂದ ಮೇಲೆ ಪ್ರಕಟಿಸಲು ನಾವು ಹಾತೊರೆಯುತ್ತೇವೆ. ಅವರಲ್ಲಿ ನಮಗೆ ಪ್ರಭುತ್ವದ ಆನಂದ ಉಂಟು. ಶಿಕ್ಷಕನು "ಈ ಪರಿ- ಪಾಲನವೃತ್ತಿ"ಯ ನೆರವನ್ನು ಪಡೆಯಬೇಕು. ವರ್ಗದಲ್ಲಿ ಮತ್ತು ಶಾಲೆಯಲ್ಲಿ ಒಂದು ಶಿಸ್ತು ಅಥವಾ ವ್ಯವಸ್ಥೆಯನ್ನು ಕಾಯಲಿಕ್ಕೆ ಈ ವೃತ್ತಿಯು ನೆರವಾಗುತ್ತದೆ. ವಾರದ ವೇಳಾಪತ್ರಿಕೆ, ವರುಷದ ಅಭ್ಯಾಸ ಪತ್ರಿಕೆ, ಸಭೆಗಳ ಅಥವಾ ಯೋಜನೆಗಳ ಕಾರ್ಯಕ್ರಮಗಳು ಈ ವೃತ್ತಿಯ ಉದಾಹರಣೆಗಳು. ಗಣಿತದಲ್ಲಿಯ ಮಗ್ಗಿಗಳನ್ನು, ಕೋಷ್ಟಕಗಳನ್ನು, ಸಾಯನ್ಸದಲ್ಲಿಯ ಸೂತ್ರಗಳನ್ನು, ವ್ಯಾಕರಣದಲ್ಲಿಯ ನಿಯಮಗಳನ್ನು, ಹುಡುಗರಿಂದ ಬಾಯಿಪಾಠ ಮಾಡಿಸುವದು ಮನೋವಿಜ್ಞಾನದ ತತ್ವಕ್ಕೆ ಅನುಗುಣವಾಗಿಯೇ ಇರುತ್ತದೆ. ಆದರೆ ಕೇವಲ ಕಂಠಪಾಠ ಮಾಡುವದೇ ಕೊನೆಯ ಧ್ಯೇಯವೆಂದು ತಿಳಿಯದೆ ಅದು ಸ್ವಂತ ಉತ್ಪಾದನ ಕೃತಿಗಳಿಗೆ ತಳಹದಿಯಾದ ದೃಢೀಕರಣವೆಂದು ಮನ್ನಿಸಬೇಕು.

**ಆಟ** (Play)

ಮಕ್ಕಳ ಜೀವನಕ್ಕೆ ಆಹಾರವು ನಿದ್ರೆಯೂ ಎಷ್ಟು ಅವಶ್ಯವೋ ಆಟವೂ ಅಷ್ಟೇ ಅವಶ್ಯ. ಮಕ್ಕಳಲ್ಲಿ ಆಟದ ಚಟುವಟಿಕೆಗಳು ಸ್ವಾಭಾವಿಕವಾಗಿ ಇರಲಿಕ್ಕೆ ಕಾರಣಗಳನ್ನು ಬೇರೆ ಬೇರೆ ವಿಜ್ಞಾನಿಗಳು ಬೇರೆ ಬೇರೆ ರೀತಿಯಾಗಿ ಕೊಡುತ್ತಾರೆ. ಶಿಲರ್ ಮತ್ತು ಸ್ಪೆನ್ಸರ್ ಅವರು ಅಧಿಕ ಉತ್ಸಾಹವಾದವನ್ನು (Surplus Energy Theory), ಸ್ಟ್ಯಾನ್ಲಿಹಾಲ್‌ನು ಸ್ಮಾರಕವಾದವನ್ನು ( Reminiscent Theory ), ಕಾರ್ಲ್‌ಗ್ರೂಸ್‌ನು ರೂಢಿವಾದವನ್ನು (Practice Theory) ಮತ್ತು ರಾಸ್‌ನು ರೇಚನವಾದವನ್ನು (Cathartic Theory) ಪ್ರತಿಪಾದಿಸುತ್ತಾರೆ. ಮಕ್ಕಳ ಪಾಲನೆ ಪೋಷಣೆಗಳನ್ನು ತಂದೆ ತಾಯಿಗಳು ಮಾಡುವುದರಿಂದ ಅವರಲ್ಲಿಯ ಉತ್ಸಾಹವು ಆಟದ ರೂಪದಲ್ಲಿ ವ್ಯಯವಾಗುತ್ತದೆಂದು ಶಿಲರ್ ಮತ್ತು ಸ್ಪೆನ್ಸರ್ ಅವರು ಹೇಳುತ್ತಾರೆ. ಒಂದು ಎಂಜಿನ್ನಿನಲ್ಲಿ ಗಾಡಿಯನ್ನು ಎಳೆಯಲಿಕ್ಕೆ ಬೇಕಾಗುವದಕ್ಕಿಂತ ಹೆಚ್ಚು ಶಕ್ತಿ ಇದ್ದರೆ ಅದನ್ನು ಡ್ರಾಯವ್ಹರನು ಬೇರೆ ಕೆಲಸದಲ್ಲಿ ಉಪಯೋಗಿಸುತ್ತಾನೆ. ಇದು ನಿಜ. ಆದರೆ ಮಕ್ಕಳ ಉತ್ಸಾಹವು ಹಾಗೂ ಹೀಗೂ ಹರಣವಾಗದೆ ವಿಶಿಷ್ಟ

ರೂಪದ ಆಟಗಳಲ್ಲಿ ತೋರುತ್ತದೆ. ಅಲ್ಲದೆ ಕೆಲಸಮಾಡಿ ದಣಿದಿದ್ದರೂ ಆಟವೆಂದ ಕೂಡಲೇ ಸಣ್ಣವರೂ ದೊಡ್ಡವರೂ ಮತ್ತೆ ಅಣಿಯಾಗುತ್ತಾರೆ. ಪ್ರೊಫೆಸರ್ ಸನ್‌ನು ಹೇಳುವಂತೆ ಮಕ್ಕಳನ್ನೂ, ಹುಡುಗರನ್ನೂ ಮತ್ತು ದೊಡ್ಡವರನ್ನೂ ಸುಸಂಸ್ಕೃತರನ್ನಾಗಿ ಮಾಡಲಿಕ್ಕೆ ಆಟ ಒಂದು ಸಾಧನವಾಗಿರುತ್ತದೆ. ಜೊತೆಗೆ ದೇಹದ ವೈಕಟ್ಟೂ ಬೆಳೆಯುತ್ತದೆ. ಆದರೆ ಎಂಜಿನದಲ್ಲಿಯ ಶಕ್ತಿಯು ವ್ಯಯವಾದಂತೆ ಅದು ಸವಕಳಿಯನ್ನು ಹೊಂದುವದಲ್ಲದೆ ಒಳ್ಳೆಯ ಯಂತ್ರವಾಗದು. ಆಟ ಸೃಷ್ಟಿಯ ಶಿಕ್ಷಣಕ್ರಮವೆಂದು ಕಾರ್ಲ ಗ್ರೂಸ್‌ನ ಮತ. ಪ್ರೌಢ ಜೀವನದ ಉದ್ಯೋಗ ವ್ಯವಸಾಯಗಳ ಪೂರ್ವ ತರಬೇತನ್ನು ಮನುಷ್ಯನು ಚಿಕ್ಕವನಿರುವಾಗಲೇ ಹೊಂದಬೇಕೆಂದು ನಿಸರ್ಗವು ಮಾಡಿದ ಯೋಜನೆಯೇ ಆಟವಂತೆ. ಹುಡುಗರ ಗೊಂಬೆಯ ಆಟ, ಸಿಪಾಯಿಯ ಆಟ, ಗೌಳಿಗನ ಆಟ,ಡ್ರಾಯ್‌ವ್ಹರನ ಆಟ, ಮೊದಲಾದವು ಅವರ ಭಾವಿ ಜೀವನದ ಪೂರ್ವ ಸಾಧನಗಳಂತೆ. ಪ್ರಾಣಿವರ್ಗದಲ್ಲಿಯೂ ಈ ಯೋಜನೆಯು ಕಾಣುಬರುತ್ತದೆಂದು ಗ್ರೂಸ್‌ನುಹೇಳುತ್ತಾನೆ. ಬೆಕ್ಕು, ಕೋಳಿ, ನಾಯಿ, ಹುಲಿ ಮೊದಲಾದ ಪ್ರಾಣಿಗಳು ತಮ್ಮ ಮರಿಗಳಿಗೆ ಬೇಟೆಯಾಡುವದನ್ನು ಕಲಿಸುತ್ತವೆ. ಶಿಕ್ಷಣದ ಉದ್ದೇಶವು ಮಕ್ಕಳಿಗೆ ನಾಗರಿಕ ಜೀವನದ ತರಬೇತನ್ನು ಕೊಡುವದು ಇದ್ದುದರಿಂದ ಈ ವಾದವನ್ನು ಒಪ್ಪುವದು ಹೆಚ್ಚು ಪ್ರಯೋಜನವೆನಿಸುವದು. ಆದರೆ ಮಗುವು ತಾನು ದೊಡ್ಡವನಾದಾಗ ಕೈಕೊಳ್ಳಬಹುದಾದ ವ್ಯವಸಾಯಕ್ಕೆ ಸಂಬಂಧವಿಲ್ಲದ ಅನೇಕ ತರಹದ ಆಟಗಳನ್ನು ಏಕೆ ಆಡುತ್ತಾನೆ? ಎಂಬ ಪ್ರಶ್ನೆಗೆ ಈ ವಾದದಲ್ಲಿ ಉತ್ತರ ದೊರಕುವದಿಲ್ಲ. ಆದುದರಿಂದ ಆಟವು ಮುನ್ನೋಟವಲ್ಲ ಹಿನ್ನೋಟವೆಂದು ಸ್ಟ್ಯಾನ್ಲೆ ಹಾಲ್‌ನ ಅಭಿಪ್ರಾಯ. ಮನುಷ್ಯ ಪ್ರಾಣಿಯ ಪೂರ್ವಜೀವನದ ಚಟುವಟಿಕೆಗಳ ಸ್ಮಾರಕವೇ ಆಟವೆಂದು ಅವನು ಅನ್ನುತ್ತಾನೆ. ಬೆಕ್ಕು, ನಾಯಿ, ಕೋಳಿಗಳ ಆಟಗಳಿಗೆ ಆನುವಂಶಕವಾಗಿ ಬಂದ ಮೂಲ ಪ್ರೇರಣೆಗಳೇ ಕಾರಣ. ಮಕ್ಕಳ ಕಣ್ಣುಮುಚ್ಚಣಿಕೆಯ ಆಟ, ಮುಟ್ಟಾಟ, ಕಲ್ಲು ಒಗೆಯುವದು, ಬೇಟೆ ಆಡುವದು, ಮನೆ ಕಟ್ಟುವದು, ಗವಿ ಗುಹೆಗಳನ್ನು ಹುಡುಕುವದು, ಗುಡಿ ಗುಂಡಾರಗಳಿಗೆ ಅಲೆದಾಡುವದು ಮೊದಲಾದ ಚಟುವಟಿಕೆಗಳು ಇತಿಹಾಸ ಪೂರ್ವಕಾಲದ ಮನುಷ್ಯಜೀವನದ ಸ್ಮಾರಕಗಳಂತೆ. ಮಕ್ಕಳು ತಮ್ಮಲ್ಲಿ ಹುದುಗಿಕೊಂಡಿದ್ದ ಭಾವನೆಗಳನ್ನು ಪ್ರಕಟ ಮಾಡುವ ಸಾಧನವೇ ಆಟವೆಂದು ನನ್,

ರಾಸ್ ಮೊದಲಾದವರು ಪ್ರತಿಪಾದಿಸುತ್ತಾರೆ. ಮಗುವು ಕೆಲವು ಪ್ರಸಂಗಗಳಲ್ಲಿ ಕಾಲ್ಪನಿಕ ಪಾತ್ರಗಳನ್ನು ವಹಿಸಿ ಆಟವಾಡುತ್ತಾನೆ. ಇವುಗಳಿಗೆ ಕೃತಕ ಸಂಬುಗೆ, (Make-belief) ನಟನೆ, ಅಥವಾ ಅಣುಕವಾದ ಎಂದು ಹೆಸರು. ತಾನೇ ಶಿಕ್ಷಕ, ವಕೀಲ, ಗೌಳಿಗ, ಪೋಲೀಸ, ಡ್ರಾಯವ್ಹರ, ಎಂದು ಭಾವಿಸಿ ಆವರವರ ಪಾತ್ರಗಳನ್ನು ಮಗುವು ಆಡುವದುಂಟು. ಭೌತಿಕ ಅಥವಾ ಸಾಮಾಜಿಕ ಸನ್ನಿವೇಶದ ಮೇಲೆ ತನ್ನ ಪ್ರಭುತ್ವವನ್ನು ಸಾಧಿಸಲು ಅಸಮರ್ಥನಾದ ಮಗುವು ಕಲ್ಪನಾ ಸಾಮ್ರಾಜ್ಯವನ್ನು ಕಟ್ಟಿ ಆಟವಾಡುತ್ತಾನೆ. ಮನೆಯಲ್ಲಿ ಅಥವಾ ಸಾಲೆಯಲ್ಲಿ ತಂದೆತಾಯಿಗಳ ಅಥವಾ ಗುರುಹಿರಿಯರ ಅಧಿಕಾರಕ್ಕೆ ಒಳಪಟ್ಟ ಮಗುವು ತನಗಿಂತಲೂ ಸಣ್ಣವರಾದ ಹುಡುಗರ ಮೇಲೆ ಅಧಿಕಾರ ನಡೆಯಿಸಲು ಪ್ರಯತ್ನಿಸುತ್ತಾನೆ. ಆಟದಲ್ಲಿ ನಾಯಕನ ಪಾತ್ರವನ್ನು ವಹಿಸಿದ ಮಗುವು ತನ್ನ ಪಡಿ ನೆಳಲನ್ನು ಅಥವಾ ಪ್ರತ್ಯಾತ್ಮನನ್ನು (Alter Ego) ಕಂಡುಕೊಳ್ಳುತ್ತಾನೆ. ಕಾಲ್ಪನಿಕ ಗೆಳೆಯರನ್ನು ಮತ್ತು ವೈರಿಗಳನ್ನು ನಿರ್ಮಿಸು ತ್ತಾನೆ. "ಲೆಪ್! ಲೇಟ್!" ಎನ್ನುತ್ತ ಕೂಚು ಮಾಡುವಾಗ, "ಚಿಕ್ ಬಕ್! ಚಿಕ್ ಬಕ್!" ಎಂದು ಅನ್ನುತ್ತ ರೈಲುಗಾಡಿಯನ್ನು ಅನುಕರಿಸುವಾಗ, "ಹರ ಹರ ಮಹಾದೇವ" ಎಂದು ಒದರುತ್ತ ಗಿಡಗಂಟೆಗಳನ್ನು ಬಡಿಯುವಾಗ, ಮಗುವು ತನ್ನಲ್ಲಿ ಅಡಗಿಕೊಂಡಿದ್ದ ಅಧಿಕಾರಲಾಲಸೆ, ಆತ್ಮಪ್ರತಿಷ್ಠೆ ಅಥವಾ ಯುದ್ಧಪ್ರೇರಣೆಗಳನ್ನು ಪ್ರಕಟಮಾಡುತ್ತಾನೆ. ಇದರಂತೆ ಕತೆಗಳ ಮುಖಾಂತರವೂ ಭಾವವಿಮೋಚನೆಯು ನಡೆಯುತ್ತದೆ. ವೀರ ಪೀಟರ್, ಅಭಿಮನ್ಯು, ಧ್ರುವ, ಪ್ರಲ್ಹಾದ, ಕೊಳೂರ ಕೊಡಗೂಸು ಮೊದಲಾದ ಬಾಲ ವೀರರ ಕತೆಗಳನ್ನು ಕೇಳುವುದರಿಂದ ಮಕ್ಕಳ ಭಾವಶುದ್ಧಿಯಾಗುತ್ತದೆ. ಏಕಂದರೆ ಕಥಾನಾಯಕನ ಸುಖ-ದುಃಖಗಳನ್ನು ಮಗುವು ತಾನೂ ಅನುಭವಿಸುತ್ತಾನೆ.

ಮೇಲೆ ವಿವರಿಸಿದ ನಾಲ್ಕು ವಾದಗಳು ಒಂದಕ್ಕೊಂದು ಪೂರಕವಾಗಿದ್ದು ವಿರೋಧವಾಗಿರುವದಿಲ್ಲ. ಮಕ್ಕಳಲ್ಲಿರುವ ಅಧಿಕ ಉತ್ಸಾಹವು ಕೇವಲ ಶಾರೀರಿಕ ವಾಗಿರದೆ ಮಾನಸಿಕವೂ ಆಸುದೆಂದು ತಿಳಿದಲ್ಲಿ ಅದು ಆಟದಲ್ಲಿ ವಿಮೋಚನೆ ಹೊಂದುವದು. ಆಟವು ಮಾನವ ಕುಲದ ಆನುವಂಶಿಕ ಪ್ರೇರಣೆಗಳ ಶುದ್ಧೀಕರಣ ವೆಂದು ತಿಳಿದಲ್ಲಿ ಅದು ಪೂರ್ವಜೀವಗಳ ಸ್ಮಾರಕವಾಗುವದು. ಮೂಲ ಪ್ರೇರಣೆ ಗಳ ಶುದ್ಧೀಕರಣವು ಪ್ರೌಢಾವಸ್ಥೆಯ ನಾಗರಿಕ ಜೀವನದ ಪೂರ್ವ ತಾಲೀಮು

ಎಂದು ತಿಳಿವಲ್ಲಿ ಅದು ಮುಂಬರುವ ವ್ಯವಸಾಯಗಳ ಗುರುತು ಎನಿಸುವದು. ಹೀಗೆ ಪ್ರತಿಯೊಂದು ಪಾಠದಲ್ಲಿ ಸಿದ್ಧಾಂತವು ಇರುತ್ತದೆ. ಆಟವು ನಿಸರ್ಗದ ಶಿಕ್ಷಣ ಪದ್ಧತಿ ಎಂಬ ಕಾರ್ಲಗ್ರೂಸ್‌ನ ತತ್ವವನ್ನು ಉಳಿದ ಪಾಠಗಳೂ ಪುಷ್ಟೀಕರಿಸುತ್ತವೆ. ಇದನ್ನು ಶಿಕ್ಷಕನು ಅಂಗೀಕರಿಸಬೇಕು. ಏಕಂದರೆ ಶಿಕ್ಷಣವು ಮನುಷ್ಯ ಸಂಸ್ಕೃತಿಯನ್ನೂ ಮತ್ತು ಗತಸ್ವಭಾವವನ್ನೂ ಮುಂದುವರಿಸಬೇಕಲ್ಲದೆ ಅದರ ಮುಖ್ಯ ಕೆಲಸವು ಪ್ರೇರಣೆಗಳನ್ನು ಉದಾತ್ತಗೊಳಿಸುವದು ಮತ್ತು ಮಕ್ಕಳ ಶಕ್ತಿಗಳನ್ನು ಸರಿಯಾದ ಹಾದಿಗೆ ಹಚ್ಚುವದು ಆಗಿರುತ್ತದೆ. "ಆಟದ ತಿರುಳನ್ನು ಕಂಡು ಹಿಡಿದರೆ ಶಿಕ್ಷಣ ಸಮಸ್ಯೆಗಳನ್ನು ಬಿಡಿಸಿದಂತಾಗುವದು" ಎಂದು ನನ್‌ನು ಹೇಳುವದು ಸರಿಯೇ. ಮಕ್ಕಳಿಗೆ ಆಟವೆ ಪಾಠವಾಗಿರಬೇಕು. ಪಾಠವೇ ಆಟವಾಗಿರಬೇಕು. ಆಟ ಮತ್ತು ಕೆಲಸಗಳಲ್ಲಿ ಅಡಕವಾದ ಮನೋವಿಜ್ಞಾನದ ತತ್ವವನ್ನು ಶಿಕ್ಷಕನು ತಿಳಿದುಕೊಂಡಿರಬೇಕು. ಇವುಗಳಲ್ಲಿಯ ವ್ಯತ್ಯಾಸವು ಕೃತಿಯ ಬಾಹ್ಯ ರೂಪದಲ್ಲಿ ಇರದೆ ಮಾಡುವವನ ಮನೋಭಾವದಲ್ಲಿ ಇರುತ್ತದೆ. ಶಿಕ್ಷಕನೇ ಆಗಲಿ, ನಟನೇ ಆಗಲಿ, ವೈದ್ಯನೇ ಆಗಲಿ, ವಿದ್ಯಾರ್ಥಿಯೇ ಆಗಲಿ ತನ್ನ ಕಾರ್ಯವನ್ನು ಅಥವಾ ಕಾಯಕವನ್ನು ಆತ್ಮ ಸಂತೋಷದಿಂದ ಮತ್ತು ಉತ್ಸಾಹದಿಂದ ಮಾಡಿದರೆ ಅದು ಅವನಿಗೆ ಆನಂದಮಯ ಆಟವಾಗುತ್ತದೆ; ಆದರೆ ಅದನ್ನೇ ನಿರುತ್ಸಾಹದಿಂದ ಅಥವಾ ಎರಡನೆಯವರ ಒತ್ತಾಯದಿಂದ ಮಾಡಿದರೆ ಬೇಸರದ ಕೆಲಸವಾಗುತ್ತದೆ. ಮಗುವನ್ನು ಒತ್ತಾಯಪಡಿಸಿ ಆಟಕ್ಕೆ ಹಚ್ಚಿದರೆ ಆ ಆಟವು ಅವನಿಗೆ ಕೆಲಸವಾಗುತ್ತದೆ. ಇತ್ತ ಮಗುವು ತಾನೇ ಸ್ವಯಂಪ್ರೇರಣೆಯಿಂದ ಶಾಲೆಯ ಅಭ್ಯಾಸವನ್ನು ಮಾಡಹತ್ತಿದರೆ ಅದು ಅವನಿಗೆ ಆಟವಾಗುತ್ತದೆ. ಚಿಕ್ಕಮಕ್ಕಳು ಮನೆಯಲ್ಲಿ ಇತರರು ಓದುವದನ್ನು ಬರೆಯುವದನ್ನು ನೋಡಿ ತಾವೂ ಅದನ್ನು ನಟಿಸುವರು. ಆದರೆ ಓದು ಬರೆಯಲು ಒತ್ತಾಯಪಡಿಸಿದರೆ ಅದನ್ನು ಅವರು ಪ್ರತಿಭಟಿಸುವರು. ಇದರಿಂದ ಹೊರಡುವ ಸಿದ್ಧಾಂತವೇನಂದರೆ, ಒಂದು ಕೃತಿಯನ್ನು ಎರಡನೆಯವರ ಅಂಜಿಕೆಯಿಂದ ಇಲ್ಲವೆ ಒತ್ತಾಯದಿಂದ ಮಾಡಿದರೆ ಅದು ಕೆಲಸವೆನಿಸುತ್ತದೆ; ಆದರೆ ಅದನ್ನೇ ಸ್ವಯಂಸ್ಫೂರ್ತಿಯಿಂದ ಮಾಡಿದರೆ ಅದು ಆಟವೆನಿಸುತ್ತದೆ. ಆಟದಲ್ಲಿ ಮಕ್ಕಳಿಗೆ ಸಹಜವಾದ ಆನಂದವು ಉಂಟಾಗುತ್ತದೆ; ಅದರಲ್ಲಿ ಅವರಿಗೆ ಫಲಾಪೇಕ್ಷೆ ಇರುವದಿಲ್ಲ. ಆಟಕ್ಕೆ ಅಂತಃಪ್ರೇರಣೆಯೇ ಕಾರಣ. ಒಂದು ಕಾರ್ಯವನ್ನು ಬೇಕಾದರೆ ಮಾಡಬಹುದು ಬೇಡಾದರೆ

ಬಿಡಬಹುದು ಎಂದು ಇದ್ದಾಗ ಅದು ಆಟವಾಗುತ್ತದೆ; ಆದರೆ ಅದನ್ನೇ ನಮ್ಮ ಕರ್ತವ್ಯವೆಂಬ ಭಾವನೆಯಿಂದ ಮಾಡಿದರೆ ಅದು ಕೆಲಸವೆನಿಸುತ್ತದೆ. ಆಟವು ಲೀಲಾಮಯವಾದುದು. ಆಟದಲ್ಲಿ ಆನಂದವುಂಟು; ಕೆಲಸದಲ್ಲಿ ಬೇಸರವುಂಟು. ಆಟದಲ್ಲಿ ಉತ್ಸಾಹವುಂಟು; ಕೆಲಸದಲ್ಲಿ ನಿರುತ್ಸಾಹವುಂಟು; ಅದೇ ಕಾರ್ಯವನ್ನು ಅಂತಃಪ್ರೇರಣೆಯಿಂದ ಮಾಡಿದರೆ ಆಟವಾಗುತ್ತದೆ, ಬಾಹ್ಯ ಪ್ರಚೋದನೆಯಿಂದ ಮಾಡಿದರೆ ಕೆಲಸವಾಗುತ್ತದೆ. ಕಾಲ್ಡವೆಲ್ ಕುಕ್‌ನು ಹೇಳುವಂತೆ ಆತ್ಮ ಸಂತೋಷದಿಂದ ಯಾವುದನ್ನೇ ಮಾಡಲಿ ಅದು ಆಟವೆನಿಸುತ್ತದೆ. ಆಟವು ಆನಂದಮಯವೂ, ಸ್ವಯಂಪ್ರೇರಿತವೂ ಮತ್ತು ಸ್ವಯಂ ಉತ್ಪಾದಕವೂ ಆದ ಚಟುವಟಿಕೆಯು, ಅದರಲ್ಲಿ ಆತ್ಮವಿಕಾಸಕ್ಕೆ ಅಂದರೆ ಮಗುವಿನ ಶರೀರದ ಮತ್ತು ನೀತಿಯ ಬೆಳವಣಿಗೆಗೆ ತುಂಬ ಎಡೆಯುಂಟು.

## ಅಭಿರುಚಿ ಮತ್ತು ಅವಧಾನ

“ಮಕ್ಕಳ ಅವಧಾನವನ್ನು ಸ್ವಾಧೀನಕ್ಕೆ ತೆಗೆದುಕೊಂಡರೆ ಶಿಕ್ಷಣದ ವಿಷಯವೇ ನಮ್ಮ ಕೈವಶವಾದಂತೆ” ಎಂಬ ಮೊಂಟೇನು ಅವರ ಹೇಳಿಕೆಯನ್ನು ಶಿಕ್ಷಕರು ಒಪ್ಪಬೇಕಾಗುತ್ತದೆ. ಅವಧಾನವು ಮನುಷ್ಯನಲ್ಲಿರುವ ಒಂದು ಶಕ್ತಿಯಲ್ಲ. ಅನುಭವದ ಮೂರು ಅಂಗಗಳಾದ ಅರಿವು, ಅನಿಸಿಕೆ ಮತ್ತು ಪ್ರಯತ್ನಗಳು ಅವಧಾನದಲ್ಲಿ ಪ್ರಕಟವಾಗುತ್ತವೆ. ಸುಮ್ಮನೆ ಕೂತು ಕೇಳುವದು ಅವಧಾನವೆಂದು ತಿಳಿಯುವದು ಸಂಕುಚಿತ ಅರ್ಥ. “ವಸ್ತುವಿನ ಪೂರ್ಣಜ್ಞಾನ ಮಾಡಿಕೊಳ್ಳಬೇಕೆಂಬ ಪ್ರಯತ್ನವೇ ಅವಧಾನ” (ಸ್ಟೌಟ್.) ಅಥವಾ “ತಿಳಿದುಕೊಳ್ಳಲು ಪ್ರಯತ್ನಿಸುವದೇ ಅವಧಾನ” (ಮ್ಯಾಕ್‌ಡೂಗಲ್.) ಪ್ರಯತ್ನವು ಹೆಚ್ಚಿದ ಹಾಗೆಲ್ಲ ಅವಧಾನವು ತೀಕ್ಷ್ಣವಾಗುತ್ತದೆ. ಮನುಷ್ಯನು ಒಂದು ಪ್ರಯತ್ನದಲ್ಲಿ ಅಥವಾ ಕಾರ್ಯದಲ್ಲಿ ತೊಡಗಬೇಕಾದರೆ ಅವನ ಅಂತಃಪ್ರೇರಣೆಯು ಜಾಗ್ರತವಾಗಬೇಕಾಗುತ್ತದೆಂದು ಮೇಲೆ ವಿವರಿಸಿದೆ. ಅಂದರೆ ಅವಧಾನಕ್ಕೆ ಪ್ರೇರಣೆಗಳೇ ಮೂಲ. ಹಣ್ಣು ಹರಿಯಲಿಕ್ಕೆ ಗಿಡವನ್ನು ಹತ್ತಬೇಕೆಂದು ಇಚ್ಛಿಸುವಾಗ ಹುಡುಗನು ಅದನ್ನು ಅವಧಾನಪೂರ್ವಕವಾಗಿ ಎಲ್ಲಕಡೆಯಿಂದ ಪರೀಕ್ಷಿಸುತ್ತಾನೆ. ನಮ್ಮ ಜ್ಞಾನೇಂದ್ರಿಯಗಳಿಗೆ ತಗಲುವ ಎಲ್ಲ ವಸ್ತುಗಳು ನಮ್ಮ ಅವಧಾನವನ್ನು ಅಥವಾ ಲಕ್ಷ್ಯವನ್ನು ಅವಶವಾಗಿ

ಸೆಳೆಯುವವೆಂದು ಹೇಳಲಿಕ್ಕೆ ಆಗದು. ಅಭ್ಯಾಸದಲ್ಲಿ ಮಗ್ನನಾದವನಿಗೆ ಸಮೀಪದಲ್ಲಿದ್ದ ಗಡಿಯಾರದ ಟಿಕ್ ಟಿಕ್ ಸಪ್ಪಳವು ಕೇಳಬರುವದಿಲ್ಲ. ಆದರೆ ನಮ್ಮ ಪ್ರೇರಣೆಗಳನ್ನು ಯಾವ ವಿಷಯಗಳು ಅಥವಾ ವಸ್ತುಗಳು ಜಾಗ್ರತಗೊಳಿಸುವವೋ ಅವುಗಳಲ್ಲಿ ನಮ್ಮ ಅಭಿರುಚಿಯು ಉಂಟಾಗುತ್ತದೆ. ಆದುದರಿಂದ ಅಭಿರುಚಿಗೆ ಪ್ರೇರಣೆ ಮೂಲ, ಮತ್ತು ಅವಧಾನಕ್ಕೆ ಅಭಿರುಚಿ ಮೂಲ.

ಅಭಿರುಚಿಯು ಸ್ಥಿರವಾದ ಒಂದು ಮನೋಭಾವವೆಂದು ಮ್ಯಾಕ್‌ಡೂಗಲ್, ಡ್ರಿವ್ಹರ್, ರಾಸ್ ಮೊದಲಾದ ಮನೋವಿಜ್ಞಾನಿಗಳು ಹೇಳುತ್ತಾರೆ. ಚಿತ್ರಕಲೆಯ ಬಗೆಗೆ ಒಬ್ಬನಲ್ಲಿ ಅಭಿರುಚಿಯು ಉಂಟಾಗಿದ್ದರೆ ಅದು ಅವನು ಚಿತ್ರ ತೆಗೆಯುವಾಗ ಮಾತ್ರ ಇರುತ್ತದೆ ಉಳಿದ ವೇಳೆಯಲ್ಲಿ ಇರುವದಿಲ್ಲ ಎಂದು ಅರ್ಥವಲ್ಲ. ಅಭಿರುಚಿಯು ಮನಸ್ಸಿನಲ್ಲಿ ಗುಪ್ತವಾಗಿದ್ದು ಪ್ರಸಂಗಾನುಸಾರ ವ್ಯಕ್ತವಾಗುತ್ತದೆ. ಒಂದು ವಿಷಯ ಅಥವಾ ವಸ್ತುವಿನ ಬಗೆಗೆ ಅಭಿರುಚಿಯು ಹೆಚ್ಚುತ್ತ ಹೋದ ಹಾಗೆ ಅದು ಮನಸ್ಸಿನಲ್ಲಿ ಸ್ಥಿರವಾಗಿ ಉಳಿಯುತ್ತದೆ. ಇಂಥ ಮನೋಭಾವಗಳಿಗೆ ಸ್ಥಿರಪ್ರವೃತ್ತಿಗಳು ಅಥವಾ ಅನುರಾಗಗಳು(Sentiments) ಎಂದು ಅನ್ನುತ್ತಾರೆ. ಅರಲಿನ ಆಕೃತಿಗಳನ್ನು ಮಾಡುವ ಬಗೆಗೆ ಒಬ್ಬ ವಿದ್ಯಾರ್ಥಿಯಲ್ಲಿ ಶಿಕ್ಷಕನು ಅಭಿರುಚಿಯನ್ನು ಉಂಟುಮಾಡಿದ್ದರೆ ಆ ವಿದ್ಯಾರ್ಥಿಯು ಮನೆಯಲ್ಲಿ ಮಣ್ಣೆತ್ತಿನ ಅಮಾವಾಸ್ಯೆ ಮತ್ತು ಗಣೇಶ ಚತುರ್ಥಿಯ ಹಬ್ಬಗಳಲ್ಲಿ ಮಣ್ಣಿನ ಬಸವಣ್ಣಗಳನ್ನು ಮತ್ತು ಗಣಪತಿಗಳನ್ನು ಮಾಡುತ್ತಾನೆ. ಸಾಲೆ ಕಾಲೇಜ ಕಲಿಯುವಾಗ ಇತಿಹಾಸ ಸಂಶೋಧನೆಯಲ್ಲಿ ವಿದ್ಯಾರ್ಥಿಯ ಅಭಿರುಚಿಯು ಉಂಟಾಗಿದ್ದರೆ ಅವನು ತನ್ನ ವಿದ್ಯಾಭ್ಯಾಸವನ್ನು ಮುಗಿಸಿ ದೊಡ್ಡವನಾದ ಮೇಲೂ ಯಾವುದಾದರೊಂದು ಸಂಸ್ಥೆ ಅಥವಾ ಪೂರ್ವಕಾಲದ ವ್ಯಕ್ತಿಯ ಬಗೆಗೆ ಸಂಶೋಧನೆಯನ್ನು ಕೈಕೊಳ್ಳುವನು. ಅಭಿರುಚಿ ಮತ್ತು ಅವಧಾನಗಳು ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಅವು ಒಂದೇ ಸಂಗತಿಯನ್ನು ನೋಡುವ ಎರಡು ದೃಷ್ಟಿಗಳು. ಮನಸ್ಸಿನ ರಚನೆ ಅಥವಾ ಹಿನ್ನೆಲೆಯ ದೃಷ್ಟಿಯಿಂದ ನೋಡಿದರೆ "ಅಭಿರುಚಿ" ಎಂಬ ಪದವನ್ನು ಮತ್ತು ಮನಸ್ಸಿನ ಪ್ರತಿಕ್ರಿಯೆಯ ದೃಷ್ಟಿಯಿಂದ ನೋಡಿದರೆ ಅವಧಾನವೆಂಬ ಪದವನ್ನು ಉಪಯೋಗಿಸುತ್ತೇವೆ. ಅಭಿರುಚಿಯು ಮನಸ್ಸಿನಲ್ಲಿ ಸ್ಥಿರವಾಗಿ ನೆಲೆಗೊಂಡಿರುತ್ತದೆ; ಆದರೆ ಅವಧಾನವು ಸನ್ನಿವೇಶಕ್ಕೆ ಹೊಂದಿ ತಾತ್ಕಾಲಿಕ

ಪ್ರಕಟವಾಗಿ ಸನ್ನಿವೇಶವು ಬದಲಾದ ಕೂಡಲೇ ಅಡಗುತ್ತದೆ. ನಮಗೆ ಅಭಿರುಚಿ ಇದ್ದ ವಿಷಯದ ಕಡೆಗೆ ಪ್ರಸಂಗಾನುಸಾರ ಅವಧಾನವೀಯಲು ನಾವು ಸದಾ ಸಿದ್ಧರಿರುತ್ತೇವೆ. ಮತ್ತು ಅವಧಾನವು ವ್ಯಕ್ತವಾದಲ್ಲಿ ಅಭಿರುಚಿಯು ಅದರ ಹಿನ್ನೆಲೆಯಾಗಿರುತ್ತದೆ." ಅಭಿರುಚಿ ಗುಪ್ತವಾದ ಅವಧಾನ; ಅವಧಾನ ಪ್ರಕಟವಾದ ಅಭಿರುಚಿ" ಎಂದು ಮ್ಯಾಕ್‌ಡೂಗಲ್ಲನು ಹೇಳುತ್ತಾನೆ. ಅವಧಾನದಲ್ಲಿ "ಅನೈಚ್ಛಿಕ" (Non-volitional) ಮತ್ತು "ಐಚ್ಛಿಕ" ( Volitional ) ಎಂಬ ಎರಡು ಪ್ರಕಾರಗಳುಂಟು. ಸಹಜವಾಗಿ ಕೊಡುವ ಅವಧಾನವು ಅನೈಚ್ಛಿಕವಾದುದು. ಮೂಲ ಪ್ರೇರಣೆಗಳು ಅಥವಾ ಸಂಪಾದಿಸಿದ ಅನುರಾಗಗಳು ಪ್ರಚೋದನೆಗೊಂಡಲ್ಲಿ ಅದು ಅನೈಚ್ಛಿಕ ಅವಧಾನವೆನಿಸುವದು. ಆದರೆ ವಿಷಯವು ಅಪ್ರಿಯವಾಗಿದ್ದರೂ ಅದಕ್ಕೆ ಪ್ರಯತ್ನಪೂರ್ವಕವಾಗಿ ಅವಧಾನ ಕೊಡುವದು "ಐಚ್ಛಿಕ" ಅವಧಾನ. ಇಲ್ಲಿ ನಾವು ಉದ್ದೇಶ ಅಥವಾ ಬುದ್ಧಿಪೂರ್ವಕವಾಗಿ ಲಕ್ಷ್ಯವನ್ನು ಪ್ರೊಲೈಸುತ್ತೇವೆ. ತನಗೆ ಅಪ್ರಿಯವಾದ ವಿಷಯವಿದ್ದರೂ ವಿದ್ಯಾರ್ಥಿಯು ಅದನ್ನು ಲಕ್ಷ್ಯಕೊಟ್ಟು ಕಲಿಯುತ್ತಾನೆ. ಇಲ್ಲಿ ಆ ವಿಷಯವು ಅವನಿಗೆ ಅಪ್ರತ್ಯಕ್ಷ ರೀತಿಯಿಂದ ಅಭಿರುಚಿಯುಳ್ಳದ್ದು ಆಗಿರುತ್ತದೆ. ಏಕಂದರೆ ತಾನು ಪಾಸಾಗಿ ಗೌರವ ಪಡೆಯಬೇಕೆಂಬ ಹರೀಕ್ಷೆಗೆ ಅದು ಅವಶ್ಯವಾಗಿರುತ್ತದೆ.

ಶಿಕ್ಷಣದ ಎಲ್ಲ ಸಮಸ್ಯೆಗಳಲ್ಲಿ ಅಭಿರುಚಿಯ ತತ್ವವು ಬಹಳ ಮಹತ್ವವಾದದ್ದು. ಅಭ್ಯಾಸವು ನಡೆದ ಕಾಲಕ್ಕೆ ಮಕ್ಕಳ ಅವಧಾನವನ್ನು ವಿಷಯದ ಕಡೆಗೆ ಎಳೆಯಲು ಅಂತಃಪ್ರೇರಣೆಗಳನ್ನು ಜಾಗ್ರತಗೊಳಿಸಬೇಕು. ಆದರೆ ಶಿಕ್ಷಕನು ಇಷ್ಟಕ್ಕೆ ಮಾತ್ರ ತೃಪ್ತಿಯಾಗದೆ ವಿಷಯದಲ್ಲಿ ಮಕ್ಕಳ ಸ್ಥಿರವಾದ ಅಭಿರುಚಿಯನ್ನು ಬೆಳೆಯಿಸಲು ಪ್ರಯತ್ನಿಸಬೇಕು. ಗದರಿಸಿ ಶಿಸ್ತು ಕಾಯುವದು, ಅವಧಾನದ ಭಿಕ್ಷೆ ಬೇಡುವದು ನಿಷ್ಪ್ರಯೋಜಕ ಉಪಾಯಗಳು. ಚಿಕ್ಕಮಕ್ಕಳ ಪಾಠಗಳಲ್ಲಿ ಚಿತ್ರಗಳನ್ನು ಮತ್ತು ಸ್ಥೂಲ ವಸ್ತುಗಳನ್ನು ಹೇರಳವಾಗಿ ಉಪಯೋಗಿಸಬೇಕು. ಮಾತಿನ ಮಳೆಯನ್ನು ಕರೆಯುವದರಿಂದ ಏನೂ ಪ್ರಯೋಜನವಾಗದು. ಚಿಕ್ಕಮಕ್ಕಳ ಚಿತ್ತವು ಚಂಚಲವಾದುದರಿಂದ ಅವರ ಪಾಠದ ಅವಧಿಯು ಸಾಮಾನ್ಯವಾಗಿ ೨೦–೩೦ ಮಿನಿಟುಗಳನ್ನು ಮೀರಬಾರದು. ಒಟ್ಟಿನಲ್ಲಿ, ವಿಷಯದ ಬಗೆಗೆ ಅಭಿರುಚಿಯನ್ನು ಹುಟ್ಟಿಸಿದರೆ ವಿದ್ಯಾರ್ಥಿಗೆ ಅದರ ಅಭ್ಯಾಸವು ಆಟವಾಗುತ್ತದೆ.

## ಅಭಿರುಚಿಗಳು ಮತ್ತು ಸಮಸ್ಯೆಗಳು

ಸಣ್ಣ ಹುಡುಗರ ಅಭಿರುಚಿಗಳು ಅವರ ಜೀವನಿಗೆಂದು ಹುಟ್ಟಿ ಮತ್ತು ಸಾಮಾಜಿಕ ಆವರಣವನ್ನು ಅವಲಂಬಿಸಿರುತ್ತವೆ. ಬೇರೆ ಬೇರೆ ವಯಸ್ಸಿನಲ್ಲಿ ಬೇರೆ ಬೇರೆ ಅಭಿರುಚಿಗಳು, ಸಾಮರ್ಥ್ಯಗಳು ಮತ್ತು ಬೇರೆ ಬೇರೆ ಪ್ರೇರಣೆಗಳು ಪ್ರಬಲವಾಗಿರುತ್ತವೆ. ಬಾಲ್ಯದಲ್ಲಿಯ ಚಟುವಟಿಕೆಗಳೇ ಬೇರೆ ಮತ್ತು ತಾರುಣ್ಯದಲ್ಲಿಯ ಚಟುವಟಿಕೆಗಳೇ ಬೇರೆ ಎಂಬುದನ್ನು ಹಿಂದಿನ ಅಧ್ಯಾಯ ದಲ್ಲಿ ವಿವರಿಸಿದೆ. ಪ್ರಾಥಮಿಕ ಶಾಲೆಗೆ ಬರುವ ಚಿಕ್ಕಮಕ್ಕಳ ಅಭಿರುಚಿಗಳು ಮತ್ತು ಸಮಸ್ಯೆಗಳು ಯಾವವು ಮತ್ತು ಹಾಯಸ್ಕೂಲಿಗೆ ಹೋಗುವ ಹುಡುಗರ ಸಮಸ್ಯೆಗಳು ಮತ್ತು ಅಭಿರುಚಿಗಳು ಯಾವವು ಮತ್ತು ಅವುಗಳನ್ನು ಶಿಕ್ಷಣದಲ್ಲಿ ಹೇಗೆ ಉಪಯೋಗಿಸಿಕೊಳ್ಳಬಹುದು ಎಂಬುದನ್ನು ಈ ಅಧ್ಯಾಯದಲ್ಲಿ ವಿವೇಚಿಸಲಾಗುವದು.

ಮನುಷ್ಯನ ಪ್ರೇರಣೆಯನ್ನು ಕುರಿತು ವಿಚಾರಿಸುವಾಗ ಹುಟ್ಟುವಾಗಲೇ ಅವನ ಜೊತೆಗೆ ಬಂದಿರುವ ಮೂಲ ಪ್ರವೃತ್ತಿಗಳು ಯಾವವು ಎಂದು ಪ್ರಶ್ನೆ ಮಾಡುವದನ್ನು ಬಿಟ್ಟು, ಮನುಷ್ಯನು ತನ್ನ ಯಾವ ಯಾವ ವಯಸ್ಸಿನಲ್ಲಿ ಯಾವ ಯಾವ ಸಮಸ್ಯೆಗಳನ್ನು ಬಿಡಿಸಬೇಕೆಂದು ಬಯಸುತ್ತಾನೆ ಎಂದು ಪ್ರಶ್ನೆ ಮಾಡಬೇಕು. ಈ ಪ್ರಶ್ನೆಗೆ ಬರುವ ಉತ್ತರಗಳೇ ಪ್ರೇರಕಗಳು ಅಥವಾ ಪ್ರಚೋದನೆಯ ವಸ್ತುಗಳು. ಈ ವಸ್ತುಗಳನ್ನು ಹೊಂದಲಿಕ್ಕೆ ಸರಿಯಾದ ಚಟುವಟಿಕೆಗಳು ಬೇಕಾಗುತ್ತವೆ. ಈ ಚಟುವಟಿಕೆಗಳಿಗೆ ಚಾಲನ ಅಥವಾ ಚೇತನ ಬೇಕಾಗುತ್ತದೆ. ಈ ಚೇತನವೇ ಪ್ರೇರಣೆಯು. ಪ್ರೇರಕಗಳು ಬೇರೆ ಬೇರೆಯಾದ ಹಾಗೆ ಒಂದೇ ಒಂದಾದ ಪ್ರೇರಣೆಯ ಪ್ರವಾಹವು ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತದೆ. ಈ ಪ್ರೇರಕಗಳಿಗೆ ಅಭಿರುಚಿಗಳೆಂದು ಅಥವಾ ಸಮಸ್ಯೆಗಳೆಂದು ಕರೆಯಬಹುದು. ಪ್ರೇರಣೆಗಳ ವಿಷಯವು ಬಹಳ ತೊಡಕಿನದು. ಆದರೆ ಅದು ಶಿಕ್ಷಕನಿಗೆ ತಿಳಿಯಾಗಬೇಕೆಂದು ಮೇಲೆ ಕೆಲವು ಮುಖ್ಯ ಪ್ರೇರಣೆಗಳನ್ನು ಕುರಿತು ವಿವೇಚಿಸಲಾಗಿದೆ. ಶಿಕ್ಷಣದಲ್ಲಿ ಪ್ರೇರಣೆಗಳನ್ನು ಹೇಗೆ ಉಪಯೋಗಿಸ ಬಹುದು ಎಂಬುದನ್ನು ತೋರಿಸಲಾಗಿದೆ. ಪ್ರಾಥಮಿಕ ಶಾಲೆಯ ಚಿಕ್ಕಮಕ್ಕಳ ಶಿಕ್ಷಣವನ್ನು ಸಾಗಿಸುವಾಗ ಮೇಲೆ ಕಾಣಿಸಿದ ಪ್ರೇರಣೆಗಳ ಉಪಯೋಗವನ್ನು

ಕೆಲಮಟ್ಟಿಗೆ ಬಿಡಿಬಿಡಿಯಾಗಿ ವಿಚಾರಿಸಬಹುದು. ಆದರೆ ವಾಸ್ತವಿಕವಾಗಿ ಪ್ರೇರಣೆಗಳನ್ನು ಹೀಗೆ ಪ್ರತ್ಯೇಕಿಸಲು ಬರುವಂತಿಲ್ಲ. ಅವು ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಮಗುವು ಒಂದು ಪೆಟ್ಟಿಗೆಯನ್ನು ಮಾಡುವಲ್ಲಿ ರಚನೆಯು ಪ್ರಮುಖವಾದ ಪ್ರೇರಣೆಯು. ಆದರೆ ಅದನ್ನು ಹೇಗೆ ಮಾಡಬೇಕು ಎಂಬುವಲ್ಲಿ ಕುತೂಹಲವೂ, ಯಾರ ಸಹಾಯವನ್ನು ಪಡೆಯಬೇಕು ಎಂಬುವಲ್ಲಿ ಸಂಘ ಪ್ರೇರಣೆಯೂ, ನನ್ನ ಪೆಟ್ಟಿಗೆಯು ಬಹಳ ಚನ್ನಾಗಿ ಆಗಿರುತ್ತದೆ ಎಂಬುವಲ್ಲಿ ಸ್ವಪ್ರತಿಷ್ಠೆಯೂ ಕೂಡಿರುತ್ತವೆ. ಅದರಂತೆ ಪೆಟ್ಟಿಗೆಯ ಉಪಯೋಗವನ್ನು ಕುರಿತು ಮಗುವು ವಿಚಾರಿಸುವಾಗ ಪಾಲನ ಮತ್ತು ಸಂಗ್ರಹ ಪ್ರೇರಣೆಗಳನ್ನು ಅವನು ಅನುಭವಿಸುತ್ತಾನೆ. ಹೀಗೆ ಮಗುವಿನ ಚಟುವಟಿಕೆಗಳ ವ್ಯಾಪಕ ನೋಟವನ್ನು ತಕ್ಕೊಂಡರೆ ಪ್ರತಿಯೊಂದು ಚಟುವಟಿಕೆಗೆ ಒಂದಕ್ಕಿಂತ ಹೆಚ್ಚು ಪ್ರೇರಣೆಗಳು ಸಂಬಂಧಪಟ್ಟಿರುವವೆಂಬುದು ಕಂಡುಬರುತ್ತದೆ.

ವರ್ತನವನ್ನು ಒಳನೋಟದಿಂದ ಅಥವಾ ಮಾನಸಿಕ ದೃಷ್ಟಿಯಿಂದ ವಿಚಾರಿಸಿದಲ್ಲಿ ಪ್ರೇರಣೆಗಳು, ಪ್ರವೃತ್ತಿಗಳು, ಪ್ರಚೋದನೆಗಳು, ಚೇತನಗಳು, ಒತ್ತುಗಳು, ಮನೋವೃತ್ತಿಗಳು, ಉದ್ದೇಶಗಳು ಮುಂತಾದ ಶಬ್ದಗಳನ್ನು ಉಪಯೋಗಿಸುತ್ತೇವೆ; ಆದರೆ ಅದನ್ನೇ ಹೊರನೋಟದಿಂದ ಅಥವಾ ವಸ್ತುಗಳ ದೃಷ್ಟಿಯಿಂದ ವಿಚಾರಿಸಿದಲ್ಲಿ ಬಯಕೆಗಳು, ಬೇಡಿಕೆಗಳು, ಅಭಿರುಚಿಗಳು, ಧ್ಯೇಯಗಳು, ಗುರಿಗಳು, ಪ್ರೇರಕಗಳು ಮುಂತಾದ ಶಬ್ದಗಳನ್ನು ಉಪಯೋಗಿಸುತ್ತೇವೆ. ಈ ಪ್ರೇರಣೆಗಳನ್ನು ಮತ್ತು ಬಯಕೆಗಳನ್ನು ಮೂರು ತೆರನಾಗಿ ವಿಂಗಡಿಸಬಹುದು. ಶಾರೀರಿಕ ಬಯಕೆಗಳು, ಸಾಮಾಜಿಕ ಅಥವಾ ಲೌಕಿಕ ಬಯಕೆಗಳು ಮತ್ತು ಆಧ್ಯಾತ್ಮಿಕ ಅಥವಾ ಪಾರಲೌಕಿಕ ಬಯಕೆಗಳು ಎಂದು. ಅನ್ನ, ನೀರು, ನಿದ್ರೆ, ವಿಶ್ರಾಂತಿ ಮುಂತಾದವು ಪ್ರಾಣಿ ಜೀವನಕ್ಕೆ ಅವಶ್ಯವಾದ ಶಾರೀರಿಕ ಬಯಕೆಗಳು. ಗುಂಪಿನಲ್ಲಿ ಸೇರುವದು, ಜನರ ಆದರ, ಪ್ರೇಮ, ಸ್ವಾಭಿಮಾನ ಮುಂತಾದವು ಸಾಮಾಜಿಕ ಬಯಕೆಗಳು. ತತ್ವಜ್ಞಾನ, ಆತ್ಮವಿಚಾರ, ದೇವರ ವಿಚಾರ ಮುಂತಾದವು ಪಾರಲೌಕಿಕ ಬಯಕೆಗಳು. ಈ ಮೂರೂ ತೆರನಾದ ಬಯಕೆಗಳು ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಪೂರ್ವಕಾಲದಿಂದಲೂ ಬುದ್ಧಿಗಳು ಹೇಳುತ್ತ ಬಂದಿರುವ ಹೊನ್ನು, ಹೆಣ್ಣು, ಮಣ್ಣು ಎಂಬ ಮನುಷ್ಯನ ಹೆಬ್ಬಯಕೆಗಳು ವ್ಯಕ್ತಿಗೂ ಮತ್ತು ಸಮಾಜಕ್ಕೂ

ಸಂಬಂಧಪಟ್ಟಿರುತ್ತವೆ. ಹೆಣ್ಣೆಂಬುದು ವೈಯಕ್ತಿಕ ರತಿಕ್ರೀಡೆಗೂ ಮತ್ತು ವಂಶ ಬೆಳವಣಿಗೆಗೂ ಸಂಬಂಧಪಟ್ಟಿರುತ್ತದೆ. ಹೊನ್ನೆಂಬುದು ಕುಟುಂಬದ ಸುಖ ಜೀವನಕ್ಕೂ ಮತ್ತು ವೈಯಕ್ತಿಕ ದುಡುಮೆಗೂ ಸಂಬಂಧಪಟ್ಟಿರುತ್ತದೆ. ಮಣ್ಣೆಂಬುದು ರಾಜಕೀಯ ಅಧಿಕಾರಕ್ಕೂ ಮತ್ತು ವೈಯಕ್ತಿಕ ಹೆಮ್ಮೆಗೂ ಸಂಬಂಧಪಟ್ಟಿರುತ್ತದೆ. ಈ ಮೂರೂ ಹೆಬ್ಬಯಕೆಗಳು ಆಧ್ಯಾತ್ಮಿಕ ಪ್ರಗತಿಗೆ ಕಾಲ್ತೊಡಕು ಆಗಿರುತ್ತವೆಂದು ಕೆಲವರು, ಅವುಗಳೊಡನೆ ಎಚ್ಚರಿಕೆಯಿಂದ ವ್ಯವಹರಿಸಬೇಕೆಂದು ಬೇರೆ ಕೆಲವರು ಹೇಳುತ್ತಾರೆ. ಅಲ್ಲದೆ ಸಮಾಜದಲ್ಲಿಯ ನೈತಿಕ ಆಚರಣೆಯು ಆಧ್ಯಾತ್ಮಿಕ ಸಾಧನೆಗೆ ಸಂಬಂಧ ಇಲ್ಲದೇ ಇರುವದಿಲ್ಲ. ಒಟ್ಟಿನಲ್ಲಿ ಸಿದ್ಧವಾಗುವದೇನಂದರೆ ಮನುಷ್ಯನ ಪ್ರೇರಣೆಗಳನ್ನು ಮತ್ತು ಬಯಕೆಗಳನ್ನು ಕುರಿತು ವಿವೇಚಿಸುವಾಗ ಅವು ಅನ್ಯೋನ್ಯ ಸಂಬಂಧವಿಲ್ಲದವು ಎಂಬ ಕಲ್ಪನೆಯನ್ನು ಇಟ್ಟುಕೊಳ್ಳುವದು ತಪ್ಪು.

ಸಾಲೆ ಕಾಲೇಜುಗಳಲ್ಲಿ ಕಲಿಯುವಾಗ ವಿದ್ಯಾರ್ಥಿಗಳ ಮುಖ್ಯ ಬಯಕೆಗಳು, ಅಂದರೆ ಅಭಿರುಚಿಗಳು ಮತ್ತು ಸಮಸ್ಯೆಗಳು ಯಾವವೆಂಬುದನ್ನು ಇಲ್ಲಿ ಸೂಚಿಸಲಾಗಿದೆ.

## ಮಕ್ಕಳ ಅಭಿರುಚಿಗಳು ಮತ್ತು ಸಮಸ್ಯೆಗಳು

ಮಾತುಕತೆ (ಅಥವಾ ಸಂಭಾಷಣೆ)
ಕುತೂಹಲ (ಅಥವಾ ಏನಿರುವದೆಂದು ಹುಡುಕುವದು)
ರಚನೆ (ಅಥವಾ ಕೆಲಸ ಮಾಡುವದು)
ಸ್ವಂತಸುಧಾರಣೆ (ಅಂದರೆ ಅಭ್ಯಾಸದಲ್ಲಿಯಾಗಲಿ ಅಥವಾ ನಡತೆಯಲ್ಲಿಯಾಗಲಿ ಗೆಲುವನ್ನು ತಂದುಕೊಡುವ ಗುಣಗಳು)
ಬೌದ್ಧಿಕ ಚಟುವಟಿಕೆ (ಅಂದರೆ ಸಾಲೆಯ ವಿಷಯಗಳನ್ನು ಕುರಿತು ಅಥವಾ ತನ್ನ ಉದ್ಯೋಗ ವ್ಯವಸಾಯವನ್ನು ಕುರಿತು ಹೆಚ್ಚು ಜ್ಞಾನ ಮಾಡಿಕೊಳ್ಳಬೇಕೆಂಬ ಲವಲವಿಕೆ)
ಆಸರ ಅಥವಾ ಭದ್ರತೆ (ಅಂದರೆ ತನ್ನ, ತನ್ನ ಮನೆತನದ ಅಥವಾ ಎಲ್ಲರ ಕಲ್ಯಾಣ ಮತ್ತು ಸಂರಕ್ಷಣೆಯನ್ನು ಬಯಸುವದು)
ವಿನೋದ ಅಥವಾ ಆನಂದದ ಉದ್ರೇಕಗಳು
ಗೆಳೆತನ

ಜೀವನದ ಅನುಕೂಲತೆಗಳು (ಅಂದರೆ ಒಳ್ಳೆಯ ಊಟ, ಉಡಿಗೆ ಮತ್ತು ತೊಡಿಗೆಗಳು)

ದುಡ್ಡು ಗಳಿಸುವದು (ಅಂದರೆ ಉದ್ಯೋಗ, ವ್ಯಾಪಾರ ಅಥವಾ ನೌಕರಿಮಾಡುವದು)

ಸಮಾಜದಲ್ಲಿ ಗೌರವದ ಸ್ಥಾನ ಪಡೆಯುವದು

ಒಳ್ಳೆಯ ನಡತೆ

ಕೌಟುಂಬಿಕ ಜೀವನ

ಹೊಸ ಸಮಾಜ ರಚನೆ

ಸಮಾಜ ಸೇವೆ

ರಾಜಕೀಯ ಅಥವಾ ಆಡಳಿತೆಯ ಅಧಿಕಾರ

ಪರಮಾರ್ಥ ಸಾಧನೆ

ಮೇಲೆ ವಿವರಿಸಿದ ವಿಷಯಗಳು ಅಂತಃಪ್ರೇರಣೆಗಳಿಗೆ ಸಂಬಂಧಪಟ್ಟವು ಇರುತ್ತವೆ. ಇವು ಎಲ್ಲ ವಿದ್ಯಾರ್ಥಿಗಳಿಗೆ ಅಷ್ಟೇ ಮಹತ್ವದವು ಇರುವದಿಲ್ಲ. ಒಬ್ಬನಿಗೆ ಆಡಳಿತೆಯ ಅಧಿಕಾರವು ಹೆಚ್ಚು ಮಹತ್ವದ್ದು ಆದರೆ ಮತ್ತೊಬ್ಬನಿಗೆ ಕುಟುಂಬದ ಸುಖಜೀವನವು ಹೆಚ್ಚು ಮಹತ್ವದ್ದು ಆಗಿರಬಹದು. ಒಳ್ಳೇ ಬಾಳುವೆಯ ಕಲ್ಪನೆಯು ಬೇರೆ ಬೇರೆ ವ್ಯಕ್ತಿಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಪ್ರತಿಯೊಬ್ಬನು ತನ್ನ ದೃಷ್ಟಿಯಿಂದ ಬೇರೆ ಬೇರೆ ವಿಷಯಗಳಲ್ಲಿ ಬೇರೆ ಬೇರೆ ಬೆಲೆಯನ್ನು ಕಟ್ಟುತ್ತಾನೆ. ಆದ್ದರಿಂದ ಅವುಗಳ ಮಹತ್ವದ ಪ್ರಮಾಣವು ಹೆಚ್ಚು ಕಡಿಮೆಯಾಗಿರುತ್ತದೆ. ಜಗತ್ತು ಒಂದೇ ಎಂದು ತೋರಿದರೂ ಅದು ಬೇರೆ ಬೇರೆ ಜನರಿಗೆ ಬೇರೆ ಬೇರೆಯಾಗಿ ಕಾಣುತ್ತದೆ. ಬೆಳೆಯುತ್ತಿರುವ ಮಕ್ಕಳ ಮುಂದೆ ಸಾಮಾನ್ಯವಾಗಿ ಯಾವ ಯಾವ ಸಮಸ್ಯೆಗಳು ಅಥವಾ ಪ್ರಶ್ನೆಗಳು ಬಂದು ನಿಲ್ಲುತ್ತವೆ ಎಂಬುದನ್ನು ವಿಚಾರಿಸಿ ಅವುಗಳನ್ನು ಹೇಗೆ ಹೇಗೆ ಬಿಡಿಸ ಬಹುದೆಂಬುದನ್ನು ತಿಳಿಸಿ ಕೊಡುವದೇ ಶಿಕ್ಷಣದ ಮುಖ್ಯ ಕೆಲಸ. ಮಕ್ಕಳ ತಾತ್ಕಾಲಿಕ ಅಂದರೆ ಕೇವಲ ಬಾಲ್ಯಾವಸ್ಥೆಯ ಅಥವಾ ತಾರುಣ್ಯಾವಸ್ಥೆಯ ಅಭಿರುಚಿಗಳನ್ನು ಕುರಿತು ಶಿಕ್ಷಕನು ವಿಚಾರಿಸುವದು ಸಂಕುಚಿತ ದೃಷ್ಟಿ. ಆದ್ದರಿಂದ ಅದನ್ನು ಬಿಟ್ಟು ಮಗುವಿನ ಇಡೀ ಜೀವನಕ್ಕೆ ಮಾರ್ಗದರ್ಶಕವಾಗುವ ವ್ಯಾಪಕ ದೃಷ್ಟಿಯನ್ನು ಇಟ್ಟುಕೊಳ್ಳುವದು ಶಿಕ್ಷಕನ ಮುಖ್ಯ ಕೆಲಸ.

## ಶಿಕ್ಷಣದಲ್ಲಿಯ ಉಪಯೋಗ

ಮನುಷ್ಯನ ನಡತೆಯ ಬಗೆಗೆ ಅಭ್ಯಾಸವನ್ನು ಮಾಡಬೇಕೆಂಬುವವರಿಗೆ ಪ್ರೇರಣೆಗಳೇ ಆರಂಭದ ಪಾಠಗಳು. ಶಿಕ್ಷಣದಲ್ಲಿ ಅವುಗಳಿಗೆ ಮಹತ್ವದ ಸ್ಥಾನವಿದೆ. ನಡತೆಯನ್ನು ತಿದ್ದುವದೇ ಶಿಕ್ಷಣದ ಮುಖ್ಯ ಗುರಿ. ಮನುಷ್ಯನು ಶಿಷ್ಟನಾಗಲಿ ದುಷ್ಟನಾಗಲಿ ಆಗುವದು ಪ್ರೇರಣೆಗಳ ಬಲದಿಂದಲೇ. ಆದುದರಿಂದ ಪ್ರೇರಣೆಗಳು ನಡತೆಯನ್ನು ತಯಾರಿಸುವ ಮೂಲ ದ್ರವ್ಯಗಳು. ಶಿಕ್ಷಕನು ಪ್ರೇರಣೆಗಳ ಪ್ರವಾಹದಗುಂಟ ಕೆಲಸ ಮಾಡಬೇಕಾಗುವದು. ಅವುಗಳ ವಿರುದ್ಧವಾಗಿ ನಡೆಯುವದು ತಪ್ಪು; ಅವುಗಳನ್ನು ನಾಶಮಾಡುವದಂತೂ ಅಶಕ್ಯ. ಆದರೆ ಪ್ರೇರಣೆಗಳನ್ನು ಅವು ಹರಿದತ್ತ ಬಿಟ್ಟರೆ ಸಂಸ್ಕೃತಿಗೆ ಶರಣು ಹೊಡೆಯಬೇಕಾಗುವದು. ಇತ್ತ ಸಣ್ಣ ಮಕ್ಕಳನ್ನು ಉಪದೇಶದ ಮುಖಾಂತರ ತಿದ್ದುವ ಹವ್ಯಾಸವೂ ವ್ಯರ್ಥ. ಏಕೆಂದರೆ ಮಕ್ಕಳಲ್ಲಿ ನೀತಿಯ ವಿಚಾರಗಳು ಇನ್ನೂ ಮೂಡಿರುವದಿಲ್ಲ. ಆದುದರಿಂದ ಮಕ್ಕಳ ವರ್ತನವನ್ನು ತಿದ್ದುವಾಗ ಸಹಜ ಪ್ರೇರಣೆಗಳ ಸಹಾಯವನ್ನು ಪಡೆದುಕೊಳ್ಳಬೇಕು. ಹೇಯ, ಭಯ, ಆತ್ಮ ಪ್ರತಿಷ್ಠೆ,ವಿಧೇಯತೆಗಳು ಮಕ್ಕಳ ಶೀಲವನ್ನು ಹದಗೊಳಿಸಲು ಹೆಚ್ಚು ಅನುಕೂಲವಾಗುವವು. ಭಯ ಮತ್ತು ವಿಧೇಯತಾ ಪ್ರೇರಣೆಗಳನ್ನು ಮೇಲಿಂದ ಮೇಲೆ ಪ್ರೇರಿಸುವದು ಒಳ್ಳೆಯದಲ್ಲ. ಅದರಿಂದ ಮಕ್ಕಳಲ್ಲಿ ಅಂಜುಬುರುಕುತನ ಮತ್ತು ತಾನು ಕೀಳೆಂಬ ಭಾವನೆಗಳು ಬೆಳೆಯುವವು. ಆದರೆ ಆ ಪ್ರೇರಣೆಗಳನ್ನು ತಕ್ಕಮಟ್ಟಿಗೆ ಎಚ್ಚರಿಕೆಯಿಂದ ಉಪಯೋಗಿಸಬಹುದು. ಮಕ್ಕಳನ್ನು ಒಂದು ಪ್ರೇರಣೆಯಿಂಥ ತೊಲಗಿಸಬೇಕಾದರೆ ಅದರ ಸ್ಥಳದಲ್ಲಿ ಮತ್ತೊಂದು ಪ್ರೇರಣೆಯನ್ನು ಸೇರಿಸಬೇಕು.

## ಪ್ರೇರಣೆಗಳ ಸಂಸ್ಕರಣ ಅಥವಾ ಉದಾತ್ತೀಕರಣ

ಮನುಷ್ಯನನ್ನು ಕೆಲಸದಲ್ಲಿ ತೊಡಗಿಸುವ ಪ್ರಚಂಡವಾದ ಶಕ್ತಿಗಳೇ ಪ್ರೇರಣೆಗಳು. ಅವು ಸ್ವಭಾವತಃ ಒಳ್ಳೆಯವು ಅಥವಾ ಕೆಟ್ಟವು ಇರುವದಿಲ್ಲ. ಆದರೆ ಅವುಗಳನ್ನು ಒಳ್ಳೇ ಮಾರ್ಗದಲ್ಲಿ ಅಥವಾ ಕೆಟ್ಟ ಮಾರ್ಗದಲ್ಲಿ ಹಂಗೊಡಬಹುದು. ವ್ಯಕ್ತಿಯ ಮತ್ತು ಸಮಾಜದ ಉನ್ನತಿಗಾಗಿ ಅವುಗಳನ್ನು ಉಪಯೋಗಿಸುವದಕ್ಕೆ ಪ್ರೇರಣೆಗಳ **ಸಂಸ್ಕರಣ** ಅಥವಾ **ಉದಾತ್ತೀಕರಣ**

(Sublimation) ಎಂದು ಅನ್ನುತ್ತಾರೆ. ದೇಹಕ್ಕೆ ಅಪಾಯವನ್ನು ತರುವ ವಸ್ತುಗಳಿಗೆ ಅಂಜುವದಕ್ಕಿಂತ ಆತ್ಮಕ್ಕೆ ಅಪಾಯವನ್ನು ತರುವ ವಸ್ತುಗಳಿಗೆ ಅಂಜಬೇಕೆಂದು ಯೇಸು ಕ್ರಿಸ್ತನು ತನ್ನ ಶಿಷ್ಯರಿಗೆ ಹೇಳುವಾಗ ಭದ್ರತೆಯ ಪ್ರೇರಣೆಯನ್ನು ಉದಾತ್ತಗೊಳಿಸಲು ಉಪದೇಶಿಸುತ್ತಾನೆ."ಹರಿವ ಹಾವಿಂಗಂಜೆ ಉರಿವ ಕಿಚ್ಚಿಂಗಂಜೆ, ಸುರಿಗೆಯ ಮೊನೆಗಂಜೆ, ಒಂದಕ್ಕಂಜುವೆ ಒಂದಕ್ಕಳಕುವೆ, ಪರ ಧನ ಪರಸ್ತ್ರೀ ಎಂಬ ಜೂಜಿಂಗೆ ಅಂಜುವೆ" ಎಂದು ಬಸವಣ್ಣನವರು ಹೇಳುವಾಗ ಹೊನ್ನು ಹೆಣ್ಣುಗಳ ಬಯಕೆಗಳನ್ನು ಹೇಗೆ ಉದಾತ್ತಗೊಳಿಸಬೇಕೆಂಬುದನ್ನು ಸೂಚಿಸುತ್ತಾರೆ. ಅದರಂತೆ ಮತ್ತೊಂದು ವಚನದಲ್ಲಿ "ಪರ ವಧುವನು ಮಹಾದೇವಿ ಎಂದು ಕಾಂಬೆ" ಎಂದು ಅವರು ಹೇಳುವಾಗ ಕಾಮ ಪ್ರೇರಣೆಗೆ ಯಾವ ಸಂಸ್ಕಾರವನ್ನು ಕೊಡಬೇಕೆಂಬುದನ್ನು ತೋರಿಸುತ್ತಾರೆ. ಸಮಾಜದಲ್ಲಿಯ ಕೊಳಚೆಗಳ ವಿರುದ್ಧ ಹೋರಾಟವನ್ನು ಹೂಡುವಲ್ಲಿ ಯುದ್ಧ ಪ್ರೇರಣೆಯು ಸಂಸ್ಕರಣವನ್ನು ಹೊಂದುತ್ತದೆ. ವಿಜ್ಞಾನ ಮತ್ತು ತತ್ವಜ್ಞಾನಗಳನ್ನು ಮುಂದುವರಿಸುವಲ್ಲಿ ಕುತೂಹಲವು ಸಂಸ್ಕರಣವನ್ನು ಹೊಂದುತ್ತದೆ ವಿಷಯದ ಕಡೆಗೆ ಮಕ್ಕಳ ಲಕ್ಷ್ಯವನ್ನು ಹೊರಳಿಸಲಿಕ್ಕೆ ಕುತೂಹಲ ಪ್ರೇರಣೆಯು ಒಳ್ಳೆಯ ಸಾಧನ. ರಚನಾಪ್ರೇರಣೆಯನ್ನು ಎಚ್ಚರಿಸಿ ಕೈಕೆಲಸದ ಬಗೆಬಗೆಯ ಸಾಮಾನುಗಳನ್ನು ಮಾಡಿಸಬೇಕು. ಶಾರೀರಿಕ ಶಿಕ್ಷಣದಲ್ಲಿ ಸಂಘ, ಆತ್ಮಪ್ರತಿಷ್ಠೆ, ವಿಧೇಯತೆ, ಮತ್ತು ಪಾಲನೆಗಳು ಉದಾತ್ತಗೊಳ್ಳುತ್ತವೆ. ಸ್ವಾರ್ಥತ್ಯಾಗ, ಸಂಘದ ಅಭಿಮಾನ, ಆತ್ಮಗೌರವ, ಮುಂದಾಳುತನ, ಅನುಯಾಯಿತನ, ಸಹಕಾರ, ಸಹಾನುಭೂತಿ, ಧೈರ್ಯ, ಸಾಹಸ, ಶಿಸ್ತು, ಸಂಘಟನೆ ಮುಂತಾದ ಸದ್ಗುಣಗಳನ್ನು ನೆಲಗೊಳಿಸಲಿಕ್ಕೆ ಈ ಪ್ರೇರಣೆಗಳು ತುಂಬ ಸಹಾಯಕವಾಗುವವು. ಭಯ ಪ್ರೇರಣೆಯು ಎಚ್ಚರಿಕೆ, ವಿವೇಕ, ಭಕ್ತಿ, ಮತ್ತು ಪೂಜ್ಯಭಾವಗಳಲ್ಲಿ ಉದಾತ್ತಗೊಳ್ಳುವದು. ಕಾಮಪ್ರೇರಣೆಯು ಬಂಧುಪ್ರೇಮ ಮತ್ತು ಕಲಾಕೃತಿಯಲ್ಲಿ ಉದಾತ್ತಗೊಳ್ಳುವದು. ಆತ್ಮಪ್ರತಿಷ್ಠೆಯು ಸಮಾಜಸೇವೆ, ಆತ್ಮಗೌರವ, ಆತ್ಮವಿಶ್ವಾಸ, ಮಹತ್ವಾಕಾಂಕ್ಷೆ, ಮತ್ತು ಮುಂದಾಳುತನದಲ್ಲಿ ಮಾರ್ಪಾಟು ಹೊಂದುವದು. ವಿಧೇಯತೆಯು ಎರಡನೆಯವರಿಗೆ ತೋರಿಸುವ ಸನ್ಮಾನ ಮತ್ತು ಪ್ರಶಂಸೆಯಲ್ಲಿ, ಜಗುಪ್ಸೆಯು ಹೀನ ನಡತೆಗಳನ್ನು ಅಲ್ಲಗಳೆಯುವದರಲ್ಲಿ, ಸಂಘಪ್ರೇರಣೆಯು ಸಹಕಾರ ಮತ್ತು ಗೆಳೆತನವನ್ನು ಬೆಳೆಯಿಸುವದರಲ್ಲಿ ಉದಾತ್ತ ಹೊಂದುವವು. ಹೀಗೆ ಶಿಕ್ಷಕನು ತಾನೇ ವಿಚಾರಿಸಿ

ಮಕ್ಕಳಲ್ಲಿರುವ ಅಂತಃಪ್ರೇರಣೆಗಳನ್ನು ಅವರ ಬುದ್ಧಿಬೆಳವಣಿಗೆ, ಶರೀರ ಬೆಳವಣಿಗೆ ಮತ್ತು ನೀತಿ ಬೆಳವಣಿಗೆಗೆ ಸಹಾಯವಾಗುವಂತೆ ಉಪಯೋಗಿಸ ಬೇಕು. ಹಾಗೆ ಮಾಡುವದೇ ಪ್ರೇರಣೆಗಳ ಉದಾತ್ತೀಕರಣ. ಈ ರೀತಿಯಾಗಿ ಎಲ್ಲ ಪ್ರೇರಣೆಗಳನ್ನು ವ್ಯಕ್ತಿಯ ಮತ್ತು ಸಮಾಜದ ಕಲ್ಯಾಣಕ್ಕಾಗಿ ಹೇಗೆ ಉಪಯೋಗಿಸಬಹುದೆಂಬುದನ್ನು ಶಿಕ್ಷಕನು ವಿಚಾರಿಸಬೇಕು. ಸಾಲೆಗಳಲ್ಲಿ ನಡೆಯುವ ಅನೇಕ ಕಾರ್ಯಕ್ರಮಗಳಲ್ಲಿ ಪ್ರೇರಣೆಗಳ ಸದುಪಯೋಗವನ್ನು ಮಾಡಿ ಕೊಳ್ಳಬೇಕು. ಆಟಗಳು, ನಾಟಕಗಳು, ವಾಚನಾಲಯಗಳು, ಪುಸ್ತಕಾಲಯ ಗಳು, ಕೈ ಬರೆಹದ ಪತ್ರಿಕೆಗಳು, ಚಿತ್ರಕಲೆಗಳು ಕಾವ್ಯ ಗಾಯನಗಳು, ವಿದಾರ್ಥಿ ಕೌನ್ಸಿಲ್‌ಗಳು, ವಸ್ತುಸಂಗ್ರಹಾಲಯಗಳು, ಸಾಲೆಯ ಪ್ರವಾಸಗಳು, ಯೋಜನೆ ಗಳ ಕಾರ್ಯಕ್ರಮಗಳು, ಮುಂತಾದವು ಒಳ್ಳೇ ಚಟುವಟಿಕೆಗಳು. ಇವು ಮಕ್ಕಳ ಪ್ರೇರಣೆಗಳನ್ನು ಹದಗೊಳಿಸುವ ಒಳ್ಳೇ ಮಾರ್ಗಗಳು.

ಪ್ರೇರಣೆಗಳು ಮೂಲತಃ ಕೆಟ್ಟವು ಅಥವಾ ಒಳ್ಳೆಯವು ಇರುವದಿಲ್ಲ. ಇವು ಸ್ವಾಭಾವಿಕ ಒಲವುಗಳು. ಆದರೆ ಪರಿಸ್ಥಿತಿಯ ಪರಿಣಾಮದಿಂದ ಇವು ದುರ್ಮಾರ್ಗವನ್ನಾದರೂ ಹಿಡಿಯಬಹುದು, ಅಥವಾ ಸನ್ಮಾರ್ಗವನ್ನಾದರೂ ಹಿಡಿಯಬಹುದು. ಪ್ರೇರಣೆಗಳನ್ನು ಹದಗೊಳಿಸದಿದ್ದರೆ ಅವು ಅಡ್ಡದಾರಿಯನ್ನು ತುಳಿಯಬಹುದು. ಆಗ ಅವು ವ್ಯಕ್ತಿಗೂ ಸಮಾಜಕ್ಕೂ ಅಹಿತವನ್ನು ಉಂಟು ಮಾಡುತ್ತವೆ. ಹುಡುಗನು ದೊಡ್ಡವರ ಬುದ್ಧಿಯ ಮಾತನ್ನು ಕೇಳದಿದ್ದರೆ ಆಗ ಅವನನ್ನು "ಎಡವಟ್ಟ," "ಅಡನಾಡಿ" ಎಂದು ಜನರು ಟೀಕಿಸುವದುಂಟು. ಅಂದರೆ ಆ ಹುಡುಗನು ಹಿಡಿದ ಹಾದಿಯು ಒಳ್ಳೆಯದಲ್ಲವೆಂದು ಅಭಿಪ್ರಾಯ. ಯಾರಲ್ಲಿ ಸಂಕುಚಿತ ಮತ್ತು ಸ್ವಾರ್ಥ ದೃಷ್ಟಿಯು ಬೆಳೆದಿರುತ್ತದೆಯೋ ಅವರ ಪ್ರೇರಣೆಗಳು, ಮನೋವೃತ್ತಿಗಳು ಮತ್ತು ವರ್ತನಗಳು ಕೆಡಕು ಹಾದಿಯನ್ನು ಹಿಡಿಯುತ್ತವೆ. ಕಾಮ ಪ್ರೇರಣೆಯು ಸ್ವಾಭಾವಿಕ ರೀತಿಯಲ್ಲಿ ಸಂಸ್ಕರಣ ಹೊಂದದಿದ್ದರೆ ಅದು ವ್ಯಭಿಚಾರದ ಮತ್ತು ಅಪಾಯಕಾರಕ ಚಟುವಟಿಕೆಗಳಲ್ಲಿ ಪರಿಣಮಿಸುವದು. ಕೆಡಕು ಹಾದಿಯನ್ನು ಹಿಡಿದರೆ ಸ್ವಪ್ರತಿಷ್ಠೆಯು ಗರ್ವ ಮತ್ತು ಕ್ರೂರ ನಡತೆಗಳಿಗೆ ಎಡೆಗೂಡುವದು; ಯುದ್ಧ ಪ್ರೇರಣೆಯು ದ್ವೇಷ, ಅಸೂಯೆ, ಮತ್ತು ಹಿಂಸೆಗಳಲ್ಲಿ ತೋರುವದು;ಭದ್ರತೆಯು ಹೇಡಿತನದಲ್ಲಿಯೂ ಅಂಜುಬುರುಕತನದಲ್ಲಿಯೂ ತೋರುವದು;ವಿಧೇಯತೆಯು ಅನ್ಯರ ಹಿಂಸೆಯನ್ನು

ಸಹಿಸುವ ಗುಲಾಮಗಿರಿಯಲ್ಲಿ ತೋರುವದು; ಕುತೂಹಲವು ಚಾಡಿಯ ಮಾತುಗಳನ್ನು ಹೇಳುವಲ್ಲಿ ಮತ್ತು ಕೇಳುವಲ್ಲಿ ವ್ಯಕ್ತವಾಗುವದು; ಮತ್ತು ಸಂಗ್ರಹ ಪ್ರೇರಣೆಯು ಕದಿಯುವ ಚಟದಲ್ಲಿ ಮತ್ತು ಜಿಪುಣತನದಲ್ಲಿ ವ್ಯಕ್ತವಾಗುವದು. ಮಕ್ಕಳಲ್ಲಿ ವಿಶಾಲವಾದ ಮತ್ತು ಸಮಾಜ ಹಿತದ ವಿವೇಕ ದೃಷ್ಟಿಯನ್ನು ಬೆಳೆಯಿಸಿ ಅವರ ಪ್ರೇರಣೆಗಳನ್ನು ಯೋಗ್ಯ ಚಟುವಟಿಕೆಗಳಲ್ಲಿ ಪರಿವರ್ತಿಸಲು ಶಿಕ್ಷಕರು ನೆರವಾಗಬೇಕು. ಒಟ್ಟಿನಲ್ಲಿ ಮಕ್ಕಳ ವ್ಯಕ್ತಿತ್ವವನ್ನು ರೂಪುಗೊಳಿಸಲಿಕ್ಕೆ ಪ್ರೇರಣೆಗಳು ಮೂಲ ಸಾಮಗ್ರಿಗಳು.

ಪ್ರೇರಣೆಗಳನ್ನು ಸುಮ್ಮನೆ ಹಿಂಬಾಲಿಸಿ ನಡೆಯುವದು ತನ್ನ ಕೆಲಸವೆಂದು ಶಿಕ್ಷಕನು ಊಹಿಸಬಾರದು. ಪ್ರೇರಣೆಗಳು ವ್ಯಕ್ತಿತ್ವವನ್ನು ಕಟ್ಟುವ ಕಚ್ಚಾ ಸಾಮಗ್ರಿಗಳು. ಅವುಗಳನ್ನು ಪುಟಕ್ಕೆ ಹಾಕಿ ಪರಿಶುದ್ಧ ಮಾಡುವದೇ ಶಿಕ್ಷಕನ ಹಿರಿದಾದ ಕೆಲಸ. ಪ್ರೇರಣೆಗಳ ಪಾಶವು ಪಶುಗಳನ್ನು ಬಿಗಿದಿರುತ್ತದೆ. ಆದರೆ ಮನುಷ್ಯನು ತನ್ನಲ್ಲಿರುವ ಹೆಚ್ಚಿನ ಬುದ್ಧಿಯ ಬಲದಿಂದ ಮೂಲ ಪ್ರೇರಣೆಗಳನ್ನು ಒಳ್ಳೆಯ ಹಾದಿಗೆ ತರಬಲ್ಲನು. ಅಧಿಕ ಬುದ್ಧಿಯ ಪ್ರಭಾವದಿಂದಲೇ ಮನುಷ್ಯನು ಇತರ ಪ್ರಾಣಿಗಳಿಗಿಂತ ಮೇಲು ಮಟ್ಟದಲ್ಲಿ ಇರುತ್ತಾನೆ. ಅಂತೆಯೇ ಆವನು ಶಿಕ್ಷಣವನ್ನು ಪಡೆಯಬಲ್ಲನು. ದುರ್ಮಾರ್ಗವನ್ನು ಹಿಡಿಯಬಹುದಾದ ಪ್ರೇರಣೆಗಳನ್ನು ಸನ್ಮಾರ್ಗಕ್ಕೆ ಹಚ್ಚಬೇಕು. ಪ್ರವೃತ್ತಿಗಳನ್ನು ಸುವೃತ್ತಿಗಳನ್ನಾಗಿ ಮಾಡುವದೇ ಶಿಕ್ಷಣ. ಮನುಷ್ಯನು ಸಜ್ಜನನಾಗಬೇಕಾದರೆ ತನ್ನ ಪ್ರೇರಣೆಗಳನ್ನು ಹೇಗೆ ಉದಾತ್ತಗೊಳಿಸಬೇಕೆಂಬುದರ ಬಗೆಗೆ ಒಬ್ಬ ಕನ್ನಡ ಕವಿಯು ಹೀಗೆ ಸೂಚಿಸಿದ್ದಾನೆ—

ಕಾಮ ನಿಜದಾರದೊಳು ಕ್ರೋಧ |
ಸ್ತೋಮ ದುರ್ಮಾರ್ಗರೊಳು ಲೋಭದ
ಸೀಮೆ ಪುಣ್ಯಾಂಗಳೊಳು ಮೋಹವು ಸಾಧುಜನರೊಡನೆ ||
ಆ ಮಹಾಮದ ಗರ್ವಿತರೊಳು |
ದ್ವಾಮ ಮತ್ಸರ ತಾನು ದುಷ್ಕೃತಿ |
ಕಾಮುನವ ಮಾಳ್ಪರೊಳು ತೋರಲುಬೇಕು ಸಜ್ಜನರ||

## ಪ್ರೇರಣೆಗಳು ಮತ್ತು ಅಭ್ಯಾಸಕ್ರಮ

ಕಲಿಯುವಿಕೆಗೆ ಚಾಲನ ಕೊಡಲಿಕ್ಕೆ ಅಂದರೆ ಕಲಿಯುವವನನ್ನು ಹುರುದುಂಬಿಸಲಿಕ್ಕೆ ಪ್ರೇರಣೆಗಳನ್ನು ಉಪಯೋಗಿಸಬೇಕು. ಪ್ರಾಥಮಿಕ ಸಾಲೆಯ ಮತ್ತು ಹಾಯಸ್ಕೂಲಿನ ಅಭ್ಯಾಸಕ್ರಮವನ್ನು ಮತ್ತು ಕಲಿಸುವ ಪದ್ಧತಿಯನ್ನು ಈ ಪ್ರೇರಣೆಗಳ ದೃಷ್ಟಿಯಿಂದ ವಿಚಾರಿಸಬೇಕು. ಕೆಲಸದ ಯಾವ ಕಣ್ಣಿಯನ್ನು ಬಿಚ್ಚಬೇಕು. ಎಂಬುದನ್ನು ಶಿಕ್ಷಕನು ತಿಳಿದು ಕೊಳ್ಳುವದು ಅವಶ್ಯ. ಅಭ್ಯಾಸಕ್ರಮದ ಎಲ್ಲ ವಿಷಯಗಳನ್ನು ಕಲಿಯುವವನ ಅಭಿರುಚಿಗಳಿಗೆ ಮತ್ತು ಬಯಕೆಗಳಿಗೆ ಹೊಂದಿಸಿದರೆ ಶಿಕ್ಷಕನು ಗೆಲವು ಹೊಂದು ವುದರಲ್ಲಿ ಸಂದೇಹವಿಲ್ಲ. ಪ್ರಾಥಮಿಕ ಸಾಲೆಯ ಎಲ್ಲ ಅಭ್ಯಾಸಗಳನ್ನು ಚಟುವಟಿಕೆಯ ಕಾರ್ಯಕ್ರಮದ ಮುಖಾಂತರ ನಡೆಯಿಸಬೇಕು. ಅಂದರೆ ಮಾತ್ರ ಪ್ರೇರಣೆಗಳ ವ್ಯವಹಾರಕ್ಕೆ ಅನುವು ಮಾಡಿಕೊಟ್ಟಂತಾಗುವುದು. ಚಿತ್ರ ತಗೆಯುವದು, ಬಣ್ಣ ಹಚ್ಚುವದು, ಕೈಕೆಲಸಗಳನ್ನು ಮಾಡುವದು, ಆಟ ಆಡುವದು, ಗಾಯನ ಸಂಭಾಷಣೆಗಳನ್ನು ನಡೆಸುವದು, ಯೋಜನೆ ಗಳನ್ನು ಕೈಕೊಳ್ಳುವದು ಮುಂತಾದವು ಮಕ್ಕಳ ಪ್ರೀತಿಯ ಚಟುವಟಿಕೆಗಳು. ಮಕ್ಕಳು ಓದುವ ಪುಸ್ತಕಗಳು ಅವರ ಅನುಭವಕ್ಕೆ ನಿಲುಕುವಂಥ ವಿಷಯಗಳನ್ನು ಕುರಿತು ಮಾತ್ರ ಬರೆಯಲ್ಪಡಬೇಕು. ಆದರೆ ಈಗಿನ ಪಠ್ಯಪುಸ್ತಕಗಳ ಎಷ್ಟೋ ಸಂಗತಿಗಳು ಹುಡುಗರ ಅನುಭವವನ್ನು ಮೀರಿದಂಥವು ಇರುತ್ತವೆ. ಇವುಗಳಿಂದ ಪ್ರಯೋಜನವಿಲ್ಲ. ಗಣಿತ ಪಾಠಗಳು, ಭಾಷಾ ಪಾಠಗಳು, ಬರಹ ಪಾಠಗಳು, ಸಾಮಾಜಿಕ ಅಭ್ಯಾಸದ ಪಾಠಗಳು ಎಲ್ಲವೂ ಕಲಿಯುವವರ ಅಭಿರುಚಿಗಳಿಗೆ ಸಂಬಂಧಪಟ್ಟವು ಇರಬೇಕು. ಅವುಗಳ ವಿಷಯಗಳು ಬಾಲ್ಯಾವಸ್ಥೆಯ ಮತ್ತು ತಾರುಣ್ಯಾವಸ್ಥೆಯ ಮಕ್ಕಳ ಬೇಡಿಕೆಗಳಿಗೆ ಮತ್ತು ಸಮಸ್ಯೆಗಳಿಗೆ ಸಂಬಂಧ ಪಟ್ಟವು ಇರಬೇಕು. ಯಾವ ಚಟುವಟಿಕೆಗಳು ಅಥವಾ ಪಾಠಗಳು ಮಕ್ಕಳಿಗೆ ಅರ್ಥವುಳ್ಳದ್ದು ಆಗುವವೋ ಅವುಗಳಲ್ಲಿ ಅವರು ಅಭಿರುಚಿಯನ್ನು ತೋರಿಸು ತ್ತಾರೆ. ಮಕ್ಕಳು ಸ್ವತಃ ಅಂಗಡಿಕಾರರಾಗಿ ಲೆಕ್ಕ ಪತ್ರ, ಓದು ಬರಹ ಕಲಿಯು ವದು ಹೆಚ್ಚು ಪರಿಣಾಮಕಾರಕವಾಗುವದು. ಊರಲ್ಲಿಯೆ ಬೇರೆ ಬೇರೆ ಸಂಘ, ಸಂಸ್ಥೆಗಳಿಗೆ ಮಕ್ಕಳನ್ನು ಕರೆದುಕೊಂಡು ಹೋಗಿ ನಾಗರಿಕ ನೀತಿಯ ಅಭ್ಯಾಸ ವನ್ನು ಮತ್ತು ಸಾಮಾಜಿಕ ಸಮಸ್ಯೆಗಳ ಅಭ್ಯಾಸವನ್ನು ಮಾಡಿಸಬೇಕು.

ಮಕ್ಕಳು ಹಾಯಸ್ಕೂಲಿನಲ್ಲಿ ಕಲಿಯುವಾಗ ತಾರುಣ್ಯದಲ್ಲಿ ಕಾಲಿಡುವದರಿಂದ ತರುಣರ ಸಮಸ್ಯೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಅವರ ಅಭ್ಯಾಸಕ್ರಮದಲ್ಲಿ ಸೇರಿಸಬೇಕು. ಕುಟುಂಬ ಜೀವನ, ಸಮಾಜ ಜೀವನ, ಉದ್ಯೋಗ ವ್ಯವಸಾಯ, ಆರ್ಥಿಕವ್ಯವಸ್ಥೆ, ಆಡಳಿತೆಯ ಸಮಸ್ಯೆಗಳು ಮುಂತಾದವು ತರುಣರ ಮನಸ್ಸನ್ನು ಹಿಡಿಯುತ್ತವೆ. ಆದ್ದರಿಂದ ಅವುಗಳ ಪರಿಚಯವನ್ನು ಅವರಿಗೆ ಮಾಡಿಕೊಡುವದು ಅವಶ್ಯ. ಈಗಿನ ಹಾಯಸ್ಕೂಲಿನಲ್ಲಿ ವ್ಯವಸಾಯ ಶಿಕ್ಷಣದ ದೊಡ್ಡ ಕೊರತೆ ಇರುವದು. ಈ ಕೊರತೆಯನ್ನು ಹೋಗಲಾಡಿಸುವದು ವ್ಯಕ್ತಿಯ ಕಲ್ಯಾಣದ ದೃಷ್ಟಿಯಿಂದಲೂ ದೇಶದ ಏಳ್ಗೆಯ ದೃಷ್ಟಿಯಿಂದಲೂ ಅವಶ್ಯವಾದುದು. ಒಟ್ಟಿನಲ್ಲಿ, ಸಾಲೆಯ ಅಭ್ಯಾಸಕ್ರಮವು ವಿದ್ಯಾರ್ಥಿಗಳ ಸಾಮರ್ಥ್ಯ, ಅಭಿರುಚಿ, ಮನೋವೃತ್ತಿಗಳಿಗೆ ಮತ್ತು ಸಮಾಜದ ಬೇಡಿಕೆಗಳಿಗೆ ಹೊಂದಿಕೆಯಾಗುವಂತೆ ಇರತಕ್ಕದ್ದು. ಸಾಲೆಯ ಪ್ರತಿಯೊಂದು ಚಟುವಟಿಕೆಯು ಅವನಿಗೆ ಅರ್ಥವುಳ್ಳದ್ದೂ ಮತ್ತು ಉಪಯುಕ್ತವಾದದ್ದೂ ಇರತಕ್ಕದ್ದು. ಅಂದರೆ ಮಾತ್ರ ಅವನ ಕಲಿಯುವ ಪ್ರಯತ್ನಕ್ಕೆ ಪುಟ ಕೊಟ್ಟಂತೆ ಆಗುವದು.

## ಶಿಕ್ಷಣದಲ್ಲಿ ಆಟದ ಪದ್ಧತಿ

"ಆಟದ ಪದ್ಧತಿ" ಹೊಸ ಶಿಕ್ಷಣದ ತಿರುಳು. ಶಿಕ್ಷಣ ಕ್ರಮವೆಲ್ಲ ಆಟದ ಪದ್ಧತಿಯಿಂದಲೇ ಸಾಗಬೇಕು. ಇತ್ತೀಚೆಗೆ ಶಿಕ್ಷಣ ಕ್ಷೇತ್ರದಲ್ಲಿ ಪ್ರಚಾರಕ್ಕೆ ಬಂದಿರುವ ಮಾಂಟೇಸರಿ ಪದ್ಧತಿ, ಕಿಂಡರ ಗಾರ್ಟನ್ ಪದ್ಧತಿ, ಹ್ಯುರಿಸ್ಟಿಕ್ ಪದ್ಧತಿ, ಪ್ರೊಜೆಕ್ಟ (ಯೋಜನಾ) ಪದ್ಧತಿ, ಡಾಲ್ಟನ್ ಪದ್ಧತಿ, ಉತ್ಪಾದನ ಪದ್ಧತಿ, ಚಟುವಟಿಕೆಯ ಪದ್ಧತಿ, ಲೋಕಸತ್ತೆಯ ಪದ್ಧತಿ ಮೊದಲಾದವು ಆಟದ ತತ್ವಗಳನ್ನೇ ಆಧಾರವಾಗಿ ಇಟ್ಟುಕೊಂಡಿರುತ್ತವೆ. ಕಲಿಸುವ ಪದ್ಧತಿ, ಸಾಲೆಯ ಆಡಳಿತೆ, ಶಿಕ್ಷಣ ವ್ಯವಹಾರ ಇವೆಲ್ಲವು ಆಟದ ತತ್ವವನ್ನು ಅನುಸರಿಸಬೇಕು. ಶಿಕ್ಷಣವು "ಶಿಶು ಕೇಂದ್ರ"ವಾಗಿರಬೇಕು ಎಂಬುದರ ಅರ್ಥವಾದರೂ ಇದೇ. ಸರ್ ಜಾನ್ ಎಡ್ಯಾಮ್ಸನ "ಶಿಶು ಕೇಂದ್ರ" ತತ್ವವನ್ನು 'ಆಟದ ಪದ್ಧತಿ' ಎಂದು ಕರೆಯುವದು ಹೆಚ್ಚು ಸಮಂಜಸವಾಗುವದೆಂದು ರಾಸ್ ಮತ್ತು ನನ್ ಎಂಬವರು ಅಭಿಪ್ರಾಯಪಡುತ್ತಾರೆ. ಯಾಕಂದರೆ ಆಟವಾಡುವದು ಮಗುವಿಗೆ ಸ್ವಾಭಾವಿಕವಾದುದು. ಶಿಕ್ಷಕನು ತನ್ನ ವ್ಯವಸಾಯದಲ್ಲಿ ಯಶ ಪಡೆಯಬೇಕಾದರೆ ಪಾಠವೇ ಆಟ, ಆಟವೇ ಪಾಠ ಎಂಬ ಸೂತ್ರದಂತೆ ನಡೆಯಬೇಕು.

ಸಾಲೆಯಲ್ಲಿ ಯಾವ ವಿಷಯವನ್ನೇ ಕಲಿಸಲಿ, ಯಾವ ಕಾರ್ಯಕ್ರಮವನ್ನೇ ಕೈಕೊಳ್ಳಲಿ ಅದು ಮಕ್ಕಳಿಗೆ ಆಟವಾಡಿದಂತೆ ಅನಿಸಬೇಕು. ಶಿಕ್ಷಕನು ಸಾಲೆಯ ಗಾರುಡಿಗನಾಗಿರಬೇಕು. ಮಕ್ಕಳಿಗೆ ವಿಷಯವು ಮನರಂಜನವಾಗುವಂತೆ ಪಾಠ ಕಲಿಸಬೇಕು. ಮಗುವು ಸ್ವಂತ ಅನುಭವದಿಂದ ಒಂದು ಬಗೆಯ ಶಿಕ್ಷಣವನ್ನು ಹೊಂದುತ್ತಲೇ ಇರುತ್ತಾನೆ. ಪ್ರಯೋಗದ ಮುಖಾಂತರ ಕಲಿಯುವದು ಅವನಿಗೆ ಸಹಜವಾದುದು. ವಸ್ತುಗಳನ್ನು ಪ್ರತ್ಯಕ್ಷ ಮುಟ್ಟಿ ನೋಡಿ ಅವುಗಳ ಬಗ್ಗೆ ತಿಳಿದುಕೊಳ್ಳುವದು ಅವನಿಗೆ ಒಂದು ಬಗೆಯ ಆಟವೇ ಆಗಿರುತ್ತದೆ. ಇದೇ ತತ್ವದ ಪ್ರಕಾರ ಶಿಕ್ಷಣವು ಸಾಗಬೇಕು. ವಿದ್ಯಾರ್ಥಿಗಳು ಇನ್ನೂ ಅರಳದೆ ಇರುವ ಕವಿಗಳು, ನಟರು, ಸಾಹಿತಿಗಳು, ಶಿಲ್ಪಿಗರು, ವಿಜ್ಞಾನಿಗಳು, ರಾಜಕಾರಣಿಗಳು, ಸಮಾಜ ಸುಧಾರಕರು ಎಂದು ಶಿಕ್ಷಕನು ತಿಳಿದಿರಬೇಕು. ಆ ಆ ರೀತಿಯಲ್ಲಿ ಅವರು ಬೆಳೆಯುವಂತೆ ಅಭ್ಯಾಸಕ್ರಮವನ್ನು ಮತ್ತು ಕಲಿಸುವ ಪದ್ಧತಿಯನ್ನು ಯೋಚಿಸಬೇಕು. ಸಾಲೆಯಲ್ಲಿ ಕಲಿಯಬೇಕಾದ ವಿಷಯಗಳು ದಿನದ ಬಾಳುವೆಗೆ ಹೇಗೆ ಸಂಬಂಧಪಟ್ಟಿರುತ್ತವೆ ಎಂಬುದನ್ನು ವಿದ್ಯಾರ್ಥಿಗಳಿಗೆ ತೋರಿಸಿಕೊಡಬೇಕು. ಸಮಾಜದ ಅಭ್ಯಾಸಗಳು ನಮ್ಮ ರಾಜಕೀಯ ಹಾಗು ಆರ್ಥಿಕ ವ್ಯವಸ್ಥೆಗೆ ಹೇಗೆ ಸಂಬಂಧಪಟ್ಟಿವೆ, ವಿಜ್ಞಾನದ ಸಂಶೋಧನೆಗಳು ನಮ್ಮ ಬಾಳುವೆಯ ರೀತಿ ನೀತಿಗಳನ್ನು ಹೇಗೆ ಬದಲಾಯಿಸುತ್ತವೆ, ಗಣಿತ ವಿಷಯವು ವ್ಯವಹಾರದಲ್ಲಿ ಹೇಗೆ ಉಪಯೋಗ ಬೀಳುತ್ತಿದೆ ಎಂಬುದನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಡಬೇಕು. ಹೀಗೆ ಸಾಲೆಯ ಪ್ರತಿಯೊಂದು ವಿಷಯವನ್ನು ಪ್ರಪಂಚಕ್ಕೆ ಸಂಬಂಧಿಸಿ, ಮಕ್ಕಳ ಅನುಭವಕ್ಕೆ ಹಚ್ಚಿ ಪ್ರಯೋಗದ ಮುಖಾಂತರ ಕಲಿಸಿದರೆ ಅದು ಆಟವೆನಿಸುತ್ತದೆ. ವಿಷಯವನ್ನು ಆಟದ ಪದ್ಧತಿಯಿಂದ ಕಲಿಸಿದರೆ ಮಕ್ಕಳು ಅದನ್ನು ಸ್ವಯಂಸ್ಫೂರ್ತಿಯಿಂದಲೂ ಆನಂದದಿಂದಲೂ ಕಲಿಯುವರು. ಈಗ ಹುಡುಕಿದ ಹೊಸ ಪದ್ಧತಿಗಳಲ್ಲಿ ಆಟದ ತತ್ವಗಳು ಹೇಗೆ ಅಡಕವಾಗಿವೆ ಎಂಬುದನ್ನು ಸ್ವಲ್ಪ ನೋಡುವ.

**ಮೋಂಟೇಸರಿ ಪದ್ಧತಿ**

ಕೆಲವು ಸಾಮಗ್ರಿಗಳನ್ನು ಕೊಟ್ಟು ಸ್ವತಂತ್ರ ರೀತಿಯಿಂದ ಆಡಲಿಕ್ಕೆ ಮಕ್ಕಳನ್ನು ಬಿಟ್ಟುಬಿಡುವದು ಈ ಪದ್ಧತಿಯ ಮುಖ್ಯ ಲಕ್ಷಣ. ಬೇರೆ ಬೇರೆ ಆಕಾರದ ಕಟ್ಟಿಗೆಯ ತುಂಡು, ಉಣ್ಣೆಯ ಚೆಂಡು, ಪೆಟ್ಟಿಗೆ, ಹಲಿಗೆ, ದಾರ,

ಚಿತ್ರ ಮುಂತಾದ ಸಾಮಾನುಗಳನ್ನು ಆಡಲಿಕ್ಕೆ ಕೊಡುವರು. ಇವುಗಳಿಗೆ "ಬೋಧನದ ಉಪಕರಣಗಳು" (Didactic Apparatus) ಎಂದು ಅನ್ನುವರು. ಶಿಕ್ಷಕಿಯು ಮಕ್ಕಳ ಸ್ವತಂತ್ರ ವೃತ್ತಿಗೆ ಅಡ್ಡ ಬಾರದೇ ಇರುವುದರಿಂದ ಸ್ವಾವಲಂಬನೆ, ಸ್ವಂತ ವಿಚಾರ, ಮತ್ತು ಉದ್ಯೋಗಪ್ರಿಯತೆಗಳು ಅವರಲ್ಲಿ ನೆಲೆಗೊಳ್ಳುವವು. ಮೋಂಟೇಸರಿ ಸಾಲೆಯಲ್ಲಿ ಜ್ಞಾನೇಂದ್ರಿಯಗಳ ತರಬೇತಿಗೆ ಹೆಚ್ಚು ಬೆಲೆ ಕೊಡುತ್ತಾರೆ. ಓದು ಬರೆಹ ಲೆಕ್ಕಗಳನ್ನು ಆಟದ ಮುಖಾಂತರವೇ ಕಲಿಸುತ್ತಾರೆ. "ಇದನ್ನು ಮಾಡು! ಇದನ್ನು ಬಿಡು!" ಎಂದು ಶಿಕ್ಷಕಿಯು ಮಕ್ಕಳಿಗೆ ಎಂದೂ ಉಪದೇಶಿಸುವದಿಲ್ಲ. ಅವರು ತಪ್ಪಿ ನಡೆದರೆ ದಂಡ ಹೇರುವದಿಲ್ಲ. ತಮ್ಮ ತಪ್ಪು ನಡತೆಯನ್ನು ಅನ್ಯರು ಮೆಚ್ಚುವದಿಲ್ಲವೆಂದು ತಿಳಿದು ಮುಂದೆ ಅವರು ಹಾಗೆ ವರ್ತಿಸುವದನ್ನು ತಾವಾಗಿಯೇ ಬಿಟ್ಟು ಬಿಡುತ್ತಾರೆ. ವ್ಯಕ್ತಿತ್ವದ ಬೆಳವಣಿಗೆಗೆ ಸ್ವಾತಂತ್ರ್ಯವೇ ಮೂಲ ಎಂಬುದು ಡಾ. ಮೋಂಟೇಸರಿಯ ಬೀಜಮಂತ್ರ. ಅವಳ ದೃಷ್ಟಿಯಲ್ಲಿ ಶಿಕ್ಷಕಿಯು "ನಿರೀಕ್ಷಕಳು" ಆದರೆ ಉಪದೇಶಕಳು ಅಲ್ಲ. ಫ್ರೊಬೆಲ್‌ನ ಕಿಂಡರ ಗಾರ್ಟನ್ ("ಮಕ್ಕಳ ತೋಟ") ಸಾಲೆಯಲ್ಲಿ ಕೂಡ ಚಿಕ್ಕ ಮಕ್ಕಳು ಆಟಗಳ ಮುಖಾಂತರವೇ ಶಿಕ್ಷಣವನ್ನು ಹೊಂದುತ್ತಾರೆ.

## ಡಾಲ್ಟನ್ ಪದ್ಧತಿ

ಇಲ್ಲಿ ಸಂಪ್ರದಾಯದ ವೇಳಾಪತ್ರಿಕೆ ಮತ್ತು ವರ್ಗರಚನೆಗಳು ಇರುವದಿಲ್ಲ. ವಿದ್ಯಾರ್ಥಿಗಳು ತಮತಮಗೆ ಬೇಕಾದ ವಿಷಯಗಳನ್ನು ಅಭ್ಯಾಸ ಪತ್ರಿಕೆಯಿಂದ ಆರಿಸಿಕೊಳ್ಳುತ್ತಾರೆ. ಆದರೆ ಆರಿಸಿಕೊಂಡ ವಿಷಯವನ್ನು ಇಂತಿಷ್ಟು ದಿವಸಗಳಲ್ಲಿ ಮುಗಿಸುವ ಹೊಣೆಗಾರಿಕೆ ಅವರ ಮೇಲೆ ಇರುತ್ತದೆ. ಶಿಕ್ಷಕನು ಅವರ ಸಲಹೆಗಾರ, ಮಾರ್ಗದರ್ಶಕ. ಸಾಲೆಯಲ್ಲಿ ವರ್ಗದ ಪ್ರಕಾರ ಕೋಣೆಗಳು ಇರದೆ ವಿಷಯಗಳ ಪ್ರಕಾರ ಇರುತ್ತವೆ. ತನ್ನ ಅನುಕೂಲತೆಯ ಪ್ರಕಾರ ವಿದ್ಯಾರ್ಥಿಯು ಇತಿಹಾಸದ ಕೋಣೆಗೆ, ಇಲ್ಲವೆ ಭೂಗೋಲ ಕೋಣೆಗೆ, ಇಲ್ಲವೆ ಸಾಯನ್ಸ ಕೋಣೆಗೆ ಹೋಗಿ ಅಲ್ಲಿ ಕೆಲವು ವೇಳೆಯ ವರೆಗೆ ಅಭ್ಯಾಸ ನಡೆಸುತ್ತಾನೆ. ಆ ಕೋಣೆಯಲ್ಲಿ ಇದ್ದ ಶಿಕ್ಷಕನ ಮತ್ತು ಲಾಯಬ್ರರಿಯ ಸಹಾಯ ಪಡೆಯುತ್ತಾನೆ. ತನಗೆ ಸಾಕು ಎನಿಸಿದಾಗ ಒಂದು ಕೋಣೆಯನ್ನು

ಸಾಲೆಯಲ್ಲಿ ಯಾವ ವಿಷಯವನ್ನೇ ಕಲಿಸಲಿ, ಯಾವ ಕಾರ್ಯಕ್ರಮವನ್ನೇ ಕೈಕೊಳ್ಳಲಿ ಅದು ಮಕ್ಕಳಿಗೆ ಆಟವಾಡಿದಂತೆ ಅನಿಸಬೇಕು. ಶಿಕ್ಷಕನು ಸಾಲೆಯ ಗಾರುಡಿಗನಾಗಿರಬೇಕು. ಮಕ್ಕಳಿಗೆ ವಿಷಯವು ಮನರಂಜನವಾಗುವಂತೆ ಪಾಠ ಕಲಿಸಬೇಕು. ಮಗುವು ಸ್ವಂತ ಅನುಭವದಿಂದ ಒಂದು ಬಗೆಯ ಶಿಕ್ಷಣವನ್ನು ಹೊಂದುತ್ತಲೇ ಇರುತ್ತಾನೆ. ಪ್ರಯೋಗದ ಮುಖಾಂತರ ಕಲಿಯುವದು ಅವನಿಗೆ ಸಹಜವಾದುದು. ವಸ್ತುಗಳನ್ನು ಪ್ರತ್ಯಕ್ಷ ಮುಟ್ಟಿ ನೋಡಿ ಅವುಗಳ ಬಗ್ಗೆ ತಿಳಿದುಕೊಳ್ಳುವದು ಅವನಿಗೆ ಒಂದು ಬಗೆಯ ಆಟವೇ ಆಗಿರುತ್ತದೆ. ಇದೇ ತತ್ವದ ಪ್ರಕಾರ ಶಿಕ್ಷಣವು ಸಾಗಬೇಕು. ವಿದ್ಯಾರ್ಥಿಗಳು ಇನ್ನೂ ಅರಳದೆ ಇರುವ ಕವಿಗಳು, ನಟರು, ಸಾಹಿತಿಗಳು, ಶಿಲ್ಪಿಗರು, ವಿಜ್ಞಾನಿಗಳು, ರಾಜಕಾರಣಿಗಳು, ಸಮಾಜ ಸುಧಾರಕರು ಎಂದು ಶಿಕ್ಷಕನು ತಿಳಿದಿರಬೇಕು. ಆ ಆ ರೀತಿಯಲ್ಲಿ ಅವರು ಬೆಳೆಯುವಂತೆ ಅಭ್ಯಾಸಕ್ರಮವನ್ನು ಮತ್ತು ಕಲಿಸುವ ಪದ್ಧತಿಯನ್ನು ಯೋಚಿಸಬೇಕು. ಸಾಲೆಯಲ್ಲಿ ಕಲಿಯಬೇಕಾದ ವಿಷಯಗಳು ದಿನದ ಬಾಳುವೆಗೆ ಹೇಗೆ ಸಂಬಂಧಪಟ್ಟಿರುತ್ತವೆ ಎಂಬುದನ್ನು ವಿದ್ಯಾರ್ಥಿಗಳಿಗೆ ತೋರಿಸಿಕೊಡಬೇಕು. ಸಮಾಜದ ಅಭ್ಯಾಸಗಳು ನಮ್ಮ ರಾಜಕೀಯ ಹಾಗು ಆರ್ಥಿಕ ವ್ಯವಸ್ಥೆಗೆ ಹೇಗೆ ಸಂಬಂಧಪಟ್ಟಿವೆ, ವಿಜ್ಞಾನದ ಸಂಶೋಧನೆಗಳು ನಮ್ಮ ಬಾಳುವೆಯ ರೀತಿ ನೀತಿಗಳನ್ನು ಹೇಗೆ ಬದಲಾಯಿಸುತ್ತವೆ, ಗಣಿತ ವಿಷಯವು ವ್ಯವಹಾರದಲ್ಲಿ ಹೇಗೆ ಉಪಯೋಗ ಬೀಳುತ್ತಿದೆ ಎಂಬುದನ್ನು ಮಕ್ಕಳಿಗೆ ಮನವರಿಕೆ ಮಾಡಿಕೊಡಬೇಕು. ಹೀಗೆ ಸಾಲೆಯ ಪ್ರತಿಯೊಂದು ವಿಷಯವನ್ನು ಪ್ರಪಂಚಕ್ಕೆ ಸಂಬಂಧಿಸಿ, ಮಕ್ಕಳ ಅನುಭವಕ್ಕೆ ಹಚ್ಚಿ ಪ್ರಯೋಗದ ಮುಖಾಂತರ ಕಲಿಸಿದರೆ ಅದು ಆಟವೆನಿಸುತ್ತದೆ. ವಿಷಯವನ್ನು ಆಟದ ಪದ್ಧತಿಯಿಂದ ಕಲಿಸಿದರೆ ಮಕ್ಕಳು ಅದನ್ನು ಸ್ವಯಂಸ್ಫೂರ್ತಿಯಿಂದಲೂ ಆನಂದದಿಂದಲೂ ಕಲಿಯುವರು. ಈಗ ಹುಡುಕಿದ ಹೊಸ ಪದ್ಧತಿಗಳಲ್ಲಿ ಆಟದ ತತ್ವಗಳು ಹೇಗೆ ಅಡಕವಾಗಿವೆ ಎಂಬುದನ್ನು ಸ್ವಲ್ಪ ನೋಡುವ.

**ಮೋಂಟೇಸರಿ ಪದ್ಧತಿ**

ಕೆಲವು ಸಾಮಗ್ರಿಗಳನ್ನು ಕೊಟ್ಟು ಸ್ವತಂತ್ರ ರೀತಿಯಿಂದ ಆಡಲಿಕ್ಕೆ ಮಕ್ಕಳನ್ನು ಬಿಟ್ಟುಬಿಡುವದು ಈ ಪದ್ಧತಿಯ ಮುಖ್ಯ ಲಕ್ಷಣ. ಬೇರೆ ಬೇರೆ ಆಕಾರದ ಕಟ್ಟಿಗೆಯ ತುಂಡು, ಉಣ್ಣೆಯ ಚಂಡು, ಪೆಟ್ಟಿಗೆ, ಹಲಿಗೆ, ದಾರ,

ಚಿತ್ರ ಮುಂತಾದ ಸಾಮಾನುಗಳನ್ನು ಆಡಲಿಕ್ಕೆ ಕೊಡುವರು. ಇವುಗಳಿಗೆ "ಬೋಧನದ ಉಪಕರಣಗಳು" (Didactic Apparatus) ಎಂದು ಅನ್ನುವರು. ಶಿಕ್ಷಕಿಯು ಮಕ್ಕಳ ಸ್ವತಂತ್ರವೃತ್ತಿಗೆ ಅಡ್ಡಬಾರದೇ ಇರುವುದರಿಂದ ಸ್ವಾವಲಂಬನೆ, ಸ್ವಂತ ವಿಚಾರ, ಮತ್ತು ಉದ್ಯೋಗಪ್ರಿಯತೆಗಳು ಅವರಲ್ಲಿ ನೆಲೆಗೊಳ್ಳುವವು. ಮೋಂಟೇಸರಿ ಸಾಲೆಯಲ್ಲಿ ಜ್ಞಾನೇಂದ್ರಿಯಗಳ ತರಬೇತಿಗೆ ಹೆಚ್ಚು ಬೆಲೆ ಕೊಡುತ್ತಾರೆ. ಓದು ಬರೆಹ ಲೆಕ್ಕಗಳನ್ನು ಆಟದ ಮುಖಾಂತರವೇ ಕಲಿಸುತ್ತಾರೆ. "ಇದನ್ನು ಮಾಡು! ಇದನ್ನು ಬಿಡು!" ಎಂದು ಶಿಕ್ಷಕಿಯು ಮಕ್ಕಳಿಗೆ ಎಂದೂ ಉಪದೇಶಿಸುವದಿಲ್ಲ. ಅವರು ತಪ್ಪಿ ನಡೆದರೆ ದಂಡ ಹೇರುವದಿಲ್ಲ. ತಮ್ಮ ತಪ್ಪು ನಡತೆಯನ್ನು ಅನ್ಯರು ಮೆಚ್ಚುವದಿಲ್ಲವೆಂದು ತಿಳಿದು ಮುಂದೆ ಅವರು ಹಾಗೆ ವರ್ತಿಸುವದನ್ನು ತಾವಾಗಿಯೇ ಬಿಟ್ಟು ಬಿಡುತ್ತಾರೆ. ವ್ಯಕ್ತಿತ್ವದ ಬೆಳವಣಿಗೆಗೆ ಸ್ವಾತಂತ್ರ್ಯವೇ ಮೂಲ ಎಂಬುದು ಡಾ. ಮೋಂಟೇಸರಿಯ ಬೀಜಮಂತ್ರ. ಅವಳ ದೃಷ್ಟಿಯಲ್ಲಿ ಶಿಕ್ಷಕಿಯು "ನಿರೀಕ್ಷಕಳು" ಆದರೆ ಉಪದೇಶಕಳು ಅಲ್ಲ. ಫ್ರೊಬೆಲ್‌ನ ಕಿಂಡರ ಗಾರ್ಟನ್ ("ಮಕ್ಕಳ ತೋಟ") ಸಾಲೆಯಲ್ಲಿ ಕೂಡ ಚಿಕ್ಕ ಮಕ್ಕಳು ಆಟಗಳ ಮುಖಾಂತರವೇ ಶಿಕ್ಷಣವನ್ನು ಹೊಂದುತ್ತಾರೆ.

## ಡಾಲ್ಟನ್ ಪದ್ಧತಿ

ಇಲ್ಲಿ ಸಂಪ್ರದಾಯದ ವೇಳಾಪತ್ರಿಕೆ ಮತ್ತು ವರ್ಗರಚನೆಗಳು ಇರುವದಿಲ್ಲ. ವಿದ್ಯಾರ್ಥಿಗಳು ತಮತಮಗೆ ಬೇಕಾದ ವಿಷಯಗಳನ್ನು ಅಭ್ಯಾಸ ಪತ್ರಿಕೆಯಿಂದ ಆರಿಸಿಕೊಳ್ಳುತ್ತಾರೆ. ಆದರೆ ಆರಿಸಿಕೊಂಡ ವಿಷಯವನ್ನು ಇಂತಿಷ್ಟು ದಿವಸಗಳಲ್ಲಿ ಮುಗಿಸುವ ಹೊಣೆಗಾರಿಕೆ ಅವರ ಮೇಲೆ ಇರುತ್ತದೆ. ಶಿಕ್ಷಕನು ಅವರ ಸಲಹೆಗಾರ, ಮಾರ್ಗದರ್ಶಕ. ಸಾಲೆಯಲ್ಲಿ ವರ್ಗದ ಪ್ರಕಾರ ಕೋಣೆಗಳು ಇರದೆ ವಿಷಯಗಳ ಪ್ರಕಾರ ಇರುತ್ತವೆ. ತನ್ನ ಅನುಕೂಲತೆಯ ಪ್ರಕಾರ ವಿದ್ಯಾರ್ಥಿಯು ಇತಿಹಾಸದ ಕೋಣೆಗೆ, ಇಲ್ಲವೆ ಭೂಗೋಲ ಕೋಣೆಗೆ, ಇಲ್ಲವೆ ಸಾಯನ್ಸ ಕೋಣೆಗೆ ಹೋಗಿ ಅಲ್ಲಿ ಕೆಲವು ವೇಳೆಯ ವರೆಗೆ ಅಭ್ಯಾಸ ನಡೆಸುತ್ತಾನೆ. ಆ ಕೋಣೆಯಲ್ಲಿ ಇದ್ದ ಶಿಕ್ಷಕನ ಮತ್ತು ಲಾಯಬ್ರರಿಯ ಸಹಾಯ ಪಡೆಯುತ್ತಾನೆ. ತನಗೆ ಸಾಕು ಎನಿಸಿದಾಗ ಒಂದು ಕೋಣೆಯನ್ನು

ಬಿಟ್ಟು ಮತ್ತೊಂದಕ್ಕೆ ತೆರಳುತ್ತಾನೆ. ಡಾಲ್ಟನ್ ಪದ್ಧತಿಯಲ್ಲಿ ವಿದ್ಯಾರ್ಥಿಗಳು ಸ್ವತಂತ್ರ ರೀತಿಯಿಂದ ಮತ್ತು ಸ್ವಯಂಪ್ರೇರಣೆಯಿಂದ ಕಲಿಯುತ್ತಾರೆ.

## ಪ್ರೊಜಕ್ಟ ಪದ್ಧತಿ

ಅಮೇರಿಕೆಯ ಪ್ರೊಫೆಸರ್ ಕಿಲ್‌ಪ್ಯಾಟ್ರಿಕ್‌ನು ಇದನ್ನು ಪ್ರಸಿದ್ಧಿಗೆ ತಂದಿರುವನು. ಸಮಾಜದ ಸನ್ನಿವೇಶದ ಮುಖಾಂತರ ಅಭ್ಯಾಸವನ್ನು ನಡೆಸುವದು ಈ ಪದ್ಧತಿಯ ಮುಖ್ಯ ಲಕ್ಷಣ. ಅಂಗಡಿ, ಓಣಿ, ಅಂಚೆಕಚೇರಿ, ಹೊಲ, ಸ್ಟೇಶನ್ ಮೊದಲಾದ ವಿಷಯಕ್ಕೆ ಸಂಬಂಧಿಸಿದ ಒಂದು ಸಂಗತಿಯನ್ನು ಆರಿಸಿಕೊಂಡು ಅದರ ಸುತ್ತಲು ಅಭ್ಯಾಸಕ್ರಮದ ಅನೇಕ ವಿಷಯಗಳನ್ನು ಹೆಣೆಯುತ್ತಾರೆ. ಕೋಣೆಯಲ್ಲಿ ಕುಳಿತು ಪಠ್ಯಪುಸ್ತಕದ ಪುಟಗಳನ್ನು ತಿರಿಪಿ ಹಾಕುವದು ಈ ಪದ್ಧತಿಗೆ · ಹೊರತಾದುದು. ಒಂದು ಯೋಜನೆಯನ್ನು ಕೈಕೊಂಡು ವಿದ್ಯಾರ್ಥಿಗಳು ಅದರ ಮುಖಾಂತರ ವಿದ್ಯಾರ್ಥಿಗಳು ಪ್ರತ್ಯಕ್ಷ ಅನುಭವವನ್ನು ಪಡೆಯುತ್ತಾರೆ. ಪೋಸ್ಟ ಆಫೀಸಿನ ಯೋಜನೆಯಲ್ಲಿ ಕೆಲವು ಹುಡುಗರು ಪೋಸ್ಟ ಪೆಟ್ಟಿಗೆಯನ್ನು ತಯಾರಿಸುವರು, ಕೆಲವರು ಪತ್ರಗಳನ್ನು ಬರೆಯುವರು, ಬೇರೆ ಕೆಲವರು ಆ ಪತ್ರಗಳನ್ನು ಹಂಚುವರು, ಮತ್ತು ಜೊತೆಗೆ ಓದು ಬರೆಹ ಲೆಕ್ಕವನ್ನೂ ಆಟದ ರೂಪದಲ್ಲಿ ಕಲಿಯುವರು. ಲೆಕ್ಕವನ್ನು ಕಲಿಸುವಾಗ ವಿದ್ಯಾರ್ಥಿಗಳೇ ನಡೆಸುವ ಅಂಗಡಿಯಲ್ಲಿ ಪ್ರತ್ಯಕ್ಷ ವ್ಯವಹಾರವನ್ನು ಸಾಗಿಸುವದು; ಸಾಯನ್ಸ ಕಲಿಸುವಾಗ ಪ್ರಯೋಗ ನಡೆಯಿಸಿ ಸಿದ್ಧಾಂತಗಳನ್ನು ಹುಡುಗರೇ ಕಂಡುಹಿಡಿಯುವದು; ಸಮಾಜದ ಅಭ್ಯಾಸಗಳನ್ನು ಸಾಗಿಸುವಾಗ ಹುಡುಗರಿಂದ ಚಿತ್ರ ತೆಗೆಯಿಸುವದು, ನಟನೆ ಮಾಡಿಸುವದು, ಅರಲಿನ ಮಾರ್ಗಗಳನ್ನು ರಚಿಸುವದು; ಸಂತೆಯಲ್ಲಿ ಹೋಗಿ ವ್ಯಾಪಾರಿಗಳಿಂದ ಅವರು ತರಿಸುವ ಮತ್ತು ಕಳಿಸುವ ಸಾಮಾನುಗಳ ಬಗ್ಗೆ ಸಂಗತಿಗಳನ್ನು ಕಲೆಹಾಕುವದು ಮತ್ತು ಮುನಿಸಿಪಲ್ ಕಚೇರಿಗೆ ಹೋಗಿ ಊರ ಆಡಳಿತೆಯನ್ನು ತಿಳಿದುಕೊಳ್ಳುವದು; ಭಾಷಾ ವಿಷಯವನ್ನು ಕಲಿಸುವಾಗ ವಿದ್ಯಾರ್ಥಿಗಳಿಂದ ವರ್ಣನೆಗಳನ್ನು, ಕಥೆಗಳನ್ನು ಕವನಗಳನ್ನು, ಪತ್ರಗಳನ್ನು ಬರೆಯಿಸುವದು— ಇವೆಲ್ಲವು ಯೋಜನಾಪದ್ಧತಿಯ ಕೆಲವು ಉದಾಹರಣೆಗಳು. ಉದ್ದೇಶಪೂರ್ವಕವಾಗಿ ಒಂದು ಕೆಲಸವನ್ನು ಕೈಕೊಂಡು ಅದನ್ನು ಈಡೇರಿಸುವದೇ ಈ ಪದ್ಧತಿಯ ಮುಖ್ಯ ಲಕ್ಷಣ.

ಉದ್ದೇಶವಿದ್ದಲ್ಲಿ ಉತ್ಸಾಹವುಂಟು; ಉತ್ಸಾಹವಿದ್ದಲ್ಲಿ ಆಟವುಂಟು. ಹುಡುಗರು ಕೈಕೊಳ್ಳುವ ಯೋಜನೆಗಳು ದೊಡ್ಡವರ ಉದ್ಯೋಗಗಳ ಅಣಕವಲ್ಲ. ಒಂದು ಉದ್ದೇಶ ಸಾಧನೆಗಾಗಿ ಚಟುವಟಿಕೆಗಳ ಮುಖಾಂತರ ಶಿಕ್ಷಣವನ್ನು ಕೊಡುವದೇ ಪ್ರೊಜಕ್ಟ ಪದ್ಧತಿ.

## ಹ್ಯುರಿಸ್ಟಿಕ್ ಪದ್ಧತಿ (Heuristic Method)

ಸಾಯನ್ಸ ವಿಷಯವನ್ನು ಕಲಿಸುವಾಗ ಈ ಪದ್ಧತಿಯನ್ನು ಅನುಸರಿಸ ಬೇಕೆಂದು ಪ್ರೊಫೆಸರ್ ಆರ್ಮಸ್ಟ್ರಾಂಗ್‌ನು ಹೇಳುತ್ತಾನೆ. ವಿಜ್ಞಾನದ ತತ್ವ ಗಳನ್ನು ಹುಡುಕಿದ ಮೂಲ ಸಂಶೋಧಕನಂತೆ ನಿರೀಕ್ಷಣೆ ಮತ್ತು ಪ್ರಯೋಗ ಗಳಿಂದ ಸಾಮಾನ್ಯ ನಿಯಮಗಳನ್ನು ಕಂಡುಹಿಡಿಯಲು ವಿದ್ಯಾರ್ಥಿಗಳನ್ನು ಹಚ್ಚುವದೇ ಈ ಪದ್ಧತಿಯ ವೈಶಿಷ್ಟ್ಯ. ಹುಡುಗರಲ್ಲಿ ಈ ಸಂಶೋಧನ ದೃಷ್ಟಿಯು ಬೆಳೆದರೆ ಅವರು ವಿಷಯದಲ್ಲಿ ಬೆರೆತುಹೋಗುವರು. ಮೂಲ ಸಂಶೋಧಕನಂತೆ ವಿದ್ಯಾರ್ಥಿಗಳನ್ನು ಕುತೂಹಲ ಪ್ರೇರಿತರನ್ನಾಗಿ ಮಾಡುವದು ಮತ್ತು ವಿಷಯ ದಲ್ಲಿ ಅಭಿರುಚಿ ಉಳ್ಳವರನ್ನಾಗಿ ಮಾಡುವದು ಆಟದ ಪದ್ಧತಿಯೇ ಆಗಿದೆ. ಈ ಸಂಶೋಧಕ ಪದ್ಧತಿಯನ್ನು ಭೂಮಿತಿ, ವ್ಯಾಕರಣ ಮೊದಲಾದ ವಿಷಯ ಗಳನ್ನು ಕಲಿಸುವಾಗಲೂ ಉಪಯೋಗಿಸಬೇಕು.

## ಶೀಲ ಶಿಕ್ಷಣ (Character Education)

ಮಕ್ಕಳ ಶೀಲಶಿಕ್ಷಣದಲ್ಲಿಯೂ ಆಟದ ಪದ್ಧತಿಯನ್ನು ಹಿಂಬಾಲಿಸ ಬೇಕೆಂದು ಈಗಿನ ಶಿಕ್ಷಣ ತಜ್ಞರು ಹೇಳುತ್ತಾರೆ. ಸಾಲೆಯಲ್ಲಿ ವೇಳಾಪತ್ರಿಕೆ ಯಲ್ಲಿ ಒಂದು ಅವಧಿಯನ್ನು ಕಾದಿಟ್ಟು ವಾರಕ್ಕೆ ಒಮ್ಮೆ ನೀತಿಯ ಪಾಠಗಳನ್ನು ಕೊಡುವುದರಿಂದ ಏನೂ ಪ್ರಯೋಜನವಾಗುವದಿಲ್ಲವೆಂದು ಪ್ರಯೋಗದಿಂದ ಕಂಡುಹಿಡಿದಿದ್ದಾರೆ. ಮಕ್ಕಳ ನಡತೆಯನ್ನು ತಿದ್ದಲಿಕ್ಕೆ ಉಪದೇಶ, ಅಧಿಕಾರವಾಣಿ ಮತ್ತು ದಂಡಗಳು ಅಷ್ಟೊಂದು ಪರಿಣಾಮಕಾರಕವಲ್ಲ. ಶಿಕ್ಷಕನು ತನ್ನ ನಡೆನುಡಿಗಳಿಂದ ಸರಿಯಾದ ಹಾದಿಯನ್ನು ಸೂಚಿಸಬೇಕು. ಪ್ರಾಮಾಣಿಕತನ, ನಿಯಮಿತತನ, ನಿಷ್ಪಕ್ಷಪಾತತನ, ವಿಶಾಲಹೃದಯತೆ ಸದಭಿಮಾನ, ಸ್ವಚ್ಛತೆ, ಓರಣ ಮೊದಲಾದ ಒಳ್ಳೆಯ ಗುಣಗಳನ್ನು ಮಕ್ಕಳು ಕೇಳಿ ಕಲಿಯುವದಕ್ಕಿಂತ ನೋಡಿ ಮತ್ತು ಓದಿ ಕಲಿಯುವದೇ ಹೆಚ್ಚು.

ಶಿಕ್ಷಕನ ಮನೋದೃಷ್ಟಿ ಒಲವು, ಅಭಿಪ್ರಾಯ, ಮತ್ತು ಘೋರಣೆಗಳನ್ನು ವಿದ್ಯಾರ್ಥಿಗಳು ಸ್ವಾಭಾವಿಕವಾಗಿ ಸ್ವೀಕರಿಸುತ್ತಾರೆ. ಸತ್ಪುರುಷರ ಜೀವನ ಚರಿತ್ರೆಗಳೂ ಮಕ್ಕಳ ಮೇಲೆ ಪರಿಣಾಮವನ್ನು ಮಾಡುತ್ತವೆ. ಆದುದರಿಂದ ಪಠ್ಯ ಪುಸ್ತಕಗಳಲ್ಲಿ ಇಂಥವರ ಕತೆಗಳನ್ನು ಸೇರಿಸಬೇಕು. ನೀತಿ ಶಿಕ್ಷಣಕ್ಕೆ ಈ ಬಗೆಯ ಅಪ್ರತ್ಯಕ್ಷ ಪದ್ಧತಿಯು ಆಟದ ಪದ್ಧತಿಯೇ ಆಗಿದೆ. ಏಕೆಂದರೆ ಇಲ್ಲಿ ಮಗುವು ಆದರ್ಶಪುರುಷರ ಉದಾಹರಣೆಗಳನ್ನು ನೋಡಿ ಸ್ವಯಂಪ್ರೇರಣೆ ಯಿಂದ ತನ್ನ ನಡೆನುಡಿಗಳನ್ನು ತಿದ್ದಿಕೊಳ್ಳುತ್ತಾನೆ; ಹೀಗೆಯೇ ಇರಬೇಕೆಂದು ಅವನನ್ನು ಯಾರೂ ಒತ್ತಾಯಪಡಿಸುವದಿಲ್ಲ. ಸಾಲೆಯಲ್ಲಿ ಲೋಕಸತ್ತೆಯ ಸಂಘಗಳನ್ನು ಸ್ಥಾಪಿಸಿ ಅವುಗಳ ಮುಖಾಂತರ ವಿದ್ಯಾರ್ಥಿಗಳಿಗೆ ನಾಗರಿಕ ಶಿಕ್ಷಣವನ್ನು ಕೊಡುವದು ಇಂಗ್ಲಂಡ ಅಮೇರಿಕೆಯಲ್ಲಿ ಕಂಡುಬರುತ್ತದೆ. ಈ ಸಂಘದ ನಿಯಮಗಳನ್ನು ವಿದ್ಯಾರ್ಥಿಗಳೇ ತಯಾರಿಸುತ್ತಾರೆ. ಯಾವನಾದ ರೊಬ್ಬ ವಿದ್ಯಾರ್ಥಿಯು ಸಂಘದ ನಿಯಮಗಳನ್ನು ಉಲ್ಲಂಘಿಸಿದರೆ ವಿದ್ಯಾರ್ಥಿ ಪಾರ್ಲಿಮೆಂಟಿನವರೇ ಅದರ ವಿಚಾರಣೆಯನ್ನು ನಡೆಯಿಸಿ ತಪ್ಪು ದಂಡವನ್ನು ಕಟ್ಟುತ್ತಾರೆ. ಶಿಕ್ಷಕನು ಕೇವಲ ಮೇಲುವಿಚಾರಕನಾಗಿ ಇರುತ್ತಾನೆ. ತಾವಾಗಿಯೇ ನಡೆಯಿಸುವ ಸಂಸ್ಥೆಗಳಲ್ಲಿ ವಿದ್ಯಾರ್ಥಿಗಳ ಅಂತಃಪ್ರೇರಣೆಗಳಾದ ಆತ್ಮಪ್ರತಿಷ್ಠೆ, ವಿಧೇಯತೆ, ಕ್ರೋಧ, ಪಾಲನ ಮತ್ತು ಸಂಘಪ್ರೇರಣೆಗಳು ಉದಾತ್ತಗೊಳ್ಳುತ್ತವೆ. ಸಾಮಾನ್ಯ ಆಟಗಳಲ್ಲಿಯೂ ಮತ್ತು ಸ್ಕಾವುಟ ಚಟುವಟಿಕೆಗಳಲ್ಲಿಯೂ ಮಕ್ಕಳ ನಡತೆಯು ಹದಗೊಳ್ಳುತ್ತದೆ. ಸಂಘಾಭಿಮಾನ, ಸಹಕಾರ, ಮುಂದಾಳುತನ,ಅನುಯಾಯಿತನ, ಧೈರ್ಯ, ಸಾಹಸ, ಪರೋಪಕಾರ ಪ್ರಾಮಾಣಿಕತನ ಮೊದಲಾದ ಸದ್ಗುಣಗಳು ಇಲ್ಲಿ ಪೋಷಿಸಲ್ಪಡುತ್ತವೆ. ಈ ಚಟುವಟಿಕೆಗಳಲ್ಲಿ ನೀತಿಶಿಕ್ಷಣದೊಡನೆ ಬುದ್ಧಿ ಶಿಕ್ಷಣವೂ ದೊರಕುವದು. ಎಣಿಕೆ ಕೊಡುವ ಪ್ರಸಂಗವು ಬರುವುದರಿಂದ ಲೆಕ್ಕದ ಪರಿಚಯ, ತಿರುಗಾಡು ವದರಿಂದ ಭೂಗೋಲ ಪರಿಚಯ, ನಟನೆಯಿಂದ ಇತಿಹಾಸ ಪರಿಚಯ, ವರ್ಣನೆಯಿಂದ ಭಾಷಾ ಬೆಳವಣಿಗೆ, ಸಂಶೋಧನೆಯಿಂದ ಸಾಯನ್ಸ ಪರಿಚಯ ಹೀಗೆ ಅಭ್ಯಾಸಕ್ರಮದ ಎಲ್ಲ ವಿಷಯಗಳನ್ನು ಈ ಚಟುವಟಿಕೆಗಳ ಮುಖಾಂತರ ಕಲಿಸಬಹುದು. ಶಿಕ್ಷಕನು ಆಟದ ತತ್ವಗಳನ್ನು ಚನ್ನಾಗಿ ತಿಳಿದುಕೊಂಡಿದ್ದರೆ ಸಾಲೆಯ ವಿಷಯಗಳನ್ನು ಹೇಗೆ ಆಟದ ಪದ್ಧತಿಯಿಂದ ಕಲಿಸಬಹುದು

ಎಂಬುದು ತಾನೇ ಹೊಳೆಯುವದು. ಸಾಮಾನ್ಯವಾಗಿ ಗಣಿತ ಕಲಿಸುವಾಗ ಪ್ರೊಜೆಕ್ಟ ಪದ್ಧತಿಯನ್ನು, ಸಾಯನ್ಸ ಕಲಿಸುವಾಗ ಹ್ಯುರಿಸ್ಟಿಕ್ ಪದ್ಧತಿಯನ್ನು, ಸಮಾಜದ ಅಭ್ಯಾಸಗಳನ್ನು ಮಾಡಿಸುವಾಗ ಡಾಲ್ಟನ್ ಪದ್ಧತಿಯನ್ನು ಮತ್ತು ನೀತಿಯನ್ನು ಕಲಿಸುವಾಗ ಚರಿತ್ರೆ ಮತ್ತು ಸನ್ನಿವೇಶ ಪದ್ಧತಿಯನ್ನು ಉಪಯೋಗಿಸಬಹುದು. ಭಾಷಾವಿಷಯವನ್ನು ಕಲಿಸುವಾಗ ವಿದ್ಯಾರ್ಥಿಗಳಿಂದ ಚಿತ್ರಗಳನ್ನು ತೆಗೆಯಿಸುವದು, ಪಾಠಗಳಲ್ಲಿಯ ಪಾತ್ರಗಳನ್ನು ಅಭಿನಯಿಸುವದು, ಬಿಟ್ಟ ಶಬ್ದಗಳನ್ನು ತುಂಬಿಸುವದು, ಕೆಲವು ಸಂಗತಿಗಳನ್ನು ಕೊಟ್ಟು ಕತೆಯನ್ನು ಕಟ್ಟಿಸುವದು, ಸಂಭಾಷಣೆಗಳನ್ನು ಮಾಡಿಸುವದು, ಅಕ್ರಮವಾಗಿ ಬರೆದ ಶಬ್ದಗಳಿಂದ ವಾಕ್ಯಗಳನ್ನು ಹೊಂದಿಸುವದು, ಮುಂತಾದ ಅಭ್ಯಸನಗಳು ಆಟದ ಪದ್ಧತಿಯ ಉದಾಹರಣೆಗಳು. ಇದರಂತೆ ಇತರ ವಿಷಯಗಳನ್ನು ಕಲಿಸುವಾಗ ಕೈಕೆಲಸದ ಸಾಮಾನುಗಳನ್ನು ಮಾಡಿಸುವದು, ವಿಚಿತ್ರ ವಸ್ತುಗಳನ್ನು ಮತ್ತು ಹಳೆಯ ನಾಣ್ಯಗಳನ್ನು ಕಲೆಹಾಕುವದು, ಭಾಷಣ ಮತ್ತು ಲೇಖನ ಸ್ಪರ್ಧೆಗಳನ್ನು ಏರ್ಪಡಿಸುವದು ಮೊದಲಾದವು ಸಹ ಆಟದ ಪದ್ಧತಿಯ ಉದಾಹರಣೆಗಳು. ಹೀಗೆ ಪ್ರತಿನಿತ್ಯದ ಸಾಲೆಯ ಕಾರ್ಯಕ್ರಮದಲ್ಲಿ ಆಟದ ಪದ್ಧತಿಯನ್ನು ಯಾವ ರೀತಿಯಾಗಿ ಹಚ್ಚಬೇಕು ಎಂಬುದನ್ನು ಶಿಕ್ಷಕನು ಸ್ವಂತ ವಿಚಾರಿಸಿ ಯೋಚಿಸಬೇಕು. ಆಟದ ಎರಡು ಮುಖ್ಯ ಲಕ್ಷಣಗಳೆಂದರೆ ಸ್ವಯಂಪ್ರೇರಣೆ ಮತ್ತು ಚಟುವಟಿಕೆ. ಇದನ್ನು ನೆನಪಿನಲ್ಲಿ ಇಟ್ಟುಕೊಂಡು ಶಿಕ್ಷಕನು ತಾನು ಕಲಿಸುವ ಪದ್ಧತಿಯನ್ನು ಯೋಚಿಸಿದರೆ ಅವನ ಪಾಠವು ಆಟವಾಗುವದು. ವರ್ಗದ ಕೋಣೆಯಲ್ಲಿ ವಿದ್ಯಾರ್ಥಿಗಳು ಸುಮ್ಮನೆ ಕೂತು ಕೇಳುವದು ಕಲಿಯುವಿಕೆಯೇ ಅಲ್ಲ.ಮತ್ತು ಕೈಯಲ್ಲಿ ಪುಸ್ತಕ ಹಿಡಿದು ಶಿಕ್ಷಕನು ಭಾಷಣ ಹೇಳುವದು ಕಲಿಸುವಿಕೆಯೇ ಅಲ್ಲ. ಇವು ಆಟದ ಪದ್ಧತಿಗೆ ವಿರೋಧವಾದವು. ಒಟ್ಟಿನ ಮೇಲೆ ಮಕ್ಕಳಲ್ಲಿ ಉತ್ಸಾಹವನ್ನು ತುಂಬುವ ಚಟುವಟಿಕೆಗಳನ್ನು ಅವರಿಂದಲೇ ಮಾಡಿಸುವದು ಆಟದ ಪದ್ಧತಿ.

ಮಕ್ಕಳಿಗೆ ಶಿಕ್ಷಣವನ್ನು ಕೊಡುವಾಗ ಆಟದ ತತ್ವಗಳನ್ನೇ ಅವಲಂಬಿಸಬೇಕು ಎಂಬು ಹೇಳುವಲ್ಲಿ ಇನ್ನೂ ಹೆಚ್ಚಿನ ಸಂಗತಿಗಳು ಅಡಕವಾಗಿವೆ. ಪಾಲಕರು ಮತ್ತು ಶಿಕ್ಷಕರು ಮಕ್ಕಳ ಮೇಲೆ ತಮ್ಮ ಅಧಿಕಾರ ನಡೆಯಿಸುವದನ್ನು ಕಡಿಮೆ ಮಾಡಬೇಕು. ಅಭ್ಯಾಸದ ಮತ್ತು ನಡತೆಯ ಹೊಣೆಯನ್ನು ಮಕ್ಕಳ

ಮೇಲೆಯೇ ಹಾಕಬೇಕು. ಮಕ್ಕಳು ಸಾಲೆಯ ಪದ್ಧತಿಗೆ ಹೊಂದಿಕೊಳ್ಳ ಬೇಕೆಂದು ಅಪೇಕ್ಷಿಸದೆ, ಸಾಲೆಯ ಪದ್ಧತಿಯು ಮಕ್ಕಳಿಗೆ ಹೊಂದಿಕೆಯಾಗು ವಂತೆ ಸರಿಪಡಿಸಬೇಕು. ಸಾಲೆಯ ಕೋಣೆಯಲ್ಲಿ ಕೂತು ಕಲಿಯುವದು ಮಾತ್ರ ಅಭ್ಯಾಸವೆಂದು ಮತ್ತು ಬಯಲಲ್ಲಿ ಆಡುವದು ಮಾತ್ರ ಆಟವೆಂದು ಸಾಮಾನ್ಯ ಜನರು ಮಾಡುವ ವ್ಯತ್ಯಾಸವನ್ನು ಹೋಗಲಾಡಿಸುವದೇ ಈಗಿನ ಆಂದೋಲನ ಗಳ ಉದ್ದೇಶ. ಹೊಸ ಶಿಕ್ಷಣ ತತ್ವದ ಮೇರೆಗೆ "ಸಾಲೆಯು ಚಪ್ಪರವಿದ್ದ ಆಟದ ಬಯಲು; ಮತ್ತು ಆಟದ ಬಯಲು ಚಪ್ಪರವಿಲ್ಲದ ಸಾಲೆ."

ಮಗುವಿನ ಕಲಿಯುವಿಕೆಗೆ ಅವನ ಅಂತಃಪ್ರೇರಣೆಯೇ ಮೂಲ ಕಾರಣ ವೆಂದು ಈ ಅಧ್ಯಾಯದಲ್ಲಿ ತೋರಿಸಲಾಗಿದೆ. ಆದರೆ ಅದಕ್ಕೆ ಬಾಹ್ಯ ಪರಿಸ್ಥಿತಿಯೂ ಅನುಕೂಲವಾದರೆ ಅವನ ಶಿಕ್ಷಣಕ್ಕೆ ಮತ್ತಿಷ್ಟು ಕಳೆ ಬರುವ ದೆಂಬುದನ್ನು ಮುಂದಿನ ಅಧ್ಯಾಯದಲ್ಲಿ ವಿವರಿಸಲಾಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಪ್ರೇರಣೆಗಳ ಮುಖ್ಯ ಕಾರ್ಯಗಳು ಯಾವವು? ಉದಾಹರಣೆ ಕೊಟ್ಟು ವಿವರಿಸಿರಿ.

೨. ಮುಖ್ಯವಾದ ಎರಡು ವೈಯಕ್ತಿಕ ಅಥವಾ ಶಾರೀರಿಕ ಪ್ರೇರಣೆಗಳ ಹೆಸರುಗಳನ್ನು ಹೇಳಿರಿ. ಮತ್ತು ಅವು ಎಂಥ ಚಟುವಟಿಕೆಗಳಲ್ಲಿ ವ್ಯಕ್ತವಾಗುವವು ಎಂಬುದನ್ನು ವಿವರಿಸಿರಿ.

೩. ಮುಖ್ಯವಾದ ಎರಡು ಸಾಮಾಜಿಕ ಪ್ರೇರಣೆಗಳ ಹೆಸರುಗಳನ್ನು ಹೇಳಿರಿ. ಮತ್ತು ಅವು ಎಂಥ ಚಟುವಟಿಕೆಗಳಲ್ಲಿ ಕಾಣಿಸಿಕೊಳ್ಳು ವವು ಎಂಬುದನ್ನು ಚರ್ಚಿಸಿರಿ. ಶಿಕ್ಷಣದಲ್ಲಿ ಅವುಗಳನ್ನು ಹೇಗೆ ಉಪಯೋಗಿಸಬಹುದು ಎಂಬುದನ್ನು ತೋರಿಸಿರಿ.

೪. ರಚನೆ, ಕುತೂಹಲ ಮತ್ತು ಆತ್ಮಪ್ರತಿಷ್ಠೆ, ಈ ಪ್ರೇರಣೆಗಳನ್ನು ಸಾಲೆಯ ಚಟುವಟಿಕೆಗಳಲ್ಲಿ ಹೇಗೆ ಉಪಯೋಗಿಸಬಹುದು ಎಂಬುದನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೨೫. ಕಲಿಯುವಿಕೆಗೆ ಸ್ವಯಂಪ್ರೇರಣೆಯೇ ಮುಖ್ಯ ಕಾರಣವಾದ್ದರಿಂದ ಒತ್ತಾಯದಿಂದ ಕಲಿಸುವವರಲ್ಲಿ ಪ್ರಯೋಜನವಿಲ್ಲ ಎಂಬ ತತ್ತ್ವವನ್ನು ಉದಾಹರಣೆ ಕೊಟ್ಟು ವಿವರವಾಗಿ ಹೇಳಿರಿ.

೬. "ಕುದುರೆಯನ್ನು ನೀನು ಕೆರೆಗೆ ಒಯ್ಯಬಹುದು ಆದರೆ ಅದು ನೀರು ಕುಡಿಯುವಂತೆ ಮಾಡುವದು ನಿನಗೆ ಶಕ್ಯವಿಲ್ಲ". ಈ ಮಾತಿನ ಅರ್ಥವನ್ನು ಈ ಅಧ್ಯಾಯದಲ್ಲಿ ವಿವರಿಸಿದ ಶಿಕ್ಷಣ ತತ್ತ್ವಕ್ಕೆ ಸಂಬಧಿಸಿ ಸ್ಪಷ್ಟ ಮಾಡಿರಿ.

೭. "ಸ್ವಾಭಾವಿಕ ಅಭಿರುಚಿಗಳು" ಎಂದು ಯಾವುದು ? ಕರೆಯುವಿರಿ? ಮಕ್ಕಳಲ್ಲಿ ಕಂಡುಬರುವ "ಸ್ವಾಭಾವಿಕ ಅಭಿರುಚಿಗಳ" ಎರಡು ಉದಾಹರಣೆಗಳನ್ನು ಕೊಡಿರಿ.

೮. ಮಕ್ಕಳ ಮುಖ್ಯ ಅಭಿರುಚಿಗಳ ಯಾದಿಯನ್ನು ಈ ಅಧ್ಯಾಯದಲ್ಲಿ ಕೊಟ್ಟಿದೆ. ನಿಮ್ಮ ಅಭಿಪ್ರಾಯದ ಪ್ರಕಾರ ಇವು ಎಷ್ಟರಮಟ್ಟಿಗೆ ಸರಿ ಇರುತ್ತವೆ ? ನಿಮ್ಮ ಶಾಲೆಯ ವಿದ್ಯಾರ್ಥಿಗಳ ಅಭಿರುಚಿಗಳನ್ನು ಕುರಿತು ಒಂದು ಯಾದಿಯನ್ನು ತಯಾರಿಸಿರಿ.

(ವಿ. ಸೂ.:—ಒಂದು ಚಿಕ್ಕ ಪ್ರಯೋಗವನ್ನು ಮಾಡಿ ಈ ಯಾದಿಯನ್ನು ತಯಾರಿಸಬಹುದು. ಶಿಕ್ಷಕನು ತನ್ನ ಅನುಭವದಿಂದ ಕಲ್ಪಿಸಿ ಮಕ್ಕಳಿಗೆ ಅಭಿರುಚಿ ಎನಿಸಬಹುದಾದ ಸಣ್ಣ ಸಣ್ಣ ವಿಷಯಗಳನ್ನು ಸೇರಿಸಿ ಒಂದು ದೊಡ್ಡ ಯಾದಿಯನ್ನು ಮಾಡಬೇಕು. ಅದನ್ನು ಬೇರೆ ಬೇರೆ ವರ್ಗದ ವಿದ್ಯಾರ್ಥಿಗಳಿಗೆ ಕೊಟ್ಟು ಆ ವಿಷಯಗಳಲ್ಲಿ ತಮತಮಗೆ (ಹುಡುಗರಿಗೆ) ಯಾವುದು ಹೆಚ್ಚು ಅಭಿರುಚಿ ಉಳ್ಳದ್ದು ಯಾವುದು ಸಾಧಾರಣ ಅಭಿರುಚಿ ಉಳ್ಳದ್ದು ಮತ್ತು ಯಾವುದರಲ್ಲಿ ಅಭಿರುಚಿ ಇಲ್ಲ ಎಂಬುದನ್ನು ಅನುಕ್ರಮವಾಗಿ ಗುರುತಿಸಲು ಹೇಳಬೇಕು. ಹೀಗೆ ಆರಿಸಿದ ವಿಷಯಗಳ ಆಧಾರದ ಮೇಲಿಂದ ಶಿಕ್ಷಕನು ವಿದ್ಯಾರ್ಥಿಗಳ ಅಭಿರುಚಿಗಳ ಒಂದು ಯಾದಿಯನ್ನು ತಯಾರಿಸಬಹುದು.)

೯. ಈಗಿರುವ ಕನ್ನಡ ವಾಚನ ಪಠ್ಯ ಪುಸ್ತಕಗಳಲ್ಲಿ ಕೊಟ್ಟಿರುವ ಅಭ್ಯಸನಗಳು ಎಷ್ಟರ ಮಟ್ಟಿಗೆ (ಅ) ಮಕ್ಕಳ ತಿಳಕೊಳ್ಳುವ ಶಕ್ತಿಯನ್ನು ಬೆಳೆಸುತ್ತವೆ (ಆ) ಮಕ್ಕಳಿಗೆ ಅರ್ಥವುಳ್ಳದ್ದು ಎನಿಸುತ್ತವೆ ಮತ್ತು (ಇ) ಅವರಿಗೆ ಪ್ರಯೋಜನ ಉಳ್ಳದ್ದು ಎನಿಸುತ್ತವೆ. ಉದಾಹರಣೆ ಕೊಟ್ಟು ಸ್ಪಷ್ಟಮಾಡಿರಿ.

೧೦. ಬಾಲಕವರ್ಗದ ವಿದ್ಯಾರ್ಥಿಗಳಿಗೆ ಭಾಷೆ ಅಥವಾ ಲೆಕ್ಕವನ್ನು ಕಲಿಸುವಾಗ ಉಪಯೋಗಿಸತಕ್ಕ ಅಭಿರುಚಿ ಎನಿಸುವ ಕೆಲವು ಅಭ್ಯಸನಗಳ ನಮೂನೆಗಳನ್ನು ರಚಿಸಿ ತೋರಿಸಿರಿ.

೧೧. ಒಬ್ಬ ಮಗುವು ಶುದ್ಧ ಬರಹವನ್ನು ಬರೆಯುವಾಗ ಕೆಲವು ತಪ್ಪುಗಳನ್ನು ಮಾಡಿರುತ್ತಾನೆ. ಅದಕ್ಕಾಗಿ ಸಾಲೆಯು ಬಿಟ್ಟಮೇಲೆ ಅವನಿಗೆ ನಿಲ್ಲಲು ಹೇಳಿ ತಪ್ಪುಗಳನ್ನು ಇಪ್ಪತ್ತು ಬಾರೆ ತಿದ್ದಿ ಬರೆಯುವ ದಂಡವನ್ನು ಕೊಟ್ಟರೆ ಆದರಿಂದ ಪರಿಣಾಮ ಏನು ಆಗಬಹುದು? ಇದನ್ನು ಮನೋವಿಜ್ಞಾನದ ದೃಷ್ಟಿಯಿಂದ ಯೋಚಿಸಿ ಹೇಳಿರಿ.

೧೨. ಪ್ರೇರಣೆ ಅಂದರೇನು? ಕೆಳಗೆ ಕೊಟ್ಟ ಯಾವ ಉದಾಹರಣೆಯು ನಿಮ್ಮ ವ್ಯಾಖ್ಯೆಯನ್ನು ಸಮರ್ಥಿಸುವದು— (ಅ) ಹಲ್ಲುನೋವು (ಆ) ಒಳ್ಳೇ ಚಿತ್ರಕಾರನಾಗುವ ವಿಚಾರ (ಇ) ಚಿವಟುವದು (ಈ) ಊಟವಾದ ಮೇಲೆ ಮಲಗುವ ಚಟ.

೧೩. "ಕಲಿಯುವಿಕೆಗೆ ಪ್ರೇರಣೆಯೇ ಆಧಾರ" ಎಂಬ ಮಾತನ್ನು ತಿಳಿಸಿ ಹೇಳಿರಿ. ಕೆಳಗೆ ಕೊಟ್ಟ ಯಾವ ಸಂದರ್ಭಗಳಲ್ಲಿ ಮಗುವು ಸಾಲೆಗೆ ಹೋಗುತ್ತಿದ್ದರೂ ತಾನು ಏನನ್ನೂ ಕಲಿಯದೇ ಇರಬಹುದು?— (ಅ) ಅವನು ಮಂದಬುದ್ಧಿಯವನಿದ್ದರೆ? (ಆ) ಅವನು ಶಿಕ್ಷಕನನ್ನು ಸೇರದೇ ಇದ್ದರೆ ಮತ್ತು ಆವನ ಮಾತನ್ನು ಕೇಳದಿದ್ದರೆ? (ಇ) ಅವನು ತನ್ನ ವರ್ಗದ ಜಾಣ ಹುಡುಗರಕಿಂತಲೂ ಹೆಚ್ಚು ಜಾಣನಿದ್ದರೆ? (ಈ) ಆವನು ಸೋಮಾರಿತನದಿಂದ ಪ್ರಯತ್ನವನ್ನೇ ಮಾಡದಿದ್ದರೆ?

೧೪. “ಪ್ರಾವೀಣ್ಯತೆಗಾಗಿ ಬೆಳ್ಳಿ, ಬಂಗಾರದ ಪದಕಗಳನ್ನು ಅಥವಾ ಕಪ್ಪುಗಳನ್ನು ಬಹುಮಾನ ಕೊಡುವದು ಮತ್ತು ಪರೀಕ್ಷೆಯಲ್ಲಿ ಮೊದಲನೇ ನಂಬರ ಬಂದವರ ಯಾದಿಯನ್ನು ಇಡುವದು, ಮುಂತಾದವು ಕೃತ್ರಿಮ ಪ್ರೇರಕಗಳೆಂದು ತೋರುವದರಿಂದ ಈಗಿನ ಈ ಹೇಳಿಕೆಯು ಹೊಸ ಶಿಕ್ಷಣದಲ್ಲಿ ಅವುಗಳಿಗೆ ನ್ಯಾಯವಾದ ಸ್ಥಾನ ಇರುವದಿಲ್ಲ.” ನಿಮಗೆ ಎಷ್ಟರ ಮಟ್ಟಿಗೆ ಒಪ್ಪಿಗೆಯಾಗಿರು ತ ದೆ? ವಿವರಿಸಿರಿ

೧೫. ಪ್ರಾಣಿಗಳ ಮತ್ತು ಮನುಷ್ಯರ ಕಲಿಯುವಿಕೆಯಲ್ಲಿ ಯಾವ ಸಾಮ್ಯ ವೈಷಮ್ಯಗಳು ಕಂಡುಬರುತ್ತವೆ?

೧೬. ಸಮಾಜದ ಮೆಚ್ಚುಗೆಯನ್ನು ಪಡೆಯಲು ಜನರು ಮಾಡುವ ಕೆಲಸಗಳ ಹತ್ತು, ಹನ್ನೆರಡು ಉದಾಹರಣೆಗಳನ್ನು ಕೊಡಿರಿ. ಈ ಪ್ರೇರಣೆಯು ಎಷ್ಟರ ಮಟ್ಟಿಗೆ ಪ್ರಬಲವಾಗಿರುತ್ತದೆ ಎಂಬುದನ್ನು ಹೇಳಿರಿ. ಬೆಳವಣಿಗೆಯ ಬೇರೆ ಬೇರೆ ಮಟ್ಟಗಳಲ್ಲಿ ಅದು ಹೇಗೆ ಬೆಳೆಯುತ್ತ ಹೋಗುತ್ತದೆ ಎಂಬುದನ್ನು ವಿವರಿಸಿರಿ.

೧೭. ಈ ವರೆಗೆ ಮನೋವಿಜ್ಞಾನಿಗಳು ಮೂಲ ಪ್ರವೃತ್ತಿಗಳು ( Instincts ) ಬೇರೆ ಮತ್ತು ಸಂಪಾದಿತ ಪ್ರಚೋದನೆಗಳು ( Acquired Drives ) ಅಂದರೆ ಚಟಗಳು ಮತ್ತು ಸ್ಥಿರ ವೃತ್ತಿಗಳು ಬೇರೆ ಎಂದು ವ್ಯತ್ಯಾಸ ಮಾಡುತ್ತಿದ್ದರು? ಆದರೆ ಇತ್ತೀಚೆಗೆ ಈ ತರಹದ ವ್ಯತ್ಯಾಸವನ್ನು ಬಿಟ್ಟಿರುವರು. ಏಕೆ? ಮೂಲ ಪ್ರವೃತ್ತಿಗಳ ಬಗ್ಗೆ ಹೊಸ ಸಿದ್ಧಾಂತ ಆವುದು?

# ಅಧ್ಯಾಯ ೬

# ಬಾಹ್ಯಪರಿಸ್ಥಿತಿ ಮತ್ತು ಶಿಕ್ಷಣ

## ಕಲಿಯುವಿಕೆ ಮತ್ತು ಆವರಣ

ಕಲಿಯುವಿಕೆ ಅಥವಾ ವರ್ತನವು ಅನುಭವವನ್ನು ಅವಲಂಬಿಸಿರುತ್ತದೆ ಎಂಬ ಸಿದ್ಧಾಂತವನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಿದೆ. ವರ್ತನದಲ್ಲಿ ಬದಲಾವಣೆ ಕಂಡು ಬಂದರೆ ಅಲ್ಲಿ ಕಲಿಯುವಿಕೆಯು ನಡೆದಿರುತ್ತದೆ ಎಂದು ತಿಳಿಯತಕ್ಕದ್ದು. ಈ ಮಾರ್ಪಾಟ ಅಥವಾ ವೆಚ್ಚಿಕೆಯು ಆಗಬೇಕಾದರೆ ಅದಕ್ಕೆ ಅನುಭವದ ಪರಿಣಾಮವೇ ಕಾರಣ. ಒಮ್ಮೆ ಕೈ ಸುಟ್ಟುಕೊಂಡವನು ಮತ್ತೊಮ್ಮೆ ಅದೇ ರೀತಿಯಾಗಿ ವರ್ತಿಸುವದಿಲ್ಲ; ಒಮ್ಮೆ ಸೋತವನು ಮತ್ತೊಮ್ಮೆ ಅದೇ ಹಾದಿಯನ್ನು ಹಿಡಿಯುವದಿಲ್ಲ. ಅದೇ ಸನ್ನಿವೇಶಗಳು ಎರಡನೇ ಬಾರೆ ಅಥವಾ ಮತ್ತೆ ಮತ್ತೆ ಒದಗಿದಲ್ಲಿ ಮನುಷ್ಯನು ತನ್ನ ಮೊದಲಿನ ಅನುಭವವನ್ನು ನೆನಪಿಗೆ ತಂದುಕೊಂಡು ತನ್ನ ವರ್ತನದಲ್ಲಿ ಅಥವಾ ಪ್ರತಿ ಕ್ರಿಯೆಯಲ್ಲಿ ಅವಶ್ಯ ಕಂಡ ಬದಲಾವಣೆಗಳನ್ನು ಮಾಡಿಕೊಳ್ಳುತ್ತಾನೆ. ಕಲಿಸದ ಹೊರತು ಮಗುವು ಕತ್ತಲಿಗೆ ಹೆದರುವದಿಲ್ಲ; ಕಡಿಸಿಕೊಳ್ಳದ ಹೊರತು ಚೇಳಿಗೆ ಹೆದರುವದಿಲ್ಲ. ಹಸಿದಾಗ ಊಟ ಮಾಡುವುದರಿಂದ ಶರೀರದ ಸ್ವಾಭಾವಿಕ ಬೇಡಿಕೆಯನ್ನು ಪೂರೈಸುವದು ಆಗಿದ್ದರೂ ಊಟ ಮಾಡುವ ಪದ್ಧತಿಗಳನ್ನು ಮಗುವು ಕಲಿಯುತ್ತಾನೆ. ಒಟ್ಟಿನಲ್ಲಿ ವರ್ತನದ ಪ್ರತಿಕ್ರಿಯೆಗಳು ಕಲಿಯಲ್ಪಡುತ್ತವೆ. ಆದರೆ ಅವು ಹುಟ್ಟುಗುಣಗಳು ಅಥವಾ ಸಹಜಪ್ರವೃತ್ತಿಗಳು ಅಲ್ಲ ಎಂಬ ತತ್ವವನ್ನು ಇಲ್ಲಿ ಒತ್ತಿ ಹೇಳಬೇಕಾಗಿದೆ. ವರ್ತನದ ವೈಶಿಷ್ಟ್ಯಗಳು ಹುಟ್ಟುವಾಗಲೇ ನಮ್ಮ ಜೊತೆಗೆ ಬಂದಿರುವ ಆನುವಂಶಿಕ ಗುಣಗಳು ಎಂಬ ವಾದವು ನಿಷ್ಪ್ರಯೋಜಕವೂ, ಹಾನಿಕಾರಕವೂ ಆಗಿರುತ್ತದೆ. ಅನುಭವದಿಂದ ಪ್ರತಿಕ್ರಿಯೆಗಳು ವಿಶಿಷ್ಟ ರೂಪಗಳನ್ನು ತಾಳುತ್ತವೆ. ಮತ್ತು ಹೊಸ ಹೊಸ ಅನುಭವಗಳಿಂದ ಅವು ರೂಪಾಂತರವನ್ನು ಹೊಂದುತ್ತವೆ. ಆನುವಂಶಿಕವಾದದಲ್ಲಿ ನಂಬುಗೆ ಇಟ್ಟ ಶಿಕ್ಷಕನು ಪ್ರತಿಪಾದಿಸುವದೇನಂದರೆ— ಮನುಷ್ಯನ ಸ್ವಭಾವವು ಅವನ ಪೂರ್ವಜರಿಂದ ನಿರ್ಧರಿಸಲ್ಪಟ್ಟಿರುತ್ತದೆ; ಅದನ್ನು ಬದಲಾಯಿಸಲು

ಸಾಧ್ಯವಿಲ್ಲ; ಆದ್ದರಿಂದ ಸಾಲೆಯ ಶಿಕ್ಷಣದಿಂದ ಏನೂ ಪರಿಣಾಮ ಆಗುವದಿಲ್ಲ. ಆದರೆ ಇದು ತಪ್ಪು ತಿಳುವಳಿಕೆ. ಅಂಥ ಶಿಕ್ಷಕನು ನಿರಾಶೆಯನ್ನು ತಾಳುವದಲ್ಲದೆ ತಾನು ಕಲಿಸುವ ಪ್ರಯತ್ನವನ್ನು ಮನಮುಟ್ಟಿ ಮಾಡನು. ಆದರೆ ಮನುಷ್ಯನ ಸ್ವಭಾವವನ್ನು ತಿದ್ದಲು ಬರುತ್ತದೆ ಎಂಬ ಹೊಸ ಶಿಕ್ಷಣ ತತ್ವವು ಸಾರಿ ಹೇಳುತ್ತದೆ. ಸ್ವಭಾವವನ್ನು ತಿದ್ದುವ ಉತ್ತಮ ಪದ್ಧತಿಗಳನ್ನು ಕಂಡು ಹಿಡಿಯುವ ಸಂಶೋಧನೆಗಳು ಪಾಶ್ಚಾತ್ಯ ದೇಶಗಳಲ್ಲಿ ನಡೆದಿರುತ್ತವೆ. ಈಗಿನ ಶಿಕ್ಷಕನು ಸಹಜಪ್ರವೃತ್ತಿಯ ಕಲ್ಪನೆಯನ್ನೂ ಆನುವಂಶೀಯತೆಯ ತತ್ವವನ್ನೂ ಬಿಟ್ಟುಬಿಡುತ್ತಾನೆ. ಅದರ ಬದಲಾಗಿ ಶಿಕ್ಷಣದ ಪರಿಣಾಮದಿಂದ ವರ್ತನವು ಬದಲಾಗುತ್ತದೆ ಎಂಬ ತತ್ವವನ್ನು ಅಂಗೀಕರಿಸುತ್ತಾನೆ.

ವರ್ತನವು ಕಲಿಯಲ್ಪಡುವುದರಿಂದ ಶಿಕ್ಷಣದ ಮಹತ್ವವು ಹೆಚ್ಚಾಗಿರುತ್ತದೆ. ವರ್ತನದ ಹಿನ್ನೆಲೆಯಾದ ಭಾವ ಭಾವನೆಗಳನ್ನು, ಧ್ಯೇಯ ಧೋರಣೆಗಳನ್ನು ವೃತ್ತಿ ಒಲವುಗಳನ್ನೂ, ವಿಚಾರ ನಂಬುಗೆಗಳನ್ನು ಮಗುವು ತಾನು ಹುಟ್ಟಿ ಬೆಳೆದ ಸನ್ನಿವೇಶದಿಂದ ಕಲಿಯುತ್ತಾನೆ. ಮಗುವು ಒಳ್ಳೆಯ ನಾಗರಿಕನಾಗಿ ಇಲ್ಲವೆ ಸಮಾಜದ ಕಂಟಕನಾಗಿ ಬೆಳೆಯಬೇಕಾದರೆ ಅದು ಅವನನ್ನು ಆವರಿಸಿದ ಸನ್ನಿವೇಶವನ್ನು ಅಥವಾ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಮಗುವು ಮನೆಯಲ್ಲಿಯಾಗಲಿ, ಸಾಲೆಯಲ್ಲಿಯಾಗಲಿ ಅಥವಾ ಓಣಿಯಲ್ಲಿಯಾಗಲಿ ಚಿಕ್ಕ ಪುಟ್ಟ ಅಪರಾಧಗಳನ್ನು ಮಾಡುತ್ತಿದ್ದರೆ ಆದರ ಕಾರಣವು ಅವನ ಸುತ್ತು ಮುತ್ತಲಿನ ಪರಿಸ್ಥಿತಿಯ ಪರಿಣಾಮವೆಂದೇ ಹೇಳಬಹುದು. ಅದರಂತೆ ಸಾಲೆಯ ಅಭ್ಯಾಸದಲ್ಲಿ ಅಥವಾ ಕಲಾಕೌಶಲ್ಯದಲ್ಲಿ ಅವನು ಮುಂದುವರಿಯ ಬೇಕಾದರೆ ಅಥವಾ ಹಿಂದುಳಿಯಬೇಕಾದರೆ ಅದು ಎಷ್ಟೋ ಮಟ್ಟಿಗೆ ಸಾಲೆಯ ಮತ್ತು ಮನೆಯ ಪರಿಸ್ಥಿತಿಯನ್ನೇ ಅವಲಂಬಿಸಿರುತ್ತದೆ. ಅನುಕೂಲ ಪರಿಸ್ಥಿತಿ ಯಲ್ಲಿ ಒಡನಾಡುವ ಮಗುವಿನ ಬೆಳವಣಿಗೆಯೇ ಬೇರೆ ಮತ್ತು ಪ್ರತಿಕೂಲ ಪರಿಸ್ಥಿತಿಯಲ್ಲಿ ಒಡನಾಡುವ ಮಗುವಿನ ಬೆಳವಣಿಗೆಯೇ ಬೇರೆ. ಪರಿಸ್ಥಿತಿಯ ಬೇರೆ ಬೇರೆ ಪಡಿಯಚ್ಚಿನಲ್ಲಿ ಬೆಳೆದು ಬರುವಾಗ ಮಗುವಿನ ವ್ಯಕ್ತಿತ್ವವು ಬೇರೆ ಬೇರೆ ರೂಪಗಳನ್ನು ತಾಳುತ್ತದೆ.

ಮಗುವು ಒಂದು ಸ್ವತಂತ್ರವಾದ ಚೈತನ್ಯ ಮೂರ್ತಿಯು. ಅವನಲ್ಲಿ ಕೆಲವು ಮೂಲ ಬೇಡಿಕೆಗಳು ಇರುತ್ತವೆ. ಅನ್ನ, ನೀರು, ವಿಶ್ರಾಂತಿ ಇವು

ಶಾರೀರಿಕ ಬೇಡಿಕೆಗಳು. ಆಸರ ( security ), ಸಾಹಸ (adventure), ಒಡೆತನ ( possession ), ಹೊಸ ಜ್ಞಾನ, ಹೊಸ ಅನುಭವ ಪಡೆಯುವದು ಮೊದಲಾದವು ಮಾನಸಿಕ ಬೇಡಿಕೆಗಳು. ಪ್ರೇಮ, ಪ್ರಶಂಸೆ, ಜನಮೆಚ್ಚುಗೆ, ಬಳಗ ಮೊದಲಾದವು ಸಾಮಾಜಿಕ ಬೇಡಿಕೆಗಳು. ಈ ಬೇಡಿಕೆಗಳನ್ನು ತೃಪ್ತಿಪಡಿಸಲು ಮಗುವು ಪರಿಸ್ಥಿತಿಯೊಡನೆ ಹೋರಾಟ ಹೂಡುತ್ತಾನೆ. ಮನುಷ್ಯನ ಈ ಮೂಲ ಬೇಡಿಕೆಗಳನ್ನು ಪೂರೈಸಲಿಕ್ಕೆ ಅನುಕೂಲ ವಾತಾವರಣವಿದ್ದರೆ ಅದು ಬಾಹ್ಯ ಪ್ರೇರಣೆ ಎನಿಸುವದು. ಕಲಿಯುವಿಕೆಯ ಮುನ್ನಡೆಗೆ ಈ ಬಾಹ್ಯಪ್ರೇರಣೆಯು ಅವಶ್ಯವಾದದ್ದು. ಕಲಿಯಲಿಕ್ಕೆ ಅನುಕೂಲತೆಗಳನ್ನು ಒದಗಿಸಿ ಕೊಡುವದೇ ಶಿಕ್ಷಣದ ಧ್ಯೇಯ. ಮಗುವಿಗೆ ಸರಿಯಾದ ಊಟ, ಉಡಿಗೆ, ಬೇಕಾಗುವ ಪಾಟಿ ಪುಸ್ತಕ, ಅಭ್ಯಾಸ ಮಾಡಲಿಕ್ಕೆ ಸಾಕಷ್ಟು ವೇಳೆ, ಸ್ವತಂತ್ರ ಖೋಲಿ ಮೊದಲಾದ ಅವಶ್ಯಕತೆಗಳನ್ನು ತಂದೆತಾಯಿಗಳೂ ಪಾಲಕರೂ ಮನೆಯಲ್ಲಿ ಒದಗಿಸಿ ಕೊಡಬೇಕು. ಅವರು ಮಗುವಿನ ಅಭ್ಯಾಸದ ಪ್ರಗತಿಯ ಬಗೆಗೆ ಮೇಲಿಂದ ಮೇಲೆ ವಿಚಾರಿಸಬೇಕು. ಆದರೆ ಅನೇಕ ಹುಡುಗರಿಗೆ ಮನೆಯಲ್ಲಿಯ ಪರಿಸ್ಥಿತಿಯು ಅನುಕೂಲವಾಗಿರುವದಿಲ್ಲ. ಸಾಲೆಯಲ್ಲಿಯಾದರೂ ಕಲಿಯುವ ಅನುಕೂಲತೆಗಳು ಎಷ್ಟೋ ಎಡೆಯಲ್ಲಿ ಇರುವದಿಲ್ಲ. ಮಗುವಿನ ಮೂಲ ಬೇಡಿಕೆಗಳಾದ ಪ್ರೇಮ, ಪ್ರೋತ್ಸಾಹ, ಸಾಹಸ, ಆಸರಗಳನ್ನು ತೃಪ್ತಿಪಡಿಸುವ ದೃಷ್ಟಿಯಿಂದ ಶಿಕ್ಷಕನು ಪರಿಶ್ರಮಪಟ್ಟರೆ ಅವನು ಯಶಸ್ವಿಯಾಗುವನು. ಕಲಿಯಲಿಕ್ಕೆ ಸಾಧನ ಸಾಮಗ್ರಿಗಳು ಅವಶ್ಯವಾಗಿದ್ದರೂ ಪ್ರೇಮಮಯ ವಾತಾವರಣವು ಹೆಚ್ಚು ಮಹತ್ವದ್ದು ಎಂಬುದನ್ನು ಮರೆಯಬಾರದು. ಭೌತಿಕ ಪರಿಸ್ಥಿತಿಗಿಂತ ಮಾನಸಿಕ ವಾತಾವರಣವು ಮುಖ್ಯವಾದದ್ದು. ಮನೆಯ ಪರಿಸ್ಥಿತಿಯು ಅನುಕೂಲವಾಗಿದ್ದರೂ ಸಾಲೆಯ ಪರಿಸ್ಥಿತಿಯಾದರೂ ಅನುಕೂಲವಾಗಿರುವದು ಅವಶ್ಯಕ.

## ಪರಂಪರೆ, ಪರಿಸ್ಥಿತಿ ಮತ್ತು ಪ್ರಯತ್ನ

ಸಾಲೆಯ ಹುಡುಗರಲ್ಲಿ ಶರೀರದ ಬೆಳವಣಿಗೆ, ಬುದ್ಧಿಯ ಸಾಮರ್ಥ್ಯ ಮತ್ತು ವರ್ತನದ ರೀತಿಯಲ್ಲಿ ವ್ಯಕ್ತಿ ವಕ್ತಿಗೆ ಭೇದವು ಕಂಡುಬರುತ್ತದೆ. ಇದರ ಕಾರಣವು ಆನುವಂಶೀಯತೆ ಅಥವಾ ಪರಂಪರೆ ಎಂದು ಕೆಲವರು ಹೇಳಿದರೆ ಆವರಣ ಅಥವಾ ಪರಿಸ್ಥಿತಿ ಎಂದು ಬೇರೆ ಕೆಲವರು ಹೇಳುತ್ತಾರೆ. ಆದರೆ ಇವೆರಡೂ ಯಾಂತ್ರಿಕ ವಾದಗಳು. ಮನುಷ್ಯನು ಯಂತ್ರವನ್ನು ಮೀರಿದ

ಪ್ರಾಣಿಯಾದ್ದರಿಂದ ಅವನು ತೋರಿಸುವ ಶಕ್ತಿಗಳಿಗೆ ಅವನ ಸ್ವಂತ ಪ್ರಯತ್ನವೂ ಕೆಲಮಟ್ಟಿಗೆ ಕಾರಣವಾಗಿರುತ್ತದೆ. ಈ ಮೂರೂ ಸಂಗತಿಗಳಲ್ಲಿ ಯಾವುದರ ಪ್ರಮಾಣವು ಎಷ್ಟರ ಮಟ್ಟಿಗೆ ಎಂಬುದನ್ನು ಶಿಕ್ಷಕರು ಮತ್ತು ಪಾಲಕರು ತಿಳಿದಿರಬೇಕು. ಈ ಸಂಗತಿಗಳು ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಪರಂಪರೆ, ಪರಿಸ್ಥಿತಿ ಮತ್ತು ಪ್ರಯತ್ನ ಇವುಗಳ ಸ್ಪಷ್ಟ ಕಲ್ಪನೆ, ಪರಿಮಿತಿ ಮತ್ತು ಸಂಬಂಧಗಳನ್ನು ಶಿಕ್ಷಕನು ತಿಳಿದುಕೊಳ್ಳುವದು ಆವಶ್ಯ. ಆನುವಂಶಿಕವಾಗಿ ಅಂದರೆ ರಕ್ತಸಂಬಂಧದಿಂದ ಮಗುವು ಹುಟ್ಟುವಾಗಲೇ ತಂದ ವೈಶಿಷ್ಟ್ಯಗಳಿಗೆ ಪರಂಪರೆ ಎಂದೂ ಅದನ್ನು ಬಿಟ್ಟು ಮಿಕ್ಕುದೆಲ್ಲ ಪರಿಸ್ಥಿತಿ ಎಂದೂ ತಿಳಿಯುತ್ತಾರೆ. ಪರಿಸ್ಥಿತಿಯು ಅನುಕೂಲವಿರಲಿ ಅಥವಾ ಪ್ರತಿಕೂಲವಿರಲಿ ಮನುಷ್ಯನು ತನ್ನ ಇಚ್ಛಾಬಲದಿಂದ ಮಾಡುವ ಕೆಲಸಕ್ಕೆ ಪ್ರಯತ್ನ ಎನ್ನುತ್ತಾರೆ. ಕೆಲವೊಂದು ಮನೆತನಗಳ ವಂಶಾವಳಿಯನ್ನು ತಕ್ಕೊಂಡು ಪರಂಪರೆಯನ್ನು ವಿವೇಚಿಸುವ ಪದ್ಧತಿಯನ್ನು ಈಗಿನ ಮನೋವಿಜ್ಞಾನಿಗಳು ಒಪ್ಪುವದಿಲ್ಲ. ಏಕೆಂದರೆ ಕೇವಲ ರಕ್ತಸಂಬಂಧದಿಂದ ಉತ್ತರೋತ್ತರ ಪೀಳಿಗೆಗಳಲ್ಲಿ ಯಾವ ಗುಣಗಳು ಬಂದು ಸೇರುತ್ತವೆ ಎಂಬುದರ ಬಗೆಗೆ ಪ್ರಾಣಿವಿಜ್ಞಾನಿಗಳ ಮತವು ಅನಿಶ್ಚಿತವಾಗಿದೆ. ಅಲ್ಲದೆ ಜಾಣರಾದ ತಂದೆತಾಯಿಗಳು ತಮ್ಮ ಮಕ್ಕಳ ಸರಿಯಾದ ಬೆಳವಣಿಗೆಗೆ ಮತ್ತು ಶಿಕ್ಷಣಕ್ಕೆ ಬೇಕಾದ ಅನುಕೂಲತೆಗಳನ್ನು ಅಂದರೆ ಒಳ್ಳೆಯ ಪರಿಸ್ಥಿತಿಯನ್ನು ಒದಗಿಸಿಕೊಡುತ್ತಾರೆ. ಆದರೆ ಅಶಿಕ್ಷಿತ ಮತ್ತು ಬಡವರಾದ ತಂದೆ ತಾಯಿಗಳು ಇದನ್ನು ಅಲಕ್ಷಿಸುತ್ತಾರೆ. ಅವರ ಮಕ್ಕಳು ಪ್ರತಿಕೂಲ ಪರಿಸ್ಥಿತಿಯಲ್ಲಿ ಬೆಳೆಯುತ್ತಾರೆ. ಆದ್ದರಿಂದ ಆನುವಂಶೀಯತೆಯ ಪರಿಣಾಮವು ಎಷ್ಟು ಎಂಬುದನ್ನು ಕಂಡುಹಿಡಿಯುವದು ಕಠಿಣ. ಇತ್ತೀಚಿಗೆ ಮನೋವಿಜ್ಞಾನಿಗಳು ಅವಳಿಜವಳಿ ಮಕ್ಕಳ (ಅಂದರೆ ಪರಂಪರೆ ಒಂದೇ ಇದ್ದು ಪರಿಸ್ಥಿತಿ ಬೇರೆ ಇದ್ದವರ) ಮತ್ತು ಸಾಕುಮಕ್ಕಳ (ಅಂದರೆ ಪರಂಪರೆ ಬೇರೆ ಇದ್ದು ಪರಿಸ್ಥಿತಿ ಒಂದೇ ಇದ್ದವರ) ಅಭ್ಯಾಸವನ್ನು ಕೈಕೊಂಡಿದ್ದಾರೆ. ಆನುವಂಶೀಯತೆ ಮತ್ತು ಆವರಣದ ಬಗೆಗೆ ನಡೆಯಿಸಿದ ಕೆಲವು ಪ್ರಯೋಗಗಳ ಫಲಿತಾಂಶವನ್ನು ಇಲ್ಲಿ ಕೊಡಲಾಗಿದೆ.

ಒಂದು ಮನೆತನದ ಜನರು ತಮ್ಮ ಪೂರ್ವಜರ ಗುಣವಿಶೇಷಗಳನ್ನು ತಾವು ಹುಟ್ಟುವಾಗಲೇ ಪಡೆಯುವರೆಂದು ಫ್ರಾನ್ಸಿಸ್ ಗ್ಯಾಲ್ಟನ್‌ನ ಅಭಿಪ್ರಾಯ.

ಅವನು ಕೆಲವು ವಂಶಾವಳಿಗಳನ್ನು ಅಭ್ಯಾಸಿಸಿ ಪ್ರಸಿದ್ಧ ಮನೆತನಗಳಲ್ಲಿ ಶ್ರೇಷ್ಠ ಮನುಷ್ಯರೇ ಹುಟ್ಟುತ್ತ ಬಂದಿರುವರೆಂದು ಹೇಳುತ್ತಾನೆ. ಪ್ರೊ. ಪಿಯರ್ಸನ್‌ನು ಕೆಲವು ಸಾಲೆಯ ಹುಡುಗರನ್ನು ಪರೀಕ್ಷಿಸಿ ಇದೇ ಅಭಿಪ್ರಾಯವನ್ನು ಸಮರ್ಥಿಸುತ್ತಾನೆ. ಆದರೆ ಡಿ. ಕ್ಯಾಂಡೋಲ್ಸ ಎಂಬವನು ಗಾಲ್ಟನ್‌ನಿಗೆ ಉತ್ತರವಾಗಿ ಬರೆದ ಪುಸ್ತಕದಲ್ಲಿ, ಮೇಧಾವಿಗಳನ್ನು ತಯಾರಿಸುವದು ಪರಿಸ್ಥಿತಿ ಎಂದು ಪ್ರತಿಪಾದಿಸುತ್ತಾನೆ. ಅವನಾದರೂ ಅನೇಕ ವಿಜ್ಞಾನಿಗಳ ಚರಿತ್ರೆಗಳನ್ನು ಪರಿಶೀಲಿಸಿ ಅವರು ಹಾಗೆ ಆಗಲಿಕ್ಕೆ ಅವರಿಗಿದ್ದ ಅನುಕೂಲ ಆವರಣವೇ ಕಾರಣವೆಂದು ಹೇಳುತ್ತಾನೆ. ಹರ್ಬಾರ್ಟನೂ ಇದೇ ಸಿದ್ಧಾಂತವನ್ನು ಮಂಡಿಸುತ್ತಾನೆ. ಅವನು ಆನುವಂಶೀಯತೆಯನ್ನು ನಂಬುವದಿಲ್ಲ. ಒಂದೇ ಮನೆತನದ ಮಕ್ಕಳಲ್ಲಿಯ ಹೋಲಿಕೆಯು ಆ ಮನೆತನದ ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆಂದು ಅವನ ಮತ. ಆದುದರಿಂದ ವೈಯಕ್ತಿಕ ಭೇದಗಳು ನಿಶ್ಚಯವಾಗಿಯೂ ಆನುವಂಶಿಕವೆಂದು ತಿಳಿಯುವದು ತಪ್ಪು. ಮಹಾತ್ಮರ ಹೊಟ್ಟೆಯಲ್ಲಿ ಯಾವಾಗಲೂ ಮಹಾತ್ಮರೇ ಹುಟ್ಟುವದಿಲ್ಲ. ಬುದ್ಧ, ಬಸವ, ಶೇಕ್ಸಪಿಯರ, ಕಾಲಿದಾಸ, ನ್ಯೂಟನ್, ಬೋಸ್, ನೆಪೋಲಿಯನ್, ಶಿವಾಜಿ ಮೊದಲಾದ ಮಹಾಪುರುಷರು ಅವರಷ್ಟೇ ಪ್ರಖ್ಯಾತರಾದ ತಂದೆ ತಾಯಿಗಳಿಂದ ಜನ್ಮತಾಳಿರುವದಿಲ್ಲ. ಮತ್ತು ಅವರ ಮಕ್ಕಳು ಅವರಷ್ಟೇ ಪ್ರಸಿದ್ಧರಾಗಿರುವದಿಲ್ಲ. ಇತ್ತ ಹಿಂದುಳಿದ ಮನೆತನಗಳಲ್ಲಿ ಯಾವಾಗಲೂ ಮಂದಮತಿಗಳು ಮತ್ತು ನೀತಿಬಾಹಿರರು ಜನಿಸುವರೆಂಬುದನ್ನು ಪ್ರಾಣಿವಿಜ್ಞಾನಿಗಳು ಒಪ್ಪುವದಿಲ್ಲ. ಆದರೂ ಮಗುವು ಹುಟ್ಟಿದಾಗ ಏನೂ ತಂದಿರುವದಿಲ್ಲ. ಅವನ ಮನಸ್ಸು ಒಂದು ಹಸನಾದ ಪಾಟಿಯಂತೆ ಇರುತ್ತದೆ ಎಂದು ನಂಬುವದೂ ಕಷ್ಟ. ಶಿಕ್ಷಕನು ಪ್ರಯಾಸಪಟ್ಟು ಕಲಿಸಿದರೂ ಕೆಲವು ವಿದ್ಯಾರ್ಥಿಗಳು ಪ್ರಗತಿಯನ್ನು ತೋರಿಸದಿದ್ದರೆ ಅದರ ಕಾರಣವು ಆನುವಂಶೀಯತೆ ಎಂದು ಹೇಳಬಹುದು. ಬುದ್ಧಿ ಒರೆಗಳಿಂದ ( Intelligence Tests ) ಈ ಮಾತು ಸಿದ್ಧವಾಗುತ್ತದೆ. ಒಟ್ಟಿನಲ್ಲಿ ಪರಂಪರೆಯು ಬೀಜವಿದ್ದಂತೆ ಮತ್ತು ಪರಿಸ್ಥಿತಿಯು ಹೊಲವಿದ್ದಂತೆ. ಮಕ್ಕಳ ಅಂತಃಶಕ್ತಿಗಳು ಪ್ರಕಾಶಕ್ಕೆ ಬರಬೇಕಾದರೆ ಪರಿಸ್ಥಿತಿಯು ಅನುಕೂಲವಾಗಿರಬೇಕಾಗುತ್ತದೆ.

"ತಂದೆಯಂತೆ ಮಗ" ಎಂಬ ಗಾದೆಯ ಮಾತು ಪರಂಪರೆಯನ್ನು ಎತ್ತಿ ಹಿಡಿಯುವಂತೆ ತೋರುತ್ತದೆ. ಆದರೆ ಸಾಮಾನ್ಯವಾಗಿ ತಂದೆಯು ಬೆಳೆದ ಪರಿಸ್ಥಿತಿಯಲ್ಲಿಯೇ ಮಗನೂ ಬೆಳೆಯುವದರಿಂದ ಪರಿಸ್ಥಿತಿಯ ಪರಿಣಾಮದ ಸೂಚನೆಯೂ ಇದರಲ್ಲಿ ಅಡಕವಾಗಿದೆ. 'ಗುರುವಿನಂತೆ ಶಿಷ್ಯ,' 'ಜತೆಯಂತೆ ಮತಿ' ಎಂಬ ಗಾದೆಯ ಮಾತುಗಳು ಸ್ಪಷ್ಟವಾಗಿ ಪರಿಸ್ಥಿತಿಯನ್ನು ಎತ್ತಿ ಹಿಡಿಯುತ್ತವೆ.

ಪರಂಪರೆ ಮತ್ತು ಪರಿಸ್ಥಿತಿ ಸಮಸ್ಯೆಯನ್ನು ಕುರಿತು ಪ್ರಾಣಿಗಳ ಮೇಲೆ ನಡೆಯಿಸಿದ ಪ್ರಯೋಗಗಳಿಂದ ಏನು ಕಂಡು ಬರುವದೆಂಬುದನ್ನು ನೋಡುವ. ಮ್ಯಾಕ್‌ಡೂಗಲ್ಲನು ಇಲಿಗಳ ಮೇಲೆ ಒಂದು ಚಿಕ್ಕ ಪ್ರಯೋಗವನ್ನು ಮಾಡಿದನು. ನೀರು ತುಂಬಿದ ಒಂದು ಹರಿವಾಣದಲ್ಲಿ ಕೆಲವು ಇಲಿಗಳು ಇರುತ್ತವೆ. ಹೊರಗೆ ಬರಲಿಕ್ಕೆ ಅವುಗಳಿಗೆ ಎರಡು ಹಾದಿಗಳು ಇರುತ್ತವೆ. ಒಂದು ಹಾದಿಯು ವಿದ್ಯುತ್ತಿನಿಂದ ಸ್ವಲ್ಪ ಬಿಸಿಮಾಡಲ್ಪಟ್ಟಿರುತ್ತದೆ. ಎರಡನೇ ಹಾದಿಯು ಸುರಕ್ಷಿತವಾಗಿರುತ್ತದೆ. ಕೆಲವು ಇಲಿಗಳು ಆ ಹಾದಿಯಿಂದ ಕೆಲವು ಇಲಿಗಳು ಈ ಹಾದಿಯಿಂದ ಹೊರಗೆ ಬರಲು ಪ್ರಯತ್ನಿಸುತ್ತವೆ. ಹೊರಗೆ ಬಂದ ಮೇಲೆ ಇಲಿಗಳನ್ನು ಮತ್ತೆ ಮತ್ತೆ ನೀರಿನ ಹರಿವಾಣದಲ್ಲಿ ಇಡಲಾಗುತ್ತದೆ. ವಿದ್ಯುತ್ತಿನ ಕಷ್ಟದ ಹಾದಿಯಿಂದ ಹೋಗುತ್ತಿದ್ದ ಇಲಿಗಳು ಬರಬರುತ್ತ ಆ ಹಾದಿಯನ್ನು ಬಿಟ್ಟು ಸುರಕ್ಷಿತವಾದ ಎರಡನೇ ಹಾದಿಯಿಂದಲೇ ಹೋಗತೊಡಗುವವು. ಈ ಇಲಿಗಳ ಪೀಳಿಗೆಗಳ ಮೇಲೂ ಅದೇ ಪ್ರಯೋಗವನ್ನು ಮುಂದುವರಿಸಲಾಯಿತು. ಈ ಪ್ರಯೋಗದಿಂದ ಕಂಡು ಬಂದ ಮಹತ್ವದ ಸಿದ್ಧಾಂತವೇನಂದರೆ– ವಿದ್ಯುತ್ತಿನ ಹಾದಿಯಿಂದ ಹೋಗಿ ಅಪಾಯವನ್ನು **ಅನುಭವಿಸಿದ** ಇಲಿಗಳ ಮುಂದಿನ ಪೀಳಿಗೆಗಳು ಆ ಹಾದಿಯಿಂದ ಹೋಗುವ ತಪ್ಪನ್ನು ಕ್ರಮೇಣ ಕಡಿಮೆ ಮಾಡುತ್ತವೆ. ಸೂಕ್ಷ್ಮವಾಗಿ ವಿಚಾರಿಸಿದರೆ ಈ ಪ್ರಯೋಗವು ಪರಿಸ್ಥಿತಿಯ ಪ್ರಭಾವವನ್ನೇ ಸಿದ್ಧಗೊಳಿಸುತ್ತದೆ. ವಿದ್ಯುತ್ತಿನ ಅಪಾಯಕರವಾದ ಹಾದಿ ಒಂದು ಪರಿಸ್ಥಿತಿ; ಮತ್ತು ವಿದ್ಯುತ್ ಇಲ್ಲದ ಸುರಕ್ಷಿತ ಹಾದಿ ಇನ್ನೊಂದು ಪರಿಸ್ಥಿತಿ. ಈ ಎರಡು ಬೇರೆ ಬೇರೆ (ಅಪಾಯ ಉಳ್ಳ ಮತ್ತು ಅಪಾಯ ಇಲ್ಲದ) ಪರಿಸ್ಥಿತಿಗಳ ಅನುಭವದ ತುಲನಾತ್ಮಕ ದೃಷ್ಟಿಯಿಂದ ಇಲಿಗಳು ಜಾಣತನದ ಪಾಠವನ್ನು ಕಲಿತವು.

ಈ ಪ್ರಯೋಗಕ್ಕೆ ಒಳಪಡದ ಬೇರೆ ಇಲಿಗಳ ಪೀಳಿಗೆಗಳು ಈ ಪಾಠವನ್ನು ಕಲಿತಿರುವುದಿಲ್ಲ. ಅವು ಹೊಸ ಇಲಿಗಳಷ್ಟೇ ತಪ್ಪುಮಾಡುವವು. ಪ್ರಯೋಗದ ಇಲಿಗಳ ಮುಂದಿನ ಪೀಳಿಗೆಗಳಿಗೆ ಕೂಡ ಅದೇ ಪರಿಸ್ಥಿತಿಯು ಇದ್ದುದರಿಂದ ಆ ಪರಿಸ್ಥಿತಿಯ ಪರಿಣಾಮವೂ ಮುಂದುವರಿಯಿತು. ಕಾಲಾನುಕ್ರಮದಲ್ಲಿ ಪರಿಸ್ಥಿತಿಯೇ ಆನುವಂಶೀಯತೆಯಾಗಿ ಪರಿಣಮಿಸಿತು. ಅಂದಬಳಿಕ **ಪೂರ್ವ ಪರಿಸ್ಥಿತಿಯೇ ಪರಂಪರೆಯು.** ಆನುವಂಶೀಯವೆಂದು ಎಣಿಸಲ್ಪಡುವ ಗುಣಗಳು ಒಂದಾನೊಂದು ಕಾಲಕ್ಕೆ ಪರಿಸ್ಥಿತಿಯಿಂದಲೇ ಹುಟ್ಟಿರುತ್ತವೆ. ಪ್ರಾಣಿ ಮತ್ತು ಪರಿಸ್ಥಿತಿಗಳ ಅನ್ಯೋನ್ಯ ಕ್ರಿಯದ ಪರಿಣಾಮದ ಅವಶೇಷಗಳು ವಂಶದಿಂದ ವಂಶಕ್ಕೆ ಸಾಗುತ್ತ ಪರಂಪರೆಯಾಗುವದು. ಆದುದರಿಂದ ಆನುವಂಶೀಯತೆ ಅಥವಾ ಪರಂಪರೆ ಎಂಬುದು ಪೂರ್ವಕಾಲದ ಆವರಣದ ಅಥವಾ ಪರಿಸ್ಥಿತಿಯ ಪರಿಣಾಮವೇ ಹೊರತು ಬೇರೆ ಏನೂ ಅಲ್ಲ. ಮಾಕ್‌ಡೂಗಲ್‌ನ ಪ್ರಯೋಗದಿಂದ ಈ ಮಾತು ಸ್ಪಷ್ಟವಾಗುತ್ತದೆ. ಲಿಮಾರ್ಕ್‌ನ ಸಿದ್ಧಾಂತವಾದರೂ ಇದೇ. ಪರಿಸ್ಥಿತಿ ಮತ್ತು ಪರಂಪರೆಗಳನ್ನು ಕಾಲ ವ್ಯತ್ಯಾಸದಿಂದ ಮಾತ್ರ ವಿಂಗಡಿಸಲು ಬರುತ್ತದೆ. ತರ್ಕದ ಸಹಾಯದಿಂದ ಪರಿಸ್ಥಿತಿಯನ್ನು ಸಿದ್ಧಮಾಡಿ ತೋರಿಸಲು ಬರುತ್ತದೆ. ಪರಿಸ್ಥಿತಿಯ ಆವರಣ ಇಲ್ಲದ ಜೀವಕಣವನ್ನು ವಿಚಾರದಲ್ಲಿ ಕೂಡ ತರುವದು ಅಶಕ್ಯ. ಮ್ಯಾಕ್‌ಡ್ಯೂಗಲ್‌ನ ಸಿದ್ಧಾಂತವನ್ನು ಲ್ಯಮಾರ್ಕನು ಮೊದಲೇ ಕಂಡುಹಿಡಿದಿದ್ದನು. ಜಿರಾಫ್ ಪ್ರಾಣಿಗಳ ಗೋಣುಗಳು ಉದ್ದವಾಗಬೇಕಾದರೆ ಅದಕ್ಕೆ ಪರಿಸ್ಥಿತಿಯ ಪರಿಣಾಮವೇ ಕಾರಣವೆಂದು ಲ್ಯಮಾರ್ಕನು ಪ್ರತಿಪಾದಿಸುತ್ತಾನೆ. ಅದರಂತೆ ಮೈಮೇಲೆ ಕರೀ ಬಣ್ಣದ ಪಟ್ಟೆಗಳುಳ್ಳ ಓತಿಕಾಟಗಳು ಪರಿಸ್ಥಿತಿಯ ಪರಿಣಾಮವಾಗಿ ಹಳದೀ ಪಟ್ಟೆಗಳನ್ನು ಹೊಂದಬಹುದು. ಆದರೆ ಆ ಓತಿಕಾಟಗಳ ಮುಂದಿನ ಸಂತತಿಗಳಿಗೆ ಹಳದೀ ಪಟ್ಟೆಗಳು ಉಂಟಾಗಬೇಕಾದರೆ ಪರಿಸ್ಥಿತಿಯು ನಿರಂತರವಾಗಿ ಅನುಕೂಲವಾಗಿರಬೇಕು. ಹೊಸ ಲಕ್ಷಣಗಳು ಹೊಸ ಪರಿಸ್ಥಿತಿಯಿಂದಲೇ ಉಂಟಾಗುತ್ತವೆ ಎಂಬುದೇ ತತ್ವ. ಮತ್ತೊಂದು ದೃಷ್ಟಿಯಿಂದ ಹೇಳಬೇಕೆಂದರೆ, ಪೂರ್ವ ಪರಿಸ್ಥಿತಿಯ ಪರಿಣಾಮದ ಅವಶೇಷಗಳು ಒಂದುಗೂಡಿ ಪರಂಪರೆ ಎಂಬ ಬೀಜವಾಗುತ್ತದೆ; ಮತ್ತು ಈಗಿನ ಪರಿಸ್ಥಿತಿಯು ಆ ಬೀಜವನ್ನು ಬೆಳೆಯಿಸುವ ಭೂಮಿಯಾಗುತ್ತದೆ. ಯೋಗ್ಯ ಪರಿಸ್ಥಿತಿಯ

ಪ್ರೇರಣೆ ಇಲ್ಲದಿದ್ದರೆ ಮಗುವಿನಲ್ಲಿ ಹುದುಗಿಕೊಂಡಿರುವ ಶಕ್ತಿಗಳು ಹೊರಗೆ ಬೆಳಕಿಗೆ ಬಾರದೆ ಹಾಗೆಯೇ ಉಳಿಯುತ್ತವೆ. ಪ್ರತಿಕೂಲ ಪರಿಸ್ಥಿತಿ ಅಥವಾ ಅಸಮಾಧಾನಕರವಾದ ಶಿಕ್ಷಣದ ಮೂಲಕ ಸಾಲೆಯ ಹುಡುಗರ ಎಷ್ಟೋ ಶಕ್ತಿಗಳು ಸುಪ್ತಾವಸ್ಥೆಯಲ್ಲಿಯೇ ಉಳಿಯುತ್ತವೆ.

ಮನುಷ್ಯನಲ್ಲಿ ಹೊಸ ಲಕ್ಷಣಗಳು ಹೊಸ ಪರಿಸ್ಥಿತಿಯಿಂದ ಉಂಟಾಗುತ್ತವೆ. ಅಮೇರಿಕಾ ಮತ್ತು ಆಸ್ಟ್ರೇಲಿಯಾದಲ್ಲಿ ಹೋಗಿ ನೆಲಸಿದ ಜನರು ಯುರೋಪ ದಿಂದ ಬಂದವರಾದರೂ ಮೂಲ ಯುರೋಪದವರ ವಿಶೇಷ ಗುಣಗಳನ್ನು ಕಳೆದುಕೊಂಡು ಹೊಸ ಸಂಸ್ಕೃತಿಯನ್ನು ಕಟ್ಟಿದ್ದಾರೆ. ವಿದ್ಯಾಭ್ಯಾಸಕ್ಕೆಂದು ಹಳ್ಳಿಯನ್ನು ಬಿಟ್ಟು ಪಟ್ಟಣಕ್ಕೆ ಬಂದು ವಾಸಿಸುವ ಸಾಲೆಯ ಹುಡುಗರ ನಡೆನುಡಿಯು ಮಾರ್ಪಾಟು ಹೊಂದುತ್ತದೆ. ಮುಂದೆ ಇವರ ಸಂತತಿಗಳು ಹಳ್ಳಿಯ ಇವರ ಮನೆತನದವರಿಗಿಂತ ಬೇರೆಯಾಗಿ ಕಾಣುತ್ತಾರೆ. ಹೀಗೆ ಒಮ್ಮೆ ಗಳಿಸಿದ ವಿಶೇಷ ಲಕ್ಷಣಗಳು ಆನುವಂಶಿಕವಾಗಿ ಸಾಗಬೇಕಾದರೆ ಅದೇ ಬಗೆಯ ಸಮಾಜದ ಆವರಣವು ಅವಶ್ಯ. ಕಾಲಾನುಕ್ರಮದಲ್ಲಿ ಪರಿಸ್ಥಿತಿಯೇ ಪರಂಪರೆಯಾಗಿ ಪರಿಣಮಿಸುತ್ತದೆಂಬುದು ಮಾಕ್‌ಡೂಗಲ್ ಮೊದಲಾದವರು ಮಾಡಿದ ಪ್ರಾಣಿಗಳ ಮೇಲಿನ ಪ್ರಯೋಗಗಳಿಂದ ಸಿದ್ಧವಾಗುತ್ತದೆ. ಬುದ್ಧಿಶಕ್ತಿಯಂತೆ ನೀತಿಯ ಗುಣಗಳು ಆನುವಂಶಿಕವಾಗಿ ಬರುತ್ತವೆಯೊ ಅಥವಾ ಆವರಣದ ಫಲಿತಾಂಶಗಳಾಗಿರುತ್ತವೆಯೊ ಎಂಬ ಸಮಸ್ಯೆಯನ್ನು ಡಾ|| ಸಿರಿಲ್‌ಬರ್ಟನು ಪರಿಶೀಲಿಸಿ ನೋಡಿದ್ದಾನೆ. ಅವನು ಕಂಡುಹಿಡಿದದ್ದು ಏನಂದರೆ ಮಕ್ಕಳ ಅಪರಾಧಗಳು ಅಥವಾ ಅನೈತಿಕ ವರ್ತನಗಳು ಶರೀರ ಸಂಬಂಧಕ್ಕಿಂತ ಹೆಚ್ಚಾಗಿ ಸಹವಾಸದ ಫಲಗಳೇ ಆಗಿರುತ್ತವೆ. ಜತೆಯಂತೆ ಮತಿ ಮಹಾತ್ಮರೆನಿಸಿಕೊಳ್ಳುವವರು ಸಿದ್ಧವಾದ ಸುಸ್ವಭಾವ ಸಮೇತರಾಗಿ ಹುಟ್ಟಿ ಬರುವದಿಲ್ಲವೆಂದು ಮ್ಯಾಕ್‌ಡ್ಯೂಗಲ್‌ನು ಹೇಳುತ್ತಾನೆ. ಪರಂಪರೆ ಮತ್ತು ಪರಿಸ್ಥಿತಿಯ ವಾದದಲ್ಲಿ ಪ್ರೊ|| ನನ್‌ನ ವಿಚಾರ ಸರಣಿಯು ಹೆಚ್ಚು ಸಮಂಜಸವೆಂದು ತೋರುತ್ತದೆ. ಅವನ ಅಭಿಪ್ರಾಯದ ಪ್ರಕಾರ ಮನುಷ್ಯನು ಸ್ವತಂತ್ರ ಪ್ರಾಣಿಯು. ಅವನು ತನ್ನ ಸ್ವಂತ ಪ್ರಯತ್ನದಿಂದ ಅಗಾಧವಾದ ಕೆಲಸಗಳನ್ನು ಮಾಡಬಲ್ಲನು.

## ಸಾಮಾಜಿಕ ಪರಂಪರೆ

ಒಂದು ವೇಳೆ ಪೂರ್ವಜರು ಸಂಪಾದಿಸಿದ ಗುಣಗಳನ್ನು ಅಥವಾ ಶಕ್ತಿಗಳನ್ನು ಮನುಷ್ಯನು ಆನುವಂಶೀಯವಾಗಿ ಪಡೆಯಲಿ ಅಥವಾ ಪಡೆಯದೇ ಇರಲಿ, ಅವನು ಒಂದು ವಿಶಿಷ್ಟವಾದ ಸಂಪ್ರದಾಯದಲ್ಲಿ ಹುಟ್ಟಿ ಬೆಳೆಯುತ್ತಾನೆ ಎಂಬ ಮಾತನ್ನು ಎಲ್ಲರೂ ಒಪ್ಪಲೇಬೇಕು. ಮಗುವು ಯಾವ ಕುಟುಂಬದಲ್ಲಿ ಮತ್ತು ಯಾವ ಸಮಾಜದಲ್ಲಿ ಹುಟ್ಟಿ ಬೆಳೆಯುತ್ತಾನೆಯೋ ಆ ಕುಟುಂಬದ ಮತ್ತು ಯಾವ ಸಮಾಜದ ನಡೆ-ನುಡಿಗಳನ್ನು, ರೀತಿ-ನೀತಿಗಳನ್ನು, ಆಚಾರ-ಗಳನ್ನು, ಆಶೆ-ಆಕಾಂಕ್ಷೆಗಳನ್ನು ಮತ್ತು ಸಂಪ್ರದಾಯಗಳನ್ನು ಕಲಿಯುತ್ತಾನೆ. ವಂಶಾನುಗತವಾಗಿ ನಡೆಯುವ ಈ ಬಾಹ್ಯ ಆವರಣದ ಕಾಣಿಕೆಗೆ "ಸಾಮಾಜಿಕ ಪರಂಪರೆ" ಎಂದು ಅನ್ನುತ್ತಾರೆ. ಒಂದು ಸಮಾಜದಲ್ಲಿ ಅಥವಾ ಜನಾಂಗದಲ್ಲಿ ಬೆಳೆದು ಬಂದಿರುವ ಸಾಹಿತ್ಯ, ವಿಜ್ಞಾನ, ರೂಢಿ, ಸಂಪ್ರದಾಯ, ಸಂಘ, ಸಂಸ್ಥೆಗಳು ಒಂದು ಸಂತತಿಯಿಂದ ಮತ್ತೊಂದು ಸಂತತಿಗೆ ಸಾಮಾಜಿಕ ಪರಂಪರೆಯಾಗಿ ಸಾಗುತ್ತವೆ. ಒಂದು ಸಮಾಜವು ಸುಶಿಕ್ಷಿತವೂ, ಸುಸಂಸ್ಕೃತವೂ ಇದ್ದರೆ ಅಲ್ಲಿ ಬೆಳೆಯುವ ಮಕ್ಕಳೂ ಸುಶಿಕ್ಷಿತರೂ ಸುಸಂಸ್ಕೃತರೂ ಆಗುವ ಸಂಭವ ಹೆಚ್ಚು. ಒಂದು ಮನೆತನದಲ್ಲಿ ಅಥವಾ ಸಮಾಜದಲ್ಲಿ ಬದಲಾವಣೆ ಯಾದರೆ ಅದರ ಮುಂದಿನ ಪೀಳಿಗೆಯಲ್ಲಿಯೂ ಆ ಬದಲಾವಣೆಯು ಕಂಡು ಬರುತ್ತದೆ. ಪಟ್ಟಣದ ವಾತಾವರಣದಲ್ಲಿ ಬೆಳೆದ ಹುಡುಗರ ಸ್ವಭಾವವೂ, ಭಾಷೆಯ ಶೈಲಿಯೂ ಬೇರೆಯಾಗಿರುತ್ತದೆ; ಹಳ್ಳಿಯ ವಾತಾವರಣದಲ್ಲಿ ಬೆಳೆದ ಹುಡುಗರ ಸ್ವಭಾವವೂ ಮತ್ತು ಭಾಷೆಯ ಶೈಲಿಯೂ ಬೇರೆಯಾಗಿರುತ್ತದೆ. ಇದರಿಂದ ಶಿಕ್ಷಣದ ಅಂದರೆ ಬಾಹ್ಯ ಪರಿಸ್ಥಿತಿಯ ಮಹತ್ವವು ಎಷ್ಟೆಂಬುದು ಗೊತ್ತಾಗುತ್ತದೆ. ರಾಷ್ಟ್ರದಲ್ಲಿರುವ ಎಲ್ಲ ಜನರು ಸುಶಿಕ್ಷಿತರು ಆಗಬೇಕಾದರೆ ಅವರೆಲ್ಲರಿಗೂ ಶಿಕ್ಷಣವೆಂಬ ಸಾಮಾಜಿಕ ಪರಂಪರೆಯನ್ನು ಅಥವಾ ಬಾಹ್ಯ ಪರಿಸ್ಥಿತಿಯನ್ನು ಒದಗಿಸಿಕೊಡುವದು ಅವಶ್ಯ. "ಮನುಷ್ಯನ ಶ್ರೇಷ್ಠತೆಯ ಸಮಸ್ಯೆಯು ವಂಶಪರಂಪರೆಗಿಂತ ಹೆಚ್ಚಾಗಿ ಸಮಾಜದ ಪರಂಪರೆಯ ಸಮಸ್ಯೆ ಯಾಗಿರುತ್ತದೆ" ಎಂದು ಮ್ಯಾಕ್‌ಡೂಗಲ್‌ನು ಹೇಳುತ್ತಾನೆ. ಅನೇಕ ಶತಮಾನಗಳಿಂದ ನಡೆದು ಬಂದ ಮನುಷ್ಯನ ಸಂಸ್ಕೃತಿಯು ಶರೀರ ಸಂಬಂಧೀ ಪರಂಪರೆಯಾಗಿರದೆ ಸಾಮಾಜಿಕ ಪರಂಪರೆಯಾಗಿದೆ. ಸಮಾಜದ ವರ್ಗಸ್ತು

ಮನುಷ್ಯರ ಸ್ವಭಾವವನ್ನು ತಿದ್ದದಿದ್ದರೆ ಅವರು ಕಾಡುಪಶುಗಳಂತೆ ವರ್ತಿಸುವರು. ಮನುಷ್ಯನ ಸಂಸ್ಕೃತಿಯ ಬೆಳವಣಿಗೆಗೆ ಮುಖ್ಯವಾಗಿ ಭಾಷೆಯೇ ಕಾರಣ. ಆದುದರಿಂದ ಶಿಕ್ಷಣದಲ್ಲಿ ಭಾಷೆಯ ಅಭ್ಯಾಸಕ್ಕೆ ಮೊದಲಿನ ಸ್ಥಾನವನ್ನು ಕೊಡುತ್ತ ಬಂದಿದ್ದಾರೆ.

"ಪರಂಪರೆ ಮತ್ತು ಪರಿಸ್ಥಿತಿ" ಅಥವಾ "ಸೃಷ್ಟಿ ಮತ್ತು ಶಿಕ್ಷಣ" ಎಂಬ ಸಮಸ್ಯೆಯು ಅನೇಕ ಶತಮಾನಗಳಿಂದ ಸಾಮಾಜಿಕ ಮತ್ತು ಶಿಕ್ಷಣ ಸಮಸ್ಯೆಯಾಗಿ ಬಂದಿರುತ್ತದೆ. ಪರಂಪರಾವಾದಿಗಳು ಸಾಮಾಜಿಕ ಪರಂಪರೆಯ ಮತ್ತು ಪರಿಸ್ಥಿತಿಯ ವರ್ಚಸ್ಸಿನ ವಿಚಾರವನ್ನು ಬಿಟ್ಟುಬಿಡುತ್ತಾರೆ. ಇದು ಸಂಕುಚಿತ ದೃಷ್ಟಿ. ಕೆಲವರು ವರ್ಗ ಭೇದವನ್ನು ಕಾಯ್ದುಕೊಳ್ಳಲಿಕ್ಕೆ ಈ ವಾದವನ್ನು ಹೂಡುತ್ತಾರೆ. ಇದು ಸ್ವಾರ್ಥ ದೃಷ್ಟಿ. ತಂದೆಯ ಉದ್ಯೋಗವನ್ನು ಮಗನು ಮಾಡಬೇಕಲ್ಲದೆ ಬೇರೆಯವರ ಉದ್ಯೋಗವನ್ನು ಅವನು ಮಾಡಕೂಡದೆಂದು ಇವರು ಪ್ರತಿಪಾದಿಸುತ್ತಾರೆ. ತಂದೆಯ ಗುಣಗಳನ್ನು ಮತ್ತು ಕಲಾಕೌಶಲ್ಯಗಳನ್ನು ಮಗನು ಸಹಜವಾಗಿ ಪಡೆಯುತ್ತಾನೆ ಎಂಬ ತತ್ವವನ್ನು ಮುಂದೆ ಮಾಡಿ ತಮ್ಮ ವಾದವನ್ನು ಸಮರ್ಥಿಸಲು ಇವರು ಪ್ರಯತ್ನಿಸುತ್ತಾರೆ. ಆದರೆ ತಂದೆಯು ಮತ್ತು ಮಗನು ಹೆಚ್ಚಾಗಿ ಒಂದೇ ಪರಿಸ್ಥಿತಿಯಲ್ಲಿ ಬೆಳೆಯುವದರಿಂದ ತಂದೆಯಂತೆ ಮಗನಾಗುತ್ತಾನೆಂದು ನಮ್ಮ ಸಿದ್ಧಾಂತ. ಪರಿಸ್ಥಿತಿಯ ಪರಿಣಾಮದ ಬಗೆಗೆ ನಡೆಯಿಸಿದ ಇತರ ಕೆಲವು ಅಭ್ಯಾಸಗಳ ವಿವರಣೆಯನ್ನು ಕೆಳಗೆ ಕೊಡಲಾಗಿದೆ. ಪರಂಪರೆಯವಾದವು ಅಯಶಸ್ವಿಯಾಗಿರುವದಲ್ಲದೆ ಅದರ ಅನುಸರಣೆಯಿಂದ ಅನೇಕ ಕೆಡಕುಗಳು ಆಗಿರುತ್ತವೆಂಬುದು ಕೆಳಗೆ ಕೊಟ್ಟ ಉದಾಹರಣೆಗಳಿಂದ ಗೊತ್ತಾಗುತ್ತದೆ. ಪರಂಪರೆಯವಾದದ ಪ್ರಕಾರ ಅರಸನ ಮಗನೇ ಅರಸನು ಆಗಲು ಯೋಗ್ಯನೆಂದು ಅರ್ಥವಾಗುವದು. ಆದರೆ ಶೂರನಾದ ಅರಸನ ಹೊಟ್ಟೆಯಲ್ಲಿ ಹೇಡಿಯಾದ ರಾಜಕುಮಾರರು ಹುಟ್ಟಿದ ಅನೇಕ ಉದಾಹರಣೆಗಳು ಇತಿಹಾಸದಲ್ಲಿ ಕಂಡುಬರುತ್ತವೆ. ಈಗ ಜಗತ್ತಿನಲ್ಲಿ ಬಲಾಢ್ಯ ರಾಷ್ಟ್ರಗಳೆಂದರೆ ಅಮೇರಿಕೆ ಮತ್ತು ರಶಿಯಾ. ಆದರೆ ಇಲ್ಲಿ ಅರಸೊತ್ತಿಗೆಯ ಪರಂಪರೆಯು ಇರುವದಿಲ್ಲ. ಮೊನ್ನೆ ಮೊನ್ನೆ ಲೋಕ ಸತ್ತೆಯನ್ನು ಸ್ಥಾಪಿಸಿದ ಚೀನ ದೇಶದಲ್ಲಿ ಅರಸೊತ್ತಿಗೆ ಇರುವದಿಲ್ಲ.

ಬುದ್ಧಿ ಒರೆಗಳಿಂದ ತಂದೆಯ ಬುದ್ಧಿಯನ್ನು ಅಳೆದು ಮಗನ ಬುದ್ಧಿಯನ್ನು ತರ್ಕಿಸಲು ಮತ್ತು ಅಣ್ಣನ ಬುದ್ಧಿಯನ್ನು ಅಳೆದು ತಮ್ಮನ ಬುದ್ಧಿಯನ್ನು ತರ್ಕಿಸಲು ಬರುವದಿಲ್ಲವೆಂದು ಹಾಗೆ ಪರೀಕ್ಷೆ ಮಾಡಿ ಕಂಡು ಹಿಡಿದಿದ್ದಾರೆ. ತಂದೆ ಮಕ್ಕಳ ಹೋಲಿಕೆಯು ನೂರಕ್ಕೆ ಐವತ್ತರಕಿಂತ ಹೆಚ್ಚಾಗಲಾರದೆಂದು ಕಾರ್ಲ್ ಪಿಯರಸನ್ ಮೊದಲಾದವರ ಅಭ್ಯಾಸದಿಂದ ಗೊತ್ತಾಗುತ್ತದೆ. ಬುದ್ಧಿಯು ಎಷ್ಟರ ಮಟ್ಟಿಗೆ ಹುಟ್ಟುಗುಣ ಎಂದು ತಿಳಿದುಕೊಳ್ಳುವದು ಶಿಕ್ಷಕನಿಗೆ ಮಹತ್ವದ ಪ್ರಶ್ನೆ ಅಲ್ಲ. ಆದರೆ ಬುದ್ಧಿ ಒರೆಗಳ ಬಗೆಗೆ ಇತ್ತೀಚಿಗೆ ಕಂಡು ಹಿಡಿದ ಸಂಗತಿಗಳನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ. ಒರೆಗಳು ಬುದ್ಧಿಯನ್ನು ಸ್ಥೂಲವಾಗಿ ಸೂಚಿಸುವ ಸಂಕೇತಗಳು ಮಾತ್ರ. ಬುದ್ಧಿಯ ಒರೆಗಳಲ್ಲಿ ಉಪಯೋಗಿಸಿದ ಭಾಷೆ, ಪರೀಕ್ಷೆ ತಕ್ಕೊಳ್ಳುವವನ ಅನುಭವ, ಪರೀಕ್ಷೆ ತಕ್ಕೊಳ್ಳುವ ಪದ್ಧತಿಯಲ್ಲಿಯ ಕುಂದುಕೊರತೆ ಮತ್ತು ಪರೀಕ್ಷಿಸಲ್ಪಡು ವವನ ಸಹಕಾರ ಇವೆಲ್ಲವು ಬುದ್ಧಿ ಪರೀಕ್ಷೆಯ ಪರಿಣಾಮವನ್ನು ಅನಿಶ್ಚಿತ ಗೊಳಿಸುತ್ತವೆ. ಬುದ್ಧಿಮಾನವು (I. Q.) ಎಂದೂ ಬದಲಾಗದ ವಸ್ತುವೆಂದು ತಿಳಿಯಬಾರದು. ಅದು ಹತ್ತು ಅಂಶದವರೆಗೆ ಹೆಚ್ಚು ಕಡಿಮೆ ಆಗಲು ಸಾಧ್ಯವಿದೆ ಎಂದು ಮನೋವಿಜ್ಞಾನಿಗಳ ಮತ. ಶಿಕ್ಷಣದ ಪರಿಣಾಮವು ಬುದ್ಧಿಮಾನದ ಮೇಲೂ ಆಗುತ್ತದೆಂದು ಪ್ರಯೋಗದಿಂದ ಕಂಡುಹಿಡಿದಿದ್ದಾರೆ. ಶಿಸು ಸಾಲೆ ಗಳಲ್ಲಿ ಶಿಕ್ಷಣ ಹೊಂದಿದ ಮೇಲೆ ಹುಡುಗರ ಬುದ್ಧಿಮಾನವು ಕೆಲಮಟ್ಟಿಗೆ ಹೆಚ್ಚಾಗುತ್ತದೆಂದು ಕಂಡುಬಂದಿದೆ. ಪರಿಸ್ಥಿತಿಯ ಪರಿಣಾಮವು ಬುದ್ಧಿಯ ಮೇಲೆ ಸುಮಾರು ಇಪ್ಪತ್ತು ಶತಾಂಶಗಳವರೆಗೆ ಆಗುತ್ತದೆಂದು ಪ್ರಯೋಗ ದಿಂದ ಸಿದ್ಧವಾಗಿದೆ. ಮಕ್ಕಳು ಚಿಕ್ಕವರಿದ್ದ ಹಾಗೆ ಈ ಪರಿಣಾಮವು ಹೆಚ್ಚು ಪ್ರಮಾಣದಲ್ಲಿ ಕಾಣುತ್ತದೆ. ಸಂಗಡಿಗರ ಬುದ್ಧಿ ಮಟ್ಟವು ಹೆಚ್ಚು ಕಡಿಮೆ ಆದಂತೆ ಮಗುವಿನ ಬುದ್ಧಿಮಟ್ಟವೂ ಸಾಮಾನ್ಯವಾಗಿ ಹೆಚ್ಚು ಕಡಿಮೆ ಆಗುತ್ತದೆ ಎಂಬುದು ಕೆಲವು ಅಭ್ಯಾಸಗಳಲ್ಲಿ ಕಂಡುಬಂದಿದೆ. "ಜತೆಯಂತೆ ಮತಿ" ಎಂಬ ನಾಣ್ಣುಡಿಯಾದರೂ ಇದೇ ಮಾತನ್ನು ಹೇಳುತ್ತದೆ. ಸಾಲೆಯ ವಾತಾವರಣ, ಶಿಕ್ಷಕನ ಪ್ರೋತ್ಸಾಹ ಮತ್ತು ಮನೆಯ ಪರಿಸ್ಥಿತಿ ಇವು ಮಗುವಿನ ಬುದ್ಧಿಶಕ್ತಿಯ ಬೆಳವಣಿಗೆಯ ಮೇಲೆ ಎಷ್ಟೋ ಪರಿಣಾಮವನ್ನು ಉಂಟು ಮಾಡುತ್ತವೆ. ಆದರೆ ಶಿಕ್ಷಣವೆಂಬುದು ಕೇವಲ ಬುದ್ಧಿಶಕ್ತಿಗೆ ಸಂಬಂಧಪಟ್ಟ

ವಿಷಯವೆಂದು ತಿಳಿಯುವದು ತಪ್ಪು. ವಿಷಯ ಜ್ಞಾನ, ವಿಚಾರಶಕ್ತಿ, ಮನಸ್ಸಿನ ಒಲವು ಜೀವನದ ಧ್ಯೇಯ, ಕಲಾಕೌಶಲ್ಯ, ಶೀಲಸ್ವಭಾವ ಮುಂತಾದ ವ್ಯಕ್ತಿತ್ವ ವಿಕಾಸದಲ್ಲಿ ಅಡಕವಾಗಿರುವ ವಿಷಯುಗಳೂ ಶಿಕ್ಷಣದಲ್ಲಿ ಬರುತ್ತವೆ. ಇವು ಮಹತ್ವದ ವಿಷಯಗಳು. ಕಲಿತರೆ ಮತ್ತು ಕಲಿಸಿದರೆ ಮಾತ್ರ ಬರುತ್ತವೆ.

## ಕಲಾ ಕೌಶಲ್ಯ

ಕಲಾಕೌಶಲ್ಯದಲ್ಲಿ ಪ್ರಾವೀಣ್ಯತೆಯನ್ನು ಹೊಂದಬೇಕಾದರೆ ಸಾಧನ ಸಾಮಗ್ರಿಗಳನ್ನು ಪೂರೈಸುವದು ಅವಶ್ಯ. ಆದರೆ ಈ ಅನುಕೂಲತೆಗಳು ಇದ್ದರೂ ಪ್ರಗತಿ ಕಾಣಬೇಕಾದರೆ ಶಿಕ್ಷಕನ ಮಾರ್ಗದರ್ಶನ, ಸಹಾಯ ಸೂಚನೆಗಳು, ಪ್ರತ್ಯಕ್ಷ ನಿದರ್ಶನಗಳು ಅವಶ್ಯ. ಚಿತ್ರಕಲೆ, ಅರಲಿನ ಕೆಲಸ, ಗಾಯನ, ಆಟ ಮೊದಲಾದ ಕಲೆಗಳನ್ನು ಮಗುವು ಕಲಿಯುವಾಗ ಶಿಕ್ಷಕನು ತನ್ನ ಅನುಭವದ ಲಾಭವನ್ನು ಕೊಡತಕ್ಕದ್ದು. ಮಾಡುತ್ತ ಕಲಿಯುವದು ಎಂಬ ತತ್ತ್ವವನ್ನು ಶಬ್ದಶಃ ಅರ್ಥಮಾಡಿದರೆ ತಪ್ಪಾಗುವದು. ಕೇವಲ ಸಾಮಗ್ರಿಗಳನ್ನು ಒದಗಿಸಿ ಮಗುವನ್ನು ಅವನಷ್ಟಕ್ಕೇ ಬಿಟ್ಟರೆ ಅವನು ಕಲಿಯದೇ ಬಿಡಬಹುದು.

## ಶೀಲಸ್ವಭಾವ

ಬುದ್ಧಿಶಕ್ತಿಗಿಂತ ವರ್ತನದ ಮೇಲೆ ಪರಿಸ್ಥಿತಿಯ ಪರಿಣಾಮವು ಹೆಚ್ಚಾಗಿ ಆಗುತ್ತದೆ. ತಂದೆ ತಾಯಿಗಳ ಶೀಲಸ್ವಭಾವದಂತೆ ಮಕ್ಕಳ ಶೀಲಸ್ವಭಾವವೂ ಮಾರ್ಪಡುವ ಸಂಭವವು ಹೆಚ್ಚು. ದೊಡ್ಡವರ ನಡತೆಯಂತೆ ಸಣ್ಣವರ ನಡತೆಯೂ ಆಗುವ ಸಂಭವವು ಹೆಚ್ಚು. ತಂದೆ-ಮಕ್ಕಳ ಸಂಬಂಧದ ಬಗ್ಗೆ ನಡೆಯಿಸಿದ ಅಭ್ಯಾಸಗಳಿಂದ ಈ ಮಾತು ಕಂಡುಬಂದಿದೆ. ಅಪರಾಧಗಳನ್ನು ಮಾಡುವದು ಆನುವಂಶಿಕವಾಗಿ ಬಂದಿರುವದಿಲ್ಲವೆಂದು ಡಾಕ್ಟರ ಸಿರಿಲ್‌ಬರ್ಟನು ಸಿದ್ಧಮಾಡಿದ್ದಾನೆ. ಮನೆಯವರ ಕೆಟ್ಟ ನಡತೆ, ಬಡತನ ಮತ್ತು ಕೆಟ್ಟ ನೆರೆಹೊರೆ ಇವುಗಳ ವರ್ಚಸ್ಸು ಮಕ್ಕಳ ವರ್ತನದ ಮೇಲೆ ನಿಶ್ಚಯವಾಗಿ ಆಗುವದೆಂದು ಅವನ ಮತ. ಸಿನೇಮಾ ನಾಟಕಗಳ, ಮತ್ತು ಸಂಘಸಂಸ್ಥೆಗಳ ಪರಿಣಾಮವೂ ಮಕ್ಕಳ ಸ್ವಭಾವದ ಮೇಲೆ ಆಗದೇ ಇರದು. ಪರಿಸ್ಥಿತಿಯನ್ನು ಬದಲಾಯಿಸಿದರೆ ಮಕ್ಕಳ ಸ್ವಭಾವವನ್ನೂ ವರ್ತನವನ್ನೂ ಬದಲಾಯಿಸುವದು ಶಕ್ಯವಿದೆ. ಇಂಗ್ಲಂಡ ಮತ್ತು ಅಮೇರಿಕಾ ದೇಶಗಳಲ್ಲಿ ಅವಳಿ ಜವಳಿ ಮಕ್ಕಳನ್ನು ಮತ್ತು ಸಾಕು

ಮಕ್ಕಳನ್ನು ವಿಶಿಷ್ಟ ಆವರಣಗಳಲ್ಲಿ ಬೆಳೆಯಿಸಿ ಈ ಸಿದ್ಧಾಂತಕ್ಕೆ ಬಂದಿದ್ದಾರೆ. ಸತ್ವ, ರಜ, ತಮೋಗುಣಗಳು ಹುಟ್ಟುಗುಣಗಳಲ್ಲ; ಅವು ಪರಿಸ್ಥಿತಿಯ ಪರಿಣಾಮವಾಗಿ ಮನುಷ್ಯನಲ್ಲಿ ತೋರುತ್ತವೆ.

## ಮನೋವೃತ್ತಿ

ಮನೋವೃತ್ತಿಗಳು ಕೂಡ ಮಕ್ಕಳು ಬೆಳೆಯುವ ವಾತಾವರಣದಿಂದ ಹದಗೊಳ್ಳುತ್ತವೆ. ಮನೋವೃತ್ತಿ ಅಂದರೆ ಉದ್ವೇಗದಿಂದ ಕೂಡಿದ ಅಭಿಪ್ರಾಯ ಸತ್ಯ, ಅಸತ್ಯ, ನ್ಯಾಯ, ಅನ್ಯಾಯ, ಪ್ರಾಮಾಣಿಕತನ, ಅಪ್ರಾಮಾಣಿಕತನ ನೀತಿ ಅನೀತಿ, ಪಾಪ ಪುಣ್ಯ ಮೊದಲಾದ ವಿಷಯಗಳ ಬಗೆಗೆ ತಂದೆತಾಯಿಗಳ ಅಭಿಪ್ರಾಯಗಳನ್ನು ಅವರ ಮಕ್ಕಳೂ ಸ್ವೀಕರಿಸುತ್ತಾರೆ. ಇದರಂತೆ ಪರಭಾಷೆ ಪರದೇಶ, ಪರಮತ, ಪರಸಮಾಜದ ಬಗೆಗೆ ಆದರದ ಅಥವಾ ಅನಾದರದ ಅಭಿಪ್ರಾಯಗಳನ್ನು ಮಕ್ಕಳು ತಮ್ಮ ಬಳಗದವರಿಂದ ಕಲಿಯುತ್ತಾರೆ. ಈ ವಿಷಯದಲ್ಲಿ ಸಾಲೆ, ಮಠ, ಸಂಘ, ಸಂಸ್ಥೆಗಳಿಗಿಂತ ಮನೆಯ ವರ್ಚಸ್ಸು ಹೆಚ್ಚು ಬಲವಾಗಿರುತ್ತದೆ. ಧಾರ್ಮಿಕ ಕಲ್ಪನೆಗಳು, ಮತ್ತು ಆಧ್ಯಾತ್ಮಿಕ ಸಾಧನೆಗಳು ಪರಿಸ್ಥಿತಿಯ ಮೇಲೆ ಅವಲಂಬಿಸಿರುತ್ತವೆ. ಎಂಬುದು ಬಸವಣ್ಣನವರು ಯೋಚಿಸಿದ "ಅಷ್ಟಾವರ"ಗಳಿಂದ ಸ್ಪಷ್ಟವಾಗುತ್ತದೆ. ಮಕ್ಕಳು ಯಾವ ವ್ಯಕ್ತಿಯ ಬಗೆಗೆ ಗೌರವ ವಿಶ್ವಾಸಗಳನ್ನು ತಳೆದಿರುತ್ತಾರೆಯೋ ಅಂಥವರ ವರ್ಚಸ್ಸು ಮಕ್ಕಳ ಮೇಲೆ ಬೀಳುತ್ತದೆ. ಎಳೆಯ ವಯಸ್ಸಿನಲ್ಲಿ ರೂಪುಗೊಂಡ ಮನೋವೃತ್ತಿಗಳೂ ಮತ್ತು ವರ್ತನಗಳೂ ಹೆಚ್ಚು ಸ್ಥಿರವಾಗಿ ಉಳಿಯುವ ಸಂಭವವುಂಟು. ಅಂತೆಯೇ 'ಮೂರು ವರುಷದ ಬುದ್ಧಿ ನೂರು ವರುಷದ ತನಕ' ಎಂಬ ನಾಣ್ಣುಡಿಯು ಉಂಟಾಗಿದೆ. ಮನುಷ್ಯನ ಅಭಿರುಚಿಗಳೂ ಮತ್ತು ಬೇಡಿಕೆಗಳೂ ಸಹ ಅವನಿರುವ ಸಮಾಜದ ವರ್ಚಸ್ಸಿನಿಂದಲೇ ಹುಟ್ಟಿರುತ್ತವೆ. ಆದರೆ ಹೊಸ ಶಿಕ್ಷಣದಿಂದ ಅವನ ಮನೋವೃತ್ತಿಗಳನ್ನೂ, ಅಭಿರುಚಿಗಳನ್ನೂ ಮತ್ತು ವರ್ತನವನ್ನೂ ಬದಲಾಯಿಸಲು ಶಕ್ಯವಿರುತ್ತದೆ.

## ಸಹಕಾರ ಮತ್ತು ಸ್ಪರ್ಧೆ

ಸ್ಪರ್ಧೆ ಅಥವಾ ಕ್ರೋಧ ಎಂಬುದು ಹುಟ್ಟುಗುಣವೆಂದು ಮತ್ತು ಸಹಕಾರ ಎಂಬುದು ಕಲಿತ ಗುಣವೆಂದು ಈವರೆಗೆ ಕೆಲವರು ತಿಳಿದುಕೊಂಡಿದ್ದರು. ಆದರೆ

ಸ್ಪರ್ಧೆಯ ವೃತ್ತಿಯು ಕೂಡ ಸಾಮಾಜಿಕ ಸನ್ನಿವೇಶದಿಂದ ಕಲಿಯಲ್ಪಡುತ್ತವೆಂದು ಇತ್ತೀಚಿನ ಪ್ರಯೋಗಗಳಿಂದ ಕಂಡುಬಂದಿದೆ. ಅಮೇರಿಕೆಯ ಸಂಸ್ಕೃತಿಯಲ್ಲಿ ಸ್ಪರ್ಧೆಗೆ ಹೆಚ್ಚು ಮಾನ್ಯತೆ ಇರುವದರಿಂದ ಸಾಲಿ ಕಾಲೇಜಗಳಲ್ಲಿ, ಉದ್ಯೋಗ ವ್ಯವಹಾರಗಳಲ್ಲಿ ಸಹಕಾರಿ ಚಟುವಟಿಕೆಗಳಿಗಿಂತ ಸ್ಪರ್ಧೆಯ ಚಟುವಟಿಕೆಗಳೇ ಹೆಚ್ಚಾಗಿ ಕಂಡುಬರುತ್ತವೆ. ಸ್ಪರ್ಧೆ ಇದ್ದಲ್ಲಿ ಪ್ರಾವೀಣ್ಯತೆಗೆ ಎಡೆಯುಂಟು. ಆದರೆ ಅದು ದ್ವೇಷ, ಸ್ವಾರ್ಥಗಳಿಗೆ ಪುಟ ಕೊಡುವ ಸಂಭವ ಹೆಚ್ಚು. ಸಹಕಾರ ಸಹಾಯ, ಮತ್ತು ಸಹಾನುಭೂತಿಪರ ಗುಣಗಳು ಮಕ್ಕಳಲ್ಲಿ ಬೆಳೆಯುವಂತೆ ಸಾಲೆಯ ಸನ್ನಿವೇಶಗಳನ್ನು ಅಣಿಮಾಡಲು ಬರುವಂತಿದೆ. ಆಟಪಾಟಗಳಲ್ಲಿ ವ್ಯಕ್ತಿಗಳ ಸ್ಪರ್ಧೆಗಿಂತ ಗುಂಪುಗಳ ಸ್ಪರ್ಧೆಯನ್ನು ಪ್ರೋತ್ಸಾಹಿಸಬೇಕು. ಆದರಿಂದ ಸಹಕಾರ ಬೆಳೆಯುವದು.

## ನಿರಂಕುಶ ವರ್ತನ ಮತ್ತು ಲೋಕಸತ್ತೆಯ ವರ್ತನ

ನಿರಂಕುಶ ಇಲ್ಲವೆ ಲೋಕಸತ್ತೆಯ ವಾತಾವರಣದಲ್ಲಿ ಬೆಳೆದ ಮಕ್ಕಳ ವರ್ತನದ ರೀತಿಗಳು ಬೇರೆ ಬೇರೆಯಾಗಿರುತ್ತವೆ ಎಂಬುದು ಪ್ರಯೋಗದಿಂದ ಸಿದ್ಧವಾಗಿದೆ. ಹತ್ತು–ಹನ್ನೊಂದು ವರುಷದ ಹುಡುಗರ ಎರಡು ಗುಂಪುಗಳನ್ನು ಮಾಡಿ ಒಂದರಲ್ಲಿ ಸರ್ವಾಧಿಕಾರದ ವಿಧಾನಗಳನ್ನು ಮತ್ತೊಂದರಲ್ಲಿ ಲೋಕಸತ್ತೆಯ ವಿಧಾನಗಳನ್ನು ಉಪಯೋಗಿಸಲಾಗಿತ್ತು. ಮೊದಲನೇ ಗುಂಪಿನಲ್ಲಿ ನಾಯಕನು ತನ್ನ ಗುಂಪಿನ ಹುಡುಗರು ಕೈಕೊಳ್ಳಬೇಕಾದ ಕಾರ್ಯಕ್ರಮದ ಎಲ್ಲ ಯೋಜನೆಯನ್ನು ತಾನೊಬ್ಬನೇ ಮಾಡುತ್ತಾನೆ; ಕೆಲಸ ಮಾಡುವ ಎಲ್ಲ ರೀತಿಗಳನ್ನು ತಾನೇ ಸೂಚಿಸುತ್ತಾನೆ. ನಿರ್ಣಯಗಳನ್ನು ತಾನೇ ಕೊಡುತ್ತಾನೆ. ಮತ್ತು ಹುಡುಗರು ತಪ್ಪಿದಲ್ಲಿ ವೈಯಕ್ತಿಕವಾಗಿ ಅವರನ್ನು ಟೀಕಿಸುತ್ತಾನೆ. ಈ ಸನ್ನಿವೇಶಗಳ ಪರಿಣಾಮವಾಗಿ ಆ ಹುಡುಗರಲ್ಲಿ ಉದ್ಧಾಮತನ, ಕೆಲಸದ ಬಗ್ಗೆ ನಿರುತ್ಸಾಹ, ವೈಯಕ್ತಿಕ ಸ್ಪರ್ಧೆ, ದ್ವೇಷ, ನಾಯಕನ ವಿರೋಧ ಮುಂತಾದ ಗುಣಗಳು ಕಂಡುಬಂದವು. ಲೋಕಸತ್ತೆಯ ಗುಂಪಿನಲ್ಲಿಯ ಹುಡುಗರು ತಾವು ಮಾಡಬೇಕಾದ ಕೆಲಸಗಳನ್ನು ತಾವೇ ಆರಿಸಿಕೊಳ್ಳುತ್ತಾರೆ. ತಮ್ಮ ಕಾರ್ಯಕ್ರಮದ ಯೋಜನೆಯನ್ನು ತಾವೇ ಮಾಡುತ್ತಾರೆ. ನಾಯಕನು ಹಿನ್ನೆಲೆಯಲ್ಲಿ ನಿಂತು 'ಹೀಗೆ ಮಾಡಿದರೆ ಒಳ್ಳೆಯದು ಆದೀತು ವಿಚಾರಿಸಿರಿ'

ಎಂದು ಕೇವಲ ಸೂಚನೆಗಳನ್ನು ಸಮಯೋಚಿತವಾಗಿ ಕೊಡುತ್ತಾನೆ. ಹುಡುಗರ ಸ್ವಂತ ವಿಚಾರ, ಸ್ವಂತ ಹೊಣೆ ಮತ್ತು ಸ್ವಂತ ನಡತೆಗೆ ತುಂಬ ಪ್ರೋತ್ಸಾಹವನ್ನು ಕೊಡುತ್ತಾನೆ. ಹುಡುಗರು ತಪ್ಪಿದಲ್ಲಿ ವ್ಯಕ್ತಿ ಟೀಕೆ ಮಾಡದೆ ಲೋಕಸತ್ತೆಯ ತತ್ವಗಳ ಆಚರಣೆಯ ಉದಾಹರಣೆಗಳನ್ನು ಕೊಡುತ್ತಾನೆ. ಇದರ ಪರಿಣಾಮವಾಗಿ ಈ ಗುಂಪಿನ ಹುಡುಗರಲ್ಲಿ ಸಹಕಾರ, ಸಂಘಾಭಿಮಾನ, ಹೊಣೆಗಾರಿಕೆ, ಮುಂದಾಳುತನ, ತತ್ವವಿಚಾರ ಮೊದಲಾದ ಲೋಕಸತ್ತೆಯ ಗುಣಗಳು ಕಂಡುಬಂದವು. ಈ ಪ್ರಯೋಗದಿಂದ ಸಿದ್ಧವಾಗುವವೇನಂದರೆ— **ಮನುಷ್ಯನ ವಿಚಾರಗಳು ಮತ್ತು ಸಾಮಾಜಿಕ ವ್ಯವಹಾರಗಳು ಸಮಾಜ ರಚನೆಯನ್ನೇ ಅವಲಂಬಿಸಿರುತ್ತವೆ.** ಹಿಂದ ಸಮಾಜ ರಚನೆಗೆ ವರ್ಣ-ಜಾತಿಗಳ ಕಲ್ಪನೆಯೇ ತಳಹದಿಯಾಗಿರುವದರಿಂದ ಅದರ ಪರಿಣಾಮವು ಜನರ ವರ್ತನದ ಮೇಲೆ ಎಷ್ಟೋ ವಿಧವಾಗಿ ಆಗಿರುತ್ತದೆ. ಜಾತಿ ದ್ವೇಷ ಅಸಹಕಾರ, ಆರ್ಥಿಕ ಮುಗ್ಗಟ್ಟು, ವಿದ್ಯೆಯ ಅಸಮಾನತೆ ಮೊದಲಾದ ಅನಿಷ್ಟ ಪರಿಣಾಮಗಳು ಅದರಿಂದ ಉಂಟಾಗಿವೆ. ಆದರೆ ಈ ಸಮಾಜ ರಚನೆಯನ್ನು ಬುದ್ಧ-ಬಸವರು ಅಲ್ಲಗಳೆದಿರುತ್ತಾರೆ. ಈಗಿನ ಹೊಸ ಘಟನೆಯೂ ಅದಕ್ಕೆ ವಿರೋಧವಾಗಿದೆ ನ್ಯಾಯ ಮತ್ತು ಸಮಾನತೆಯ ತತ್ವಗಳ ಮೇಲೆ ಹೊಸ ಸಮಾಜರಚನೆಯು ಆಗಬೇಕಾಗಿದೆ. ಲೋಕಸತ್ತೆಯ ತತ್ವಗಳ ಮೇಲೆ ಯೋಜಿಸಲ್ಪಟ್ಟ ಪುರೋಗಾಮಿ ಶಿಕ್ಷಣ ಪದ್ಧತಿಯಿಂದ ಮಾತ್ರ ಇದು ಸಾಧ್ಯ. ಲೋಕಸತ್ತೆಯ ಹೊಸ ಪರಂಪರೆಯನ್ನು ಸ್ಥಾಪಿಸಲಿಕ್ಕೆ ಈಗ ಶಾಲೆಯೊಂದೇ ಯೋಗ್ಯ ಸ್ಥಾನ.

### ಅವಳಿಜವಳಿ ಮಕ್ಕಳು

ಪರಂಪರೆ ಮತ್ತು ಪರಿಸ್ಥಿತಿಯ ವರ್ಚಸ್ಸನ್ನು ಅಳೆಯಲಿಕ್ಕೆ ಅವಳಿಜವಳಿ ಮಕ್ಕಳ ಅಭ್ಯಾಸವನ್ನು ಮಾಡುತ್ತಾರೆ. ಅಣ್ಣ ತಮ್ಮಂದಿರು, ಅಕ್ಕತಂಗೆಯರಿಗಿಂತ ಅವಳಿಜವಳಿ ಮಕ್ಕಳಲ್ಲಿ ಹೆಚ್ಚು ಹೋಲಿಕೆ ಇರುತ್ತದೆ. ನ್ಯೂಮನ್, ಫ್ರೀಮನ್ ಮತ್ತು ಹಾಲ್‌ಜಿಂಜರ ಎಂಬವರು ಬೇರೆ ಬೇರೆ ಪರಿಸ್ಥಿತಿಯಲ್ಲಿ ಬೆಳೆದ ೫೦ ಜೋಡಿ ಅವಳಿಜವಳಿ ಮಕ್ಕಳ ಅಭ್ಯಾಸವನ್ನು ಮಾಡಿರುವರು. ಅವುಗಳಲ್ಲಿ ಒಂದು ಉದಾಹರಣೆಯನ್ನು ಇಲ್ಲಿ ಕೊಟ್ಟಿದೆ. ಮಿಲ್‌ಡ್ರೆಡ್ ಮತ್ತು ರಥ್ ಎಂಬ ಇಬ್ಬರು ಅವಳಿಜವಳಿ ಅಕ್ಕತಂಗಿಯರು ಬಾಲ್ಯದಿಂದಲೇ ಬೇರೆ ಬೇರೆ

ವಾಸಿಸುವ ಪ್ರಸಂಗ ಬಂದು ಮಿಲ್‌ಡ್ರೆಡ್ ಎಂಬವಳು ಸುಶಿಕ್ಷಿತ ಶ್ರೀಮಂತರ ಮನೆಯಲ್ಲಿ ಮತ್ತು ರಥ್ ಎಂಬವಳು ಅಶಿಕ್ಷಿತ ಬಡವರ ಮನೆಯಲ್ಲಿ ಬೆಳೆಸಲ್ಪಟ್ಟರು. ಅವರು ಹದಿನಾರು ವರುಷದವರಾದಾಗ್ಗೆ ಅವರ ಬುದ್ಧಿ ಪರೀಕ್ಷಣವನ್ನು ಮಾಡಲಾಯಿತು. ಅವರಿಬ್ಬರು ಹತ್ತನೆಯ ವರ್ಗದ ವರೆಗೆ ಸಾಲಿ ಕಲಿತಿದ್ದರು. ಮಿಲ್‌ಡ್ರೆಡ್‌ಳ ಬುದ್ಧಿಮಾನವು ೧೭ ಅಂಶ ಹೆಚ್ಚಾಗಿತ್ತು. ಈ ತರಹದ ಹೆಚ್ಚು ಕಡಿಮೆಯು ಮನೆಯಲ್ಲಿಯ ಸಂಸ್ಕೃತಿಗೆ ಸಂಬಂಧಪಟ್ಟಿದೆ. ಎಂದು ನಿರ್ಧರಿಸಲಾಗಿದೆ.

### ಸಾಕುಮಕ್ಕಳು

ಮೇಲಿನ ಅವಳಿ ಜವಳಿ ಮಕ್ಕಳ ಉದಾಹರಣೆಯಲ್ಲಿ ಆನುವಂಶೀಯತೆಯು ಒಂದೇ ಆಗಿದ್ದು ಅವರು ಬೇರೆ ಬೇರೆ ಆವರಣಗಳಲ್ಲಿ ಬೆಳೆಸಲ್ಪಟ್ಟಿರುತ್ತಾರೆ. ಆದರೆ ಸಾಕುಮಕ್ಕಳ ಉದಾಹರಣೆಗಳಲ್ಲಿ ಪ್ರತಿಯೊಂದು ಮಗುವಿನ ತಂದೆ ತಾಯಿಗಳು ಅಥವಾ ಆನುವಂಶೀಯತೆಯು ಬೇರೆಯಾಗಿದ್ದು ಅನೇಕ ಮಕ್ಕಳು ಒಂದೇ ಸಾಕು ಮನೆಯಲ್ಲಿ, ಸಾಲೆಯಲ್ಲಿ ಅಂದರೆ ಒಂದೇ ಆವರಣದಲ್ಲಿ ಬೆಳೆಸಲ್ಪಟ್ಟಿರುತ್ತಾರೆ. ಇಂಥ ನೂರಾರು ಹುಡುಗರ ಅಭ್ಯಾಸವನ್ನು ಅನೇಕ ಜನರು ಮಾಡಿರುತ್ತಾರೆ. ಆರ್ಥಿಕ, ಸಾಮಾಜಿಕ ಮತ್ತು ನೈತಿಕ ದೃಷ್ಟಿಯಿಂದ ಹಿಂದುಳಿದ ಮನೆತನಗಳಲ್ಲಿಯ ಹುಡುಗರನ್ನು ಒಳ್ಳೇ ಆವರಣದಲ್ಲಿ ಕೆಲವು ವರುಷಗಳ ವರೆಗೆ ಬೆಳೆಯಿಸಿ ಆಮೇಲೆ ಅದರ ಪರಿಣಾಮವನ್ನು ಅಳೆಯುತ್ತಾರೆ. ಒಟ್ಟಿನಲ್ಲಿ ಕಂಡುಬಂದದ್ದು ಏನಂದರೆ ಪರಿಸ್ಥಿತಿಯನ್ನು ಬದಲಿಸುವಲ್ಲಿ ಹುಡುಗರು ಹೆಚ್ಚು ಚಿಕ್ಕವರು ಇದ್ದಷ್ಟು ಅವರ ಮೇಲೆ ಆವರಣದ ಪರಿಣಾಮವು ಹೆಚ್ಚು ಪ್ರಮಾಣದಲ್ಲಿ ಆಗುತ್ತದೆ. ಆವರಣವು ಒಳ್ಳೆಯದು ಆಗಿದ್ದರೆ ಪರಿಣಾಮವೂ ಒಳ್ಳೆಯದು ಆಗುತ್ತದೆ; ಮತ್ತು ಆವರಣವು ಕೆಡಕು ಇದ್ದರೆ ಪರಿಣಾಮವೂ ಕೆಡಕು ಆಗುತ್ತದೆ.

### ಮನೆಯ ವರ್ಚಸ್ಸು

ಪರಿಸ್ಥಿತಿ ಅಂದರೆ ಸಾಮಾನ್ಯವಾಗಿ ಮನೆ, ಸಾಲಿ ಮತ್ತು ಸಮಾಜ. ಈ ಮೂರೂ ಸಂಸ್ಥೆಗಳ ವರ್ಚಸ್ಸು ಬೆಳೆಯುವ ಮಕ್ಕಳ ಮೇಲೆ ಆಗುತ್ತದೆ. ಆದರೆ ಇವುಗಳಲ್ಲಿ ಮನೆಯ ಆವರಣದ ಪರಿಣಾಮವು ವಿಶೇಷವಾಗಿ ಆಗುತದ್ದೆ.

ಮಗುವಿನ ಮನೋವೃತ್ತಿಗಳು, ವರ್ತನವು ಮತ್ತು ಬುದ್ಧಿಯು ಸಾಮಾನ್ಯವಾಗಿ ಅವನ ತಂದೆತಾಯಿಗಳ ಬುದ್ಧಿ, ವರ್ತನ ಮತ್ತು ಮನೋವೃತ್ತಿಗಳನ್ನು ಹೋಲುತ್ತವೆ. ಮನೆಯ ಆವರಣದ ಪರಿಣಾಮವು ಮಕ್ಕಳ ವರ್ತನದ ಮೇಲೆ ಅಂದರೆ ಅವರ ಮನೋವೃತ್ತಿ, ಶೀಲಸ್ವಭಾವ, ನಂಬುಗೆ, ನಡೆ ನುಡಿಗಳ ಮೇಲೆ ಹೆಚ್ಚು ಪ್ರಮಾಣದಲ್ಲಿ ಆಗುತ್ತದೆ. ಬುದ್ಧಿಯ ಮೇಲೆ ಅದಕ್ಕೂ ಕಡಿಮೆ ಪ್ರಮಾಣದಲ್ಲಿ ಆಗುತ್ತದೆ. ಜಾತೀಯ ವಿಚಾರಗಳನ್ನು ಮಕ್ಕಳು ತಮ್ಮ ಮನೆಯವರಿಂದ ಕಲಿಯುತ್ತಾರೆ. ಮನೆಯ ಆರ್ಥಿಕ, ಸಾಮಾಜಿಕ ಮತ್ತು ನೈತಿಕ ಮಟ್ಟವು ಮಕ್ಕಳ ಮೇಲೆ ಪರಿಣಾಮವನ್ನು ಮಾಡದೆ ಇರದು. ತಂದೆತಾಯಿಗಳು ಬಡವರೂ ಅಶಿಕ್ಷಿತರೂ ಇದ್ದರೆ ಅವರು ಶಿಕ್ಷಣದ ಮಹತ್ವವನು ತಿಳಿಯರು; ತಮ್ಮ ಮಕ್ಕಳ ಶಿಕ್ಷಣಕ್ಕೆಬೇಕಾದ ಅನುಕೂಲತೆಗಳನ್ನು ಅವರು ಒದಗಿಸಿಕೊಡಲು ಅಸಮರ್ಥರಿರುವರು. ಇಂಡಿಯಾದಲ್ಲಿ ಸಾವಿರಾರು ವರುಷಗಳವರೆಗೆ ಹಿಂದುಳಿದ ವರ್ಗದವರೂ ಮತ್ತು ಗುಡ್ಡಗಾಡ ಜನರೂ ಸಾಲೆ ಕಾಲೇಜುಗಳಿಗೆ ಹೋಗದೇ ಇರುವದಕ್ಕೆ ಮುಖ್ಯವಾಗಿ ಅವರ ಮನೆಯ ಪರಿಸ್ಥಿತಿಯು, ಅವರಲ್ಲಿ ಸೇರಿಕೊಂಡಿರುವ ನಂಬುಗೆಗಳು ಮತ್ತು ಸಾಮಾಜಿಕ ರಚನೆಯು ಕಾರಣವಾಗಿದೆ "ಸಾಲೆಯನ್ನು ಕಲಿತು ನಮ್ಮ ಮಕ್ಕಳು ನೌಕರಿಯನ್ನು ಮಾಡಬೇಕಾಗಿಲ್ಲ; ನಮ್ಮ ಮನೆತನದ ಉದ್ಯೋಗವೇ ಬೇರೆ" ಎಂಬ ತಪ್ಪು ತಿಳಿವಳಿಕೆಯಿಂದ ಎಷ್ಟೋ ಶ್ರೀಮಂತರು ಕೂಡ ತಮ್ಮ ಮಕ್ಕಳಿಗೆ ಹೆಚ್ಚಿನ ಶಿಕ್ಷಣವನ್ನು ಕೊಡದೇ ಇರುವ ಉದಾಹರಣೆಗಳು ಹೇರಳವಾಗಿವೆ. ಇಂಗ್ಲಂಡ, ಅಮೇರಿಕಾ ಮೊದಲಾದ ದೇಶಗಳಲ್ಲಿ ಶಿಕ್ಷಣದ ಅನುಕೂಲತೆಗಳು ಮನೆಯವರ ಆರ್ಥಿಕ ಪರಿಸ್ಥಿತಿಗೆ ನಿಕಟ ಸಂಬಂಧವಾಗಿದ್ದರೆ ನಮ್ಮ ದೇಶದಲ್ಲಿ ಜನರ ಮೂಢ ನಂಬುಗೆಗಳಿಗೆ ವಿಶೇಷ ಸಂಬಂಧವಾಗಿದೆ. ಆದರೆ ಇತ್ತೀಚೆಗೆ ಈ ನಂಬುಗೆಗಳು ಸಡಿಲಾಗಹತ್ತಿರುವದು ದೇಶದ ಏಳ್ಗೆಯ ದೃಷ್ಟಿಯಿಂದ ಒಳ್ಳೆಯ ಲಕ್ಷಣವೆ! ಉಚಿತವಾದ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣವನ್ನು ನಮ್ಮ ನಾಡಿನ ಎಲ್ಲ ಮಕ್ಕಳಿಗೆ ಕೊಡುವ ಲೋಕ ಸತ್ತೆಯ ಯೋಜನೆಯನ್ನು ಕೈಕೊಳ್ಳುವದು ಅವಶ್ಯ. ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ಕೊಡುವದು ಈಗಾಗಲೇ ಪ್ರಚಾರದಲ್ಲಿ ಬಂದಿದೆ.

ಮನೆಯವರ ಉದ್ಯೋಗ ಮತ್ತು ಉತ್ಪನ್ನಕ್ಕೂ ಮತ್ತು ಅವರ ಮಕ್ಕಳ ಶಿಕ್ಷಣಕ್ಕೂ ಸಂಬಂಧ ಇರುತ್ತದೆ ಎಂಬುದು ಸಾಮಾನ್ಯಮಾತು. ಆದರೆ

ತಂದೆಯ ಉತ್ಪನ್ನವು ಹೆಚ್ಚುಕಡಿಮೆ ಆದಂತೆ ಮಗನ ಬುದ್ಧಿಯು ಹೆಚ್ಚು ಕಡಿಮೆ ಆಗುತ್ತದೆಂದು ಊಹಿಸಬಾರದು. ಮನೆಯ ಪರಿಸ್ಥಿತಿಯು ಪ್ರತಿಕೂಲ ವಾಗಿದ್ದರೂ ಸಾಲೆಯ ಮತ್ತು ಸಾಮಾಜಿಕ ಪರಿಸ್ಥಿತಿಯು ಅನಕೂಲವಾಗಿದ್ದರೆ ಬಡವನು ಬಲ್ಲಿದನಾಗಬಲ್ಲನು. ಸಮಾಜದವರು ಮತ್ತು ಸರಕಾರದವರು ದಯ ಪಾಲಿಸುವ ಸ್ಕಾಲರಸಿಪ್ ಹಣದಿಂದ ಎಷ್ಟೋ ಬಡವಿದ್ಯಾರ್ಥಿಗಳು ಉಚ್ಚ ಶಿಕ್ಷಣವನ್ನು ಮತ್ತುಪರದೇಶದ ಹೆಚ್ಚಿನ ಶಿಕ್ಷಣವನ್ನು ಹೊಂದಿರುವರು.

## ಸಾಮಾಜಿಕ ವರ್ಚಸ್ಸು

ಸಮಾಜವೆಂದರೆ ಸಮಾಜದಲ್ಲಿರುವ ಸಂಘ ಸಂಸ್ಥೆಗಳು, ಅವುಗಳ ಸಂಪ್ರದಾಯಗಳು ಮತ್ತು ಅವುಗಳ ಧ್ಯೇಯ ಧೋರಣೆಗಳು. ಮಠ, ಗುಡಿ, ಸರಕಾರ, ಲೋಕಕಾರಣ (ರಾಜಕೀಯ) ಪಂಗಡಗಳು, ಬೇರೆ ಬೇರೆ ಉದ್ದೇಶ ಸಾಧನೆಗೆ ಹೊರಟ ನಾನಾ ಬಗೆಯ ಸಂಘ ಸಂಸ್ಥೆಗಳು, ಸಿನೇಮಾ ನಾಟಕಗಳು ಕಲಾಮಂದಿರಗಳು, ವಾಚನಾಲಯಗಳು, ಹಾಸ್ಟೆಲ್ ಬೋರ್ಡಿಂಗಗಳು, ಕೀರ್ತನಗಳು, ಬಾಷಣಗಳು, ರೇಡಿಯೋ, ಪ್ರದರ್ಶನಗಳು ಮುಂತಾದವು ಗಳೆಲ್ಲವೂ ಮಗುವಿನ ಸಾಮಾಜಿಕ ಪರಿಸ್ಥಿತಿ ಎನ್ನಿಸಿಕೊಳ್ಳುವವು. ಅವೆಲ್ಲವುಗಳ ವರ್ಚಸ್ಸು ಮಗುವಿನ ವರ್ತನದ ಮೇಲೆ ಆಗದೇ ಇರದು. ಅದರಂತೆ ಹಳ್ಳಿಯ ಹುಡುಗರ ಜೀವನ ಕ್ರಮವೇ ಬೇರೆ. ಪಟ್ಟಣದ ಹುಡುಗರ ಜೀವನ ಕ್ರಮವೇ ಬೇರೆ. ಒಂದು ಪರಿಸ್ಥಿತಿಯಿಂದ ಮತ್ತೊಂದು ಪರಿಸ್ಥಿತಿಗೆ ಅವರನ್ನು ಬದಲಾಯಿಸಿದರೆ ಅದಕ್ಕೆ ಹೊಂದಿಕೊಂಡು ಹೋಗಲಿಕ್ಕೆ ಅವರಿಗೆ ಕಠಿಣ ವಾಗುತ್ತದೆ. ಒಮ್ಮೆ ಪರಿಸ್ಥಿತಿಯು ಮೈ ಉಂಡಮೇಲೆ ಅದನ್ನು ಕಳಚಿ ಹಾಕುವದು ಬಹಳ ಕಠಿಣವೆನಿಸುತ್ತದೆ. ಜಾತೀಯ ಭಾವನೆ, ಅಸ್ಪೃಶ್ಯತೆ ಮುಂತಾದ ದೇಶದ ಮುನ್ನಡೆಗೆ ಅಡ್ಡಬರುವ ಸಾಮಾಜಿಕ ರೂಢಿಗಳನ್ನು ತೆಗೆದು ಹಾಕಲಿಕ್ಕೆ ಬಹಳ ಪ್ರಯಾಸಪಡಬೇಕಾಗುವದು. ಚಹಾದ ಅಂಗಡಿ, ಖಾನಾವಳಿ, ಬೋರ್ಡಿಂಗ, ಪಠ್ಯಪುಸ್ತಕ ಮೊದಲಾದ ಎಲ್ಲೆಡೆಯಲ್ಲಿ ಜಾತಿಸೂಚಕ ಹಲಿಗೆಗಳಿಂದ ಮತ್ತು ಶಬ್ದಗಳ ಬಳಕೆಯಿಂದ ಮಕ್ಕಳಲ್ಲಿ ಭೇದಭಾವವು ನೆಲೆಯೂರಿ ಸಾಮಾಜಿಕ ವಾತಾವರಣವನ್ನು ಕಲುಷಿತ ಮಾಡಿವೆ. ಇದನ್ನು ತೊಡೆದು ಹಾಕಿ ಸಮತಾ ಭಾವನೆಯನ್ನು ಉಂಟು ಮಾಡಲು ಹೊಸ ಘಟನೆಯ ಧ್ಯೇಯವಾಗಿವೆ. ಇದರ ಪರಿಣಾಮವೂ ತರುಣ ಪೀಳಿಗೆಯ ಮೇಲೆ ಆಗಹತ್ತಿದೆ.

ಸಮಾಜದ ವರ್ಚಸ್ಸು ಪ್ರತ್ಯಕ್ಷವಾಗಿಯೂ ಅಪ್ರತ್ಯಕ್ಷವಾಗಿಯೂ ಕೂಡಿಯೇ ನಡೆದಿರುತ್ತದೆ.

ಪರಿಸ್ಥಿತಿಯ ವರ್ಚಸ್ಸನ್ನು ಕುರಿತು ವಿಚಾರಿಸುವಾಗ ಎರಡು ಮಾತು ಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳಬೇಕಾಗುತ್ತದೆ. ಮೊದಲನೆಯದು ತೆರೆದ ಮನಸ್ಸು; ಮತ್ತು ಎರಡನೆಯದು ಕಾಲದ ಅವಧಿ. ವ್ಯಕ್ತಿಗಳ ಉಪದೇಶಗಳಿಗೆ, ಸಂಘಗಳ ಧ್ಯೇಯಗಳಿಗೆ, ಸನ್ನಿವೇಶಗಳ ಆಕರ್ಷಣಗಳಿಗೆ ತಾನು ಮನ ಸೋಲ ಬಾರದೆಂದು ಯಾವನೊಬ್ಬನು ನಿರ್ಧರಿಸಿಕೊಂಡಿದ್ದರೆ ಪರಿಸ್ಥಿತಿಯ ಪರಿಣಾಮವು ಡಬ್ಬ ಕೊಡದ ಮೇಲೆ ನೀರು ಹಣಿಸಿದಂತೆ ವ್ಯರ್ಥವಾಗುವದು. ಆದರೆ ತೆರೆದ ಮನಸ್ಸು ಇದ್ದರೆ ಮಾತ್ರ ಪರಿಣಾಮವು ಬೇಗನೇ ಕಂಡುಬರುವದು. ಒಂದು ಪ್ರಯೋಗದಲ್ಲಿ ಇಲಿಗಳ ಬಾಲಗಳನ್ನು ಅನೇಕ ಪೀಳಿಗೆಗಳ ವರೆಗೆ ಕತ್ತರಿಸಿದರೂ ಮೊದಲಿನಂತೆ ಬಾಲ ಇದ್ದ ಇಲಿಗಳೇ ಹುಟ್ಟಹತ್ತಿದವು. ಇಂಗ್ಲಂಡದ ಪ್ರಸಿದ್ಧ ಸಾಹಿತಿಯಾದ ಬರನಾರ್ಡ ಶ್ಯಾನು ಈ ಸಂದರ್ಭದಲ್ಲಿ ಹೇಳಿದ್ದೇನಂದರೆ—ಇಲಿಗಳಿಗೆ ಬಾಲವನ್ನು ಕಳೆದುಕೊಳ್ಳುವದು ಬೇಕಾಗಿಲ್ಲ; ಆದ್ದರಿಂದ ಬಾಲ ಇಲ್ಲದ ಇಲಿಗಳು ಹುಟ್ಟುವದಿಲ್ಲ. ಈ ಮಾತು ಮೇಲಿನ ತತ್ವವನ್ನು ಉದಾಹರಿಸುತ್ತದೆ. ಎರಡನೆಯದಾಗಿ ಪರಿಸ್ಥಿತಿಯ ಪರಿಣಾಮವು ಕ್ರಮೇಣ ಸಾಗುತ್ತದೆ. ಅದರ ಫಲವು ಕಾಣಬೇಕಾದರೆ ಕೆಲವೊಂದು ಅವಧಿಯು ಬೇಕಾಗುತ್ತದೆ. ಜಡ್ಡಿನವನು ಮದ್ದು ಕುಡಿದ ಕೂಡಲೆ ಎದ್ದು ಕೂಡ್ರಲಾರನು ಎಂಬ ನಾಡನುಡಿಯುಂಟು. ಸವಳು ನೀರಿನ ಭಾವಿಯಲ್ಲಿ ಅನೇಕ ದಿವಸಗಳ ವರೆಗೆ ಬಿದ್ದ ಹಿತ್ತಾಳಿಯ ತಂಬಿಗೆಯು ಕಿಲಿಬಿರುತ್ತದೆ. ಅದನ್ನು ಒಂದೇ ಬಾರೆಗೆ ತಿಕ್ಕಿ ಮೊದಲಿನಂತೆ ಹೊಳೆಯುವ ಹಾಗೆ ಮಾಡಲು ಬರುವದಿಲ್ಲ. ಆದರೆ ಅದನ್ನು ಮತ್ತೆ ಮತ್ತೆ ಹುಳಿ ಹಚ್ಚಿ ತಿಕ್ಕುತ್ತ ಹೋದರೆ ಲಕಲಕ ಹೊಳೆಯಹತ್ತುತ್ತದೆ. ಅದರಂತೆ ಪಾಡಿಗೆ ಬಂದ ಮಾವಿನ ಕಾಯಿಗಳನ್ನು ಕೆಲವು ದಿವಸಗಳ ವರೆಗೆ ಒತ್ತಿಗೆ ಹಾಕಿದರೆ ಹಣ್ಣಾಗುತ್ತವೆ. ಮರುದಿವಸವೇ ಹಣ್ಣಾಗುವದಿಲ್ಲ. ಮನುಷ್ಯನ ಆಚಾರ ವಿಚಾರಗಳನ್ನು ಬದಲಾಯಿಸಲು ಶಕ್ಯವಿರುತ್ತದೆ. ಆದರೆ ಅನೇಕ ದಿವಸಗಳಿಂದ ಬಂದ ಸಂಸ್ಕಾರಗಳನ್ನು ತೊಳೆಯಲಿಕ್ಕೆ ಸಾಕಷ್ಟು ಅವಧಿಯೂ ಇತರರ ಪ್ರೋತ್ಸಾಹವೂ ಸ್ವಂತ ಪ್ರಯತ್ನವೂ, ಮತ್ತು ಅನುಕೂಲ ಆವರಣವೂ ಬೇಕಾಗುತ್ತದೆ.

## ಸಾಲೆಯ ವರ್ಚಸ್ಸು

ಸಾಲೆಯು ಮಗುವಿನ ಜೀವನದ ಮೇಲೆ ಹೆಚ್ಚು ಪರಿಣಾಮವನ್ನು ಉಂಟುಮಾಡುತ್ತದೆ. ಮಗುವು ಬಾಲ್ಯದಲ್ಲಿಯ ಮಹತ್ವದ ಕಾಲವನ್ನು ಸಾಲೆಯಲ್ಲಿ ಕಳೆಯುತ್ತಾನೆ. ತಾರುಣ್ಯದಲ್ಲಿಯೂ ಅನೇಕರು ತಮ್ಮ ಶಿಕ್ಷಣವನ್ನು ಕಾಲೇಜದಲ್ಲಿ ಮುಂದುವರಿಸುತ್ತಾರೆ. ಆಗ ಸಾಲೆ ಕಾಲೇಜುಗಳ ವರ್ಚಸ್ಸು ಮಕ್ಕಳ ಮೇಲೆ ವಿಶೇಷ ಪರಿಣಾಮವನ್ನು ಉಂಟುಮಾಡುತ್ತದೆ. ಮಗುವಿನ ಬುದ್ಧಿಶಕ್ತಿ, ಕಲಾಕೌಶಲ್ಯಗಳು, ವರ್ತನ ಮನೋವೃತ್ತಿಗಳು ಸಾಲೆಯ ಪರಿಸ್ಥಿತಿಯ ಹದಕ್ಕೆ ಒಳಪಟ್ಟು ರೂಪುಗೊಳ್ಳುತ್ತವೆ. ಮಗುವಿನ ಬೇಡಿಕೆ, ಅಭಿರುಚಿ ಮತ್ತು ಸಾಮರ್ಥ್ಯಗಳಿಗೆ ತಕ್ಕಂತೆ ಶಿಕ್ಷಣ ಯೋಜನೆಯು ಇದ್ದರೆ ಮಾತ್ರ ಅವನ ಶಿಕ್ಷಣವು ಒಳ್ಳೇ ಹಾದಿಯಲ್ಲಿ ಸಾಗುವದು. ಸಾಲೆಯಲ್ಲಿ ವಾತಾವರಣವು ಹೇಗೆ ಇರುತ್ತದೆಯೋ ಹಾಗೆಯೇ ಅವನು ಬೆಳೆಯುತ್ತಾನೆ. ಸಾಲೆಯ ವರ್ಚಸ್ಸು ನಾಲ್ಕು ಸಂಗತಿಗಳನ್ನು ಅವಲಂಬಿಸಿರುತ್ತದೆ— ಅಭ್ಯಾಸ ಕ್ರಮ, ಪಠ್ಯ ಪುಸ್ತಕ, ಕಲಿಸುವ ಪದ್ಧತಿ ಮತ್ತು ಶಿಕ್ಷಕನ ವ್ಯಕ್ತಿತ್ವ ಹೊಸ ಸಮಾಜ ರಚನೆ ಮತ್ತು ಹೊಸ ಜೀವನ ಕ್ರಮವನ್ನು ಗುರಿಯಾಗಿ ಇಟ್ಟುಕೊಂಡಿದ್ದ ಶಿಕ್ಷಣ ರೀತಿಯೇ ಬೇರೆಯಾಗಿರುತ್ತದೆ; ಸಂಪ್ರದಾಯವನ್ನು ಮತ್ತು ಜಾತಿ ( ವರ್ಣ ) ಭೇದವನ್ನೂ ಗುರಿಯಾಗಿ ಇಟ್ಟುಕೊಂಡ ಶಿಕ್ಷಣ ರೀತಿಯೇ ಬೇರೆಯಾಗಿರುತ್ತದೆ. ಅದರಂತೆ ಲೋಕಸತ್ತೆಯ ದೃಷ್ಟಿಯನ್ನು ಇಟ್ಟುಕೊಂಡಿದ್ದ ಶಿಕ್ಷಣ ರೀತಿಯೇ ಬೇರೆಯಾಗಿರುತ್ತದೆ ಮತ್ತು ರಾಜಸತ್ತೆಯ ಅಥವಾ ಸರ್ವಾಧಿಕಾರದ ದೃಷ್ಟಿಯನ್ನು ಇಟ್ಟುಕೊಂಡಿದ್ದ ಶಿಕ್ಷಣ ರೀತಿಯೇ ಬೇರೆಯಾಗಿರುತ್ತದೆ.

ಸಾಲೆಯಲ್ಲಿ ಜಾತಿಭೇದದ ಮತ್ತು ಸರ್ವಾಧಿಕಾರದ ವಾತಾವರಣ ವಿದ್ದರೆ ವಿದ್ಯಾರ್ಥಿಗಳ ನಡೆ ನುಡಿಯಲ್ಲಿ ದ್ವೇಷ, ಅಸೂಯೆ, ದರ್ಪ, ಅಸಹಕಾರ, ಕಲಹ, ಹೊಣೆಗೇಡಿತನ ಮೊದಲಾದ ಗುಣಗಳು ಕಂಡುಬರುತ್ತವೆ. ಆದರೆ ಅದೇ ಸಾಲೆಯಲ್ಲಿ ನ್ಯಾಯ, ಸಮಾನತೆ, ವ್ಯಕ್ತಿ ಗೌರವ ಮೊದಲಾದ ಲೋಕಸತ್ತೆಯ ವಾತಾವರಣ ಇದ್ದರೆ ವಿದ್ಯಾರ್ಥಿಗಳ ನಡೆ ನುಡಿಯಲ್ಲಿ ಪ್ರೇಮ, ಸಹಕಾರ, ಹೊಣೆಗಾರಿಕೆ, ಸ್ವತಂತ್ರ ವಿಚಾರ, ಸ್ವತಂತ್ರ ಆಡಳಿತೆ ಮೊದಲಾದ

ಗುಣಗಳು ಕಂಡು ಬರುತ್ತವೆ. ಲೋಕಸತ್ತೆಯ ಮತ್ತು ನಿರಂಕುಶ ವಿಧಾನಗಳಿಂದ ಮಕ್ಕಳ ಮೇಲೆ ಯಾವ ಬಗೆಯ ಪರಿಣಾಮ ಆಗುತ್ತದೆ ಎಂಬುದನ್ನು ಮೇಲೆ ವಿವರಿಸಿದ ಪ್ರಯೋಗದಿಂದ ಗೊತ್ತಾಗುತ್ತದೆ. ಧರ್ಮದ ಹೆಸರಿನಲ್ಲಿ ಜಾತೀಯ ಪೋಷಣೆ, ಅನುವಂಶೀಯತೆಯ ಸಮರ್ಥನೆ, ಮತ್ತು ರಾಜಸತ್ತೆಯ ಸಂಪ್ರದಾಯಗಳು ಹಿಂದ ಸಮಾಜದಲ್ಲಿ ಹಬ್ಬಿಕೊಂಡಿವೆ. ಇದರ ಕೆಡಕು ಪರಿಣಾಮಗಳು ಹೇರಳವಾಗಿವೆ. ಇವು ಸಂಕುಚಿತ ದೃಷ್ಟಿಯ ಸ್ವಾರ್ಥ ಸಾದಕರಿಂದ ಉಪದೇಶಿಸಲ್ಪಟ್ಟವೆ. ಸಾಲೆಯು ಇಂಥ ಸಮಾಜದ ಪಡಿನೆರಳು ಆಗದೆ ಒಂದು ಆದರ್ಶ ಸಂಸ್ಥೆಯಾಗಬೇಕಾಗಿರುವದು ಅವಶ್ಯ. ಸಾಲೆಯಲ್ಲಿ ಎಲ್ಲ ಮಕ್ಕಳಿಗೂ ಪ್ರವೇಶ ಇರತಕ್ಕದ್ದು. ಅಭ್ಯಾಸ ಕ್ರಮವು ಮಗುವಿನ ಬೆಳವಣಿಗೆಗೆ ಹೊಂದಿಕೆಯಾಗುವಂತೆ ರಚಿಸಲ್ಪಡತಕ್ಕದ್ದು. ಯಾವ ಪಠ್ಯ ಪುಸ್ತಕದಲ್ಲಿಯೂ ಜಾತಿಸೂಚಕ ಶಬ್ದಗಳೂ, ಜಾತಿಯ ಕಲ್ಪನೆಗಳೂ ಇರಕೂಡದು. ವಿಷಯವನ್ನೇ ಕಲಿಸಲಿ, ವರ್ತನವನ್ನೇ ತಿದ್ದಲಿ ಶಿಕ್ಷಕನು ನಿರ್ಮಾಣ ಪದ್ಧತಿಯನ್ನೂ, ಮತ್ತು ಲೋಕಸತ್ತೆಯ ಪದ್ಧತಿಯನ್ನೂ ಬಳಸಬೇಕು. ಶಿಕ್ಷಕನ ಮನೋವೃತ್ತಿಯು ಮಕ್ಕಳ ಬಗೆಗೆ ಆದರ, ಅಂತಃಕರಣ, ಸಹಾಯ, ಸಹಾನುಭೂತಿ, ಪ್ರೇಮ, ಸಮಾನತೆ ಮತ್ತು ಪ್ರೋತ್ಸಾಹಗಳಿಂದ ತುಂಬಿರಬೇಕು. ಇವು ಇರದಿದ್ದರೆ ಲೋಕಸತ್ತೆಯ ಶಿಕ್ಷಣವೆಂಬುದು ಸುಳ್ಳಿನ ಕಂತೆಯಾಗುವದು.

## ಮನೋದೃಷ್ಟಿ ಮತ್ತು ಧ್ಯೇಯಗಳು

ಈ ಅಧ್ಯಾಯದಲ್ಲಿ ಹೇಳಿದ ಬಾಹ್ಯ ಪರಿಸ್ಥಿತಿ ಎಂಬುದು ಸಾಲೆಯಲ್ಲಿಯ ಕೇವಲ ಸ್ಥೂಲವಾದ ಹೊದಿಕೆಗೆ ಸಂಬಂಧಪಟ್ಟ ವಿಷಯವಲ್ಲ. ಮನೆಯ ಮತ್ತು ಸಮಾಜದ ಪರಿಸ್ಥಿತಿಯು ಮಗುವಿನ ಶಿಕ್ಷಣಕ್ಕೆ ಅನುಕೂಲವಾಗದೇ ಇದ್ದಲ್ಲಿ ಸಾಲೆಯಲ್ಲಿಯಾದರೂ ಅನುಕೂಲತೆಗಳನ್ನು ಒದಗಿಸುವದು ಅವಶ್ಯ. ಸಾಲೆಯಲ್ಲಿ ಕಲಿಯಲಿಕ್ಕೆ ಮಗುವಿಗೆ ಬೇಕಾದ ಪಾಟಿ, ಪುಸ್ತಕ, ಊಟ, ಸ್ಕಾಲರಶಿಪ್ ಮೊದಲಾದ ಅನುಕೂಲತೆಗಳನ್ನು ಒದಗಿಸಿ ಕೊಡುವದು ಅವಶ್ಯ. ಆದರೆ ಸಾಲೆಯಲ್ಲಿಯ ಆಂತರಿಕ ವಾತಾವರಣ, ಶಿಕ್ಷಣದ ಧ್ಯೇಯ ಮತ್ತು ಶಿಕ್ಷಣದ ದೃಷ್ಟಿ ಇವು ಎಲ್ಲಕ್ಕೂ ಮಹತ್ವದ ವಿಷಯಗಳು ವಿಶಾಲವಾದ

ಮನೋದೃಷ್ಟಿ ಮತ್ತು ಉದಾತ್ತವಾದ ಧ್ಯೇಯಗಳಿಂದ ಸಾಲೆಯು ಸ್ಥಾಪಿಸಲ್ಪಡಬೇಕು. ಈ ತತ್ವಗಳು ಮಗುವಿನ ಮನಸ್ಸಿನಲ್ಲಿ ಬಿಂಬಿಸಿದರೆ ಅವನ ಜೀವನಕ್ಕೆ ಹೊಸ ಬೆಳಕನ್ನು ಕೊಡುತ್ತವೆ. ಅವನ ನಡೆ ನುಡಿಗಳಲ್ಲಿ ಕ್ರಾಂತಿಯನ್ನು ಉಂಟು ಮಾಡುತ್ತವೆ. ಹೊರಗಿನ ಸಮಾಜದ ಹೊದಿಕೆಯು ಪ್ರತಿಬಂಧಕವಾಗಿದ್ದರೂ ಅದನ್ನು ಪ್ರತಿಭಟಿಸುವ ಶಕ್ತಿಯನ್ನು ಮತ್ತು ಆತ್ಮ ವಿಶ್ವಾಸವನ್ನು ಮಗುವು ಸಾಲೆಯಲ್ಲಿ ಪಡೆಯುತ್ತಾನೆ. ಬಡವರ ಕಷ್ಟ ಸೋಸುವ ಬದುಕು ಬಾಳುವೆಯನ್ನು ನೋಡಿ ನೋಡಿ ಕನಿಕರದಿಂದ ಪ್ರೇರಿತನಾದ ಒಬ್ಬ ಮಗುವು ಆಗರ್ಭ ಶ್ರೀಮಂತನಾದ ತನ್ನ ತಂದೆಯ ಮನೆಯನ್ನು ಬಿಟ್ಟು ಕೊಟ್ಟು ತಾನೂ ಒಬ್ಬ ಬಡವನಂತೆ ಜೀವನವನ್ನು ಕೈಕೊಂಡ ಉದಾಹರಣೆಯು ಬರಹ ಗಾರನಿಗೆ ಗೊತ್ತುಂಟು. ಪರಿಸ್ಥಿತಿಗಿಂತ ಧ್ಯೇಯವೇ ಮುಖ್ಯವೆಂಬುದಕ್ಕೆ ಕಾರಣಿಕ ಪುರುಷರ ಉದಾಹರಣೆಗಳನ್ನು ಕೊಡಬಹುದು. ಲೋಕ ಕಲ್ಯಾಣಾರ್ಥವಾಗಿ ಬುದ್ಧ ಬಸವರು ರಾಜವೈಭವಕ್ಕೆ ಮರುಳಾಗದೆ ಮನೆ ಬಿಟ್ಟು ಹೊರಟರು. ನೆಪೋಲಿಯನ್ ಶಿವಾಜಿ ಅವರು ರಾಜ್ಯ ಕ್ರಾಂತಿಯನ್ನು ಮಾಡಿದರು. ನ್ಯೂಟನ್ ಐನಸ್ಟೀನ ಅವರು ಭೌತಿಕ ತತ್ವಗಳನ್ನು ಹುಡುಕಿ ತೆಗೆದರು. ಈ ರೀತಿಯಾಗಿ ಮಗುವು ಜ್ಞಾನ, ಸೇವೆ, ಸಂಶೋಧನೆ ಮೊದಲಾದ ಧ್ಯೇಯಗಳಿಂದ ಪ್ರೇರಿತನಾದರೆ ತನ್ನ ಕಲಿಯುವಿಕೆಯನ್ನು ತಾನೇ ಮುಂದುವರಿಸುವನು.

## ಪ್ರಯತ್ನದ ಅವಶ್ಯಕತೆ

ಹೊರಗಿನ ಪರಿಸ್ಥಿತಿಯು ಅನುಕೂಲವಾಗಿರಬಹುದು. ಆದರೆ ಮಗುವಿನ ಸ್ವಂತ ಪ್ರಯತ್ನ ಇಲ್ಲದೆ ಕಲಿಯುವಿಕೆಯು ಸಾಗಲಾರದು. ಆಳವಾಗಿ ವಿಚಾರಿಸಿ ನೋಡಿದರೆ ಪರಂಪರೆ ಮತ್ತು ಪರಿಸ್ಥಿತಿ ಎಂಬ ಎರಡೂ ವಾದಗಳು ಸ್ಥೂಲವಾದ ಯಾಂತ್ರಿಕ ದೃಷ್ಟಿಯನ್ನು ಇಟ್ಟುಕೊಂಡಿರುತ್ತವೆ. ಆದರೆ ಇವೆರಡನ್ನೂ ಮೀರಿದ ಮೂರನೇ ತತ್ವ ಉಂಟು. ಅದು **ಇಚ್ಛಾಸ್ವಾತಂತ್ರ್ಯ** ಅಥವಾ **ಸ್ವಪ್ರಯತ್ನ.** ಪರಿಸ್ಥಿತಿಯನ್ನಾಗಲಿ ಪರಂಪರೆಯನ್ನಾಗಲಿ ನಂಬುವವರು ವ್ಯಕ್ತಿ ಸ್ವಾತಂತ್ರ್ಯವನ್ನು ಮರೆಯುತ್ತಾರೆಂದು ಪ್ರೊಫೆಸರ್ ನನ್‌ನು ಹೇಳುವದು ನಿಜ. ಮನುಷ್ಯನು ಸ್ವತಂತ್ರ ಪ್ರಾಣಿಯು. ಅವನು ಕೇವಲ ಪರಿಸ್ಥಿತಿಯ

ಗುಲಾಮನಲ್ಲ; ಆನುವಂಶೀಯತೆಯ ಆಹುತಿಯೂ ಅಲ್ಲ. ಅವನು ಪರಿಸ್ಥಿತಿಯನ್ನು ನಿಯಂತ್ರಿಸಬಲ್ಲನು, ಪರಂಪರೆಯನ್ನು ಪಲ್ಲಟಿಸಬಲ್ಲನು. ಸಾಮಾನ್ಯ ಪರಿಸ್ಥಿತಿಯಲ್ಲಿ ಹುಟ್ಟಿದ ಎಷ್ಟೋ ಜನರು ಮಹಾತ್ಮರಾಗಿ ಹೋಗಿದ್ದಾರೆ. ಮತ್ತು ಶ್ರೇಷ್ಠ ಮನೆತನದಲ್ಲಿ ಹುಟ್ಟಿದ ಎಷ್ಟೋ ಜನರು ತಮ್ಮ ಆಯುಷ್ಯವನ್ನು ಹಾಳು ಮಾಡಿಕೊಂಡ ಉದಾಹರಣೆಗಳೂ ಉಂಟು. "ಕೆಟ್ಟ ಆವರಣಗಳು ಅಪರಾಧಿಗಳನ್ನು ತಯಾರಿಸುವದಿಲ್ಲ. ಆದರೆ ದುರ್ಬಲ ಮನಸ್ಸಿನವರು ಅದಕ್ಕೆ ಆಹುತಿಯಾಗುತ್ತಾರೆ" ಆದರೆ ಪ್ರಬಲವಾದ ಇಚ್ಛಾಶಕ್ತಿಯುಳ್ಳ ಮನುಷ್ಯನು ಪರಿಸ್ಥಿತಿಯನ್ನು ಮತ್ತು ಪರಂಪರೆಯನ್ನು ತನ್ನ ಸಾಧನೆಗಾಗಿ ಉಪಯೋಗಿಸಬಲ್ಲನು. ಹಳೆಯಪರಂಪರೆಯನ್ನು ಮುರಿದು ಹೊಸ ಸಂಪ್ರದಾಯವನ್ನು ಹುಟ್ಟಿಸುವ ಶಕ್ತಿಯು ಅವನಲ್ಲುಂಟು. ಇಂಥ ಮಹಾವ್ಯಕ್ತಿಗಳಿಗೆ ಕಾರಣಿಕ ಪುರುಷರೆಂದು ನಾವು ಕರೆಯುತ್ತೇವೆ. ದೊಡ್ಡ ಪ್ರಮಾಣದಲ್ಲಿ ಕ್ರಾಂತಿಯನ್ನು ಹೂಡಿ ಹೊಸ ಸಮಾಜವನ್ನು ಕಟ್ಟುವ ಶಕ್ತಿಯು ಕೆಲವರಿಗೆ ಸಾಧ್ಯವಾಗದಿದ್ದರೂ ಪ್ರತಿಯೊಬ್ಬನು ತನ್ನದೇ ಆದ ಹಾದಿಯಲ್ಲಿ ತನ್ನ ಸುತ್ತುಮುತ್ತಲಿನ ಊರು ಕೇರಿಗಳಲ್ಲಿ, ಅಥವಾ ಸಂಘ ಸಂಸ್ಥೆಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿಯಾದರೂ ಹೊಸದನ್ನು ಹುಟ್ಟಿಸಲು ಸಾಧ್ಯವದೆ. ಈ ತತ್ವವನ್ನು ಪ್ರತಿಯೊಬ್ಬ ಮಗುವಿಗೆ ಮನವರಿಕೆ ಮಾಡಿಕೊಡುವದು ಶಿಕ್ಷಕನ ಕೆಲಸ. ಮನುಷ್ಯನ ಸ್ವಭಾವವನ್ನು ಕುರಿತು ಮನೋವಿಜ್ಞಾನದ ತತ್ವಗಳನ್ನು ವಿವೇಚಿಸುವಾಗ ಕೇವಲ ಪ್ರಾಣಿಗಳ ಉದಾಹರಣೆಗಳನ್ನು ಕೊಡುವದಕ್ಕಿಂತ ಮಹಾಪುರುಷರ ಉದಾಹರಣೆಗಳನ್ನು ಕೊಡುವದು ಹೆಚ್ಚು ಸಮಂಜಸವಾಗುವದು. ಶಿಕ್ಷಣ ಮನೋವಿಜ್ಞಾನಕ್ಕೆ ಪ್ರಾಣಿಮನೋವಿಜ್ಞಾನಕ್ಕಿಂತ ಸಮಾಜ ಮನೋವಿಜ್ಞಾನವು ಹೆಚ್ಚು ಉಪಯುಕ್ತವಾದುದು. ಬುದ್ಧ, ಬಸವ, ಗಾಂಧಿ, ನೆಹರು, ಸ್ಟಾಲಿನ್, ಮಾವೆ ಮೊದಲಾದ ಕ್ರಾಂತಿಕಾರರ ಮತ್ತು ಭೋಸ, ರಾಮನ್, ನ್ಯೂಟನ್, ಐನಸ್ಟೀನ್ ಮೊದಲಾದ ಮೇಧಾವಿಗಳ ಆದರ್ಶಗಳನ್ನು ಮಕ್ಕಳ ಮುಂದೆ ಇಡಬೇಕು. ಈ ಮಹಾ ವಿಭೂತಿಗಳು ತಮ್ಮ ಸ್ವತಂತ್ರ ವಿಚಾರದಿಂದಲೂ ಸ್ವಪ್ರಯತ್ನದಿಂದಲೂ ಜಗತ್ತಿಗೆ ಬೆಳಕನ್ನು ನೀಡಿರುವರು. ಮಕ್ಕಳು ಇವರಿಂದ ಸ್ಫೂರ್ತಿಯನ್ನು ಪಡೆಯುವರು.

ಬಾಹ್ಯ ಪರಿಸ್ಥಿತಿಗಿಂತ ಆಂತರಿಕ ಮನಃಸ್ಥಿತಿಯು ಹೆಚ್ಚು ಮಹತ್ವದ್ದು ಎಂಬುದರ ಬಗೆಗೆ ಬೇರೆ ಉದಾಹರಣೆಗಳನ್ನೂ ಕೊಡಬಹುದು. ಬಡವರ

ಮಕ್ಕಳು ಜಾಣರೂ, ಸಿರಿವಂತರ ಮಕ್ಕಳು ಧಡ್ಡರೂ ಆಗಲಿಕ್ಕೆ ಅವರವರ ಪರಿಸ್ಥಿತಿಗಿಂತ ಪ್ರಯತ್ನವೇ ಕಾರಣ. ಹೊರಗಿನ ಆಡಂಬರವು ಎಷ್ಟೇ ಒಳ್ಳೆಯ ದಾಗಿದ್ದರೂ ಸವತಿ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯು ಸರಿಯಾಗಿ ಸಾಗುವದಿಲ್ಲ. ಏಕೆಂದರೆ ಅಲ್ಲಿ ಪ್ರೇಮಮಯವಾದ ವಾತಾವರಣವು ಇರುವ ದಿಲ್ಲ. ತಂದೆ ತಾಯಿಗಳು ಬಡವರಿದ್ದರೂ ಅವರ ಕಕ್ಕುಲತೆಯಲ್ಲಿ ಬೆಳೆದ ಮಕ್ಕಳು ವಿಷಮ ವಾತಾವರಣದಲ್ಲಿ ಬೆಳದ ಶ್ರೀಮಂತರ ಮಕ್ಕಳಿಗಿಂತ ಚನ್ನಾಗಿರುತ್ತಾರೆ. ಆಧ್ಯಾತ್ಮಿಕ ತತ್ವವಾದರೂ ಮನುಷ್ಯನು ಪರಿಸ್ಥಿತಿಯ ವರ್ಚಸ್ಸನ್ನು ಮೀರಬಲ್ಲನೆಂದು ಹೇಳುತ್ತದೆ. ಸರೋವರದಲ್ಲಿಯ ಕಮಲದಂತೆ, ಕೆಸರಿನಲ್ಲಿಯ ಕುಂಬಾರನ ಹುಳದಂತೆ ಮನುಷ್ಯನು ಪ್ರಪಂಚಕ್ಕೆ ಅಂಟಿಕೊಳ್ಳದೆ ಜಗತ್ತಿನ ವ್ಯವಹಾರವನ್ನು ಸಾಗಿಸಬೇಕೆಂದು ಮಹಾನುಭಾವಿಗಳು ಹೇಳುತ್ತಾರೆ. ಜಗತ್ತಿನ ಭಾರವನ್ನು ಹೊತ್ತಿದ್ದರೂ ಶರಣನು ಚಕ್ಕಡಿಯ ಅಚ್ಚಿನಂತೆ ಬೇರೆಯೇ ಆಗಿರುವನು. ಅವನು ಇಹ ಪರ ಎರಡನ್ನೂ ಕೂಡಿಯೇ ಸಾಗಿಸುವನು. ಯಾವುದೇ ಸನ್ನಿವೇಶದಲ್ಲಿಯಾಗಲಿ ಪರಿಸ್ಥಿತಿಯು ದೊಡ್ಡದಾಗಿ ಕಂಡರೂ ಸತತ ಪ್ರಯತ್ನವು ನಡೆದರೆ ಅದು ಹಗುರಾಗಿ ಹೋಗುವದು. ಆನೆಗಿಂತ ಅಂಕುಶ ಮೇಲು, ಕತ್ತಲೆಗಿಂತ ಬೆಳಕು ಮೇಲು, ಮರೆಹುಗಿಂತ ನೆನಹು ಮೇಲು ಎಂದು ಬಸವಣ್ಣನವರ ವಚನವುಂಟು. ಒಟ್ಟಿನಲ್ಲಿ ಹೇಳಬೇಕಾದುದು ಏನಂದರೆ ಪರಂಪರೆಗಿಂತ ಪರಿಸ್ಥಿತಿಯು ಬಲವಾದದ್ದು, ಪರಿಸ್ಥಿತಿಗಿಂತ ಪ್ರಯತ್ನವು ಬಲವಾದದ್ದು.

## ಶಿಕ್ಷಣದಲ್ಲಿಯ ಉಪಯೋಗ

ಶಿಕ್ಷಕನಿಗೆ ಪರಂಪರೆಯ ಪ್ರಶ್ನೆಯು ಮಹತ್ತ್ವದ್ದು ಅಲ್ಲ. ಪರಂಪರೆಯ ವರ್ಚಸ್ಸನ್ನು ಅಳಿಸಲು ಬರುವದಿಲ್ಲವೆಂದು ಅವನು ಮನಸ್ಸಿನಲ್ಲಿ ತಪ್ಪು ಕಲ್ಪನೆ ಯನ್ನು ಇಟ್ಟುಕೊಂಡಿದ್ದರೆ ಅವನಲ್ಲಿ ದರ್ಪ, ದ್ವೇಷ ಮತ್ತು ಜಾತೀಯತೆಯ ಹೆಚ್ಚು ಕಡಿಮೆ ಭಾವನೆಗಳು ಬರುವವು. ಸಾಲೆಯ ಮಕ್ಕಳನ್ನು ನೋಡುವ ಇವನ ದೃಷ್ಟಿಯು ಕಲುಷಿತವಾಗುವದು. ಇಂಥವನು ಶಿಕ್ಷಕನಾಗಲು ಅಯೋಗ್ಯನು. ಶಿಕ್ಷಣದಿಂದ ಮತ್ತು ಅನುಕೂಲ ಪರಿಸ್ಥಿತಿಯಿಂದ ಮಗುವಿನ ನಡೆನುಡಿಗಳಲ್ಲಿ ಮತ್ತು ಬುದ್ಧಿ ಕೌಶಲ್ಯಗಳಲ್ಲಿ ಬದಲಾವಣೆಯನ್ನು ತರಲು

ಈ ಪುಸ್ತಕದಲ್ಲಿ ಯಾವ ಧೋರಣೆಯನ್ನು ತಾಳಲಾಗಿದೆ? ಅದರ ಬಗ್ಗೆ ನಿಮ್ಮ ಅಭಿಪ್ರಾಯವೇನು ? ವಿವರಿಸಿರಿ.

೫. ಕಲಿಸುವಿಕೆಯ ಮತ್ತು ಪರಿಸ್ಥಿತಿಯ ಪರಿಣಾಮವು ಮಕ್ಕಳ ಯಾವ ವಯಸ್ಸಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಆಗುವದು? ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೬. "ಜತೆಯಂತೆ ಮತಿ" ಎಂಬ ನಾಡ ನುಡಿಯನ್ನು ಉದಾಹರಣೆ ಕೊಟ್ಟು ಸಿದ್ಧಮಾಡಿರಿ. ಈ ನುಡಿಯು ಶಿಕ್ಷಕನಿಗೆ ಯಾವ ರೀತಿಯಿಂದ ಮಾರ್ಗಸೂಚಕವಾಗಿರುತ್ತದೆ?

೭. ಅವಳಿಜವಳಿ ಆಕ್ಕ ತಂಗಿಯರಲ್ಲಿ ಒಬ್ಬಳನ್ನು ಶ್ರೀಮಂತರ ಮನೆಗೆ ಮತ್ತೊಬ್ಬಳನ್ನು ಬಡವರ ಮನೆಗೆ ಮದುವೆ ಮಾಡಿಕೊಟ್ಟ ಉದಾಹರಣೆಗಳು ನಿಮಗೆ ಗೊತ್ತಿರಬಹುದು. ಅವರ ಅತ್ತೆಯ ಮನೆಯ ಪರಿಸ್ಥಿತಿಯಿಂದ ಅವರ ನಡೆನುಡಿಗಳಲ್ಲಿ ಏನಾದರೂ ಬದಲಾವಣೆಗಳು ಕಂಡುಬರುವವೊ ? ವಿವರಿಸಿರಿ.

೮. ಅನಾಥ ಮಂದಿರಗಳಲ್ಲಿಯ ಮಕ್ಕಳ ಆನುವಂಶೀಯತೆಯು ಬೇರೆ ಬೇರೆ ಆಗಿರುತ್ತದೆ. ಆದರೆ ಆ ಸಂಸ್ಥೆಗಳಲ್ಲಿ ದೊರಕುವ ಶಿಕ್ಷಣವು ಅವರ ಮೇಲೆ ಯಾವ ಪರಿಣಾಮವನ್ನು ಮಾಡಬಲ್ಲದು? ನಿಮಗೆ ಗೊತ್ತಿದ್ದ ಉದಾಹರಣೆಗಳನ್ನು ಕೊಟ್ಟು ತಿಳಿಸಿ ಹೇಳಿರಿ.

೯. ಪ್ರಾಥಮಿಕ ಸಾಲೆಗೆ ಹೋಗುವ ಮತ್ತು ಹೋಗದೇ ಇರುವ ಅದೇ ವಯಸ್ಸಿನ ಮಕ್ಕಳ ವರ್ತನದಲ್ಲಿ ಕಂಡುಬರುವ ವ್ಯತ್ಯಾಸಗಳನ್ನು ವರ್ಣಿಸಿರಿ.

೧೦. ಸ್ವದೇಶದಲ್ಲಿ ಶಿಕ್ಷಣವನ್ನು ಪಡೆದ ಮತ್ತು ಪರದೇಶಕ್ಕೆ ಹೋಗಿ ಶಿಕ್ಷಣವನ್ನು ಪಡೆದುಕೊಂಡು ಬಂದ ಜನರ ವರ್ತನದಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೧೧. ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಯಿಂದ ಅಥವಾ ಸಂಸ್ಕೃತಿಯ ದೃಷ್ಟಿಯಿಂದ ಭಿನ್ನವಾಗಿರುವ ಸಮಾಜಗಳು ಅಥವಾ ಗುಂಪುಗಳು

ಯಾವವು? ಅವರು ತಮ್ಮ ಮಕ್ಕಳನ್ನು ಬೆಳೆಸುವ ರೀತಿಯಲ್ಲಿ ಯಾವ ವ್ಯತ್ಯಾಸವು ಕಂಡು ಬರುತ್ತದೆ? ವಿವರಿಸಿರಿ.

೧೨. ಸಾಮಾಜಿಕ ಪರಂಪರೆ ಅಂದರೇನು? ಮನೆಯಲ್ಲಿ ಮತ್ತು ಸಾಲೆಯಲ್ಲಿ ಈ ಪರಂಪರೆಯನ್ನು ಕಾಯ್ದುಕೊಳ್ಳುವ ವಿಧಾನಗಳು ಯಾವವು? ಶಿಕ್ಷಣ ಪರಂಪರೆಯು ನಮ್ಮ ದೇಶದಲ್ಲಿಯ ಬೇರೆ ಬೇರೆ ಸಮಾಜಗಳಲ್ಲಿ ಹೇಗೆ ನಡೆದುಕೊಂಡು ಬಂದಿದೆ? ಇದರಿಂದ ಆದ ಪರಿಣಾಮವೇನು?

೧೩. ಇಂಡಿಯಾದ ಹೊಸ ಘಟನೆಯಲ್ಲಿ ನಿರೂಪಿಸಿದ ಶೈಕ್ಷಣಿಕ ಹಕ್ಕುಗಳ ದೃಷ್ಟಿಯಿಂದ ಮತ್ತು ಹೊಸ ಶಿಕ್ಷಣದ ದೃಷ್ಟಿಯಿಂದ (ಪ್ರಾಯಮರಿ ಮತ್ತು ಸೆಕಂಡರಿ) ಸಾಲೆಗಳಲ್ಲಿ ಯಾವ ಯಾವ ಬದಲಾವಣೆಗಳು ಆಗತಕ್ಕದ್ದು? ಮನೋವಿಜ್ಞಾನದ ದೃಷ್ಟಿಯಿಂದ ಈ ಬದಲಾವಣೆಗಳು ಎಷ್ಟರ ಮಟ್ಟಿಗೆ ಸಮಂಜಸವೆನಿಸುವವು? ನಿಮ್ಮ ಸ್ಪಷ್ಟ ಅಭಿಪ್ರಾಯಗಳನ್ನು ಹಾಗೂ ಕಾರಣ ಸಹಿತ ಕೊಡಿರಿ.

೧೪. ಶಿಕ್ಷಣ ಸಮಾನತೆ ಅಂದರೇನು? ಸಾಮಾಜಿಕ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಹಿಂದುಳಿದ ವರ್ಗದ ಮಕ್ಕಳಿಗೆ ಶಿಕ್ಷಣದಲ್ಲಿ ಸಮಾನ ಸಂದರ್ಭಗಳನ್ನು ಯಾವ ತೆರನಾಗಿ ಒದಗಿಸಬಹುದು? ಈ ಬಗ್ಗೆ ನಿಮ್ಮದೊಂದು ಯೋಜನೆಯನ್ನು ತಯಾರಿಸಿರಿ.

೧೫. ಶಿಕ್ಷಕನ ವ್ಯಕ್ತಿತ್ವ, ಅವನ ಕಲಿಸುವ ಪದ್ಧತಿ, ಪಠ್ಯ ಪುಸ್ತಕ, ಮತ್ತು ಅಭ್ಯಾಸಕ್ರಮ ಇವು ಮಕ್ಕಳ ಮೇಲೆ ಹೇಗೆ ಪರಿಣಾಮವನ್ನು ಉಂಟು ಮಾಡುತ್ತವೆ ಎಂಬುದನ್ನು ಉದಾಹರಣೆ ಸಹಿತ ತಿಳಿಸಿ ಹೇಳಿರಿ.

೧೬. ಶಿಕ್ಷಕನು ವಿದ್ಯಾರ್ಥಿಗಳ ಮನೋವೃತ್ತಿಗಳನ್ನು ಎಷ್ಟರ ಮಟ್ಟಿಗೆ ತಿದ್ದಬಲ್ಲನು? ಅಂಥ ಮೂರು ಸನ್ನಿವೇಶಗಳನ್ನು ಸೂಚಿಸಿರಿ. ಮನೆ, ಸಾಲೆ ಮತ್ತು ಸಮಾಜ ಇವುಗಳಲ್ಲಿ ಯಾವುದರ ವರ್ಚಸ್ಸು ಮಗುವಿನ ಮೇಲೆ ಹೆಚ್ಚಾಗಿ ಆಗುವದು? ಏಕೆ?

೧೭. ಮಗುವು ಒಂದು ಗುಂಪನು ಅಥವಾ ಸಂಘವನ್ನು ಸೇರಿ ಅದರ ಸದಸ್ಯನಾಗಿ ಕೆಲವು ದಿವಸ ಕಳೆದರೆ ಅವನ ಮನೋವೃತ್ತಿಗಳು ಬದಲಾಗುತ್ತವೆ ಎಂಬುದನ್ನು ಉದಾಹರಣೆ ಕೊಟ್ಟು ಸ್ಪಷ್ಟಮಾಡಿರಿ.

೧೮. ಜಾತೀಯ ಮನೋವೃತ್ತಿಯನ್ನು ಈಗ ಜನರು ಏಕೆ ಅಲ್ಲಗಳೆಯುತ್ತಾರೆ? ಈ ಮನೋವೃತ್ತಿಯಿಂದ ಆಗಿರುವ ಆಗಬಹುದಾದ ಕೆಡಕು ಪರಿಣಾಮಗಳು ಯಾವವು? ಹಿಂದಿನ ಕಾಲದಲ್ಲಿ ಯಾವ ಸಮಾಜ ಸುಧಾರಕರು ಜಾತಿಯತೆಯನ್ನು ನಿಷೇಧಿಸಿರುವರು? ಈ ವಿಷಯವನ್ನು ಶಿಕ್ಷಣದ ಸಮಸ್ಯೆಗಳಿಗೆ ಹಚ್ಚಿ ವಿವರಿಸಿರಿ.

೧೯. ಸಾಲೆಯಲ್ಲಿ ನಿರಂಕುಶ ವಿಧಾನಗಳಿಗಿಂತ ಲೋಕಸತ್ತೆಯ ವಿಧಾನಗಳು ಒಳ್ಳೇ ಪರಿಣಾಮಗಳನ್ನು ಉಂಟುಮಾಡುವವು ಎಂಬುದು ಪ್ರಯೋಗದಿಂದ ಕಂಡುಬಂದಿದೆ. ಪ್ರತಿಯೊಬ್ಬ ಶಿಕ್ಷಕನು ತನ್ನ ಸಾಲೆಯ ಕಾರ್ಯಕ್ರಮಗಳಲ್ಲಿ ಈ ಎರಡೂ ವಿಧಾನಗಳನ್ನು ಹೇಗೆ ಉಪಯೋಗಿಸಬಲ್ಲನು? ಎಂಬುದನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೨೦. ಕೆಳಗೆ ಕೊಟ್ಟ ಯಾವ ಸನ್ನಿವೇಶಗಳಲ್ಲಿ ಲೋಕಸತ್ತೆಯ ವಿಧಾನಗಳನ್ನು ಹೆಚ್ಚಾಗಿ ಉಪಯೋಗಿಸಲು ಬರುತ್ತದೆ?—(ಅ) ವಕ್ತೃತ್ವ ಸಂಘ (ಆ) ವಿದ್ಯಾರ್ಥಿಗಳ ಕೌನ್ಸಿಲ್ (ಇ) ಹುಡುಗರ ಕ್ಲಬ್ಬಿನ ಸಭೆ (ಈ) ಶುದ್ಧ ಲೇಖನ (ಉ) ಹಳ್ಳಿಯ ನಿರೀಕ್ಷಣೆ (ಊ) ಭೂಗೋಲ ವಿಷಯದಲ್ಲಿ ಒಂದು ಯೋಜನೆ (ಪ್ರೊಜೆಕ್ಟ) ಮತ್ತು (ಎ) ಸಾಲೆಯ ತಪಾಸಣೆಯ ದಿವಸ.

೨೧. ರಾಜಸತ್ತೆಯ (Imperialistic), ಲೋಕಸತ್ತೆಯ (Democratic), ಸಮತೆಯ (Communistic), ನಿರಂಕುಶತ್ವದ (Autocratic), ಜಾತೀಯತೆಯ (Communal), ಮತ್ತು ಧಾರ್ಮಿಕ (Theocratic), ಆಡಳಿತೆಯು ಪ್ರಧಾನವಾಗಿದ್ದ ರಾಷ್ಟ್ರಗಳಲ್ಲಿಯ ಶಿಕ್ಷಣ ಪದ್ಧತಿಯು ಮಕ್ಕಳ ವರ್ತನದ ಮೇಲೆ ಯಾವ ಯಾವ ಪರಿಣಾಮಗಳನ್ನು ಉಂಟುಮಾಡುತ್ತದೆ? ಅವರವರ ವರ್ತನದ ಸಾಮ್ಯ ವೈಷಮ್ಯಗಳನ್ನು ವಿವರಿಸಿರಿ.

೨೨. ಸ್ಪರ್ಧೆಯಿಂದ ಆಗುವ ಲಾಭಹಾನಿಗಳು ಯಾವವು? ಸಹಕಾರದಿಂದ ಆಗುವ ಲಾಭಗಳು ಯಾವವು? ಸಾಲೆಯಲ್ಲಿಯ ಮತ್ತು ಉದ್ಯೋಗ ವ್ಯವಹಾರದಲ್ಲಿಯ ಎರಡೆರಡು ಉದಾಹರಣೆಗಳನ್ನು ಕೊಟ್ಟು ವಿವರಿಸಿರಿ.

೨೩. ಸ್ಪರ್ಧೆ ಮತ್ತು ಸಹಕಾರಗಳೆರಡನ್ನು ಒಂದೇ ಕಾಲಕ್ಕೆ ಕಲಿಯಬಹುದಾದ ಕೆಲವು ಸನ್ನಿವೇಶಗಳನ್ನು ವಿವರಿಸಿರಿ.

೨೪. ಕಲಾಕೌಶಲ್ಯಗಳನ್ನು ಕಲಿಸುವಾಗ ಶಿಕ್ಷಕನ ಸಹಾಯ ಮತ್ತು ಪ್ರೋತ್ಸಾಹದಿಂದ ವಿದ್ಯಾರ್ಥಿಗಳಲ್ಲಿ ಹೆಚ್ಚು ಪ್ರಗತಿಯು ಕಂಡು ಬರುತ್ತದೆ. ಈ ಮಾತನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೨೫. ಬಾಹ್ಯ ಆವರಣ ಅಂದರೇನು? ಇದು ಸ್ಥೂಲವಾಗಿ ಮತ್ತು ಸೂಕ್ಷ್ಮವಾಗಿ ಮಕ್ಕಳ ಮೇಲೆ ಹೇಗೆ ತನ್ನ ಪರಿಣಾಮವನ್ನು ಹರಡುತ್ತದೆ ಎಂಬುದನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೨೬. ಕೆಲವರು ಪರಿಸ್ಥಿತಿಯ ವರ್ಚಸ್ಸಿಗೆ ಒಳಗಾಗುವದಿಲ್ಲ. ಅದನ್ನು ಪ್ರತಿಭಟಿಸಿ ಹೊಸ ಪರಿಸ್ಥಿತಿಯನ್ನು ಮತ್ತು ಹೊಸ ಸಂಪ್ರದಾಯಗಳನ್ನು ಉಂಟುಮಾಡುವರು. ಇದರ ಕಾರಣವೇನು? ಉದಾಹರಣೆ ಕೊಟ್ಟು ವಿವರಿಸಿರಿ.

# ಅಧ್ಯಾಯ ೭

## ಕಲಿಯುವಿಕೆಯಲ್ಲಿ ಮುನ್ನಡೆ

### ಪ್ರಗತಿ ಮತ್ತು ಫಲ

ಅಂತಃಪ್ರೇರಣೆಯಿಂದಲೇ ಆಗಲಿ ಅಥವಾ ಬಾಹ್ಯ ಪರಿಸ್ಥಿತಿಯಿಂದಲೇ ಆಗಲಿ ಮಗುವು ಪ್ರಚೋದಿತನಾದರೆ ಅವನ ಕಲಿಯುವಿಕೆಯು ಪ್ರಾರಂಭ ವಾಗುತ್ತದೆ. ವಿಶಿಷ್ಟ ಸನ್ನಿವೇಶಗಳಿಂದ ಪ್ರಚೋದಿತವಾದ ಕಲಿಯುವ ಕೆಲಸದಲ್ಲಿ ಸುಧಾರಣೆ ಅಥವಾ ಬೆಳವಣಿಗೆ ಕಂಡುಬರಬೇಕಾದರೆ ಅದನ್ನು ಮೇಲಿಂದ ಮೇಲೆ ರೂಢಿ ಅಥವಾ ಅಭ್ಯಾಸ ಮಾಡಬೇಕಾಗುತ್ತದೆ. ಕೊನೆಗೆ ಒಂದು ಸ್ಥಿರತೆ ಅಥವಾ ನಿಶ್ಚಿತ ವರ್ತನ ಉಂಟಾಗುತ್ತದೆ. ಸಾಲೆ ಕಲಿತ ಹುಡುಗನು ೪ + ೩ ಅಂದರೆ ೭ ಎಂದೂ, ೪ × ೩ ಅಂದರೆ ೧೨ ಎಂದೂ ಕೂಡಲೇ ಹೇಳಿ ಬಿಡುವನು. ಇಲ್ಲಿ ೭ ಅಥವಾ ೧೨ ಅನ್ನುವದು ಕೊನೆಗೆ ಸ್ಥಿರವಾದ ಮೆಟ್ಟು ಅಥವಾ ಫಲ. ಆದರೆ ಈ ಕೊನೆಯ ಮೆಟ್ಟಿಗೆ ಬರುವ ಮೊದಲು ಆ ಹುಡುಗನು ಎಣಿಸುವದನ್ನು, ಕೂಡಿಸುವದನ್ನು, ಕಳೆಯುವದನ್ನು ಮತ್ತು ಗುಣಿಸುವದನ್ನು ಅನೇಕ ಬಾರೆ ಅಭ್ಯಾಸ ಮಾಡಿರುತ್ತಾನೆ. ಅಂದರೆ ಕಲಿಯುವಿಕೆಯಲ್ಲಿ ಪ್ರಾರಂಭ, ಪ್ರಗತಿ ಮತ್ತು ಫಲ ಎಂಬ ಮೂರು ಮೆಟ್ಟುಗಳನ್ನು ಕಲ್ಪಿಸಬಹುದು. ಪ್ರಗತಿ (Progress) ಅಂದರೆ ಮುನ್ನಡೆ. ಮೊದಲಿನ ಪ್ರಯತ್ನಗಳು ಮತ್ತು ಕೊನೆಯ ಸ್ಥಿರವಾದ ಪ್ರತಿಕ್ರಿಯೆಗಳು ಅಥವಾ ವರ್ತನಗಳು ಇವುಗಳ ನಡುವೆ ಸಂಭವಿಸುವ ಬೆಳವಣಿಗೆಯ ಹಾದಿಗೆ ಮುನ್ನಡೆಯು ಸಂಬಂಧಿಸಿರುತ್ತದೆ. ಇನ್ನೆರಡು ಉದಾಹರಣೆಗಳು. ಈಸು ಕಲಿಯಬೇಕೆಂಬ ಹುಡುಗನು ಮೊದಲು ಕಷ್ಟವನ್ನು ಅನುಭವಿಸುತ್ತಾನೆ. ಆ ಮೇಲೆ ಬೇರೆ ಬೇರೆ ಪ್ರಯತ್ನಗಳನ್ನು ಮಾಡುತ್ತಾನೆ. ಕೊನೆಗೆ ತೊಂದರೆ ಇಲ್ಲದೆ ಈಸುವದನ್ನು ಸಾಧಿಸುತ್ತಾನೆ. ಸಾಯಕಲ್ ಹೊಡೆಯಲಿಕ್ಕೆ ಕಲಿಯಹತ್ತಿದವನು ಮೊದಮೊದಲು ಪೆಟ್ಟು ತಿಂದರೂ ಕಡೆಗೆ ಗೆಲವು ಹೊಂದುತ್ತಾನೆ. ಇದರಂತೆ ಓದು, ಬರೆಹ, ಚಿತ್ರಕಲೆ, ಲೇಜೀಮು, ಟಾಯಪಿಂಗ ಮೊದಲಾದ ವಿಷಯಗಳನ್ನು ಕಲಿಯುವಾಗ ಅವು ಇದೇ

ಕ್ರಮದಿಂದ ಸಾಗುತ್ತವೆ. ಯಾವುದೇ ಕೆಲಸವನ್ನು ಮೇಲಿಂದ ಮೇಲೆ ಮಾಡುವುದರಿಂದ ಅದರ ನಿಶ್ಚಿತವಾದ ಮತ್ತು ಸುಸಂಬದ್ಧವಾದ ಜ್ಞಾನವು ನಮಗೆ ಕ್ರಮೇಣ ಗೊತ್ತಾಗುತ್ತದೆ; ಮತ್ತು ಆ ಕೆಲಸದಲ್ಲಿ ನಿಪುಣತೆಯು ಹೆಚ್ಚುತ್ತ ಹೋಗುತ್ತದೆ. ಕೆಲಸದಲ್ಲಿ ಕಂಡುಬರುವ ಈ **ಸುಧಾರಣೆಯು** ಕಲಿಯುವಿಕೆಯ ಹೊರಗಿನ ಲಕ್ಷಣ. ಕಲಿಯುವಿಕೆಯು ಹೇಗೆ ಸುಧಾರಿಸುತ್ತದೆ, ಹೇಗೆ ಮುನ್ನಡೆ ಇಡುತ್ತದೆ ಮತ್ತು ಅದರಲ್ಲಿ ಯಾವ ತತ್ವಗಳು ಅಡಕವಾಗಿರುತ್ತವೆ ಎಂಬುದನ್ನು ಶಿಕ್ಷಕನು ತಿಳಿದುಕೊಳ್ಳುವದು ಅವಶ್ಯ. ಅಂದರೆ ಮಾತ್ರ ಅವನು ತನ್ನ ಕಲಿಸುವ ಪದ್ಧತಿಯನ್ನು ಸರಿಯಾಗಿ ಯೋಜಿಸಬಲ್ಲನು.

ಸಾಲೆಯಲ್ಲಿ ಕಲಿಯುವದಷ್ಟೇ ಕಲಿಯುವಿಕೆಯಲ್ಲ. ಇಡೀ ಬಾಳುವೆಯಲ್ಲೆಲ್ಲ ಕಲಿಯುವಿಕೆಯು ನಡೆದಿರುತ್ತದೆ. ಬೇರೆ ಬೇರೆ ಪ್ರಸಂಗಗಳ ಅನುಭವದಿಂದ ವರ್ತನವು ಬದಲಾಗುತ್ತ, ಸುಧಾರಿಸುತ್ತ ಹೋಗುತ್ತವೆ. ಒಟ್ಟಿನಲ್ಲಿ ಕಲಿಯುವಿಕೆಯನ್ನು ಮೂರು ತೆರನಾಗಿ ಬಿಡಿಸಿ ಹೇಳಬಹುದು—

(೧) ವಿಷಯಗಳಲ್ಲಿ ಜ್ಞಾನವನ್ನು ಪಡೆಯುವದು

(೨) ಕಲಾಕೌಶಲ್ಯಗಳಲ್ಲಿ ನಿಪುಣತೆಯನ್ನು ಹೊಂದುವದು; ಮತ್ತು

(೩) ಮನೋವೃತ್ತಿಗಳನ್ನು ಹದಗೊಳಿಸುವದು.

ಈ ಮೂರು ಫಲಗಳನ್ನು ಅಥವಾ ಕೊನೆಯ ಗುರಿಗಳನ್ನು ಮುಟ್ಟುವಾಗ ಕಲಿಯುವಿಕೆಯು ಯಾವ ರೀತಿಯಿಂದ ಸಾಗುತ್ತದೆ ಮತ್ತು ಅದರ ಲಕ್ಷಣಗಳು ಯಾವವು ಎಂಬುದನ್ನು ವಿವೇಚಿಸುವ.

## ಕಲಿಯುವಿಕೆಯ ಸಾಮಾನ್ಯ ಸ್ವರೂಪ

ಕಲಿಯುವ ಕೆಲಸವು ನಡೆದಾಗ ಏನೇನು ಆಗುತ್ತದೆ ಅಥವಾ ಸಂಭವಿಸುತ್ತದೆ ಎಂಬುದನ್ನು ತಿಳಿದುಕೊಳ್ಳುವದು ಮಹತ್ವದ ವಿಷಯ. ಸಮಸ್ಯೆಯನ್ನು ಬಿಡಿಸುವ ಉದಾಹರಣೆಗಳನ್ನು ತಕ್ಕೊಂಡರೆ ಕಲಿಯುವಿಕೆಯ ಸ್ವರೂಪದ ಸ್ಪಷ್ಟಕಲ್ಪನೆಯು ಬರುತ್ತದೆ. ಮ್ಯಾಕ್‌ಡ್ಯೂಗಲ್, ಥಾರ್ನ್‌ಡಾಯಿಕ್, ಪ್ಯಾವ್ಲೊಲೋ, ಕೊಹಿಲರ್ ಮೊದಲಾದ ಮನೋವಿಜ್ಞಾನಿಗಳು ಇಲಿ,

ಬೆಕ್ಕು, ನಾಯಿ, ಮಂಗ, ಮುಂತಾದ ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ನಡೆಯಿಸಿ ಕಲಿಯುವಿಕೆಯ ಬಗೆಗೆ ಕೆಲವು ಸಿದ್ಧಾಂತಗಳನ್ನು ಹೊರಡಿಸಿದ್ದಾರೆ. ಪಂಜರದಲ್ಲಿ ಒಂದು ಕೋತಿಯು ಇರುತ್ತದೆ. ಪಂಜರದ ಹೊರಗೆ ಕಣ್ಣಿಗೆ ಕಾಣುವಂತೆ ಅದರೆ ಕೈಗೆ ನಿಲುಕದಂತೆ ಬಾಳೆಯ ಹಣ್ಣನ್ನು ತೂಗು ಬಿಟ್ಟಿರುತ್ತದೆ. ಮಂಗವು ತನ್ನ ಕೈಯಿಂದ ಹಣ್ಣನ್ನು ಹರಿಯಲು ಪ್ರಯತ್ನ ಮಾಡಿ ನಿರಾಶೆ ಹೊಂದುತ್ತದೆ. ಪಂಜರದಲ್ಲಿ ಮತ್ತೊಂದು ಬದಿಗೆ ಒಂದು ಕೋಲು ಇಟ್ಟಿರುತ್ತದೆ. ಮಂಗವು ಅತ್ತಿತ್ತ ಅಡ್ಡಾಡುವಾಗ ಆ ಕೋಲನ್ನು ದಾಟುತ್ತದೆ; ಅದರ ಮೇಲೆ ಕಾಲಿಟ್ಟು ಹೋಗುತ್ತದೆ. ಆಗ ಆ ಕೋಲನ್ನು ಉಪಯೋಗಿಸಿ ಹಣ್ಣನ್ನು ಹರಿಯಬೇಕೆಂಬ ವಿಚಾರವು ಅದಕ್ಕೆ ಹೊಳೆಯುವದಿಲ್ಲ. ಆಮೇಲೆ ಆ ಕೋಲನ್ನು ಹಣ್ಣು ಇದ್ದ ಕಡೆಗೆ ಸರಿಸಲಾಗುತ್ತದೆ. ಮಂಗವು ಹಣ್ಣನ್ನು ನೋಡುವಾಗ ಕೋಲೂ ಅದಕ್ಕೆ ಕಾಣುತ್ತದೆ. ಆಗ ಅದಕ್ಕೆ ಕೋಲು ಮತ್ತು ಹಣ್ಣು ಇವುಗಳ ಸಂಬಂಧವು ಹೊಳೆಯುತ್ತದೆ. ಮಂಗವು ಕಡೆಗೆ ಕೋಲಿನ ಸಹಾಯದಿಂದ ಹಣ್ಣನ್ನು ಜಗ್ಗಿ, ಹರಿದು ತಿನ್ನುತ್ತದೆ. ಮತ್ತೊಂದು ಪ್ರಸಂಗದಲ್ಲಿ ಕೋಲುಗಳು ಸಣ್ಣವು ಇದ್ದಾಗ ಮಂಗವು ಒಂದರೊಳಗೆ ಒಂದನ್ನು ಸೇರಿಸಿ ಸಾಕಷ್ಟು ಉದ್ದವಾದ ದೋಟಿಯನ್ನು ಮಾಡಿ, ಪೆಟ್ಟಿಗೆಗಳನ್ನು ಒಂದರ ಮೇಲೊಂದು ಇಟ್ಟು ಹಣ್ಣನ್ನು ದೊರಕಿಸುತ್ತದೆ. ಮ್ಯಾಕ್‌ಡೂಗಲ್‌ನು ಈ ತರದ ಒಂದು ಪ್ರಯೋಗವನ್ನು ಇಲಿಗಳ ಮೇಲೆ ಮಾಡಿರುತ್ತಾನೆ. ಪೆಟ್ಟಿಗೆಯೊಳಗೆ ಮಾಡಿದ ಒಂದು ಚಕ್ರವ್ಯೂಹದ ಕೋಟೆ ಇರುತ್ತದೆ. ಆ ಕೋಟೆಯ ನಡುವೆ ಆಹಾರವನ್ನು ಇಟ್ಟಿರುತ್ತದೆ. ಅದನ್ನು ದೊರಕಿಸಲಿಕ್ಕೆ ಕೋಟೆಯ ಬಾಗಿಲಿನಿಂದ ಇಲಿಯು ಹೊರಡುತ್ತದೆ. ಸರಿಯಾದ ಹಾದಿಯಿಂದ ಹೋದರೆ ಮಾತ್ರ ಇಲಿಯು ಆಹಾರವಿದ್ದ ಕೋಣೆಗೆ ಹೋಗುವದು. ಆದರೆ ತಪ್ಪು ಹಾದಿಯನ್ನು ಹಿಡಿದರೆ ನಡುವೆ ದಾರಿಯು ಕಟ್ಟಾಗಿ ಇಲಿಯು ತಿರುಗಿ ಬಂದು ಮತ್ತೊಂದು ನಿಟ್ಟಿಗೆ ಹೋಗಬೇಕಾಗುತ್ತದೆ. ಆ ಹಾದಿ ಈ ಹಾದಿ ನೋಡಿ ಬಹಳ ಹೊತ್ತಿನ ಮೇಲೆ ಇಲಿಯು ಆಹಾರವನ್ನು ದೊರಕಿಸಿ ತೃಪ್ತಿಪಡುತ್ತದೆ. ಅನೇಕ ಸಾರೆ ಪ್ರಯೋಗವನ್ನು ಆ ಇಲಿಯ ಮೇಲೆ ಮಾಡಲಾಗುತ್ತದೆ. ಮೊದಲನೆಯ ಸಲ ಇಲಿಯು ಅನೇಕ ತಪ್ಪುಗಳನ್ನು ಮಾಡುತ್ತದೆ. ಎರಡನೆಯ

ಸಲ ಅದಕ್ಕಿಂತ ಕಡಿಮೆ ತಪ್ಪುಗಳು ಆಗುತ್ತವೆ. ಹೀಗೆ ಪ್ರತಿಸಾರೆ ತಪ್ಪುಗಳು ಕಡಿಮೆಯಾಗುತ್ತ ಕೊನೆಗೆ ತಪ್ಪುಗಳೇ ಇಲ್ಲದೆ ಇಲಿಯು ನೇರವಾಗಿ ಆಹಾರ ವಿದ್ದ ಕಡೆಗೆ ಓಡಿ ಹೋಗುವದಕ್ಕೆ ಸಮರ್ಥವಾಗುತ್ತದೆ. ಅನೇಕ ಪ್ರಯತ್ನಗಳ ಅಭ್ಯಾಸದಿಂದ ಬಂದ ಈ ಸುಧಾರಣೆಗೆ ಕಲಿಯುವಿಕೆ ಎಂದು ಅನ್ನುತ್ತಾರೆ. ಪ್ರತಿಯೊಂದು ಪ್ರಸಂಗದಲ್ಲಿ ಮೊದಲಿನ ಹಾಗೆ ಪ್ರಾಣಿಯು ತಪ್ಪುಗಳನ್ನು ಮಾಡ ಹತ್ತಿದರೆ ಅದು ಕಲಿತಿಲ್ಲವೆಂದೇ ಅನ್ನಬೇಕು. ಏಕೆಂದರೆ ಮೊದಲಿನ ಅನುಭವದ ಪರಿಣಾಮವು ಅದರ ಮೇಲೆ ಆಗಿರುವದಿಲ್ಲ.

ಯಾವುದೇ ಒಂದು ವಿಷಯವನ್ನು ತಕ್ಕೊಳ್ಳಲಿ ಅದರ ಕಲಿಯುವಿಕೆಯು ಪೂರ್ಣವಾಗಬೇಕಾದರೆ ಅದರಲ್ಲಿ ಯಾವ ಯಾವ ಮೆಟ್ಟುಗಳು ಅಡಕವಾಗಿರುತ್ತವೆ ಎಂಬುದನ್ನು ಬಿಡಿಸಿ ನೋಡುವ. ಈ ಮೆಟ್ಟುಗಳೇ ಕಲಿಯುವಿಕೆಯ ಸ್ವರೂಪವನ್ನು ಸೂಚಿಸುತ್ತವೆ. ಮೇಲೆ ಕೊಟ್ಟ ಉದಾಹರಣೆಗಳ ಸಹಾಯದಿಂದ ಈ ಮೆಟ್ಟುಗಳು ಯಾವವೆಂಬುದನ್ನು ತಿಳಿದುಕೊಳ್ಳುವ. **ಗುರಿ, ಪ್ರೇರಣೆ, ಪ್ರಯತ್ನ, ಒಳನೋಟ** ಮತ್ತು **ಸಂಬಂಧೀಕರಣ** ಇವೇ ಆ ಮೆಟ್ಟುಗಳು. ಆದರೆ ಆ ಎಲ್ಲ ಮೆಟ್ಟುಗಳು ಒಂದಕ್ಕೊಂದು ಹೊಂದಿಕೊಂಡಿರುತ್ತವೆ.

## ಗುರಿ

ಕಲಿಯುವಿಕೆಯು ಮುಂದೆ ಸಾಗಬೇಕಾದರೆ ಒಂದು ಗುರಿಯನ್ನು ಇಟ್ಟುಕೊಳ್ಳುವದು ಅವಶ್ಯ. ಮೇಲಿನ ಉದಾಹರಣೆಗಳಲ್ಲಿ ಬಾಳೆಯ ಹಣ್ಣನ್ನು ತೆಗೆದು ಕೊಳ್ಳಬೇಕೆಂಬುದೇ ಮಂಗವು ಇಟ್ಟುಕೊಂಡಿದ್ದ ಗುರಿ; ಆಹಾರವನ್ನು ದೊರಕಿಸಬೇಕೆಂಬುದೇ ಇಲಿಯು ಮುಂದಿದ್ದ ಗುರಿ. ಈ ಗುರಿಯನ್ನು ಮುಟ್ಟಬೇಕೆಂಬ ಬಲವಾದ ಬಯಕೆಯು ಇದ್ದರೆ ಮಾತ್ರ ಕೆಲಸವು ಅಥವಾ ಕಲಿಯುವಿಕೆಯು ಸಾಗುತ್ತದೆ. ವಿಷಯವನ್ನು ಕಲಿಸುವಾಗ ಗುರಿಯ ಸ್ಪಷ್ಟ ಕಲ್ಪನೆಯನ್ನು ವಿದ್ಯಾರ್ಥಿಗೆ ಮಾಡಿಕೊಡುವದು ಶಿಕ್ಷಕನ ಒಂದು ಮಹತ್ವದ ಕೆಲಸ. ಗುರಿಯನ್ನು ಸಾಧಿಸುವ ಉದ್ದೇಶವು ಇರದಿದ್ದರೆ ಕಲಿಯುವಿಕೆಯೇ ಅಶಕ್ಯ. ಗುರಿಯನ್ನು ಮುಟ್ಟಬೇಕೆಂಬ ಇಚ್ಛೆ ಇದ್ದರೆ ಮಾತ್ರ ಯಾವ ಹಾದಿಯನ್ನು ಹಿಡಿಯಬೇಕು, ಯಾವ ಕೆಲಸಗಳನ್ನು ಮಾಡಬೇಕು. ಎಂಬುದು ವಿದ್ಯಾರ್ಥಿಗೆ ತಿಳಿಯುತ್ತದೆ. ಭಾಷೆಯನ್ನು ಅಥವಾ ವ್ಯಾಕರಣವನ್ನು ಕಲಿಯುವಾಗ ಎರಡನೆಯವರಿಗೆ ತನ್ನ ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುವದೇ

ಗುರಿಯಾಗಿರುತ್ತದೆ. ಲೇಜೀಮ್, ಗೋಲ್ಫ ಮೊದಲಾದ ಆಟಗಳನ್ನು ಕಲಿಯುವಾಗ ಅವುಗಳಲ್ಲಿ ನಿಪುಣತೆಯನ್ನು ಹೊಂದಬೇಕೆಂಬುವೇ ಗುರಿಯಾಗಿರುತ್ತದೆ.

## ಪ್ರೇರಣೆ

ಮನುಷ್ಯನ ಎಲ್ಲ ಚಟುವಟಿಕೆಗಳಿಗೆ ಪ್ರೇರಣೆಗಳೇ ಮೂಲ ಕಾರಣವೆಂಬುದನ್ನು ಹಿಂದಿನ ಅಧ್ಯಾಯದಲ್ಲಿ ತಿಳಿಸಿ ಹೇಳಿವೆ. ಹಸಿವೆಯನ್ನು ತಣಿಸುವ ಪ್ರೇರಣೆ ಇದ್ದುದರಿಂದಲೇ ಇಲಿ ಮತ್ತು ಮಂಗವು ಆಹಾರವನ್ನು ದೊರಕಿಸುವ ಪ್ರಯತ್ನದಲ್ಲಿ ತೊಡಗಿದವು. ಮಗುವು "ಒಂದು ವಿಷಯವನ್ನು ಕಲಿಯಬೇಕಾಗಿದ್ದರೆ ಅಥವಾ ಅಭ್ಯಾಸ ಮಾಡಬೇಕಾಗಿದ್ದರೆ. ಅವನಿಗೆ ಅಭ್ಯಾಸ ಮುಗಿದ ಮೇಲೆ ದೊರಕುವ ಪ್ರತಿಫಲದ ಬಯಕೆಯು ಇರಬೇಕು." ಕಲಿಯಬೇಕೆಂಬ ಬಯಕೆ ಇದ್ದರೆ ಮಾತ್ರ ಅವನು ಕಲಿಯುತ್ತಾನೆ. ಯಾವ ಸಂಗತಿಗಳು ತಮ್ಮ ಬೇಡಿಕೆಗಳನ್ನು ತೃಪ್ತಿಗೊಳಿಸುತ್ತವೆಯೋ ಮತ್ತು ತಾವು ಇಟ್ಟುಕೊಂಡ ಗುರಿಗಳ ಕಡೆಗೆ ಒಯ್ಯುತ್ತವೆಯೋ ಅವುಗಳನ್ನು ಮನುಷ್ಯರು ಕಲಿಯುತ್ತಾರೆ. ಆಕಸ್ಮಾತ್ತಾಗಿ ಕಲಿಯುವದು ನಿಜವಾದ ಕಲಿಯುವಿಕೆಯಲ್ಲ; ಅದು ಗಟ್ಟಿಯಾಗಿ ಉಳಿಯುವದೂ ಇಲ್ಲ. ಓದು ಕಲಿಸುವಾಗ ಶಬ್ದಗಳ ಪರಿಚಯವನ್ನು ಅರ್ಥವುಳ್ಳ ಸನ್ನಿವೇಶಗಳಲ್ಲಿ ಮಾಡಿಕೊಡುವದು ಸರಿಯಾದ ಪದ್ಧತಿ. ಆದರೆ ಆ ಶಬ್ದಗಳ ಉಚ್ಚಾರಗಳನ್ನು ನೇರವಾಗಿಯೂ, ಸ್ಪಷ್ಟವಾಗಿಯೂ; ಮತ್ತು ಉದ್ದೇಶಪೂರ್ವಕವಾಗಿಯೂ ಕಲಿಸಬೇಕಾಗುತ್ತದೆ. ಗುರಿ ಮತ್ತು ಪ್ರೇರಣೆ ಅಥವಾ ಬಯಕೆ ಇವು ಒಂದಕ್ಕೊಂದು ಹೊಂದಿಕೊಂಡಿವೆ.

## ಪ್ರಯತ್ನ ಮತ್ತು ಪ್ರಮಾದ

ಕಲಿಯಲಿಕ್ಕೆ ಪ್ರಾರಂಭಿಸಿದಾಗ ಮೊದಲಿನ ಪ್ರಯತ್ನಗಳಲ್ಲಿ ಎಷ್ಟೋ ತಪ್ಪು ತಡೆಗಳು ಕಂಡು ಬರುತ್ತವೆ. ಇಲಿ ಮತ್ತು ಮಂಗವು ಆಹಾರವನ್ನು ದೊರಕಿಸುವ ಮೊದಲು ಎಷ್ಟೋ ಬಾರೆ ತಪ್ಪು ಹಾದಿಗಳನ್ನು ಹಿಡಿದವು. ಜೋಲಿ ಹಿಡಿದು ಅಡ್ಡಾಡಲಿಕ್ಕೆ ಕಲಿಯುವ ಮೊದಲು ಚಿಕ್ಕ ಮಗವು ತಪ್ಪು ಹೆಜ್ಜೆಗಳನ್ನು ಇಡುತ್ತಾನೆ. ಗುರಿಯನ್ನು ಮುಟ್ಟುವ ನೇರವಾದ ಹಾದಿಯು ಆವುದೆಂಬುದು ಪ್ರಾಣಿಗೆ ಒಮ್ಮೆಲೇ ಗೊತ್ತಾಗುವದಿಲ್ಲ. ಮತ್ತೆ ಮತ್ತೆ ಪ್ರಯತ್ನಗಳು ನಡೆದ ಹಾಗೆ ತಪ್ಪುಗಳು ಕಡಿಮೆಯಾಗುತ್ತ ಹೋಗುತ್ತವೆ.

ಯಾವ ಪ್ರಯತ್ನಗಳು ಅಥವಾ ಪ್ರತಿ ಕ್ರಿಯೆಗಳು ಗುರಿಯ ಸಮೀಪಕ್ಕೆ ಒಯ್ಯುತ್ತವೆಯೋ ಅವುಗಳನ್ನು ಮಾತ್ರ ಪ್ರಾಣಿಯು ಆರಿಸಿಕೊಂಡು ಉಳಿದ ತಪ್ಪು ಪ್ರತಿಕ್ರಿಯೆಗಳನ್ನು ಬಿಟ್ಟು ಬಿಡುತ್ತದೆ.

**ಒಳನೋಟ.**

ವಸ್ತು ಸ್ಥಿತಿಯನ್ನು ವಿಚಾರ ದೃಷ್ಟಿಯಿಂದ ಒಳಹೊಕ್ಕು ನೋಡುವುದೇ ಒಳನೋಟ ಅಥವಾ ಅಂತರ್ ದೃಷ್ಟಿ. ಇಲ್ಲಿ ಸನ್ನಿವೇಶದ ಪೂರ್ಣ ಕಲ್ಪನೆಯನ್ನು ತಕ್ಕೊಂಡು ಅದರ ಬೇರೆ ಬೇರೆ ಭಾಗಗಳಲ್ಲಿ ಸಂಬಂಧವನ್ನು ಹಚ್ಚುವದು ಇರುತ್ತದೆ; ಗುರಿ ಮತ್ತು ಸಾಧನಗಳ ಸಂಬಂಧವನ್ನು ಕಂಡು ಹಿಡಿಯುವದು ಇರುತ್ತದೆ. ಇದರಲ್ಲಿ ಕಾರಣ—ಪರಿಣಾಮಗಳ ಸಂಬಂಧ, ಸ್ಥಳಗಳ ಸಂಬಂಧ ಆಥವಾ ವೇಳೆಯ ಸಂಬಂಧ ಇರುತ್ತದೆ. ಒಳನೋಟವು ಮಾನಸಿಕ ಸಂಶೋಧನೆ. ಅದು ನಿರೀಕ್ಷಣೆಯ ಕೊನೆಗೆ ಬರುವ ಸಿದ್ಧಾಂತ. ಪ್ರಯತ್ನಗಳು ಮುಂದು ವರಿದಂತೆ ಸಲ ಸಲಕ್ಕೂ ಕೋಟೆಯ ವ್ಯೂಹದ ಅರ್ಥವು ಇಲಿಗೆ ಹೆಚ್ಚು ಹೆಚ್ಚು ಆಗಿ ಕೊನೆಗೆ ತಪ್ಪು ತಡೆಗಳು ಇಲ್ಲದೆ ನೇರವಾದ ಹಾದಿಯನ್ನು ಹಿಡಿಯುವದು. ಕೊಹಿಲರನ ಮಂಗವು ತನ್ನ ಬುದ್ಧಿಶಕ್ತಿಯ ಬಲದಿಂದ ಸನ್ನಿವೇಶಗಳನ್ನು ಪರಿಶೀಲಿಸುವದು. ಪೆಟ್ಟಿಗೆ, ಕೋಲು, ಹಗ್ಗ, ನಿಚ್ಚಣಿಕೆ, ಹಣ್ಣು ಮೊದಲಾದ ಸಾಧನ ಸಾಮಗ್ರಿಗಳ ಸಂಬಂಧವನ್ನು ಕಲ್ಪಿಸುವದು. ಸಂಬಂಧಗಳ ಅಂತರ್ ದೃಷ್ಟಿಯನ್ನು ಮತ್ತು ಗುರಿಯ ದೂರ ದೃಷ್ಟಿಯನ್ನು ಪಡೆದು ಆಹಾರವನ್ನು ದೊರಕಿಸುವದು. ಯಾವುದಾದರೊಂದು ಸಮಸ್ಯೆಯನ್ನು ಬಿಡಿಸುವಾಗ ಜನರು ಕೆಲವು ಹೊತ್ತು ಆಲೋಚಿಸಿದಮೇಲೆ "ಓಹೋ ! ತಿಳಿಯಿತು !" "ಓಹೋ ! ಹೊಳೆಯಿತು !" ಎಂದು ಸಾಮಾನ್ಯವಾಗಿ ಅನ್ನುವದುಂಟು. ಸಾಮಾಜಿಕ ಪ್ರಶ್ನೆಗಳನ್ನು ಬಿಡಿಸುವಾಗ, ನ್ಯಾಯನ್ಯಾಯದಲ್ಲಿಯ ಸಮಸ್ಯೆಗಳನ್ನು ಬಿಡಿಸುವಾಗ, ಗಣಿತದಲ್ಲಿಯ ರೀತಿಗಳನ್ನು ಕಲಿಯುವಾಗ, ಆಡುವಾಗ, ಮಣ್ಣಿನ ಆಕೃತಿ ಗಳನ್ನು ಮಾಡುವಾಗ, ಹೀಗೆ ಯಾವ ಕೆಲಸವನ್ನೇ ಮಾಡಬೇಕಾದರೂ ಒಳನೋಟವೂ ಮತ್ತು ಮುನ್ನೋಟವೂ ಬೇಕೇ ಬೇಕು.

**ಸಂಬಂಧೀಕರಣ.**

ಸನ್ನಿವೇಶದ ಬೇರೆ ಬೇರೆ ಭಾಗಗಳಲ್ಲಿ ಸಂಬಂಧವನ್ನು ಹಚ್ಚುವದು ಒಳನೋಟದಲ್ಲಿ ಇರುತ್ತದೆಂದು ಮೇಲೆ ಹೇಳಿದೆ. ಕಲಿಯುವಿಕೆಯಲ್ಲಿ ಮುನ್ನಡೆ

ಇಡಬೇಕಾದರೆ. ಈ ಸಂಬಂಧವನ್ನು ಹೆಚ್ಚುವದು ವಿಶೇಷ ಮಹತ್ವದ್ದು. ವಿದ್ಯಾರ್ಥಿಯೊಡನೆ ವ್ಯವಹರಿಸುವಾಗ ಅವನು ಅಖಂಡವಾದ ವ್ಯಕ್ತಿ ಎಂದೇ ಶಿಕ್ಷಕನು ತಿಳಿದಿರತಕ್ಕದ್ದು. ಅನುಭವಗಳನ್ನು ಬಿಡಿಸುವದು, ಹೊಂದಿಸುವದು ಮತ್ತು ಅವುಗಳ ಮೇಲಿಂದ ಸಿದ್ಧಾಂತಗಳನ್ನು ಹೊರಡಿಸುವದು ಈ ಕ್ರಮವು ಜೀವನದ ಕಡೆತನಕ ನಡೆದಿರುತ್ತದೆ. ಸಾಲೆಯಲ್ಲಿ ಅಂಕಿ ಮಗ್ಗಿಗಳನ್ನು ಬಾಯಿಪಾಠ ಮಾಡಿಸುವದು ಯಾಂತ್ರಿಕ ಪದ್ಧತಿಯು. ಅದು ನಿಜವಾಗಿ ಕಲಿತಂತೆ ಅಲ್ಲ. ಬಹಳ ಮತ್ತು ತುಸು, ಹೆಚ್ಚು ಮತ್ತು ಕಡಿಮೆ ಇವುಗಳ ಸಂಬಂಧದ ಜ್ಞಾನದ ಸಹಾಯದಿಂದ ಅಂಕಿ ಮಗ್ಗಿಗಳ ತಿಳುವಳಿಕೆಯನ್ನು ಮಾಡಿ ಕೊಡುವದು ಸರಿಯಾದ ಪದ್ಧತಿ. ಇತಿಹಾಸವು ಕೇವಲ ಸಂಗತಿಗಳ ಸಂಕಲನವಲ್ಲ. ಅದನ್ನು ಅರ್ಥವಾಗುವಂತೆ ನಿರ್ಮಾಣ ಪದ್ಧತಿಯಿಂದ ಕಲಿಸಬೇಕು. ಉದಾಹರಣೆಗಾಗಿ, ಆರ್ಥಿಕ ಸಮಸ್ಯೆಗಳನ್ನು ವಿವೇಚಿಸುವಾಗ ಉದ್ಯೋಗ, ವ್ಯವಸಾಯ, ಉತ್ಪನ್ನ, ವಿನಿಯೋಗ ಮೊದಲಾದ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸಬೇಕು. ಇದು ಸ್ವಾಭಾವಿಕವಾದ ಸಮವಾಯಿ ಪದ್ಧತಿ. ಅಂತು ಯಾವುದೇ ವಿಷಯವನ್ನು ಕಲಿಸಲಿ ಅದಕ್ಕೆ ಹೊಂದಿಕೊಂಡ ಬೇರೆ ಬೇರೆ ವಿಷಯಗಳ ಸಂಬಂಧವನ್ನು ತಾವಾಗಿಯೇ ಹುಡುಕುವಂತೆ ವಿದಾರ್ಥಿಗಳನ್ನು ಪ್ರೋತ್ಸಾಹಿಸುವದು ಶಿಕ್ಷಕನ ಕೆಲಸ.

ಕಲಿಯುವಿಕೆಯ ಕ್ರಮದಲ್ಲಿ ಅಥವಾ ಮುನ್ನಡೆಯಲ್ಲಿ ಮೇಲೆ ವಿವರಿಸಿದ ಮೆಟ್ಟುಗಳು ಅಥವಾ ಸಂಗತಿಗಳು ಅಡಕವಾಗಿರುತ್ತವೆ. ಮತ್ತು ಅವು ಬಿಡಿ ಬಿಡಿಯಾಗಿರದೆ ಒಂದಕ್ಕೊಂದು ತೊಡಕಿ ಕೊಂಡಿರುತ್ತವೆ. ಇನ್ನು ಯಾವ ನಿಯಮಗಳಿಗೆ ಅನುಸರಿಸಿ ಕಲಿಯುವಿಕೆ ನಡೆಯುತ್ತದೆ. ಎಂಬುದನ್ನು ವಿಚಾರಿಸುವ.

## ಕಲಿಯುವಿಕೆಯ ನಿಯಮಗಳು

ಥಾರ್ನ್‌ಡೈಕನು ಪ್ರಾಣಿಗಳ ಮೇಲೆ ಪ್ರಯೋಗಗಳನ್ನು ಮಾಡಿ ಕಲಿಯವಿಕೆಯ ಬಗೆಗೆ ಕೆಲವು ಮಹತ್ವದ ನಿಯಮಗಳನ್ನು ಕಂಡು ಹಿಡಿದಿದ್ದಾನೆ. ಕಲಿಯುವಿಕೆಯ ಮುನ್ನಡೆಗೆ ಅನಕೂಲವಾದ ಸನ್ನಿವೇಶಗಳು ಯಾವವು ಎಂಬುದನ್ನು ಅವು ತಿಳಿಸುತ್ತವೆ. ಅಲ್ಲದೆ ಅವು ಕಲಿಸುವ

ಪದ್ಧತಿಯನ್ನೂ ಸೂಚಿಸುತ್ತವೆ. ಅವುಗಳಲ್ಲಿ ಮುಖ್ಯವಾದ ಮೂರು ನಿಯಮ ಗಳನ್ನು ಇಲ್ಲಿ ವಿವರಿಸಿದೆ.

**ಪರಿಣಾಮ ನಿಯಮ**

(The Law of Effect)—ಗುರಿಯನ್ನು ಮುಟ್ಟುವ ಚಟುವಟಿಕೆ ಯಲ್ಲಿ ಪ್ರಾಣಿಗಳು ತಪ್ಪು ಪ್ರತಿ ಕ್ರಿಯೆಗಳನ್ನು ಬಿಟ್ಟು ಕೊಡುತ್ತವೆ ಮತ್ತು ಸರಿಯಾದ ಪ್ರತಿ ಕ್ರಿಯೆಗಳನ್ನು ಆರಿಸುತ್ತವೆ ಎಂಬುದು ಮೇಲೆ ಕೊಟ್ಟ ಇಲಿ ಮತ್ತು ಮಂಗನ ಉದಾಹರಣೆಗಳಿಂದ ಗೊತ್ತಾಗುತ್ತದೆ. ಈ ಬಿಡುವ ಮತ್ತು ಆರಿಸುವ ಕ್ರಿಯೆಯನ್ನು ಪರಿಣಾಮ ನಿಯಮದಿಂದ ತಿಳಿಸಿ ಹೇಳಲು ಬರುತ್ತದೆ. ಯಾವ ಕ್ರಿಯೆಗಳು ನಮಗೆ ಸಂತೋಷವನ್ನು ತರುವವೋ ಅವುಗಳನ್ನು ನಾವು ಮಾಡಲು ಕಲಿಯಬೇಕೆನ್ನುತ್ತೇವೆ; ಮತ್ತು ಯಾವವು ನಮಗೆ ಸಂತಾಪವನ್ನೂ ಅಪಜಯವನ್ನೂ ತರುವವೋ ಅಂಥ ಕ್ರಿಯೆಗಳನ್ನು ನಾವು ಮಾಡಲು ಕಲಿಯಬೇಕೆನ್ನುವದಿಲ್ಲ. ಈಸು ಕಲಿಯುತ್ತಿರುವ ಹುಡುಗನು ತಲೆಯನ್ನು ನೀರಿನೊಳಗೆ ಪೂರ್ಣ ಮುಳುಗಿಸಿದರೆ ಉಸಿರಾಡಿಸಲಿಕ್ಕೆ ತೊಂದರೆಯಾಗಿ ಅವನಿಗೆ ಸಂತಾಪವಾಗುತ್ತದೆ. ಆದುದರಿಂದ ಅವನು ಆ ಕ್ರಿಯೆಯನ್ನು ತಪ್ಪಿಸಲು ಪ್ರಯತ್ನಿಸುತ್ತಾನೆ. ಅವನು ಮುಖವನ್ನು ನೀರ ಮೇಲೆ ಮಾಡಿ ಈಸ ಹತ್ತಿದರೆ ಸಂತೋಷವನ್ನು ಅನುಭವಿಸುತ್ತಾನೆ ಮತ್ತು ಮುಂದೆ ಆ ರೀತಿಯಲ್ಲಿ ಈಸಲು ಪ್ರಯತ್ನಿಸುತ್ತಾನೆ. ಪರಿಣಾಮವೆಂದರೆ ಪ್ರಯತ್ನದ ನಂತರ ದೊರೆಯುವ ಫಲ ಅಥವಾ ಮುಟ್ಟುವ ಗುರಿ. ತಮ್ಮ ಧ್ಯೇಯವು ಸಫಲವಾಗುವ ದೃಷ್ಟಿಯಿಂದ ಜನರು ಕಷ್ಟ ನಷ್ಟಗಳನ್ನು ಸಹಿಸುವದುಂಟು. ಪ್ರಾಣಿಗಳು ಕೂಡ ಹೀಗೆ ಮಾಡುತ್ತವೆ. ಎಂಬುದು ಪ್ರಯೋಗದಿಂದ ಕಂಡು ಬಂದಿದೆ.

ಶಿಕ್ಷಣದಲ್ಲಿ ಈ ನಿಯಮವನ್ನು ಉಪಯೋಗಿಸಬೇಕು. ಆಟದಲ್ಲಿಯೇ ಆಗಲಿ, ಅಭ್ಯಾಸದಲ್ಲಿಯೇ ಆಗಲಿ ವಿದ್ಯಾರ್ಥಿಗಳ ಯೋಗ್ಯ ಕ್ರಿಯೆಗಳನ್ನು ಶಿಕ್ಷಕನು ಪ್ರೋತ್ಸಾಹಿಸಬೇಕು; ಮತ್ತು ಬೇಡಾದವುಗಳನ್ನು ಅಲ್ಲಗಳೆಯಬೇಕು. ಹೊಗಳಿಕೆಯು ಹರುಷವನ್ನೂ, ತೆಗಳಿಕೆಯು ತಾಪವನ್ನೂ ಉಂಟುಮಾಡು ವದರಿಂದ ಶಿಕ್ಷಣ ಕಾರ್ಯಕ್ರಮದಲ್ಲಿ ಅವುಗಳನ್ನು ಉಪಯೋಗಿಸಬೇಕು. ಸಾಲೆಯ ಅಭ್ಯಾಸವೆಂದರೆ ಮಕ್ಕಳು ಅದೊಂದು ಅವರಿಗೆ ವಿಧಿಸಲಾಗುವ ಶಿಕ್ಷೆಯೆಂದು

ತಿಳಿಯುವಂತೆ ಮಾಡುವದು ಧಡ್ಡತನ. ಶಿಕ್ಷೆ ಕೊಡುವುದಕ್ಕೆಂದು ಕಲವು ಪದ್ಯಗಳನ್ನು ಬಾಯಿಪಾಠ ಮಾಡಲು ಹೇಳಿದರೆ ಅಥವಾ ಲೆಕ್ಕ ಬಿಡಿಸಲು ಹೇಳಿದರೆ ಆ ವಿಷಯಗಳ ಬಗ್ಗೆ ಮಕ್ಕಳಲ್ಲಿ ಜಿಗುಪ್ಸೆ ಉಂಟಾಗುತ್ತದೆ. ಆದ್ದರಿಂದ ಶಿಕ್ಷಕರು ಹಾಗೆ ಮಾಡಕೂಡದು.

## ಅಭ್ಯಾಸ ನಿಯಮ

(The Law of Exercise) —ಒಂದು ಕೆಲಸವನ್ನು ಮೇಲಿಂದ ಮೇಲೆ ಮಾಡುವುದರಿಂದ ಅದರಲ್ಲಿ ನಾವು ಪ್ರಾವೀಣ್ಯತೆಯನ್ನು ಹೊಂದುತ್ತೇವೆ. ಟೇನಿಸ್ ಅಥವಾ ಲೇಜೀಮ ಆಟದಲ್ಲಿ ಮೇಲುಗೈ ಆಗಬೇಕಾದರೆ ಆ ಆಟದ ತತ್ವಗಳನ್ನು ಓದಿ ಮನನ ಮಾಡಿದರೆ ತೀರದು. ಆದರೆ ಆ ಆಟವನ್ನು ಆಡಿ ಆಡಿ ಒಳ್ಳೇ ಕೃತಿಗಳನ್ನು ರೂಢಿ ಮಾಡಿಕೊಳ್ಳಬೇಕು. ಅಂದರೆ ಮಾತ್ರ ಅದರಲ್ಲಿ ಕೈಚಳಕು ಹೆಚ್ಚುವದು. ಮತ್ತು ಕೆಲಕಾಲ ರೂಢಿಯು ತಪ್ಪಿದರೆ ಅದರಲ್ಲಿಯ ಕೌಶಲ್ಯವು ಕಡಿಮೆಯಾಗುವದು. ಆದರೆ ಕೇವಲ ಪುನರುಕ್ತಿಯಿಂದ ಕಲಿಯುವಿಕೆಯಲ್ಲಿ ಸುಧಾರಣೆಯು ಕಂಡು ಬರುವದಿಲ್ಲ. ಕಲಿಯಬೇಕೆಂಬ ಬಯಕೆ, ವಿಷಯದಲ್ಲಿ ಅಭಿರುಚಿ. ಕೆಲಸದಲ್ಲಿ ಅವಧಾನ, ಮತ್ತು ಒಳನೋಟ ಇರದಿದ್ದರೆ ಕೇವಲ ಪುನರುಕ್ತಿಯಿಂದ ಪ್ರಯೋಜನವಿಲ್ಲ. ಮತ್ತು ಒಂದೇ ಒಂದು ಸ್ಪಷ್ಟವಾದ ಅನುಭವದ ಪರಿಣಾಮವು ಕಡೆತನಕ ಉಳಿಯಬಹುದು. ಒಟ್ಟಿನಲ್ಲಿ, ಕಲಿಯುವಿಕೆಯು ಅರ್ಥ ಉಳ್ಳದ್ದು ಆಗಿರಬೇಕು. ಗಿಳಿಯಂತೆ ಕಂಠಪಾಟು ಮಾಡುವುದರಿಂದ ಲಾಭವೇನೂ ಇಲ್ಲ. ಅಭ್ಯಾಸ ಮತ್ತು ಪರಿಣಾಮ ನಿಯಮಗಳು ಒಂದಕ್ಕೊಂದು ಸಂಬಂಧಪಟ್ಟಿವೆ. ಗೆಲುವನ್ನು ದೊರಕಿಸಿ ಕೊಡುವ ಕ್ರಿಯೆಗಳನ್ನು ಮತ್ತೆ ಮತ್ತೆ ರೂಢಿ ಮಾಡುವದು ಪ್ರತಿಯೊಬ್ಬನಿಗೆ ಸ್ವಾಭಾವಿಕವಾದುದು. ಈ ತರಹದ ಅಭ್ಯಾಸದಲ್ಲಿಯೇ ಅವನಿಗೆ ಸಂತೋಷವುಂಟು.

## ಸನ್ನಾಹ ನಿಯಮ

(The Laws of Readiness)—ಮಗುವು ಒಂದು ಕೆಲಸವನ್ನು ಮಾಡಲು ಹಾತೊರೆಯುತ್ತಿದ್ದರೆ ಅದನ್ನು ತಡೆಗಟ್ಟಿದರೆ ಅವನಿಗೆ ಅಸಮಾಧಾನವೂ ಅದನ್ನು ಮಾಡಲು ಬಿಟ್ಟರೆ ಸಂತೋಷವೂ ಆಗುತ್ತದೆ. ಕಲಿಯಬೇಕೆಂಬ ಇಚ್ಛೆ ಅಥವಾ ಬಯಕೆ ಇದ್ದರೆ ಮಾತ್ರ ಮಗುವು ಕಲಿಯು

ಬಲ್ಲನು ಎಂಬ ಮಾತನ್ನು ಹಿಂದೆಯೇ ಹೇಳಿದೆ. ಪ್ರೇರಣೆಗಳು ಪ್ರಚೋದನೆಗೊಂಡಾಗ್ಗೆ ಮನುಷ್ಯನು ಕೆಲಸ ಮಾಡಲು ಸಿದ್ಧನಾಗಿರುತ್ತಾನೆ. ಹೊಗಳಿಕೆ, ಮೇಲ್ಮೆ, ಅಧಿಕಾರ, ಸುರಕ್ಷತೆ, ಚಟುವಟಿಕೆ ಮುಂತಾದ ಬಯಕೆಗಳು ಮನಸ್ಸಿನಲ್ಲಿ ಹುಟ್ಟಿದರೆ ಕೆಲಸಗಳನ್ನು ಮಾಡಲಿಕ್ಕೂ ಮತ್ತು ವಿಷಯಗಳನ್ನು ಕಲಿಯಲಿಕ್ಕೂ ಮಕ್ಕಳು ಸನ್ನದ್ಧರಾಗುತ್ತಾರೆ. ಸನ್ನಾಹವಿದ್ದಲ್ಲಿ ಸಂತೋಷವೂ ಇರುತ್ತದೆ. ಕಲಿಯಲಿಕ್ಕೆ ಮಗುವು ಸಿದ್ಧನಾಗಿರದಿದ್ದರೆ ಶಿಕ್ಷಕನ ಶ್ರಮವು ಬಂಜೆಯಾಗುವದು. ಇಚ್ಛೆಯೇ ಕಲಿಯುವಿಕೆಯ ಪೂರ್ಣ ತಯಾರಿಯು.

## ಕಲಿಯುವಿಕೆಯಲ್ಲಿ ಪರಿಳಿತಗಳು

(The Learning Curve) ಕಲಿಯುವಿಕೆಯು ಒಮ್ಮೆ ಸುರುವು ಆಯಿತೆಂದರೆ ಅದರ ಮುನ್ನಡೆಯು ಒಂದೇ ಸವನೆ ಹೆಚ್ಚುತ್ತ ಹೋಗುತ್ತದೆಂದು ತಿಳಿಯ ಕೂಡದು. ಸಾಮಾನ್ಯವಾಗಿ ಸುಧಾರಣೆಯು ಮೊದಲು ಒತ್ತಡದಿಂದ ಸಾಗುತ್ತದೆ. ಆದರೆ ಕೊನೆ ಕೊನೆಗೆ ಅದು ಸಾವಕಾಶವಾಗಿ ನಡೆಯುತ್ತದೆ. ಅಭ್ಯಾಸವು ಹೆಚ್ಚಿದಲ್ಲಿ ಸುಧಾರಣೆಯೂ ಹೆಚ್ಚುತ್ತದೆ ಮತ್ತು ಅಭ್ಯಾಸವು ಕಡಿಮೆಯಾದಲ್ಲಿ ಸುಧಾರಣೆಯೂ ಕಡಿಮೆ ಆಗುತ್ತದೆ. ಒಟ್ಟಿನಲ್ಲಿ ಸ್ಥೂಲವಾಗಿ ಕಣ್ಣಿಗೆ ಕಾಣುವ ಸುಧಾರಣೆಯನ್ನು ಅಳಿಯಲಿಕ್ಕೆ ಬರುತ್ತದೆ. ಅದನ್ನು ಗ್ರಾಫಿನ ಮೇಲೆ ಗೆರೆಯಿಂದ ತೋರಿಸಲು ಬರುತ್ತದೆ. ಈ ಗೆರೆಯು ಅಂಕು ಡೊಂಕಾಗಿ ಇದ್ದು ಕಲಿಯುವಿಕೆಯಲ್ಲಿಯ ಏರಿಳಿತಗಳನ್ನು ಸೂಚಿಸುತ್ತದೆ.

ಕಲಿಯುವಿಕೆಯು ಕೌಶಲ್ಯ, ಜ್ಞಾನ ಮತ್ತು ಮನೋವೃತ್ತಿಗಳಿಗೆ ಸಂಬಂಧ ಪಟ್ಟಿರುತ್ತದೆಂದು ಹಿಂದೆ ಹೇಳಿದೆ. ಜ್ಞಾನದಲ್ಲಿ ಆದ ಬೆಳವಣಿಗೆ ಮತ್ತು ಮನೋವೃತ್ತಿಗಳಲ್ಲಿ ಆದ ಬದಲಾವಣೆಗಳನ್ನು ಅಳೆಯುವದು ಕಠಿಣ. ಏಕೆಂದರೆ ಅವುಗಳ ಪ್ರಮಾಣವು ಸ್ಥೂಲವಾಗಿ ಅಳತೆಗೆ ಸಿಗುವದಿಲ್ಲ. ಇತಿಹಾಸ, ಭೂಗೋಲ, ವಿಜ್ಞಾನಗಳಲ್ಲಿ ಕಲಿಯುವಿಕೆಯು ಮುಂದುವರೆದರೆ ವಿಷಯ ಸಂಗ್ರಹವು ಹೆಚ್ಚಾಗುವದು, ಜ್ಞಾನವು ಬೆಳೆಯುವದು. ಈ ಜ್ಞಾನಕ್ಕೆ ಪರಿಮಿತಿಯು ಇಲ್ಲವಾದರೂ ಕಲಿಯುವ ವೇಗವು ಕಡಿಮೆಯಾಗುತ್ತದೆ. ಆದರೆ ಕಲಾ ಕೌಶಲ್ಯದಲ್ಲಿ ಆದ ಪ್ರಗತಿಯ ಪ್ರಮಾಣವನ್ನು ಸುಲಭವಾಗಿ ಅಳೆಯಲು ಬರುತ್ತದೆ. ಇದನ್ನು ಗ್ರಾಫಿನ ಮೇಲೆ ತೋರಿಸುವಾಗ ಅಭ್ಯಾಸದ ಅವಧಿಯನ್ನು

ಅಡ್ಡ ಗೆರೆಯ ಮೇಲೆ ಮತ್ತು ಸುಧಾರಣೆಯನ್ನು ಉದ್ದ ಗೆರೆಯ ಮೇಲೆ ತೋರಿಸುತ್ತಾರೆ.




ಒಂದು ಪ್ರಯೋಗದಲ್ಲಿ ಟಾಯಪಿಂಗ ಕಲಿಯುವವನು ಮೊದಲನೇ ದಿವಸ ಒಂದು ಮಿನಿಟಿಗೆ ೨೦ ಶಬ್ದಗಳನ್ನು, ಐದನೇ ದಿವಸ ೪೦ ಶಬ್ದಗಳನ್ನು, ಹತ್ತನೇ ದಿವಸ ೫೬ ಶಬ್ದಗಳನ್ನು, ಹದಿನೈದನೇ ದಿವಸ ೭೨ ಶಬ್ದಗಳನ್ನು ಮತ್ತು ಇಪ್ಪತ್ತನೇ ದಿವಸ ೭೬ ಶಬ್ದಗಳನ್ನು ಟಾಯಪ ಮಾಡಲು ಶಕ್ಯನಾದನು. ಮೇಲೆ ಕೊಟ್ಟ ಗ್ರಾಫಿನ ಕಾನೆಗಳಲ್ಲಿ ಇದನ್ನು ಗೆರೆಯಿಂದ ತೋರಿಸಿರಿ.

**ಪರಮಿತಿ.**

ಕೌಶಲ್ಯದಲ್ಲಿ ಪೂರ್ಣತೆಯನ್ನು ಹೊಂದುವದು ತಾತ್ವಿಕ ದೃಷ್ಟಿಯಿಂದ ಶಕ್ಯವೆನಿಸಿದರೂ ವ್ಯವಹಾರ ದೃಷ್ಟಿಯಿಂದ ಅದನ್ನು ಮುಟ್ಟುವದು ಅಸಾಧ್ಯ. ಓಡುವದು, ಜಿಗಿಯುವದು ಮುಂತಾದ ಕೌಶಲ್ಯಗಳಲ್ಲಿ ಒಂದು ಮಟ್ಟಕ್ಕೆ ಬಂದ ಮೇಲೆ ಎಷ್ಟೇ ರೂಢಿ ಮಾಡಿದರೂ ಅದನ್ನು ಮೀರಲಿಕ್ಕೆ ಬರುವದಿಲ್ಲ. ಟಾಯಿಪ ಮಾಡುವದು, ಚಿತ್ರ ತೆಗೆಯುವದು, ಕೆತ್ತಿಗೆಯ ಕೆಲಸ ಮೊದಲಾದವುಗಳಲ್ಲಿ ಪರಮಾವಧಿಯನ್ನು ಕ್ವಚಿತ್ತಾಗಿ ಮುಟ್ಟುತ್ತಾರೆ. ಅಂತು ಯಾವ ಕೆಲಸವನ್ನೇ ಮಾಡಲಿ, ಯಾವ ವಿಷಯವನ್ನೇ ಕಲಿಯಲಿ ಪ್ರಗತಿಯು ಕೊನೆಯ ಮಟ್ಟದ ವರೆಗೆ ಹೋಗುವದು ಅಸಾಧ್ಯವೆಂದೇ ತಿಳಿಯತಕ್ಕದ್ದು. ಆದರೆ ಸ್ಪರ್ಧೆ,

ಬಹುಮಾನ, ಹೊಗಳಿಕೆ, ಪಗಾರದಲ್ಲಿ ಬಡತಿ ಮೊದಲಾದ ವಿಶೇಷ ಪ್ರೇರಕಗಳ ಜಾಗ್ರತೆಯಿಂದ ತಾತ್ಪೂರ್ತಿಕವಾಗಿ ತಡೆದಿದ್ದ ಪ್ರಗತಿಯನ್ನು ಮುಂದುವರಿಸಲು ಬರುತ್ತದೆ.

**ಸಮಪಾತಳಿಗಳು** (Plateaus) — ಕಲಿಯುವಿಕೆಯಲ್ಲಿ ಮುನ್ನಡೆಯು ಯಾವಾಗಲೂ ಬಿಟ್ಟೂ ಬಿಡದೆ ಸಾಗುವದಿಲ್ಲ ಕೆಲವು ಅವಧಿಯವರೆಗೆ ಏರುತ್ತ ಹೋದ ಪ್ರಗತಿಯು ಎಷ್ಟೋ ಬಾರಿ ನಡುವೆ ನಿಂತು ಬಿಡುತ್ತದೆ. ಕೆಲವು ದಿವಸ ಕಳೆದ ಮೇಲೆ ಮುಂದೆ ಮತ್ತೆ ಏರುತ್ತದೆ. ಒಮ್ಮೊಮ್ಮೆ ತಾತ್ಪೂರ್ತಿಕ ಇಳಿತವೂ ಕಂಡು ಬರುತ್ತದೆ. ಪ್ರಗತಿಯು ಕಾಣದೇ ಇದ್ದ ಅವಧಿಯನ್ನು ತೋರಿಸುವ ಗೆರೆಯ ಭಾಗಗಳಿಗೆ ಎತ್ತರದ ಸಮಪಾತಳಿಗಳು (Plateaus)ಎಂದು ಕರೆಯುತ್ತಾರೆ. ಈ ಸಮಪಾತಳಿಗಳು ಉಂಟಾಗಲಿಕ್ಕೆ ಅನೇಕ ಕಾರಣಗಳು ಇರುತ್ತವೆ.

ಶರೀರದ ಸ್ಥಿತಿ, ಅಭಿರುಚಿ, ಪ್ರೇರಣೆ, ಮನಸ್ಸಿನ ಸಿದ್ಧತೆ, ಮತ್ತು ಇತರ ವರ್ತುಸ್ಸುಗಳ ಪರಿಣಾಮವು ಕಲಿಯುವಿಕೆಯ ಏರಿಳಿತದ ಮೇಲೆ ಆಗುತ್ತದೆ. ಮುಂದೆ ಸಾಗಬೇಕೆಂಬ ಬಯಕೆ ಇದ್ದರೂ ಮತ್ತು ಆ ನಿಟ್ಟಿನಲ್ಲಿ ಪ್ರಯತ್ನ ನಡೆದಿದ್ದರೂ ಸಮಪಾತಳಿಗಳು ಉಂಟಾಗುತ್ತವೆ. ಇದರ ಮುಖ್ಯ ಕಾರಣಗಳನ್ನು ಇಲ್ಲಿ ಕೊಟ್ಟಿದೆ. ಕಲಿಯುವ ವಿಧಾನದಲ್ಲಿ ಸೇರಿಕೊಂಡ ಕೆಟ್ಟ ಚಟ, ನಿರುಪಯೋಗವಾದ ಕಲಿಯುವ ಪದ್ಧತಿ, ಕಲಿಯುವವನ ಶಕ್ತಿಗೆ ಮೀರಿದ ಕೆಲಸ, ಕಲಿಯುವ ವಿಷಯದಲ್ಲಿ ಒಂದೇ ಸಂಗತಿಗೆ ಹೆಚ್ಚು ಲಕ್ಷ್ಯ ಕೊಡುವದು, ಅನಾರೋಗ್ಯ, ದಣಿವು, ಬೇಸರ, ಮೊದಲಾದವುಗಳಿಂದ ಪ್ರಗತಿಯು ಕೆಲವು ಕಾಲ ತಡೆಯಲ್ಪಡುತ್ತದೆ. ಬರೆಯುವಾಗ ಕೂಡ್ರುವ ಪದ್ಧತಿಯಲ್ಲಿ ಅಥವಾ ಪೆನ್ಸಿಲ್ ಹಿಡಿಯುವ ಪದ್ಧತಿಯಲ್ಲಿ ದೋಷವು ಇದ್ದರೆ ಅದನ್ನು ತೆಗೆದು ಹಾಕುವ ವರೆಗೆ ಪ್ರಗತಿಯು ಅಂದರೆ ವೇಗವಾಗಲಿ ಸರಿಯಾಗಿ ಬರೆಯುವದಾಗಲಿ ಕಂಡು ಬರುವದಿಲ್ಲ ಅದರಂತೆ, ಓದುವಾಗ ವಾಕ್ಯ ಮುಗಿದ ಕೂಡಲೇ ಬಹಳ ಹೊತ್ತು ನಿಲ್ಲುವದು, ಅಥವಾ ಪ್ರತ್ಯೇಕ ಅಕ್ಷರಗಳಿಗೆ ಹೆಚ್ಚು ಲಕ್ಷ್ಯ ಕೊಡುವದು ನಡೆದರೆ ಪ್ರಗತಿಯು ಕಾಡು ಬರುವದಿಲ್ಲ. ಆದರೆ ಒಮ್ಮೊಮ್ಮೆ ಈ ಪಾತಳಿಗಳ ಅವಧಿಯಲ್ಲಿ ಕಲಿ

ಯುವ ಕೆಲಸವು ಗುಪ್ತವಾಗಿ ನಡೆದಿರುತ್ತದೆ. ಮಗುವು ಗುಣಾಕಾರ, ಭಾಗಾಕಾರ ಕಲಿಯುವಾಗ ಬೇರೀಜು, ವಜಾಬಾಕಿ ಮಾಡುವ ರೂಢಿಗಳು ಅವನಲ್ಲಿ ಗಟ್ಟಿಗೊಳ್ಳುತ್ತಿರುತ್ತವೆ. ಅವು ಚನ್ನಾಗಿ ನೆಲೆಗೊಂಡ ನಂತರವೇ ಮುಂದೆ ಸುಧಾರಣೆಯು ತೋರುತ್ತದೆ ಅನುಭವದ ಶೇಷಗಳು ಸಂಸಕ್ತಿ ಹೊಂದಲಿಕ್ಕೆ ಕೆಲವೊಂದು ಕಾಲವು ಅವಶ್ಯವೆಂದು ಎರಡನೆಯ ಅಧ್ಯಾಯದಲ್ಲಿ ತಿಳಿಸಿ ಹೇಳಿದೆ ಹೀಗೆ ಕಲಿಯುವುದರಲ್ಲಿ ಒಮ್ಮೊಮ್ಮೆ ಪ್ರಗತಿಯು ತೋರದಿರಲು ನಿರುತ್ಸಾಹಗೊಳ್ಳದೆ ಅದರ ಕಾರಣವನ್ನು ಕಂಡು ಹಿಡಿಯಬೇಕು.

## ಶಿಕ್ಷಣದಲ್ಲಿಯ ಉಪಯೋಗ

ಕಲಿಯುವವನ ಪ್ರಗತಿಯು ಮುಂದುವರಿಯ ಬೇಕಾದರೆ ಶಿಕ್ಷಕನು ಈ ಅಧ್ಯಾಯದಲ್ಲಿ ತಿಳಿಸಿ ಹೇಳಿದ ಕಲಿಯುವಿಕೆಯ ಮೆಟ್ಟುಗಳನ್ನು ಮತ್ತು ನಿಯಮಗಳನ್ನು ಸಮಯಕ್ಕೆ ತಕ್ಕಂತೆ ಉಪಯೋಗಿಸಬೇಕು. ಕಲಿಯುವವನಿಗೆ ಅವೆಲ್ಲವುಗಳ ಕಲ್ಪನೆಯನ್ನು ಮಾಡಿಕೊಡುವದು ಅವಶ್ಯವಿಲ್ಲ ಆದರೆ ಗುರಿಯ ಅಥವಾ ಕಲಿಯುವ ವಿಷಯದ ಪ್ರತಿಫಲದ ಸ್ಪಷ್ಟ ಕಲ್ಪನೆಯನ್ನು ಮಾತ್ರ ಮಾಡಿಕೊಡುವದು ಅವಶ್ಯ. ಆಮೇಲೆ ಪ್ರೇರಣೆಗಳ ಸಹಾಯವನ್ನು ಪಡೆಯಬೇಕು. ಪ್ರೇರಣೆಯು ಪ್ರಚೋದನೆಗೊಂಡಲ್ಲಿ ವಿಷಯದಲ್ಲಿ ಅಭಿರುಚಿಯು ಹುಟ್ಟುತ್ತದೆ. ವಿಷಯದಲ್ಲಿ ಅಭಿರುಚಿಯು ಹುಟ್ಟಿದರೆ ಕಲಿಯುವಿಕೆಯು ಗುರಿ ಮುಟ್ಟುವವರೆಗೆ ಸಾಗುತ್ತದೆ. ತಪ್ಪಲಿ ತಾಟಲಿ ಮಕ್ಕಳ ಪ್ರಯತ್ನಗಳನ್ನು ಪ್ರೋತ್ಸಾಹಿಸಬೇಕು. ಆದರೆ ಅವರ ತಪ್ಪುಗಳನ್ನು ತೋರಿಸಿ ಕೊಟ್ಟು ಗುರಿಯ ಹಾದಿಯ ಕಡೆಗೆ ಹಚ್ಚಬೇಕು. ಶಿಕ್ಷಕನು ತನ್ನ ಅನುಭವದ ಫಲವನ್ನು ವಿದ್ಯಾರ್ಥಿಗಳಿಗೆ ಕೊಡಬೇಕು. ಅವನು ಸರಿಯಾದ ಹಾದಿ ತೋರಿಸುವುದರಿಂದ ಕಲಿಯುವವನ ಶ್ರಮದ ಮತ್ತು ವೇಳೆಯ ಉಳಿತಾಯ ಆಗುವದು. ಗಿಳಿಯೋದು, ಬಾಯಿಪಾಠ ಅಥವಾ ಯಾಂತ್ರಿಕ ಪುನರುಕ್ತಿಗಳನ್ನು ಬಿಟ್ಟು ಮಕ್ಕಳ ಅಭಿರುಚಿಗಳನ್ನು ಮತ್ತು ಬೇಡಿಕೆಗಳನ್ನು ತೃಪ್ತಿಗೊಳಿಸುವ ವಿಧಾನಗಳನ್ನು ಕೈಕೊಳ್ಳಬೇಕು. ಕಲಿಯುವ ವಿಷಯವು ಹುಡುಗರಿಗೆ ಅರ್ಥ ಉಳ್ಳದ್ದು ಆಗಿರಬೇಕು. ಇಷ್ಟು ಪುಟಗಳನ್ನು ಓದಿಕೊಂಡು ಬನ್ನಿರಿ, ಇಷ್ಟು ಲೆಕ್ಕಗಳನ್ನು ಬಿಡಿಸಿಕೊಂಡು ಬನ್ನಿರಿ ಎಂದು ಇತ್ಯಾದಿ

ಪಡಿಸುವದು ತಪ್ಪು. ಮಕ್ಕಳ ತಿಳುವಳಿಕೆಯೂ ವಿಚಾರಶಕ್ತಿಯೂ ಬೆಳೆಯು ವಂತೆ ವಿಷಯಗಳನ್ನು ಕಲಿಸಬೇಕು. ಅರ್ಥ ಉಳ್ಳ ವಾಕ್ಯಗಳ ಸಹಾಯದಿಂದ ಓದು ಕಲಿಸಬೇಕು. ವಿಚಾರಗಳನ್ನು ಸ್ಪಷ್ಟವಾಗಿ ತಿಳಿಸುವದೇ ವ್ಯಾಕರಣ ಕಲಿಸುವ ಉದ್ದೇಶವಾಗಿರಬೇಕು. ಗುರಿ ಮತ್ತು ಸಾಧನಗಳ ಸಂಬಂಧವನ್ನು ಹುಡುಕುವದು ಒಳನೋಟ. ಇದು ಬುದ್ಧಿಯ ಕೆಲಸ. ಮಕ್ಕಳಿಗೆ ತಮ್ಮ ಬುದ್ಧಿ ಯನ್ನು ಹೇಗೆ ಉಪಯೋಗಿಸಬೇಕು, ಎಂಬುದನ್ನು ಕಲಿಸುವದೇ ನಿಜವಾದ ಶಿಕ್ಷಣ. ಶಿಕ್ಷಕನು ಹೇಳಿದ ಉತ್ತರಗಳನ್ನಾಗಲಿ ಅಥವಾ ಪುಸ್ತಕದಲ್ಲಿ ಬರೆದ ಉತ್ತರಗಳನ್ನಾಗಲಿ ಬಾಯಿಪಾಠ ಮಾಡುವದು ಕಲಿಯುವಿಕೆಯಲ್ಲ. ವಿದ್ಯಾ ರ್ಥಿಗಳು ತಾವಾಗಿಯೇ ಉತ್ತರಗಳನ್ನು ಹುಡುಕಿ ತೆಗೆಯುವಂತೆ ಅವರನ್ನು ಪ್ರೋತ್ಸಾಹಿಸಬೇಕು ಮಕ್ಕಳು ತಮ್ಮ ಒಳನೋಟವನ್ನು ಬೆಳೆಯಿಸಲಿ. ವಿಷಯಗಳ ಸಂಬಂಧಗಳನ್ನು ಕಂಡು ಹಿಡಿಯಲು ಅವರು ಕಲಿಯಲಿ. ಅನೇಕ ಉದಾಹರಣೆಗಳಿಂದ ಸಾಮಾನ್ಯ ನಿಯಮವನ್ನು ಹೊರಡಿಸುವದು, ವಿಜ್ಞಾನದಲ್ಲಿ ತತ್ವಗಳನ್ನು ಕಂಡುಹಿಡಿಯುವದು ಮತ್ತು ಗಣಿತದಲ್ಲಿ ರೀತಿಗಳನ್ನು ತಿಳಿದು ಕೊಳ್ಳುವದು ಒಳನೋಟದ ಉದಾಹರಣೆಗಳು. ಒಳನೋಟದಲ್ಲಿ ವ್ಯಾಪಕ ವಾದ ದೃಷ್ಟಿಯು ಇರುತ್ತದೆ. ಶಿಕ್ಷಕನು ಕೂಡ ಮಗುವಿನ ಪೂರ್ಣ ವ್ಯಕ್ತಿತ್ವದ ದೃಷ್ಟಿಯನ್ನು ಯಾವಾಗಲೂ ಇಟ್ಟುಕೊಳ್ಳಬೇಕು.

ಪರಿಣಾಮ ನಿಯಮವನ್ನು ಶಿಕ್ಷಕನು ಮೇಲಿಂದ ಮೇಲೆ ಉಪಯೋಗಿ ಸುವ ಪ್ರಸಂಗವು ಬರುತ್ತದೆ. ಮಗುವಿನ ಕಲಿಯುವಿಕೆಯು ಸಂತೋಷವನ್ನು ತರುವಂತಹದು ಇರಬೇಕು. ಶಿಕ್ಷಕನು ಅವನ ಸರಿಯಾದ ಕೆಲಸಗಳನ್ನು ಮೆಚ್ಚಬೇಕು. ಮಗುವು ಕೌಶಲ್ಯದಲ್ಲಿ ಪ್ರಾವೀಣ್ಯತೆಯನ್ನು ದೊರಕಿಸಲಿಕ್ಕೆ ತನ್ನ ಕೃತಿಯನ್ನು ಮೇಲಿಂದ ಮೇಲೆ ತಿಳಿದುಕೊಂಡು ಮಾಡಲಿ. ರೂಢಿ ಯಿಂದ ಮನುಷ್ಯನು ಪೂರ್ಣತೆಯನ್ನು ಹೊಂದುತ್ತಾನೆ ಎಂದು ಇಂಗ್ಲೀಷನಲ್ಲಿ ಗಾದೆಯ ಮಾತುಂಟು. ವಿಷಯಗಳಲ್ಲಿ ಅಭಿರುಚಿಯನ್ನು ಹುಟ್ಟಿಸಿ, ಪ್ರೇರಣೆ ಗಳನ್ನು ಕೆರಳಿಸಿ ಮಕ್ಕಳ ಮನಸ್ಸನ್ನು ಕಲಿಯಕ್ಕೆ ತಯಾರಿಸಬೇಕು.

ಕಲಿಯುವಿಕೆಯಲ್ಲಿ ಕೆಲವು ಕಾಲ ಮಂದಗತಿಯು ಉಂಟಾಗುತ್ತದೆ. ಸಮಪಾತಳಿಯು ತೋರುತ್ತದೆ. ಆಗ ಶಿಕ್ಷಕನು ಅದರ ಕಾರಣವನ್ನು ಕಂಡು

ಹಿಡಿದು ಮತ್ತೆ ಅದು ಮುನ್ನಡೆ ಇಡುವಂತೆ ಪ್ರಯತ್ನಿಸಬೇಕು. ಮಕ್ಕಳ ಸೋಮಾರಿತನವನ್ನು ಹೋಗಲಾಡಿಸಿ ಮತ್ತೆ ಅವರನ್ನು ಹುರುದುಂಬಿಸಬೇಕು. ಪರೀಕ್ಷಣಗಳನ್ನು ತಕ್ಕೊಂಡು ಅವರ ಕುಂದು ಕೊರತೆಗಳನ್ನು ಹುಡುಕಿ ಅವುಗಳನ್ನು ಕೂಡಲೇ ಹೋಗಲಾಡಿಸಬೇಕು. ಅವು ಬೆಳೆದನಂತರ ಮುಂದೆ ಅವುಗಳನ್ನು ತೆಗೆದು ಹಾಕುವದೇ ಕಠಿಣವಾಗುವದು. ಅವರ ಕಲಿಯುವಿಕೆಯಲ್ಲಿ ಎಷ್ಟರ ಮಟ್ಟಿಗೆ ಸುಧಾರಣೆ ಆಗಿರುತ್ತದೆ ಎಂಬುದನ್ನು ಮಕ್ಕಳಿಗೆ ತಿಳಿಸಬೇಕು. ಮಕ್ಕಳ ವಯಸ್ಸಿಗೆ ತಕ್ಕಂತೆ ಪಾಠದ ಅವಧಿಯನ್ನು ಹೆಚ್ಚು ಕಡಿಮೆ ಮಾಡಬೇಕು. ವಿಷಯಗಳಲ್ಲಿ ಮಕ್ಕಳ ಅಭಿರುಚಿಯನ್ನೂ, ಆತ್ಮ ವಿಶ್ವಾಸವನ್ನೂ ಹೆಚ್ಚಿಸಬೇಕು. ಪರೀಕ್ಷೆಗಳ ಉದ್ದೇಶವು ಗುಣಗಳನ್ನೂ, ತರಗತಿಗಳನ್ನೂ ಕೊಡುವದು ಆಗಿರದೆ ಬೆಳವಣಿಗೆಯನ್ನೂ, ತಪ್ಪುಗಳನ್ನೂ ಕಂಡು ಹಿಡಿಯುವದು ಆಗಿರಬೇಕು. ಈ ದೃಷ್ಟಿಯಿಂದ ಹೊಸ ಮಾದರಿಯ ಒರೆಗಳನ್ನು ಕೊಟ್ಟು ಮಕ್ಕಳ ಪ್ರಗತಿಯನ್ನು ಪರೀಕ್ಷಿಸಬೇಕು ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಕುರಿತು ವೈಯಕ್ತಿಕ ಪ್ರಗತಿ ಪತ್ರವನ್ನು ಬಳಸಬೇಕು. ಕೇವಲ ಇಯತ್ತೆಯನ್ನು ಪಾಸಾಗುವ ಯೋಗ್ಯತೆಯನ್ನು ನೋಡಲಿಕ್ಕೆಂದು ಗುಣಗಳನ್ನು ಕೊಡುವ ಪದ್ಧತಿಯಿಂದ ಪರೀಕ್ಷೆಗಳ ಉಪಯುಕ್ತತೆಯನ್ನು ಕಡಿಮೆ ಮಾಡಿದಂತೆ ಆಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ನೀವು ಒಂದು ವಸ್ತುವನ್ನು ಕಳೆದುಕೊಂಡಾಗ ಅದನ್ನು ಹುಡುಕಲಿಕ್ಕೆಂದು ಸ್ವಂತ ನಡೆಯಿಸಿದ " ಪ್ರಯತ್ನ-ಪ್ರಮಾದ " ವರ್ತನವನ್ನು ವಿವರಿಸಿರಿ. ಆ ಸನ್ನಿವೇಶಕ್ಕೆ ಸಂಬಂಧ ಇದ್ದ ವರ್ತನೆಗಳು ಯಾವವು ? ಮತ್ತು ಸಂಬಂಧ ಇಲ್ಲದ ವರ್ತನೆಗಳು ಯಾವವು ? ಆರು ವರುಷದ ಮಗುವಿನ ಹುಡುಕುವ ಪದ್ಧತಿಗೂ ನಿಮ್ಮ ಹುಡುಕುವ ಪದ್ಧತಿಗೂ ಇದ್ದ ಹೋಲಿಕೆ ಮತ್ತು ಅಂತರವನ್ನು ವಿವರಿಸಿರಿ.

೨. ಪ್ರತಿ ದಿವಸ ಬಳಕೆಯ ಮಾತಿನಲ್ಲಿ ದೊಡ್ಡವರು ಮಾಡುವ ವ್ಯಾಕರಣದ ತಪ್ಪು ಪ್ರಯೋಗಗಳ ಕೆಲವು ಉದಾಹರಣೆಗಳನ್ನು ಕೊಡಿರಿ. ಅವುಗಳನ್ನು ಅವರು ಸ್ವಾಭಾವಿಕವಾಗಿ ಹೇಗೆ ತಿದ್ದಿಕೊಳ್ಳುತ್ತಾರೆ ? ಈ ಸುಧಾರಣೆಯಲ್ಲಿ ಅಡಕವಾದ ಪ್ರತಿಯೊಂದು ಮೆಟ್ಟನ್ನು ವಿವರಿಸಿರಿ. ಜನರು ತಮ್ಮ ಯಾವ ವಯಸ್ಸಿನಲ್ಲಿ ವ್ಯಾಕರಣದ ತಪ್ಪುಗಳನ್ನು ತಾವೇ ತಿದ್ದಿಕೊಳ್ಳಬಲ್ಲರು ?

೩. ಅಡ್ಡಿ ಆತಂಕಗಳು ಬಂದಾಗ ಮಾತ್ರ ವಿಚಾರ ಮಾಡುವದು ಅಥವಾ ಕಲಿಯುವಿಕೆಯು ಸಂಭವಿಸುತ್ತದೆ ಎಂದು ಅನ್ನುತ್ತಾರೆ. ಈ ಅಭಿಪ್ರಾಯವನ್ನು ಉದಾಹರಣೆ ಕೊಟ್ಟು ವಿಶದವಾಗಿ ವಿವರಿಸಿರಿ. ಪ್ರೇರಣೆಗೆ ಇದು ಹೇಗೆ ಸಂಬಂಧ ಪಟ್ಟಿದೆ ಎಂಬುದನ್ನು ಹೇಳಿರಿ.

೪. ಅಪೇಕ್ಷಿತ ಪ್ರಯತ್ನ–ಪ್ರಮಾದ ಮತ್ತು ಒಳನೋಟ ಇವುಗಳಲ್ಲಿಯ ಹೆಚ್ಚು ಕಡಿಮೆ ಏನು ? ಉದಾಹರಣೆ ಕೊಟ್ಟು ವಿವರಿಸಿರಿ.

೫. ಕಲಿಯುವಿಕೆಯಲ್ಲಿ ಗುರಿಯು ಅಥವಾ ಉದ್ದೇಶವುಳ್ಳ ಶೈಕ್ಷಣಿಕ ಅನುಭವಗಳ ಮಹತ್ವವನ್ನು ತಿಳಿಸಿ ಹೇಳಿರಿ.

೬. ಗೊತ್ತು ಗುರಿ ಇಲ್ಲದ ಕಲಿಯುವಿಕೆಯು ಮತ್ತು ಕಲಿಯುವಿಕೆಯ ಪರಿಣಾಮವು ಏನಾಗುವದು ? ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೭. ಕಲಿಯುವಿಕೆಯಲ್ಲಿ ಅಡಕವಾದ ಬೇರೆ ಬೇರೆ ಮೆಟ್ಟುಗಳನ್ನೂ ಮತ್ತು ಅವುಗಳ ಸಂಬಂಧವನ್ನೂ ಸಂಕ್ಷಿಪ್ತದಲ್ಲಿ ವಿವರಿಸಿರಿ.

೮. ಕೆಳಗೆ ಕೊಟ್ಟ ಎರಡು ಸಂಗತಿಗಳಲ್ಲಿ ಯಾವುದು ಹೆಚ್ಚಾಗಿ ವಿದ್ಯಾರ್ಥಿಯ ಪ್ರೇರಣೆಯನ್ನು ಅವಲಂಬಿಸಿರುತ್ತದೆ ? —

(ಅ) ಯಾವ ವಿಷಯವನ್ನು ಕಲಿಯುತ್ತಾನೆ ಮತ್ತು

(ಆ) ಎಷ್ಟು ಪ್ರಮಾಣದಲ್ಲಿ ಕಲಿಯುತ್ತಾನೆ.

೯. ಮಕ್ಕಳಲ್ಲಿ ಸಮಸ್ಯೆಗಳನ್ನು ಬಿಡಿಸುವ ಶಕ್ತಿಯನ್ನು ಬೆಳೆಯಿಸುವದೇ ನಿಜವಾದ ಶಿಕ್ಷಣ. ಇದರ ಮಹತ್ವವನ್ನು ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೧೦ ಶಾಲೆಯ ಕೋಣೆಯಲ್ಲಿ ಕೂತು ಬಾಯಿಪಾಠ ಮಾಡಿ ಕಲಿಯುವದು ಮತ್ತು ಒಂದು ಸಾಮಾಜಿಕ ವಿಷಯದ ಯೋಜನೆಯ ಮುಖಾಂತರ ಕಲಿಯುವದು, ಈ ಎರಡೂ ವಿಧಾನಗಳಲ್ಲಿ ಕಂಡುಬರುವ ವ್ಯತ್ಯಾಸವೇನು ?

೧೧ ಕಲಿಯುವಿಕೆಯ ಸನ್ನಿವೇಶದಲ್ಲಿ ವಿಭಜನೆ (Differentiation) ಪ್ರಾಮುಖ್ಯವಾಗಿದ್ದ ಒಂದು ಉದಾಹರಣೆಯನ್ನು ಮತ್ತು ಸಂಯೋಜನೆ (Integration) ಪ್ರಾಮುಖ್ಯವಾಗಿದ್ದ ಒಂದು ಉದಾಹರಣೆಯನ್ನು ತಿಳಿಸಿ ಹೇಳಿರಿ.

೧೨. ಚಿಕ್ಕ ಮಕ್ಕಳು ಯಾವ ವಿಷಯಗಳನ್ನು ಬಾಯಿಪಾಠ ಮಾಡಿ ಕಲಿಯುವದು ಅವಶ್ಯವೆಂದು ನಿಮಗೆ ಅನಿಸುತ್ತದೆ ? ಏಕೆ ?

೧೩. ಮಕ್ಕಳ ಕಲಿಯುವಿಕೆಯನ್ನು ಹಗುರುಮಾಡುವ "ಒಳನೋಟ" ದ ಮೂರು ಉದಾಹರಣೆಗಳನ್ನು ಕೊಡಿರಿ. ಈ ಒಳನೋಟವು ಒಮ್ಮೆಲೇ ಹೊಳೆಯುತ್ತದೆಯೋ ಅಥವಾ ಕ್ರಮವಾಗಿ ಹೊಳೆಯುತ್ತದೆಯೋ ವಿವರಿಸಿರಿ.

೧೪. ಕಲಿಯುವಿಕೆಯ ನಿಯಮಗಳಲ್ಲಿ "ಪರಿಣಾಮ ನಿಯಮವು" ಎಲ್ಲಕ್ಕೂ ಹೆಚ್ಚು ಮಹತ್ವದ್ದು. ಈ ಅಭಿಪ್ರಾಯವನ್ನು ಸಮರ್ಥಿಸಿರಿ ಅಥವಾ ವಿರೋಧಿಸಿರಿ.

೧೫. ಶಾಲೆಯಲ್ಲಾಗಲಿ ಅಥವಾ ಮನೆಯಲ್ಲಾಗಲಿ ಚಿಕ್ಕ ಮಕ್ಕಳಿಗೆ ಕಲಿಸುವಾಗ "ಪರಿಣಾಮ ನಿಯಮವನ್ನು" ಪರಿಣಾಮವಾಗದ ರೀತಿಯಲ್ಲಿ ಉಪಯೋಗಿಸಬಹುದು ಅಥವಾ ಅದನ್ನು ಉಪಯೋಗಿಸದೆ ಇರಬಹುದು ಅಥವಾ ಕೆಟ್ಟ ಪ್ರೇರಣೆಗಗನ್ನು ಪ್ರೋತ್ಸಾಹಿಸಲಿಕ್ಕೆ ಉಪಯೋಗಿಸಬಹುದು. ಇಂಥ ಕೆಲವು ಉದಾಹರಣೆಗಳನ್ನು ಕೊಡಿರಿ.

೧೬. ಕೆಲವು ಪ್ರಸಂಗಗಳಲ್ಲಿ ಮೊದಲಿನ ಅನುಭವಗಳು ಕಷ್ಟವನ್ನು ಕೊಡುವಂತಹವು ಆಗಿದ್ದರೂ ಕೊನೆಯ ಪರಿಣಾಮವು ಒಳ್ಳೆಯದಾಗಿರುತ್ತದೆ. ಇಂಥ ಪರಿಣಾಮ ನಿಯಮದ ಕೆಲವು ಉದಾಹರಣೆಗಳನ್ನು ಕೊಡಿರಿ.

೧೭. ಪರಿಣಾಮ ನಿಯಮ, ಸನ್ನಾಹ ನಿಯಮ ಮತ್ತು ಅಭ್ಯಾಸ ನಿಯಮ. ಇವುಗಳನ್ನು ಪ್ರಾಥಮಿಕ ಶಾಲೆಯ ಮೇಲಿನ ಇಯತ್ತೆಗಳಿಗೆ ಕಲಿಸುವಾಗ ಹೇಗೆ ಉಪಯೋಗಿಸುವಿರಿ ? ಉದಾಹರಣೆ ಕೊಟ್ಟು ವಿವರಿಸಿರಿ.

೧೮. ಕಲಿಯುವಿಕೆಯಲ್ಲಿ ಸಮಪಾತಳಿಗಳು ಉಂಟಾಗುವ ಕಾರಣಗಳು ಯಾವವು ? ಮತ್ತು ಅವುಗಳನ್ನು ಹೋಗಲಾಡಿಸುವ ಉಪಾಯಗಳು ಯಾವವು ?

೧೯. ಶಾಲೆಯಲ್ಲಿ ಯಾವ ವಿಷಯಗಳನ್ನು ಕಲಿಸುವಾಗ ಕೆಳಗೆ ಕಾಣಿಸಿದ ವಿಧಾನಗಳನ್ನು ವಿಶೇಷವಾಗಿ ಉಪಯೋಗಿಸುವಿರಿ ?

(ಅ) ಪುನರುಕ್ತಿಯ ಅಭ್ಯಾಸ
(ಬ) ಪ್ರಯತ್ನ ಮತ್ತು ಪರಿಶೋಧನೆ
(ಇ) ಅರ್ಥವುಳ್ಳ ಪುನರುಕ್ತಿ
(ಈ) ಸಂತೋಷಕರವಾದ ಅನುಭವ
(ಉ) ಒಳನೋಟ ಮತ್ತು
(ಊ) ಸಂಬಂಧೀಕರಣ

೨೦. ಕಲಿಯುವಿಕೆಯಲ್ಲಿ ವೇಗವನ್ನು ಹೆಚ್ಚಿಸಲಿಕ್ಕೆ ಯಾವ ವಿಧಾನಗಳನ್ನು ಕೈಕೊಳ್ಳಬೇಕು ? ವೇಗ (Speed) ಮತ್ತು ಸರಿಯಾಗುವಿಕೆ (Accuracy) ಇವುಗಳಲ್ಲಿಯ ಸಂಬಂಧವು ಆವುದು ? ಪ್ರಾರಂಭದಲ್ಲಿ ಯಾವುದಕ್ಕೆ ಹೆಚ್ಚು ಮಹತ್ವ ಕೊಡತಕ್ಕದ್ದು ?

# ಅಧ್ಯಾಯ ೮

## ಕಲಿಯುವ ರೀತಿಗಳು

ಕಲಿಯುವಿಕೆ ಅಂದರೇನು ಮತ್ತು ಕಲಿಯುತ್ತಿರುವ ಮಗುವು ಹೇಗೆ ಮುನ್ನಡೆ ಇಡುತ್ತಾನೆ ಎಂಬುದನ್ನು ಹಿಂದಿನ ಅಧ್ಯಾಯಗಳಲ್ಲಿ ತಿಳಿಸಲಾಗಿದೆ. ಆದರೆ ಕಲಿಯುವ ಕೆಲಸವು ನಡೆದಾಗ ಶಿಕ್ಷಕನು ಮಗುವಿಗೆ ಹೇಗೆ ಸಹಾಯಕನಾಗಬಲ್ಲನು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವದು. ಯಾರ ಸಹಾಯವೂ ಇಲ್ಲದೆ ಮಗುವು ಸ್ವಾಭಾವಿಕವಾಗಿ ಕಲಿಯಬಲ್ಲನು. ಆದರೆ ಅದಕ್ಕಾಗಿ ಅವನು ಬಹಳ ಪ್ರಯಾಸಪಡಬೇಕಾಗಬಹುದು, ಮತ್ತು ಅನಾವಶ್ಯಕವಾದ ತಪ್ಪುತಡೆಗಳನ್ನು ಮಾಡಲೂಬಹುದು ಅಥವಾ ಬೇಸರಗೊಂಡು ಹಿಡಿದ ಕೆಲಸವನ್ನು ಬಿಟ್ಟು ಬಿಡಬಹುದು. ಆದರೆ ಮಾರ್ಗದರ್ಶಕನಾದ ಒಬ್ಬ ಗುರುವು ಇದ್ದರೆ ಮಗುವಿನ ತೊಂದರೆಗಳು ಕಡಿಮೆಯಾಗುವವಲ್ಲದೆ ಅವನು ಸುಲಭವಾಗಿ ತನ್ನ ಉದ್ದೇಶಗಳನ್ನು ಈಡೇರಿಸಬಲ್ಲನು. ವೇಳೆಯು ಮತ್ತು ಶ್ರಮದ ಉಳಿತಾಯವಾಗಬೇಕಾದರೆ ಶಿಕ್ಷಕನು ಅಥವಾ ಬೋಧಕನು ಕಲಿಯುವವನಿಗೆ ಸರಿಯಾದ ಹಾದಿಯನ್ನು ತೋರಿಸುವದು ಅವಶ್ಯ. ಕಲಿಯುವಿಕೆಯ ಸಮರ್ಥನಾದ ಪದ್ಧತಿಗಳನ್ನು ವಿದ್ಯಾರ್ಥಿಗೆ ತಿಳಿಸಿಕೊಡುವದು ಅವಶ್ಯ. ಕಲಿಯುವಿಕೆಯು ಒಳ್ಳೇ ಯಶಸ್ವಿ ರೀತಿಯಿಂದ ಮತ್ತು ವ್ಯವಸ್ಥಿತ ರೀತಿಯಿಂದ ಸಾಗಿಸುವ ಬಗ್ಗೆ ಶಿಕ್ಷಕನು ನೆನಪಿಡಬೇಕಾದ ಕೆಲವು ಮಾರ್ಗದರ್ಶಕ ತತ್ವಗಳು ಉಂಟು. ಆ ತತ್ವಗಳು ಯಾವವು ಮತ್ತು ಅವುಗಳನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗಿದೆ. ಯಾವ ಸಂದರ್ಭಗಳಲ್ಲಿ ಯಾವ ಪ್ರೇರಣೆಗಳನ್ನು ಎಚ್ಚರಗೊಳಿಸಬೇಕು, ಹೇಗೆ ಪರಿಣಾಮಕರವಾಗುವಂತೆ ಗುರಿಯನ್ನು ಕಲಿಯುವವನ ಮುಂದೆ ಇಡಬೇಕು, ಗುರಿ ಮತ್ತು ಸಾಧನಗಳ ಸಂಬಂಧವನ್ನು ಹೇಗೆ ಗೊತ್ತು ಹಚ್ಚಬೇಕು, ಪ್ರಯತ್ನಗಳ ಪರಿಣಾಮವನ್ನು ಹೇಗೆ ತಿಳಿದುಕೊಳ್ಳಬೇಕು, ಕಲಿಯುವವನು ಎಲ್ಲಿ ಎಡಹುತ್ತಾನೆ ಮತ್ತು

ಅವನ ಕುಂದು ಕೊರತೆಗಳು ಯಾವವು, ಬಹುಮಾನ ಮತ್ತು ದಂಡಗಳನ್ನು ಹೇಗೆ ಜಾಣತನದಿಂದ ಉಪಯೋಗಿಸಬೇಕು ಮುಂತಾದ ಸಂಗತಿಗಳನ್ನು ಶಿಕ್ಷಕನು ತಿಳಿದುಕೊಂಡಿದ್ದರೆ ಅವನು ವಿದ್ಯಾರ್ಥಿಗೆ ಸರಿಯಾದ ಹಾದಿಯನ್ನು ತೋರಿಸಬಲ್ಲನು.

ಕಲಾಕೌಶಲ್ಯದಲ್ಲಿ ನಿಪುಣತೆಯನ್ನು ಮತ್ತು ವಿಷಯ ಜ್ಞಾನದಲ್ಲಿ ಬೆಳವಣಿಗೆಯನ್ನು ಹೊಂದುವ ವಿಧಾನಗಳನ್ನು ಕುರಿತು ಮಾರ್ಗದರ್ಶಕ ತತ್ವಗಳನ್ನು ಇಲ್ಲಿ ವಿವೇಚಿಸಲಾಗಿದೆ. ಮಗುವು ಏನನ್ನು ಕಲಿಯಬೇಕು ಎಂಬುದನ್ನು ತಿಳಿದುಕೊಳ್ಳುವದಷ್ಟೇ ಅಲ್ಲ ಆದರೆ ಅವನು ಹೇಗೆ ಕಲಿಯಬೇಕು ಎಂಬುದನ್ನು ಸಹ ತಿಳಿದುಕೊಳ್ಳುವದು ಕಲಿಸುವವನ ಕೆಲಸ. ಸಾಮಾನ್ಯವಾಗಿ ಮಗುವು ವಿಷಯವನ್ನು ಕೇಳಿ, ನೋಡಿ ಅಥವಾ ಮಾಡಿ ಕಲಿಯುತ್ತಾನೆ. ಪರಿಣಾಮಕಾರಕವಾದ ಪದ್ಧತಿಗಳು ಯಾವವೆಂಬುದು ಮೊದಲು ಅವನಿಗೆ ಗೊತ್ತಾಗುವದಿಲ್ಲ. ತಪ್ಪು ಪದ್ಧತಿಗೆ ಅವನು ಒಮ್ಮೆ ಅಂಟಿಕೊಂಡನೆಂದರೆ ಅದನ್ನು ಬಿಡಿಸುವದು ಮುಂದೆ ಕಠಿಣವಾಗುತ್ತದೆ. ಆದ್ದರಿಂದ ಮೊದಲಿನಿಂದಲೂ ಶಿಕ್ಷಕನ ಮಾರ್ಗದರ್ಶನವು ಅಗತ್ಯ. ಸರಿಯಾದ ಕೃತಿಗಳು ಯಾವವು ಮತ್ತು ತಪ್ಪು ಕೃತಿಗಳು ಯಾವವು ಎಂಬುದು ಕಲಿಸುವವನಿಗೆ ಗೊತ್ತಿರಬೇಕು. ಕಲಿಯುವ ಬೇರೆ ಬೇರೆ ವಿಧಾನಗಳು ಯಾವವು ಮತ್ತು ಕಲಿಸುವವನು ಕಲಿಯುವವನಿಗೆ ಹೇಗೆ ನೆರವಾಗಬಲ್ಲನು ಎಂಬುದನ್ನು ಕೆಳಗೆ ವಿವರಿಸಲಾಗಿದೆ.

## ಕಲಿಯುವ ರೀತಿಗಳು

### ನೋಡಿ ಕಲಿಯುವ ರೀತಿ

ಚಿಕ್ಕವರಾಗಲಿ ದೊಡ್ಡವರಾಗಲಿ ಎಷ್ಟೋ ವಿಷಯಗಳನ್ನು ನೋಡಿ ಕಲಿಯುತ್ತಾರೆ. ಕಲಾಕೌಶಲ್ಯಗಳನ್ನು ಕಲಿಯುವಾಗ ಮಾದರಿ ಕೃತಿಗಳನ್ನು ನೋಡುವದು ಲಾಭದಾಯಕ ಎನಿಸುವದು. ಕೈ ಬರೆಹ, ಚಿತ್ರಕಲೆ, ಬಣ್ಣ ಹಚ್ಚುವದು, ಹಾಡುವದು, ಕಸೂತಿ, ಹೊಲಿಗೆ, ಟಾಯಿಪ ಮಾಡುವದು; ಮಣ್ಣು, ಕಟ್ಟಿಗೆ, ಕಾಗದ ಮುಂತಾದವುಗಳಿಂದ ಸಾಮಾನು ತಯಾರಿ

ಸುವದು; ಆಟ ಆಡುವದು, ಈಸುವದು ಮೊದಲಾದ ವಿಷಯುಗಳನ್ನು ಶಾಲೆಯಲ್ಲಿ ಕಲಿಸುವಾಗ ನಿರೀಕ್ಷಣ ಪದ್ಧತಿಯು ಬಹಳ ಉಪಯೋಗ ಬೀಳುವದು. ಮಾದರಿಯ ಕೃತಿಯನ್ನು ನೋಡುವುದರಿಂದ ಕಲಿಯುವಿಕೆಯ ಗುರಿಯು ಅಥವಾ ಉದ್ದೇಶದ ಸ್ಪಷ್ಟ ಕಲ್ಪನೆಯು ಕಲಿಯುವವನಿಗೆ ಬರುತ್ತದೆ. ಶಿಕ್ಷಕನು ಮಗುವಿಗೆ ಗುರಿಯ ಸ್ಪಷ್ಟ ಕಲ್ಪನೆಯನ್ನು ಮಾಡಿಕೊಡುವದು ಮೊದಲನೇ ಮಾರ್ಗದರ್ಶಕ ತತ್ವ. ಗುರಿಯು ನಿಶ್ಚಿತವಾದ ಮೇಲೆ ಅದನ್ನು ಮುಟ್ಟುವ ಹಾದಿಯು ಗೊತ್ತಾಗುತ್ತದೆ. ಶಿಕ್ಷಕನು ವಿದ್ಯಾರ್ಥಿಗಳ ಮುಂದೆ ಒಂದು ಮಾದರಿಯ ಕೃತಿಯನ್ನು ಇಟ್ಟು ಅದನ್ನು ನೋಡಿರಿ ಎಂದು ಸುಮ್ಮನೇ ಹೇಳಿ ಬಿಡುವದರಿಂದ ಏನೂ ಪ್ರಯೋಜನವಾಗುವದಿಲ್ಲ ಆದರೆ ಏನನ್ನು ನೋಡಬೇಕು, ಎಲ್ಲಿ ನೋಡಬೇಕು, ಹೇಗೆ ನೋಡಬೇಕು, ಮತ್ತು ಅದನ್ನು ಹೇಗೆ ಅನುಕರಿಸಬೇಕು ಎಂಬುದನ್ನು ಶಿಕ್ಷಕನು ಅವರಿಗೆ ತಿಳಿಸಬೇಕು. ಅದರಂತೆ ಏನು ಮಾಡಬೇಕು ಮತ್ತು ಹೇಗೆ ಮಾಡಬೇಕು ಎಂಬುದನ್ನು ಸ್ವತಃ ಮಾಡಿ ತೋರಿಸಬೇಕು. ಕಲಿಸಬೇಕಾದ ಕೌಶಲ್ಯದಲ್ಲಿ ಕಲಿಸುವವನು ತಾನು ಮೊದಲು ನಿಪುಣನಾಗಿರಬೇಕು. ಅವಶ್ಯವಿದ್ದ ಕೃತಿಗಳನ್ನು ತಾನು ಮಾಡಿ ತೋರಿಸುವದಲ್ಲದೆ ಅವಕ್ಕೆ ಸಂಬಂಧಿಸಿದ ಪಟ, ಚಿತ್ರ, ನಕಾಶ, ಆಕೃತಿ, ಮುಂತಾದವುಗಳ ಉಪಯೋಗವನ್ನು ಮಾಡಬೇಕು. ವಿದ್ಯಾರ್ಥಿಗಳ ಕಲಿಯುವಿಕೆಯ ಕೃತಿಗಳನ್ನು ಪರೀಕ್ಷಿಸಿ ಅವುಗಳಲ್ಲಿ ಯಾವುದು ಸರಿ ಮತ್ತು ಯಾವುದು ತಪ್ಪು ಎಂಬುದನ್ನು ಅವರಿಗೆ ತೋರಿಸಿಕೊಡಬೇಕು. ಸರಿಯಾದ ಕೃತಿಗಳನ್ನು ಪ್ರತ್ಯಕ್ಷ ತೋರಿಸುವದಲ್ಲದೆ ಶಬ್ದಗಳಿಂದಲೂ ಅವುಗಳನ್ನು ವರ್ಣಿಸಬೇಕು. ಶಿಕ್ಷಕನ ದೃಷ್ಟಿಯಿಂದ ಇದಕ್ಕೆ **ನಿದರ್ಶನ ಪದ್ಧತಿ** ಎಂದು ಅನ್ನಬಹುದು.

ನೋಡುವದು ಅಥವಾ ನಿರೀಕ್ಷಿಸುವದು ಅಂದರೆ ಲಕ್ಷ್ಯಗೊಟ್ಟು ನೋಡುವದು. ಇದರಲ್ಲಿ ಒಳನೋಟವು ಅಥವಾ ಬುದ್ಧಿಶಕ್ತಿಯ ಅಂತರ್ ದೃಷ್ಟಿಯೂ ಅಡಕವಾಗಿರುತ್ತದೆ. ಗುರಿ ಮತ್ತು ಸಾಧನಗಳ ಸಂಬಂಧವನ್ನು ಹುಡುಕಲಿಕ್ಕೆ, ಮತ್ತು ಸಮಸ್ಯೆಗಳನ್ನು ಬಿಡಿಸಲಿಕ್ಕೆ ಒಳನೋಟವು ಅವಶ್ಯ. ನೋಡುವುದೆಂದರೆ ಕೇವಲ ಕಣ್ಣಿನಿಂದ ನೋಡುವದಲ್ಲ; ಆದರೆ ವಿಚಾರಿಸಿ ನೋಡುವದು. ಗಿಡದಿಂದ ಹಣ್ಣು ಬೀಳುವದನ್ನು ಎಲ್ಲರೂ ನೋಡುತ್ತಾರೆ.

ಆದರೆ ನ್ಯೂಟನ್‌ನು ಮಾತ್ರ ಹಣ್ಣು ಬೀಳುವದನ್ನು ನೋಡಿ ಗುರುತ್ವಾಕರ್ಷಣ ನಿಯಮವನ್ನು ಕಂಡುಹಿಡಿದನು. ಇಂಥ ಒಳನೋಟವನ್ನು ಹೇಗೆ ಬೆಳೆಯಿಸ ಬೇಕೆಂಬುದನ್ನು ಶಿಕ್ಷಕನು ಮಕ್ಕಳಿಗೆ ತೋರಿಸಿಕೊಡಬೇಕು.

## ಅನುಕರಣ ರೀತಿ

ನೋಡಿ ಕಲಿಯುವದರಲ್ಲಿ ಅನುಕರಣವು ಮುಖ್ಯವಾದದ್ದು. ಮತ್ತೊಬ್ಬರು ಆಡಿದಂತೆ ಆಡುವದು, ಮಾಡಿದಂತೆ ಮಾಡುವದು ಅನುಕರಣ ಅಥವಾ ಅಣಕವಾಡವೆನಿಸುವದು. ದೊಡ್ಡ ಕೋಳಿಯು ತಿಪ್ಪೆಯನ್ನು ಕೆದರುವದನ್ನು ನೋಡಿ ಸಣ್ಣ ಕೋಳಿಯೂ ಹಾಗೆ ಮಾಡುತ್ತದೆ. ಮುಂದೆ ಇದ್ದ ಕುರಿಯು ಒಂದು ಹಾದಿಯಿಂದ ಹೋದದ್ದನ್ನು ಕಂಡು ಉಳಿದ ಕುರಿ ಗಳೂ ಅದೇ ಹಾದಿಯನ್ನು ಹಿಡಿಯುತ್ತವೆ. ಸಿಂಪಿಗನೊಬ್ಬನು ತನ್ನ ತಲೆಯ ಮೇಲಿನ ಟೊಪ್ಪಿಗೆಗಳನ್ನು ಒಗೆದುದನ್ನು ಕಂಡು ಮರದ ಮೇಲಿನ ಮಂಗಗಳು ತಮ್ಮಲ್ಲಿದ್ದ ಟೊಪ್ಪಿಗಳನ್ನು ಕೆಳಗೆ ಒಗೆದವೆಂದು ಕತೆಯು ಹೇಳುತ್ತದೆ. ಮಕ್ಕಳು ಭಾಷೆಯ ಶೈಲಿಯನ್ನೂ, ಉಡಿಗೆತೊಡಿಗೆಯ ರೀತಿಗಳನ್ನೂ, ಮತ್ತು ಸಾಮಾಜಿಕ ಸಂಪ್ರದಾಯಗಳನ್ನೂ ತಂದೆತಾಯಿಗಳಿಂದ, ಮನೆಯವ ರಿಂದ, ನೆರೆಹೊರೆಯವರಿಂದ, ಗೆಳೆಯರಿಂದ ಮತ್ತು ಗುರುಹಿರಿಯರಿಂದ ಕಲಿಯುತ್ತಾರೆ. ಅನುಕರಣ ಮಾಡಲಿಕ್ಕೆ ಮಾದರಿಯ ವ್ಯಕ್ತಿಗಳು ಇತಿ ಹಾಸದಲ್ಲಿ, ಸಾಹಿತ್ಯದಲ್ಲಿ, ರಂಗಭೂಮಿಯಲ್ಲಿ ಮತ್ತು ಚಲಚಿತ್ರಗಳಲ್ಲಿ ಸಿಕ್ಕು ತ್ತಾರೆ. ತಮಗಿಂತ ಹೆಚ್ಚಿನವರು ಎಂದು ಯಾರನ್ನು ಬಗೆಯುತ್ತಾರೆಯೋ ಅವರ ಕೃತಿಗಳನ್ನು ಜನರು ಅನುಕರಿಸುವದು ಸ್ವಾಭಾವಿಕ. ಅಥವಾ ಯಾವ ಕೃತಿಯು ಒಳ್ಳೆಯದೆಂದು ತಮಗೆ ಮನವರಿಕೆ ಆಗಿರುತ್ತದೆಯೋ ಅದನ್ನು ಅವರು ಅನುಕರಿಸಬಹುದು.

ಶಾಲೆಯ ಮಕ್ಕಳು ಎಷ್ಟೋ ವಿಷಯಗಳನ್ನು ಅನುಕರಣದಿಂದಲೇ ಕಲಿಯುತ್ತಾರೆ. ಹಸ್ತಕೌಶಲ್ಯ, ಬರವಣಿಗೆ, ಚಿತ್ರಕಲೆ, ಅಂಗಸಾಧನೆ ಮುಂತಾದ ವಿಷಯಗಳನ್ನು ಕಲಿಸುವಾಗ ಅನುಕರಣ ಪದ್ಧತಿಯನ್ನು ಶಿಕ್ಷಕನು ಉಪಯೋಗಿಸಬೇಕು. ವಾಕ್ಯರಚನೆಗಳನ್ನು ಮತ್ತು ಉಚ್ಚಾರ

ಗಳನ್ನು ತಿದ್ದುವಾಗ ವ್ಯಾಕರಣದ ನಿಯಮಗಳ ವಿವರಣೆಗಿಂತ ಅನುಕರಣ ಪದ್ಧತಿಯನ್ನೇ ಶಿಕ್ಷಕನು ಅನುಸರಿಬೇಕು. ಸ್ವಯಂಪ್ರೇರಣೆ ಅಥವಾ ಸ್ವತಂತ್ರ ಕೃತಿಗೆ ಅನುಕರಣವು ಅಡ್ಡ ಬರುವದೆಂದು ಹಲವರ ಮತ. ಆದರೆ ಅವರ ಆಕ್ಷೇಪವು ತಪ್ಪಾದುದು. ಹೆಸರಾದ ಸಾಹಿತಿಗಳು, ವೈಜ್ಞಾನಿಕರು, ಮತ್ತು ಲೋಕಕಾರಣ ಪಟುಗಳು ಮೊದಲು ತಮ್ಮ ತಮ್ಮ ವ್ಯವಸಾಯದಲ್ಲಿ ನುರಿತವರ ಅನುಕರಣವನ್ನು ಮಾಡುತ್ತಾರೆ. ಒಬ್ಬ ಐನಸ್ಟೀನನು ನ್ಯೂಟನ್ ನಿಗಿಂತ ಮುಂದುವರಿಯಬೇಕಾದರೆ ಮೊದಲು ಅವನು ನ್ಯೂಟನ್‌ನ ವಿಚಾರ ಸರಣಿಯನ್ನು ಅನುಸರಿಸಬೇಕಾಗುತ್ತದೆ. ಆದ್ದರಿಂದ ವಿದ್ಯಾರ್ಥಿಗಳು ತಮ್ಮ ಭಾಷಾಶೈಲಿಯನ್ನಾಗಲಿ ಅಥವಾ ಕಲಾಕೃತಿಗಳನ್ನಾಗಲಿ ಮೇಲಾದ ಬಗೆ ಯಿಂದ ಬೆಳೆಯಿಸಬೇಕಾದರೆ ಮೊದಲು ಅವರು ದೊಡ್ಡ ಸಾಹಿತಿಗಳ ಮತ್ತು ಕಲಾನಿಪುಣರ ಮಾದರಿಯನ್ನು ಇಟ್ಟುಕೊಳ್ಳಲು ಪ್ರೋತ್ಸಾಹಿಸಬೇಕು. ಮತ್ತು ಈ ಅನುಕರಣವನ್ನು ಸ್ವತಂತ್ರ ಕೃತಿಗೆ ನೆರವಾಗುವಂತೆ ಇಟ್ಟು ಕೊಳ್ಳಲು ಸೂಚಿಸಬೇಕು.

### ಕೇಳಿ ಕಲಿಯುವ ರೀತಿ

ಮಗುವು ಎಷ್ಟೋ ಸಂಗತಿಗಳನ್ನು ಕೇಳಿಯೂ ಕಲಿಯುತ್ತಾನೆ. ಚಿಕ್ಕವನಿರುವಾಗ ಅಜ್ಜಿಯು ಹೇಳುವ ಕತೆಗಳನ್ನು ಅವನು ಬಹಳ ಆಸಕ್ತಿಯಿಂದ ಕೇಳುತ್ತಾನೆ ಯಾವ ವಿಷಯವನ್ನು ನೋಡಿ ಅಥವಾ ಮಾಡಿ ಕಲಿಯಲು ಬರುವಂತಿಲ್ಲವೊ ಅದನ್ನು ಕೇಳಿ ಅಥವಾ ಓದಿ ಕಲಿಯಬಹುದು. ಓದು ಬರೆಹ ಬಾರದೇ ಇದ್ದ ಚಿಕ್ಕ ಮಗವು ಅಥವಾ ನಿರಕ್ಷರಿಯು ಭಾಷೆಯನ್ನು ಕೇಳಿಯೇ ಕಲಿಯುತ್ತಾನೆ. ಶಾಲೆಯಲ್ಲಿ ಶಿಕ್ಷಕನು ವಿದ್ಯಾರ್ಥಿಗಳ ಎದುರಿನಲ್ಲಿ ನಿಂತು ಭಾಷಣ ಮಾಡುವದು ಅಥವಾ ಹೇಳುವದು ಮೇಲಿಂದ ಮೇಲೆ ಕಂಡು ಬರುತ್ತದೆ. ಆದರೆ ಭಾಷಣ ಪದ್ಧತಿಯನ್ನು ಶಿಕ್ಷಕನು ಶಾಲೆಯಲ್ಲಿ ಕ್ವಚಿತ್ತಾಗಿ ಉಪಯೋಗಿಸಬೇಕು. ಪ್ರಶ್ನೋತ್ತರ ಪದ್ಧತಿಯಿಂದ ಮಕ್ಕಳ ವಿಚಾರ ಶಕ್ತಿಯನ್ನು ಬೆಳೆಯಿಸುವದು ಶಿಕ್ಷಕನ ಮುಖ್ಯ ಧ್ಯೇಯವಾಗಿರ ಬೇಕು. ಇತಿಹಾಸ ಮತ್ತು ಭಾಷಾ ವಿಷಯವನ್ನು ಕಲಿಸುವಾಗ ಶಿಕ್ಷಕನು ತನ್ನ ಹೇಳಿಕೆಯನ್ನು ಬಹಳ ಕಡಿಮೆ ಮಾಡಬೇಕು. ಅವಶ್ಯವಿದ್ದಷ್ಟು

ಮಾತ್ರ ಹೇಳುವದು ಮತ್ತು ಶಕ್ಯವಿದ್ದಷ್ಟು ಹುಡುಗರಿಂದ ಹೊರಡಿಸುವದು ಶಿಕ್ಷಕನ ಮಾರ್ಗದರ್ಶಕ ತತ್ವವಾಗಿರಬೇಕು.

## ಓದಿ ಕಲಿಯುವ ರೀತಿ

ಮನುಷ್ಯನು ಬೆಳೆಯಿಸಿಕೊಂಡು ಬಂದಿರುವ ಜ್ಞಾನ ಭಂಡಾರವು ಅಪಾರವಾದುದು. ಎರಡನೆಯವರಿಗೆ ಅದರ ಉಪಯೋಗ ಬೀಳಬೇಕೆಂಬ ಉದ್ದೇಶದಿಂದ ಪುಸ್ತಕ ರೂಪದಲ್ಲಿ ಅದನ್ನು ಬರೆದಿಡುತ್ತಾರೆ. ಎಲ್ಲವನ್ನು ಕೇಳಿ ಅಥವಾ ನೋಡಿ ಕಲಿಯುವದು. ಅಸಾಧ್ಯ. ಕೆಲವನ್ನು ಓದಿಯೂ ಕಲಿಯಬೇಕಾಗುತ್ತದೆ. ಬರೆಹಗಾರನು ಬರೆದ ವಿಷಯವನ್ನು ತಿಳಿದುಕೊಳ್ಳು ವದೇ ಓದು ಕಲಿಯುವುದರ ಮುಖ್ಯ ಉದ್ದೇಶ. ಶಿಕ್ಷಕನು ಚಿಕ್ಕ ಮಕ್ಕ ಳಿಗೆ ಆರಂಭದ ಓದು ಕಲಿಸುವಾಗ ಈ ತತ್ವವನ್ನು ಮರೆಯಕೂಡದು. ಮಗುವು ಕಣ್ಣು ಗುಡ್ಡೆಗಳನ್ನು ಸರಿಸುತ್ತ ಅಕ್ಷರಗಳನ್ನು ಅಥವಾ ಶಬ್ದಗ ಳನ್ನು ಗುರುತಿಸಿ ಅನ್ನುವದು ನಿಜವಾದ ಓದು ಅಲ್ಲ. ಓದು ಕಲಿಸುವಾಗ ಉಚ್ಚಾರಣೆಗಿಂತ ತಿಳುವಳಿಕೆಗೂ, ಮತ್ತು ವೇಗಕ್ಕಿಂತ ಸರಿಯಾಗಿರುವಿಕೆಗೂ ಹೆಚ್ಚು ಮಹತ್ವವನ್ನು ಕೊಡಬೇಕು. ಅದೇ ವಿಷಯದ ಮೇಲೆ ಅನೇಕ ಪುಸ್ತ ಕಗಳು ಇರುವದರಿಂದ ಯೋಗ್ಯ ಪುಸ್ತಕವನ್ನು ಹೇಗೆ ಆರಿಸಬೇಕು, ಮತ್ತು ಬೇಕಾದ ವಿಷಯವನ್ನು ಹೇಗೆ ಅಭ್ಯಾಸಿಸಬೇಕು ಎಂಬುದನ್ನು ಶಿಕ್ಷಕನು ವಿದ್ಯಾರ್ಥಿಗಳಿಗೆ ತಿಳಿಸಿ ಕೊಡಬೇಕು. ಪುಸ್ತಕದಲ್ಲಿರುವ ಅನುಕ್ರಮಣಿಕೆ, ಅಧ್ಯಾಯದ ಸಾರಾಂಶ, ಸೂಚಿ ಪತ್ರ, ಆಧಾರ ಗ್ರಂಥ, ತಲೆ ಬರೆಹ ಮೊದಲಾ ದವುಗಳನ್ನು ಹೇಗೆ ಉಪಯೋಗಿಸಬೇಕೆಂಬುದನ್ನು ಶಿಕ್ಷಕರು ತಿಳಿಸಿದರೆ, ಅಭ್ಯಾ ಸವನ್ನು ಹೇಗೆ ಮಾಡಬೇಕು ಎಂಬುದನ್ನು ತೋರಿಸಿಕೊಟ್ಟಂತೆ ಆಗುವದು. ಪ್ರಾಥಮಿಕ ಶಾಲೆಯಲ್ಲಾಗಲಿ ಅಥವಾ ಹೈಸ್ಕೂಲಿನಲ್ಲಿಯಾಗಲಿ ಶಿಕ್ಷಕರು ಇದಕ್ಕೆ ಲಕ್ಷ ಕೊಟ್ಟದ್ದು ಕಂಡು ಬರುವದಿಲ್ಲ. ಈಗಲಾದರೂ ಈ ದಿಶೆಯಲ್ಲಿ ಮಗುವಿಗೆ ಮಾರ್ಗವನ್ನು ತೋರಿಸುವದು ಒಳ್ಳೆಯದು. ಓದು ಕಲಿಸುವ ಪದ್ಧತಿಯ ಬಗೆಗೆ ಹೆಚ್ಚಿನ ವಿವರಗಳನ್ನು " ಮಕ್ಕಳಿಗೆ ಓದು ಕಲಿಸುವದು " ಎಂಬ ನನ್ನ ಮತ್ತೊಂದು ಪುಸ್ತಕದಲ್ಲಿ ಕೊಡಲಾಗಿದೆ.

## ಬಾಯಿಪಾಠ ರೀತಿ

ಬಾಯಿಪಾಠ ಮಾಡುವ ಪದ್ಧತಿಯನ್ನು ಈಗಿನ ಮನೋವಿಜ್ಞಾನಿಗಳು ಒಪ್ಪುವದಿಲ್ಲ. ಏಕೆಂದರೆ ಅದು ಮಗುವಿನ ತಿಳುವಳಿಕೆಯನ್ನು ಮತ್ತು ವಿಚಾರ ಶಕ್ತಿಯನ್ನು ಬೆಳೆಯಿಸಲು ಸಾಧನವಾಗುವದಿಲ್ಲ. ವಿಷಯವು ತಿಳಿಯಲಿ ಅಥವಾ ಬಿಡಲಿ ಅದನ್ನು ಗಿಳಿಯಂತೆ ಕಂಠಪಾಠ ಮಾಡಿಸುವ ಪದ್ಧತಿಯನ್ನು ಹಳೆಯ ಕಾಲದ ಶಿಕ್ಷಕರು ಆಶ್ರಯಿಸುತ್ತಿದ್ದರು. ಈ ಪದ್ಧತಿಯಲ್ಲಿ ಕೆಲವೊಂದು ಅನುಕೂಲತೆಗಳು ಉಂಟು. ಅದರ ಫಲವು ತೀವ್ರ ಕಾಣುವುದರಿಂದ ಮತ್ತು ಅಲ್ಪ ಅವಧಿಯ ವರೆಗೆ ಅದು ಮನಸ್ಸಿನಲ್ಲಿ ನಿಲ್ಲುವುದರಿಂದ ಪರೀಕ್ಷೆಯ ಕಾಲಕ್ಕೆ ಅದು ಉಪಯೋಗ ಬೀಳುತ್ತದೆ. ಸಾಲೆಯಲ್ಲಿ ಕೆಲವು ಸಂಗತಿಗಳನ್ನು ಮಾತ್ರ ಹುಡುಗರು ಬಾಯಿಪಾಠದಿಂದ ಕಲಿಯಬಹುದು. ಅಂಕಿ, ಮಗ್ಗಿ, ಕೋಷ್ಟಕ, ಸಾಯನ್ಸಿನ ಸೂತ್ರ ಮತ್ತು ಕವಿತೆಗಳನ್ನು ಅವಶ್ಯವಿದ್ದಷ್ಟು ಮಟ್ಟಿಗೆ ಹುಡುಗರು ಬಾಯಿಪಾಠ ಮಾಡಿ ಕಲಿತರೆ ಅದು ಅನುಕೂಲವಾಗುವದು. ಆದರೆ ಇತಿಹಾಸದಲ್ಲಿಯ ಸಂಗತಿಗಳನ್ನು ತಿಳಿದುಕೊಳ್ಳದೆ ಪ್ರಶ್ನೋತ್ತರಗಳನ್ನು ಬಾಯಿಪಾಠ ಮಾಡಿಸುವದು ತಪ್ಪು. ಇತಿಹಾಸದಲ್ಲಿಯ ಸಂಗತಿಗಳು ಒಂದಕ್ಕೊಂದು ಹೇಗೆ ಸಂಬಂಧಪಟ್ಟಿರುತ್ತವೆ ಎಂಬುದನ್ನು ಹುಡುಗರು ವಿಚಾರಿಸಿ, ಊಹಿಸಿ . ಅಥವಾ ತರ್ಕಿಸಿ ತಿಳಿದುಕೊಳ್ಳಬೇಕು. ಪ್ರಶ್ನೆಗಳಿಗೆ ಹುಡುಗರು ತಾವಾಗಿಯೇ ಉತ್ತರಗಳನ್ನು ಹುಡುಕುವಂತೆ ಅವರನ್ನು ಪ್ರೋತ್ಸಾಹಿಸಬೇಕು. ಬುದ್ಧಿಶಕ್ತಿಯನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ಕಲಿಸದಿದ್ದರೆ ಅದು ಶಿಕ್ಷಣವೇ ಅಲ್ಲ.

## ತೀಡಿ ಕಲಿಯುವ ರೀತಿ

ಮಾದರಿಯ ಕೃತಿಯನ್ನು ನೋಡುವಲ್ಲದೆ ಅದರಂತೆ ಮಾಡುವದು ಅಥವಾ ತೀಡುವದು ಮುಂದಿನ ಹೆಜ್ಜೆ. ಚಿಕ್ಕಮಕ್ಕಳಿಗೆ ಬರೆಹವನ್ನು ಕಲಿಸುವಾಗ ತೀಡುವ ಪದ್ಧತಿಯನ್ನು ಉಪಯೋಗಿಸುವ ರೂಢಿಯು ಈಗಲೂ ಉಂಟು. ಕಟ್ಟಿಗೆಯಲ್ಲಿ ಕೊರೆದ ಅಥವಾ ಉಸುಕಿನ ಕಾಗದದ ಮೇಲೆ ಬರೆದ ಅಕ್ಷರಗಳನ್ನು ಬೆರಳಿನಿಂದ ತೀಡಲಿಕ್ಕೆ ಹಚ್ಚುವ, ಹುಡುಗರ ಕೈ ಹಿಡಿದು ತೀಡಿಸುವ ಅಥವಾ ಅವರು ತಾವಾಗಿಯೇ ತೀಡಲು ಹೇಳುವ ಯಾಂತ್ರಿಕ

ಪದ್ಧತಿಯಿಂದ ಪ್ರಯೋಜನವಿಲ್ಲವೆಂದು ಪ್ರಯೋಗದಿಂದ ಕಂಡು ಬಂದಿದೆ. ಅಕ್ಷರಗಳ ಆಕಾರದ ಪೂರ್ಣ ಕಲ್ಪನೆಯನ್ನು ತಕ್ಕೊಂಡು, ಎಲ್ಲಿ ಪ್ರಾರಂಭಿಸ ಬೇಕು, ಯಾವ ದಿಕ್ಕಿನಲ್ಲಿ ಸಾಗಬೇಕು ಮತ್ತು ಎಲ್ಲಿ ಮುಗಿಸಬೇಕು ಎಂಬುದರ ಬಗ್ಗೆ "ಅನಿಸಿಕೆ" ಯನ್ನು ಉಂಟುಮಾಡಿದರೆ ಅದು ಹೆಚ್ಚು ಪರಿಣಾಮ ಕಾರಕವಾಗುವದು. ಮತ್ತು ತೀಡಿ ಕಲಿಯುವದಕ್ಕಿಂತ ನೇರವಾಗಿ ಬರೆಯುವ ರೂಢಿಯು ಒಳ್ಳೇ ಪರಿಣಾಮಕಾರಕವಾಗುವದು.

## ಮಾಡಿ ಕಲಿಯುವ ರೀತಿ

ನೋಡಿ ಕೇಳಿ ಕಲಿಯುವದಕ್ಕಿಂತ ಮುಟ್ಟಿ, ಮಾಡಿ ಕಲಿಯುವದು ಶ್ರೇಷ್ಠವಾದ ಪದ್ಧತಿ. ಅನುಭವದಿಂದ ಕಲಿಯುವದೇ ನಿಜವಾದ ಕಲಿಯುವಿಕೆ ಎಂದು ಹಿಂದೆಯೇ ಹೇಳಿದ್ದೇವೆ. ಅನುಭವದಲ್ಲಿ ಮಾಡಿ ಕಲಿಯುವದು ಪ್ರಾಧಾನ್ಯವಾಗಿರುತ್ತದೆ ಹೊಸ ಶಿಕ್ಷಣವು ಮಾಡಿ ಕಲಿಯುವ ಪದ್ಧತಿಗೇನೇ ಹೆಚ್ಚು ಮಹತ್ವವನ್ನು ಕೊಡುತ್ತದೆ. ಈ ಪದ್ಧತಿಯು ಬೇರೆ ಬೇರೆ ರೂಪ ತಾಳುವುದರಿಂದ ಅದನ್ನು ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. "ಚಟುವಟಿಕೆಯ ಕಾರ್ಯಕ್ರಮ," "ವ್ಯವಸಾಯದ ಮುಖಾಂತರ ಕಲಿಯುವದು," "ಮಾಡುತ್ತ ಕಲಿಯುವದು," "ಜೀವನ ಶಿಕ್ಷಣ," "ಉದ್ಯೋಗ ಶಿಕ್ಷಣ," "ಜೀವನ ಸನ್ನಿವೇಶ," "ಸ್ವಂತ ಚಟುವಟಿಕೆ," "ಯೋಜನಾ ಪದ್ಧತಿ," ಮುಂತಾಗಿ ಕರೆಯಲ್ಪಡುವ ಶಿಕ್ಷಣ ಕಾರ್ಯಕ್ರಮಗಳು "ಪುಸ್ತಕ ವಿದ್ಯೆ"ಗಿಂತ ಮಾಡಿ ಕಲಿಯುವದನ್ನೇ ಒತ್ತಿ ಹೇಳುತ್ತವೆ.

## ಪ್ರಯತ್ನ-ಮತ್ತು-ಪ್ರಮಾದ ರೀತಿ

ಇದು ಮಾಡಿ ಕಲಿಯುವದರಲ್ಲಿ ಬರುತ್ತದೆ. ಅನೇಕ ಪ್ರಯತ್ನಗಳನ್ನು ಮಾಡಿ ಮಾಡಿ ಕಡೆಗೆ ಗುರಿಯನ್ನು ಮುಟ್ಟುವದು ಇಲ್ಲಿ ನಡೆಯುತ್ತದೆ. ಗೆಲುವನ್ನು ಹೊಂದಲಿಕ್ಕೆ ಯಾವುದು ಬೇಕು ಮತ್ತು ಯಾವುದು ಬೇಡ ಎಂಬದನ್ನು ಪ್ರಾಣಿಗಳು ಕೂಡ ಹುಡುಕುತ್ತವೆ ಎಂಬುದು ಮೇಲೆ ಕೊಟ್ಟ ಬೆಕ್ಕು, ಇಲಿ, ಮಂಗಗಳ ಉದಾಹರಣೆಗಳಿಂದ ಸಿದ್ಧವಾಗುತ್ತದೆ. ಯಾವುದಾದರೊಂದು ಕೌಶಲ್ಯವನ್ನು ಅಥವಾ ಉದ್ಯೋಗವನ್ನು ಕಲಿಯುವಾಗ ಮಗುವು ಅನೇಕ ತಪ್ಪುಗಳನ್ನು ಮಾಡುವದುಂಟು. ಆದರೆ ಶಿಕ್ಷಕನು ಅವನ

ಪ್ರಯತ್ನಗಳನ್ನು ಪ್ರೋತ್ಸಾಹಿಸಬೇಕು; ಅಲ್ಲದೆ ಯಾವುದನ್ನು ಬಿಡಬೇಕು ಮತ್ತು ಯಾವುದನ್ನು ಹಿಡಿಯಬೇಕು ಎಂಬುದನ್ನು ತೋರಿಸಬೇಕು. ಪ್ರಯತ್ನ-ಪ್ರಮಾದದ ಕಲಿಯುವಿಕೆಯಲ್ಲಿ ಸಿಕ್ಕ ಹಾಗೆ ಮಾಡುವದು ಇರುವದಿಲ್ಲ. ಆದರೆ ಒಳನೋಟದಿಂದ ಗುರಿ ಮತ್ತು ಸಾಧನೆಗಳ ಸಂಬಂಧವನ್ನು ಹಚ್ಚುವದು ಇರುತ್ತದೆ. ಶಿಕ್ಷಕನು ಮಕ್ಕಳಲ್ಲಿ ಒಳನೋಟವನ್ನು ಬಲಪಡಿಸಲು ಪ್ರಯತ್ನಿಸಬೇಕು.

## ಸಮಸ್ಯೆ ಬಿಡಿಸುವ ರೀತಿ

ಅನುಭವವನ್ನು ಹೊಂದುತ್ತ ಹೋಗುವ ಮಗುವಿಗೆ ಜಗತ್ತಿನಲ್ಲಿ ಕಾಣುವವೆಲ್ಲವೂ ಬಗೆಬಗೆಯ ಸಮಸ್ಯೆಗಳಾಗಿರುತ್ತವೆ. ಸಮಸ್ಯೆ ಬಿಡಿಸುವದು ಅಂದರೆ ಆದರ ಬಗ್ಗೆ ವಿಚಾರ ಮಾಡುವದು. ಪುರೋಗಾಮಿ ಶಿಕ್ಷಣವು ಇದಕ್ಕೆ ಹೆಚ್ಚು ಮಹತ್ವವನ್ನು ಕೊಡುತ್ತದೆ. ಕಲಿಯುವದು ಅಂದರೆ, ವಿಚಾರ ಮಾಡಲಿಕ್ಕೇನೇ ಕಲಿಯುವದು ಎಂದು ಅಮೇರಿಕೆಯ ಶಿಕ್ಷಣ ತಜ್ಞನಾದ ಡ್ಯುಯಿ ಎಂಬವನು ಹೇಳುತ್ತಾನೆ. ಇದು ಸರಿ. ಶಾಲೆಯಲ್ಲಿ ಮಕ್ಕಳ ಮುಂದೆ ವಿಷಯಕ್ಕೆ ತಕ್ಕ ಸಮಸ್ಯೆಗಳನ್ನು ಇಡುವದು, ಅವುಗಳನ್ನು ಬಿಡಿಸಲಿಕ್ಕೆ ಪ್ರೋತ್ಸಾಹಿಸುವದು ಮತ್ತು ವಿಚಾರಾತ್ಮಕ ಪ್ರಶ್ನೆಗಳನ್ನು ಕೇಳುವದು, ಇವು ಶಿಕ್ಷಕನು ಅವಶ್ಯ ಮಾಡತಕ್ಕ ಕೆಲಸ. ಸಮಸ್ಯೆಯನ್ನು ಹೇಗೆ ಮುಂದಿಟ್ಟುಕೊಳ್ಳಬೇಕು, ಆದರ ಗುರಿಯನ್ನು ಹೇಗೆ ಸ್ಪಷ್ಟ ತಿಳಿದುಕೊಳ್ಳಬೇಕು, ಆದರ ಸಂಗತಿಗಳನ್ನು ಹೇಗೆ ಕಲೆ ಹಾಕಬೇಕು, ಅವುಗಳಲ್ಲಿ ಸಂಬಂಧವನ್ನು ಹೇಗೆ ಹಚ್ಚಬೇಕು ಮತ್ತು ಅದರ ಉತ್ತರವನ್ನು ಹೇಗೆ ಊಹಿಸಬೇಕು, ಹೇಗೆ ಪರೀಕ್ಷಿಸಬೇಕು ಅಥವಾ ಹೇಗೆ ಪ್ರಮಾಣಿಸಿ ನೋಡಬೇಕು ಎಂಬುದನ್ನು ಶಿಕ್ಷಕನು ಮಕ್ಕಳಿಗೆ ತೋರಿಸಿಕೊಡಬೇಕು. ಈ ಪದ್ಧತಿಯನ್ನು ವಿಶೇಷವಾಗಿ ಸಾಯನ್ಸ ಮತ್ತು ಗಣಿತ ಕಲಿಸುವಾಗಲೂ ಮತ್ತು ಸಾಮಾನ್ಯವಾಗಿ ಇತರ ವಿಷಯಗಳನ್ನು ಕಲಿಸುವಾಗಲೂ ಉಪಯೋಗಿಸಲು ಬರುತ್ತದೆ.

## ಸಿದ್ಧಾಂತ ಹೊರಡಿಸುವ ರೀತಿ

ವಸ್ತುಗಳನ್ನು, ವ್ಯಕ್ತಿಗಳನ್ನು ಅಥವಾ ಸಂಗತಿಗಳನ್ನು ಬಿಡಿಬಿಡಿಯಾಗಿ ಅನುಭವಿಸಿ, ಸಾಮಾನ್ಯ ಲಕ್ಷಣಗಳನ್ನು ನೋಡಿ ಅವುಗಳನ್ನು ಒಂದೊಂದು

ಗುಂಪಿಗೆ ಸೇರಿಸುವಾಗ ಸಾಮಾನ್ಯ ಕಲ್ಪನೆಯನ್ನು ಅಥವಾ ಸರ್ವನಾಮವನ್ನು ವಿಚಾರಿಸಿ ಉಪಯೋಗಿಸಬೇಕಾಗುತ್ತದೆ. ಬೆಕ್ಕು, ಮನೆ, ದೇಶಾಭಿಮಾನ, ಪ್ರಾಮಾಣಿಕತನ ಮುಂತಾದ ಸಾಮಾನ್ಯ ಕಲ್ಪನೆಗಳನ್ನು ಕಟ್ಟುವ ಮೊದಲು ಅನೇಕ ಉದಾಹರಣೆಗಳನ್ನು ನೋಡಬೇಕಾಗುತ್ತದೆ. ಬಿಡಿಬಿಡಿಯಾಗಿ ಸಂಗತಿಗಳನ್ನು ಪರೀಕ್ಷಿಸಿ ಮತ್ತು ಹೋಲಿಸಿ ಸಾಮಾನ್ಯ ನಿಯಮಗಳನ್ನು ಹೊರಡಿಸುವದು ಸಿದ್ಧಾಂತವೆನಿಸುತ್ತದೆ . ಇದು ಬುದ್ಧಿಯ ಅಥವಾ ವಿವೇಕದ ಕೆಲಸ. ಮಕ್ಕಳು ತಾವಾಗಿಯೇ ಸಿದ್ಧಾಂತಗಳನ್ನು ಅಂದರೆ ಸಾಮಾನ್ಯ ನಿಯಮಗಳನ್ನು, ಅಥವಾ ತತ್ವಗಳನ್ನು ಹೊರಡಿಸುವ ಮನೋವೃತ್ತಿಯನ್ನು ಶಿಕ್ಷಕನು ವಿದ್ಯಾರ್ಥಿಗಳಲ್ಲಿ ಬೆಳೆಯಿಸಬೇಕು. ಸಮಾಜದ ಹೊಸ ಸನ್ನಿವೇಶಗಳಲ್ಲಿ ತಮ್ಮ ಜ್ಞಾನವನ್ನು ಉಪಯೋಗಿಸಬೇಕಾದರೆ ಸಿದ್ಧಾಂತಗಳನ್ನು ಕಂಡು ಹಿಡಿಯುವ ಮನೋವೃತ್ತಿಯು ಮಕ್ಕಳಲ್ಲಿ ಬೆಳೆಯಬೇಕಾಗುತ್ತದೆ.

## ಇಡಿ ಮತ್ತು ಬಿಡಿ ರೀತಿ

ಕಲಿಯತಕ್ಕ ವಿಷಯ ಭಾಗವು (Unit) ಎಷ್ಟು ದೊಡ್ಡದು ಇರಬೇಕು ಎಂಬ ಪ್ರಶ್ನೆಗೆ ಕಲಿಯುವವನೂ ಮತ್ತು ಕಲಿಸುವವನೂ ಉತ್ತರ ಹುಡುಕಬೇಕಾಗುತ್ತದೆ. ಈ ಬಗ್ಗೆ ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. ಅರ್ಥವಿಲ್ಲದ ಶಬ್ದ ಪಟ್ಟಿಯನ್ನು ( ಉದಾ:- ಕಯಾ, ದಅ, ಪಮನ, ಗಬಳರ, ಮುಂತಾಗಿ ) ಬಾಯಿಪಾಠ ಮಾಡಲಿಕ್ಕೆ ಹುಡುಗರಿಗೆ ಕಠಿಣ ಹೋಗುತ್ತದೆಂದು ಪ್ರಯೋಗದಿಂದ ಸಿದ್ಧವಾಗಿದೆ. ಇದು ಬಿಡಿ ಪದ್ಧತಿ. ಮತ್ತೊಂದು ಪ್ರಯೋಗದಲ್ಲಿ ಕೆಳಗೆ ಕಾಣಿಸಿದಂತೆ ಎರಡು ಅಂಕಿಗಳ ಸಾಲುಗಳನ್ನು ಬಾಯಿಪಾಠ ಮಾಡಲಿಕ್ಕೆ ಕೊಟ್ಟಿತ್ತು. ಒಂದನೇ ಸಾಲಿನಲ್ಲಿ ೨ ೩ ೭ ೧೦ ೧೯.... ಮುಂತಾಗಿ; ಎರಡನೇ ಸಾಲಿನಲ್ಲಿ ೫ ೭ ೮ ೧೧ ೧೫....ಮುಂತಾಗಿ ಅಂಕಿಗಳು ಇದ್ದವು. ಮೊದಲಿನ ಸಾಲಿನಲ್ಲಿ ಏನೂ ಕ್ರಮ ಇರುವದಿಲ್ಲ. ಇದು ಬಿಡಿ ಪದ್ಧತಿ. ಆದರೆ ಎರಡನೇ ಸಾಲಿನಲ್ಲಿ ಒಂದು ಕ್ರಮ ಅಥವಾ ತತ್ವ ಇರುತ್ತದೆ. ಆದ್ದರಿಂದ ಎರಡನೇ ಸಾಲನ್ನು ನೆನಪು ಮಾಡಿಕೊಂಡು ಹೇಳಲಿಕ್ಕೆ ಕಡಿಮೆ ಪ್ರಯತ್ನಗಳು ಸಾಕಾಗುತ್ತವೆ ಇದು ಇಡಿಯಾಗಿ ಕಲಿಸುವ ರೀತಿ. ಹೀಗೆ ಎಷ್ಟೋ ಪ್ರಯೋಗಗಳನ್ನು ಮಾಡಿ ಕಂಡುಹಿಡಿದ ಸಿದ್ಧಾಂತಗಳನ್ನು ಇಲ್ಲಿ

ಸ್ವಲ್ಪದರಲ್ಲಿ ಕೊಡಲಾಗಿದೆ. ಸಾಮಾನ್ಯವಾಗಿ ಬಿಡಿ ಪದ್ಧತಿಗಿಂತ ಇಡಿ ಪದ್ಧತಿಯೇ ಶ್ರೇಷ್ಠವಾದದ್ದು. ವಿಷಯವನ್ನು ವಿವರಿಸಿದ ಪುಟಗಳಿಂದ ಅಥವಾ ಸಾಲುಗಳಿಂದ, ಆಕಾರದಿಂದ ಅಥವಾ ಪ್ರಮಾಣದಿಂದ ಇಡಿತನ ಅಥವಾ ಬಿಡಿತನವನ್ನು ಅಳೆಯಲು ಬರುವದಿಲ್ಲ. ಒಂದೊಂದು ವಿಚಾರಕ್ಕೆ ಅಥವಾ ಸಂಗತಿಗೆ ಸಂಬಂಧಿಸಿದ ವಿಷಯಗಳನ್ನು ಒಂದುಗೂಡಿಸಿ ಒಂದು ಪೂರ್ಣ ಭಾಗವನ್ನು ಮಾಡತಕ್ಕದ್ದು. ಇದು ಇಡಿ ಪದ್ಧತಿ. ಆದರೆ ಅಸಂಬದ್ಧ ಸಂಕಲನಕ್ಕೆ ಪೂರ್ಣತೆ ಅಥವಾ ಇಡಿತನ ಬರುವದಿಲ್ಲ. ಅರ್ಥ ಉಳ್ಳ ವಿಭಾಗಕ್ಕೆ ಇಡಿತನವು ಬರುತ್ತದೆ. ಪೂರ್ಣವೆನಿಸಿದ ಒಂದು ವಿಷಯದಲ್ಲಿ ಒಂದು ಆಂತರಿಕ ಸಂಬಂಧ, ಒಂದು ವ್ಯವಸ್ಥೆ ಅಥವಾ ಒಂದು ಅರ್ಥ ಇರುತ್ತದೆ. ಇದು ಮಹತ್ವದ್ದು.

ಕವಿತೆಯನ್ನು ಕಲಿಸುವಾಗ ಮೊದಲನೆಯ ಓದಿನಲ್ಲಿ ಹುಡುಗರಿಗೆ ಅದರಲ್ಲಿಯ ವಿಷಯದ ಪೂರ್ಣ ಕಲ್ಪನೆಯನ್ನು ಸ್ಥೂಲವಾಗಿ ಮಾಡಿಕೊಡಬೇಕು. ಸಾಲು ಹಿಡಿದು ಒಂದೊಂದೇ ನುಡಿಯನ್ನು ಕಲಿಸುತ್ತ ಹೋಗುವದು ಸರಿಯಾದ ಪದ್ಧತಿ ಅಲ್ಲ. ಆದರೆ ಒಂದೊಂದು ಸಣ್ಣ ಸಣ್ಣ ಸಂಗತಿ, ಸನ್ನಿವೇಶ ಅಥವಾ ವಿಷಯವನ್ನು ತಕ್ಕೊಂಡು ಅದಕ್ಕೆ ಸಂಬಂಧಿಸಿದ ನುಡಿಗಳನ್ನು ಒಟ್ಟಾಗಿ ಒಂದೊಂದು ಬಾರೆ ಅಭ್ಯಾಸ ಮಾಡುವದು ಒಳ್ಳೆಯ ಪದ್ಧತಿ ಎನಿಸುವದು. ಇಷ್ಟಲ್ಲದೆ ಬಿಡಿಬಿಡಿಯಾಗಿ ಕಲಿತದ್ದನ್ನು ಕೂಡ ಆಗಾಗ ಇಡೀ ವಿಷಯಕ್ಕೆ ಸಂಬಂಧಿಸಿ ಆಲೋಚಿಸಬೇಕು. ಚಿಕ್ಕಮಕ್ಕಳಿಗೆ ಆರಂಭದ ಓದು ಕಲಿಸುವಾಗ ಅರ್ಥವುಳ್ಳ ವಾಕ್ಯ ಪದ್ಧತಿಯನ್ನು ಅನುಸರಿಸಬೇಕು. ಆದರೆ ಈ ವಾಕ್ಯಗಳು ಮೊದಮೊದಲು ಎರಡು ಮೂರು ಶಬ್ದಗಳಿಂದ ಮಾಡಿದವು ಮಾತ್ರ ಇರಬೇಕು. ವಾಕ್ಯದ ಅರ್ಥವನ್ನು ಕೊಡುವ ಒಂದೇ ಶಬ್ದವಾದರೂ ನಡೆಯುವದು. ಬಿಡಿಯಾದ ಅಕ್ಷರಗಳಿಗೆ ಅರ್ಥವೇ ಇಲ್ಲದ್ದರಿಂದ ಅಕ್ಷರ ಪದ್ಧತಿಯನ್ನು ಆರಂಭದಲ್ಲಿ ಎಂದೂ ಉಪಯೋಗಿಸಬಾರದು. ಮಕ್ಕಳಿಗೆ ಅದು ಬಹಳ ಜಡವಾಗುತ್ತದೆ. ಬಾಲಕರಿಗಾಗಿ ಬರೆದ ಪುಸ್ತಕದಲ್ಲಿ ಅವರ ಅನುಭವದಲ್ಲಿ ಬಾರದ ಮತ್ತು ಅವರಿಗೆ ಅರ್ಥವಾಗದ ಶಬ್ದಗಳನ್ನು ಉಪಯೋಗಿಸಬಾರದು. ಅದರಂತೆ ಮಕ್ಕಳಲ್ಲಿ ಶಬ್ದ ಸಂಪತ್ತನ್ನು ಬೆಳೆಯಿಸಲಿಕ್ಕೆ ಶಬ್ದಾರ್ಥವನ್ನು ಬಾಯಿಪಾಠ ಮಾಡೆಂದು ಹೇಳುವದು ಶುದ್ಧ

ತಪ್ಪು. ಮಕ್ಕಳ ಭಾಷಾ ಸಾಮರ್ಥ್ಯವು ಈ ರೀತಿಯಾಗಿ ಬೆಳೆಯುವದಿಲ್ಲ ಶಬ್ದಗಳ ಪ್ರಯೋಗವನ್ನು ಸಾಹಿತ್ಯದಲ್ಲಿ ಬಳಸಿದ ರೀತಿಯಿಂದಲೇ ತಿಳಿದು ಕೊಳ್ಳುವದು ಭಾಷಾ ಪ್ರಭುತ್ವವನ್ನು ಹೆಚ್ಚಿಸಲಿಕ್ಕೆ ನೆರವಾಗುವದು. ಸಾಲೆ ಯಲ್ಲಿ ಯಾವುದೇ ವಿಷಯವನ್ನು ಕಲಿಸಲಿ ಅದನ್ನು ಅರ್ಥವಾಗುವಂಥಹ ಒಂದೊಂದು ಭಾಗವನ್ನು ಮಾಡಿ ಕಲಿಸಬೇಕು. ಅರ್ಥವಿದ್ದಲ್ಲಿ ಕಲಿಯುವಿಕೆ ಬೇಗ ಬೇಗ ಸಾಗುತ್ತದೆ. ಮಗುವಿನ ವಯ, ಬುದ್ಧಿ ಸಾಮರ್ಥ್ಯ, ಅನುಭವ ಮತ್ತು ಅಭಿರುಚಿಗೆ ತಕ್ಕಂತೆ ವಿಷಯ ವಿಭಾಗವನ್ನು ಹೆಚ್ಚು ಕಡಿಮೆ ಮಾಡಿಕೊಳ್ಳಬೇಕು.

## ನಿರಂತರ ಮತ್ತು ಕಾಲಾಂತರ ರೀತಿ

ಒಂದು ವಿಷಯವನ್ನು ಕಲಿಯಲಿಕ್ಕೆ ಬೇಕಾದ ವೇಳೆಯನ್ನು ಹೇಗೆ ಹಂಚಬೇಕು ಎಂಬ ಪ್ರಶ್ನೆಯ ಬಗ್ಗೆ ಕೆಲವು ಪ್ರಯೋಗಗಳನ್ನು ಮಾಡಿದ್ದಾರೆ. ಟಾಯಿಪ ರಾಯಟಿಂಗ, ಲೇಜೀಮ ಮುಂತಾದ ವಿಷಯಗಳನ್ನು ವಾರದಲ್ಲಿ ಏಳು ತಾಸು ಕಲಿಯಲಿಕ್ಕೆ ಅವಕಾಶವಿದ್ದರೆ ಅದನ್ನು ಒಂದೇ ದಿವಸ ಏಳು ತಾಸು ಅಭ್ಯಾಸ ಮಾಡುವದು ಉತ್ತಮವೋ ? ಅಥವಾ ಪ್ರತಿ ದಿವಸ ಒಂದೊಂದು ತಾಸಿನಂತೆ ಏಳು ದಿವಸಗಳವರೆಗೆ ಅಭ್ಯಾಸ ಮಾಡುವದು ಉತ್ತಮವೋ ? ಹೀಗೆ ಕೆಲವು ಅಭ್ಯಾಸಗಳನ್ನು ಪ್ರಯೋಗಿಸಿ ನೋಡಿದ್ದಾರೆ; ಇದರಿಂದ ನಿಶ್ಚಯವಾದ ಸಿದ್ಧಾಂತಕ್ಕೆ ಬರದಿದ್ದರೂ ಸಾಮಾನ್ಯವಾಗಿ ಕಂಡು ಬಂದ ಮಾತು ಏನೆಂದರೆ, ಅಭ್ಯಾಸವನ್ನು ಒಂದೇ ಕಾಲಕ್ಕೆ ಬಿಟ್ಟೂ ಬಿಡದೆ ಮಾಡುವದಕ್ಕಿಂತ ಅದನ್ನು ಬೇರೆ ಬೇರೆ ಕಾಲದಲ್ಲಿ ಮಾಡುವದು. ಲಾಭದಾಯಕ. ನಡುವೆ ವಿರಾಮ ಕಾಲವು ಅರ್ಧ ತಾಸಿನಿಂದ ಇಪ್ಪತ್ತುನಾಲ್ಕು ತಾಸು ಇರಬಹುದು. ವಿರಾಮ ಕಾಲದಲ್ಲಿ ವಿಷಯವು ದೃಢಗೊಳ್ಳುವದಲ್ಲದೆ ತಪ್ಪುಗಳನ್ನು ತಿದ್ದಲು ಅವಕಾಶ ದೊರಕುತ್ತದೆ. ಅದೇ ಕೆಲಸವನ್ನು ಬಹಳ ಹೊತ್ತಿನವರೆಗೆ ಮಾಡ ಹತ್ತಿದರೆ ಬೇಸರಿಕೆ ಉಂಟಾಗುತ್ತದೆ. ಚಿಕ್ಕವರ ಅಭ್ಯಾಸದ ಅವಧಿಯು ಚಿಕ್ಕದಾಗಿಯೂ ದೊಡ್ಡವರ ಅಭ್ಯಾಸದ ಅವಧಿಯು ದೊಡ್ಡದಾಗಿಯೂ ಇರುವದು ಸಾಮಾನ್ಯ ನಿಯಮ. ಆದರೆ ಕಲಿಯುವವನ ವಯ, ಅಭಿರುಚಿ,

ಬೇಸರ, ಪ್ರೇರಣೆಯ ಬಲ, ಮತ್ತು ಸಾಲೆಯಲ್ಲಿ ಕಲಿಯ ಬೇಕಾದ ಇತರ ವಿಷಯಗಳು ಇವುಗಳನ್ನು ನೋಡಿ ಶಿಕ್ಷಕನು ತನ್ನ ಪಾಠದ ಅವಧಿಯನ್ನು ತಾನೇ ನಿಶ್ಚಯಿಸಿಕೊಳ್ಳಬೇಕು. ಇಲ್ಲಿ ಅಭಿರುಚಿಯ ತತ್ವವು ಬಹಳ ಮಹತ್ವದ್ದು. ಅಭಿರುಚಿಯುಳ್ಳ ಒಂದು ವಿಷಯವನ್ನು ತಕ್ಕೊಂಡು ಅದರ ಸುತ್ತಲೂ ಒಂದರ ಹಿಂದೊಂದು ಚಟುವಟಿಕೆಯಂತೆ ಮಕ್ಕಳಿಗು ಕೂಡ ತಾಸೆರಡು ತಾಸು ಕಲಿಸಬಹದು ಎಂದು ಇತ್ತೀಚಿಗೆ ಮನೋವಿಜ್ಞಾನಿಗಳು ಅಭಿಪ್ರಾಯ ಪಡಹತ್ತಿದ್ದಾರೆ. ಓದುವದು, ನೋಡುವದು, ಮಾಡುವದು, ಮಾತಾಡುವದು ಮತ್ತು ಬರೆಯುವದು–ಹೀಗೆ ಬೇರೆ ಬೇರೆ ಚಟುವಟಿಕೆಗಳನ್ನು ಒಂದಕ್ಕೊಂದು ಹೆಣೆದು ಸಮವಾಯ ಪದ್ಧತಿಯಿಂದ ವಿಷಯಗಳನ್ನು ಕಲಿಸಬಹುದು. ಕಲಿಯುವಿಕೆಯಲ್ಲಿ ಮಕ್ಕಳಿಗೆ ಸರಿಯಾದ ಹಾದಿ ತೋರಿಸಲಿಕ್ಕೆ ಶಿಕ್ಷಕನು ಮತ್ತೆ ಕೆಲವು ವಿಧಾನಗಳನ್ನು ಉಪಯೋಗಿಸಬೇಕಾಗುತ್ತದೆ. ಅವುಗಳನ್ನೂ ಇಲ್ಲಿ ವಿವರಿಸಿದೆ.

## ಸೋಲು ಮತ್ತು ಗೆಲುವಿನ ಪರಿಣಾಮ

ಕಲಿಯುವ ಕೆಲಸವು ನಡೆದಾಗ ಮಗುವಿಗೆ ಒಮ್ಮೊಮ್ಮೆ ಸೋಲು ಮತ್ತು ಒಮ್ಮೊಮ್ಮೆ ಗೆಲುವು ಬರುವದುಂಟು. ಅಭ್ಯಾಸದಲ್ಲಿ ಅನುಭವಿಸುವ ಈ ಯಶ ಮತ್ತು ಅಪಯಶಗಳ ಪರಿಣಾಮವು ಮಗುವಿನ ಮೇಲೆ ಆಗದೇ ಇರದು. ಗೆಲುವು ಕೆಲಸಕ್ಕೆ ಶಕ್ತಿಯನ್ನೂ ಹುರುಪನ್ನೂ ಕೊಡುತ್ತದೆ, ಮತ್ತು ಕಲಿಯುವಿಕೆಯ ಬಗ್ಗೆ ಅನುಕೂಲ ಮನೋವೃತ್ತಿಯನ್ನು ಉಂಟು ಮಾಡುತ್ತದೆ. ಆದರೆ ಮೇಲಿಂದ ಮೇಲೆ ಸೋಲು ಬರಹತ್ತಿದರೆ ಕಲಿಯುವಿಕೆಯು ಕುಂಠಿತವಾಗುತ್ತದೆ. ನಿರಾಶೆಯು ಬರಹತ್ತಿದರೆ ಪ್ರಯತ್ನವು ನಿರುತ್ಸಾಹ ಹೊಂದುತ್ತದೆ, ಅಭಿರುಚಿಯು ಕಡಿಮೆಯಾಗುತ್ತದೆ, ಅಥವಾ ತಾನು ಕಡಿಮೆಯವನು ಎಂಬ ಮನೋವೃತ್ತಿಯು ಉಂಟಾಗುತ್ತದೆ. ಒಂದು ಪ್ರಯೋಗದಲ್ಲಿ ಚಿಕ್ಕ ಮಕ್ಕಳಿಗೆ ಶಬ್ದಗಳನ್ನು ಗುರುತಿಸುವ ಆಟಗಳನ್ನು ಕೊಟ್ಟಿತ್ತು. ಕೆಲವು ಹುಡುಗರಿಗೆ ಎಷ್ಟೋ ಅವಧಿಗಳ ವರೆಗೆ ಶಬ್ದಗಳನ್ನು ಗುರುತಿಸಲು ಬರಲಿಲ್ಲ. ಆಗ ಒಬ್ಬನು ಅಡಗಿಕೊಳ್ಳುತ್ತಿದ್ದನು, ಮತ್ತೊಬ್ಬನು ಓಡಿಹೋಗುತ್ತಿದ್ದನು, ಬೇರೊಬ್ಬನು ಈ ಆಟವು ಒಳ್ಳೆಯದಿಲ್ಲವೆಂದು ಅನ್ನುತ್ತಿದ್ದನು. ಆದರೆ ಅದೇ ಹುಡುಗರಿಗೆ ಶಿಕ್ಷಕನು ವೈಯಕ್ತಿಕ

ವಾಗಿ ಅವರವರ ಕುಂದುಕೊರತೆಗಳನ್ನು ನೋಡಿ ಕಲಿಸಿದನಂತರ ಅವರೆಲ್ಲರು ಶಬ್ದ ಗುರುತಿಸುವ ಆಟಗಳಲ್ಲಿ ಜಯವನ್ನು ಹೊಂದಿದರಲ್ಲದೆ ಅವರ ಮನೋವೃತ್ತಿಯು ಬದಲಾಗಿ ಅವರು ಆ ಆಟಗಳಲ್ಲಿ ಬಹಳ ಉತ್ಸಾಹ ವನ್ನು ತೋರಿಸಹತ್ತಿದರು. ಅಂದರೆ ಆರಂಭದಲ್ಲಿ ವಿಷಯವನ್ನು ಸರಿಯಾದ ಪದ್ಧತಿಯಿಂದ ಕಲಿಯುವದು ಮಹತ್ವದ್ದು ಎಂಬುದು ಇದರಿಂದ ಸಿದ್ಧವಾಗು ತ್ತದೆ. ಕಲಿಯುವ ವಿಷಯವು ಮಕ್ಕಳಿಗೆ ಹೊಂದಿಕೆಯಾಗದಿದ್ದರೆ ಮತ್ತು ಕಲಿಸುವ ಪದ್ಧತಿಯು ತಪ್ಪಿನಿಂದ ಕೂಡಿದ್ದರೆ ಅವು ವಿದ್ಯಾರ್ಥಿಗಳು ಅನುಭವಿ ಸುವ ತೊಂದರೆಗಳಿಗೆ ಕಾರಣಗಳಾಗುತ್ತವೆ.

ಯಾವುದಾದರೊಂದು ವಿಷಯವು ಕಠಿಣವೆನಿಸಿದಾಗ, ಅದರಲ್ಲಿ ಪ್ರಗತಿಯು ಕಾಣದೇ ಇದ್ದಾಗ ಮತ್ತು ಕಲಿಯುವ ಪ್ರಯತ್ನವು ಮತ್ತೆ ಮತ್ತೆ ಅಪಜಯ ಹೊಂದಿದಾಗ ಮಗುವು ಈ ರೀತಿಯಾಗಿ ವರ್ತಿಸುತ್ತಾನೆ. ಅವನು ಅಂಜುತ್ತಾನೆ, ಗಾಬರಿಯಾಗುತ್ತಾನೆ, ಉಗ್ಗುತ್ತಾನೆ, ಉಗುರು ಕಡಿಯುತ್ತಾನೆ, ಗಂಟುಮೋರೆ ಹಾಕುತ್ತಾನೆ, ಗದ್ದಲ ಮಾಡುತ್ತಾನೆ ಅಥವಾ ಸುಂದು ಹಿಡಿದು ಕೂಡ್ರುತ್ತಾನೆ, ಏನನ್ನಾದರೂ ಮುರಿಯುತ್ತಾನೆ ಅಥವಾ ಕೆಡಿಸುತ್ತಾನೆ. ಹೀಗೆ ಅವನು ತನ್ನ ಅಸಮಾಧಾನವನ್ನು ಅಥವಾ ಅಸಮರ್ಥತೆಯನ್ನು ವ್ಯಕ್ತ ಮಾಡುತ್ತಾನೆ. ಶಿಕ್ಷಕನು ಆಗ ಆ ಮಗುವಿನ ತೊಂದರೆಯನ್ನು ಕಂಡು ಹಿಡಿದು ಅವನೊಡನೆ ಸಹಾನುಭೂತಿಯಿಂದ ವರ್ತಿಸಿ ಸರಿಯಾದ ಹಾದಿಯನ್ನು ತೋರಿಸಬೇಕು. ಮಗುವಿನ ಅಭಿರುಚಿ, ಅನುಭವ, ಮನೋವೃತ್ತಿ, ವಯ, ಶಕ್ತಿ ಮೊದಲಾದುವುಗಳನ್ನು ನೋಡಿ ಕಲಿ ಯುವ ವಿಷಯವನ್ನು ಮತ್ತು ಕಲಿಸುವ ಪದ್ಧತಿಯನ್ನು ಹೊಂದಿಸಿಕೊಳ್ಳ ಬೇಕು. ಮಗುವನ್ನು ಬಯ್ಯುವದಕ್ಕಿಂತ ಹೆಚ್ಚಾಗಿ ಪ್ರೋತ್ಸಾಹಿಸಬೇಕು. ಹೀಗೆ ಮಾಡಬೇಡ ಅನ್ನುವದಕಿಂತ ಹೀಗೆ ಮಾಡು ಅನ್ನುವದು ಹೆಚ್ಚಾಗಬೇಕು. ಮತ್ತು ಸೋಲಿನ ಪ್ರಸಂಗಗಳಿಗಿಂತ ಗೆಲುವಿನ ಪ್ರಸಂಗಗಳನ್ನು ಹೆಚ್ಚಾಗಿ ಆಡಿ ತೋರಿಸಬೇಕು. ಶಿಕ್ಷಕನು ವಿದ್ಯಾರ್ಥಿಗೆ ಅವನ ಪ್ರಗತಿಯ ಅರಿವನ್ನು ಆಗಾಗ ಮಾಡಿಕೊಡಬೇಕು. ಸುಧಾರಣೆಯ ಅರಿವು ಕಲಿಯುವಿಕೆಗೆ ಒಂದು ಪ್ರೇರಣೆಯಾಗುವದು. ಗೆಲುವಿನಂತೆ ಯಾವುದೂ ಗೆದೆಯುವದಿಲ್ಲ ಎಂಬ ಇಂಗ್ಲೀಷ ಗಾದೆಯ ಮಾತಿನ ಅರ್ಥವಾದರೂ ಇದೇ.

ಸೋಲು ಅಥವಾ ಗೆಲುವು ಎಂಬುದು ವೈಯಕ್ತಿಕ ವಿಷಯು. ಅದು ವ್ಯಕ್ತಿಯ ಪ್ರತ್ಯಕ್ಷ ಕೆಲಸವನ್ನು ಅವಲಂಬಿಸಿರದೆ ಅವನ ಗುರಿಯನ್ನು ಅಥವಾ ಆಕಾಂಕ್ಷೆಯನ್ನು ಅವಲಂಬಿಸಿರುತ್ತದೆ. ಮಾಡಬೇಕೆಂಬ ಕೆಲಸವು ಶಕ್ತಿ ಮೀರಿದ್ದು ಇದ್ದರೆ ಮಗುವು ಸೋಲನ್ನು ಅನುಭವಿಸುತ್ತಾನೆ. ಮತ್ತು ಅತಿ ಹಗುರು ಇದ್ದರೆ ಗೆದ್ದ ಅಭಿಮಾನವು ಇರುವದಿಲ್ಲ. ಶಿಕ್ಷಕರು ಮತ್ತು ತಂದೆ ತಾಯಿಗಳು ಮಕ್ಕಳ ಯೋಗ್ಯತೆಯನ್ನು ಅಳೆಯದೆ ಅವರ ಮುಂದೆ ಅವರ ಸಾಮರ್ಥ್ಯಕ್ಕೆ ಅತಿ ಕಡಿಮೆಯಾದ ಅಥವಾ ಅತಿ ಹೆಚ್ಚಾದ ಧ್ಯೇಯವನ್ನು ಇಡುವದರಿಂದ ಬೇಡಾದ ಪರಿಣಾಮಗಳು ಉಂಟಾಗುವವು. ಎಷ್ಟೋ ವಿದ್ಯಾರ್ಥಿಗಳಿಗೆ ತಾವು ಸಾಲೆ ಕಾಲೇಜುಗಳಿಗೆ ಏಕೆ ಹೋಗುತ್ತಾರೆ ಎಂಬುದು ಗೊತ್ತಿರುವದಿಲ್ಲ. ಸಾಲೆಯ ಅಭ್ಯಾಸಕ್ಕೂ ಮತ್ತು ಮುಂದೆ ಕೈಕೊಳ್ಳಬೇಕಾದ ಉದ್ಯೋಗಕ್ಕೂ ಸಂಬಂಧವಿಲ್ಲದ್ದರಿಂದ ಅವರು ಜೀವನ ದಲ್ಲಿ ನಿರಾಶೆ ಹೊಂದುತ್ತಾರೆ. ಪ್ರತಿಯೊಂದು ಹಾಯಸ್ಕೂಲಿನಲ್ಲಿ ಒಂದು ಮಾರ್ಗದರ್ಶಕ ಸಂಘವು ಅಥವಾ ಕಚೇರಿಯು ( Guidance Bureau ) ಇರುವದು ಒಳ್ಳೆಯದು. ಆ ಆ ವಿದ್ಯಾರ್ಥಿಯ ಅಭಿರುಚಿ, ಮನೋವೃತ್ತಿ, ಬೇಡಿಕೆ, ವಯೋಮಾನ ಮತ್ತು ವಿಷಯ ಸಂಗ್ರಹವನ್ನು ನೋಡಿ ಅವರಿಗೆ ತಕ್ಕಂತೆ ಉದ್ಯೋಗ ಶಿಕ್ಷಣವನ್ನು ಸೂಚಿಸುವದು ಈ ಕಚೇರಿಯ ಕೆಲಸವಾಗ ಬೇಕು, ಹೀಗೆ ಮಾಡುವುದರಿಂದ ಶಿಕ್ಷಣವನ್ನು ಜೀವನಕ್ಕೆ ಸಂಬಂಧಿಸಿದಂತೆ ಆಗುವದು.

## ಮೆಚ್ಚುಗೆ ಮತ್ತು ದಂಡ

ಮಕ್ಕಳ ಕೃತಿಗಳು ಒಳ್ಳೆಯವು ಇದ್ದರೆ ಅವುಗಳನ್ನು ಹೊಗಳುವದು ಅಥವಾ ಮೆಚ್ಚುಗೆ ಕೊಡುವದು ಮತ್ತು ಬೇಡಾದವು ಇದ್ದರೆ ಅವುಗಳನ್ನು ತೆಗಳುವದು ಅಥವಾ ದಂಡಿಸುವದು ಮನೆಯಲ್ಲಿಯೂ ಮತ್ತು ಸಾಲೆಯಲ್ಲಿಯೂ ನಡೆಯುತ್ತದೆ. ಒಂದು ಪ್ರಯೋಗದಲ್ಲಿ ಸಾಲೆಯ ಹುಡುಗರ ನಾಲ್ಕು ಗುಂಪುಗಳನ್ನು ಮಾಡಿ ಅವರಿಗೆ ಬೇರೀಜು ಮಾಡುವ ಲೆಕ್ಕಗಳನ್ನು ಕೊಟ್ಟಿದ್ದರು. ಶಿಕ್ಷಕನು ಉದ್ದೇಶ ಪೂರ್ವಕವಾಗಿ ಅವರವರು ಮಾಡಿದ ಕೆಲಸವನ್ನು ನೋಡದೇ ಮೊದಲನೇ ಗುಂಪನ್ನು ಪ್ರೋತ್ಸಾಹಿಸುತ್ತಿದ್ದನು.

ಮತ್ತು ಎರಡನೇ ಗುಂಪನ್ನು ಜರಿಯುತ್ತಿದ್ದನು. ಮೂರನೇ ಗುಂಪಿನ ಹುಡುಗರು ಈ ಹೊಗಳಿಕೆ ತೆಗಳಿಕೆಗಳನ್ನು ಮಾತ್ರ ಬೇರೆಯವರ ಕಡೆಯಿಂದ ಕೇಳುತ್ತಿದ್ದರು. ನಾಲ್ಕನೇ ಗುಂಪಿನವರಿಗೆ ಈ ಯಾವ ಸಂಬಂಧವೂ ಇದ್ದಿರಲಿಲ್ಲ. ಈ ನಾಲ್ಕೂ ಗುಂಪಿನವರು ಅನುಕ್ರಮವಾಗಿ ಸುಧಾರಣೆಯನ್ನು ತೋರಿಸಿದರು. ಇದರಿಂದ ಕಂಡುಬರುವದೇನಂದರೆ ಅಲಕ್ಷಗಿಂತ ತೆಗಳಿಕೆಯೂ, ತೆಗಳಿಕೆಗಿಂತ ಹೊಗಳಿಕೆಯೂ ಕಲಿಯುವವನ ಮೇಲೆ ಒಳ್ಳೇ ಪರಿಣಾಮವನ್ನು ಉಂಟು ಮಾಡುತ್ತದೆ.

ಮಕ್ಕಳು ತಮ್ಮ ಕೆಲಸದಲ್ಲಿ ತೋರಿಸುವ ಸುಧಾರಣೆಯನ್ನು ಹೊಗಳಲು ಹಿಂದು ಮುಂದೆ ನೋಡಬಾರದು. ಪ್ರೋತ್ಸಾಹವು ಪ್ರಯತ್ನಕ್ಕೆ ಪುಟವನ್ನು ಕೊಡುತ್ತದೆ. ಮಕ್ಕಳು ಒಳ್ಳೇ ಕೆಲಸ ಮಾಡಿದಾಗೆ "ಸರಿ", "ಚನ್ನಾಗಿದೆ" ಮುಂತಾಗಿ ಬಾಯಿಂದ ನುಡಿದರೆ ಸಾಕು ಅದು ಹೆಚ್ಚಾದ ಪರಿಣಾಮವನ್ನು ಉಂಟು ಮಾಡುತ್ತದೆ. ಮೆಚ್ಚುಗೆಗೆ ಎಂದು ಕೆಲವರು ದುಡ್ಡು, ಬೆಳ್ಳಿಯ ಪದಕ, ಅಥವಾ ಸ್ಕಾಲರಸಿಪ್ ಕೊಡುವದುಂಟು. ಅಭ್ಯಾಸವು ಮುಂದುವರಿಯಲೆಂದು ಸ್ಕಾಲರಸಿಪ್ ಕೊಡುವದು ಸರಿಯೇ. ಆದರೆ ರೊಕ್ಕ ಅಥವಾ ಬೆಳ್ಳಿ ಬಂಗಾರದ ಪದಕ ಕೊಡುವದನ್ನು ಈಗಿನ ಮನೋವಿಜ್ಞಾನಿಗಳು ಅಲ್ಲಗಳೆಯುತ್ತಾರೆ. ವಿಷಯದಲ್ಲಿ ನಿಜವಾದ ಅಭಿರುಚಿ, ಆಸಕ್ತಿ, ಅಥವಾ ಪ್ರೇಮವನ್ನು ಹುಟ್ಟಿಸುವದು ಮೊದಲನೇ ಕೆಲಸ ಕೇವಲ ಮೆಚ್ಚುಗೆಯನ್ನು ಪಡೆಯುವದಕ್ಕಾಗಿ ಕೆಲಸ ಮಾಡುವದು ಕೃತ್ರಿಮವೆನಿಸುತ್ತದೆ. ಆದರೆ ತತ್ವವನ್ನು ಹುಡುಕುವದಕ್ಕಾಗಿ ಕೆಲಸಮಾಡುವದು ನಿಜವಾದ ಅಭ್ಯಾಸ. ಜನರ ಮೆಚ್ಚುಗೆಗಿಂತ ತನ್ನ ಪ್ರಗತಿಯನ್ನು ನೋಡಿ ಆನಂದ ಪಡುವದು ನಿಜವಾದ ಬಹುಮಾನ. ಯಾವ ಕೃತಿಗಳು ಗುರಿಯ ಸಮೀಪಕ್ಕೆ ಒಯ್ಯುತ್ತವೆಯೋ ಅಥವಾ ಯಾವ ಕೃತಿಗಳು ಬೇಡಿಕೆಗಳನ್ನು ತೃಪ್ತಿಪಡಿಸುತ್ತವೆಯೋ ಅವುಗಳನ್ನು ಮಕ್ಕಳು ಸ್ವಾಭಾವಿಕವಾಗಿ ಕಲಿಯುತ್ತಾರೆ. ಆದ್ದರಿಂದ ಶಿಕ್ಷಕನು ಆ ದೃಷ್ಟಿಯನ್ನು ಯಾವಾಗಲೂ ಇಟ್ಟುಕೊಂಡಿರಬೇಕು. ಕೃತ್ರಿಮ ಮತ್ತು ಬಾಹ್ಯ ಪ್ರೇರಣೆಗಳಿಗೆ ಮಹತ್ವ ಕೊಡಕೂಡದು. ಇನ್ನು ದಂಡದಿಂದ ಬೇಡಾದ ಪರಿಣಾಮವು ಆಗುವದುಂಟು ಮತ್ತು ಬೇಕಾದ ಪರಿಣಾಮವೂ ಆಗುವದುಂಟು. ತಪ್ಪುಗಳನ್ನು ಅಥವಾ ಬೇಡಾದ ಪ್ರತಿಕ್ರಿಯೆಗಳನ್ನು

ತೆಗೆದು ಹಾಕಲಿಕ್ಕೆ ಮತ್ತು ವೇಗವನ್ನು ಅಥವಾ ಸರಿಯಾದ ಪ್ರತಿಕ್ರಿಯೆಗಳನ್ನು ಪ್ರೋತ್ಸಾಹಿಸಲಿಕ್ಕೆ ದಂಡವು ಸಹಾಯಕವಾಗುವದು. ಯಾವ ಕೃತಿಗೆ ಬಹುಮಾನ ದೊರಕುವದು ಮತ್ತು ಯಾವ ಕೃತಿಗೆ ದಂಡ ಬೀಳುವದು ಎಂಬುದು ಎಲ್ಲರಿಗೂ ಗೊತ್ತು ಇರತಕ್ಕದ್ದು. ದಂಡದ ಕಾರಣವು ತಿಳಿಯದಿದ್ದರೆ ದ್ವೇಷ ಮತ್ತು ವಿರೋಧವು ಹುಟ್ಟುವದು. ದಂಡವು ಅಪರಾಧಿಯ ವಯ ಮತ್ತು ಅಪರಾಧದ ಪ್ರಮಾಣಕ್ಕೆ ಒಪ್ಪುವಂತೆ ಇರತಕ್ಕದ್ದು. ಅಳತೆ ಮೀರಿದ ದಂಡದಿಂದ ಕೆಡಕು ಪರಿಣಾಮವು ಉಂಟಾಗುವದು. ಅಸಾಮಾಜಿಕ ಅಥವಾ ಅನೈತಿಕ ವರ್ತನಕ್ಕೆ ದಂಡವೇ ನಿಜವಾದ ಉಪಾಯವಲ್ಲ. ವರ್ತನಕ್ಕೆ ಪರಿಸ್ಥಿತಿಯೇ ಬಲವಾದ ಕಾರಣವಾದದ್ದರಿಂದ ಮಕ್ಕಳನ್ನು ಕೆಟ್ಟ ಪರಿಸ್ಥಿತಿಯಿಂದ ತೆಗೆದು ಒಳ್ಳೇ ಪರಿಸ್ಥಿತಿಯಲ್ಲಿ ಇಡುವದು ಪರಿಣಾಮಕಾರಕವಾಗುವದು.

## ನೆನಪು ಮತ್ತು ಮರೆವು

ಕಲಿಯುವದು ಮತ್ತು ಮರೆಯುವದು ಕೂಡಿಯೇ ಸಾಗುತ್ತದೆ. ಕಲಿತದ್ದು ಏಕೆ ಮರೆಯುತ್ತದೆ ? ಯಾವುದು ಮರೆಯುತ್ತದೆ ? ಯಾವುದು ನೆನಪಿನಲ್ಲಿ ನಿಲ್ಲುತ್ತದೆ ? ಎಂಬ ಪ್ರಶ್ನೆಗಳಿಗೆ ನಾವು ಉತ್ತರವನ್ನು ಹುಡುಕಬೇಕಾಗಿದೆ.

## ಮರೆಯುವದಕ್ಕೆ ಕಾರಣಗಳು

ಯಾವುದು ಮರೆಯುತ್ತದೆ, ಹೇಗೆ ಮರೆಯುತ್ತದೆ, ಮತ್ತು ಏಕೆ ಮರೆಯುತ್ತದೆ ಎಂಬುದರ ಬಗ್ಗೆ ಎಷ್ಟೋ ಪ್ರಯೋಗಗಳನ್ನು ಮಾಡಿ ಮನೋವಿಜ್ಞಾನಿಗಳು ಕೆಲವು ಸಿದ್ಧಾಂತಗಳನ್ನು ಕಂಡು ಹಿಡಿದಿದ್ದಾರೆ. ಅರವತ್ತು ಶಬ್ದಗಳ ಒಂದು ಕವಿತೆಯನ್ನು ಆರೇಳು ಬಾರೆ ಓದಿ ಚನ್ನಾಗಿ ನೆನಪಿನಲ್ಲಿ ಇಡಬಹುದು. ಏಕೆಂದರೆ ಅದಕ್ಕೆ ಅರ್ಥ ಉಂಟು; ಆದರೆ ಅರ್ಥವಿಲ್ಲದ ಅರವತ್ತು ಅಕ್ಷರಗಳನ್ನು ನೂರಾರು ಬಾರೆ ಓದಿದರೂ ನೆನಪಿನಲ್ಲಿ ನಿಲ್ಲುವದಿಲ್ಲ ಎಂಬುದನ್ನು ಎಬಿನ್‌ಘಾಸ್‌ನು ಪ್ರಯೋಗದಿಂದ ಸಿದ್ಧ ಮಾಡಿದ್ದಾನೆ. ಮತ್ತೊಂದು ಪ್ರಯೋಗದಲ್ಲಿ ಒಂದು ವರ್ಗದ ಹುಡುಗರು ಇತಿಹಾಸದ ವಿಷಯವನ್ನು ನಾಲ್ಕು ತಿಂಗಳಲ್ಲಿ ೧/೫, ಎಂಟು ತಿಂಗಳಲ್ಲಿ ೧/೨, ಹನ್ನೆರಡು ತಿಂಗಳಲ್ಲಿ ೧/೪, ಮತ್ತು ಹದಿನಾರು ತಿಂಗಳಲ್ಲಿ ೩/೪ ಮರೆತದ್ದು ಕಂಡು

ಬಂದಿತು. ಸಾಯನ್ಸ ವಿಷಯದಲ್ಲಿ ಮೂರು ಬಗೆಯ ಅಭ್ಯಾಸದ ರೀತಿಯನ್ನು ಕೈಕೊಳ್ಳಲಾಗಿತ್ತು : (i) ಕೇವಲ ಸಂಗತಿಗಳನ್ನಷ್ಟೇ ಹೇಳುವದು (ii) ವಿವರಣೆಯನ್ನು ಕೊಡುವದು ಮತ್ತು (iii) ಸಾಮಾನ್ಯ ತತ್ವಗಳನ್ನು ಹೊರಡಿಸುವದು. ಬೇಸಿಗೆಯ ಸೂಟಿಯು ಆದ ಮೇಲೆ ಪರೀಕ್ಷಿಸಿದಾಗ ಮೊದಲನೇ ವಿಷಯದಲ್ಲಿ ನೂರರೊಳಗೆ ಹದಿನೇಳು ಅಂಶ ಮತ್ತು ಉಳಿದ ಎರಡು ವಿಷಯಗಳಲ್ಲಿ ನೂರರೊಳಗೆ ಒಂಬತ್ತು ಅಂಶ ಮರೆಯಲ್ಪಟ್ಟಿದ್ದವು. ಈ ಪ್ರಯೋಗಗಳಿಂದ ಹೊರಡುವ ಸಿದ್ಧಾಂತಗಳೇನಂದರೆ— ಅಭ್ಯಾಸ ಮಾಡಿದ ವಿಷಯವು ಕಲಿಯುವದು ಮುಗಿದ ಕೂಡಲೇ ಬಹಳ ಮರೆಯುತ್ತದೆ. ಮತ್ತು ಆ ಮೇಲೆ ಕಾಲಾನುಕ್ರಮದಿಂದ ಕಡಿಮೆ ಪ್ರಮಾಣದಲ್ಲಿ ಮರೆಯುತ್ತ ಹೋಗುತ್ತದೆ. ಆದರೆ ಕೆಲವೊಂದು ಅಂಶವು ಅನುಭವದ ಸಾರವಾಗಿ ಬಹಳ ದಿವಸಗಳ ವರೆಗೆ ಅಥವಾ ಜೀವಮಾನದವರೆಗೆ ನೆನಪಿನಲ್ಲಿ ನಿಲ್ಲುತ್ತದೆ. ಎರಡನೆಯದಾಗಿ ವಿಷಯವು ಅರ್ಥ ಉಳ್ಳದ್ದು ಆಗಿದ್ದರೆ ಕಲಿಯಲಿಕ್ಕೂ ಮತ್ತು ನೆನಪಿನಲ್ಲಿ ಇಡಲಿಕ್ಕೂ ಸುಲಭವಾಗುತ್ತದೆ. ಅರ್ಥವುಳ್ಳ ವಿಷಯದ ಬಹಳ ಭಾಗವು ಬಹಳ ದಿವಸ ಮನಸ್ಸಿನಲ್ಲಿ ನಿಲ್ಲುವದು. ಅಂದರೆ ತಿಳಿದುಕೊಂಡು ಕಲಿತ ವಿಷಯವು ಬೇಗ ಮರೆಯುವದಿಲ್ಲ. ಕಲಿತ ಪಾಠವನ್ನು ಶಬ್ದಶಃ ಬಾಯಿಪಾಠ ಮಾಡುವದು ಅಥವಾ ನೆನಪಿನಲ್ಲಿ ಇಡುವದು ಬಹಳ ಕಠಿಣ. ಆದರೆ ಅದರಿಂದ ಹೊರಡುವ ತಾತ್ಪರ್ಯವನ್ನು ಅಥವಾ ಸಾರಾಂಶವನ್ನು ನೆನಪಿನಲ್ಲಿ ಇಡುವದು ಸುಲಭ. ಮಕ್ಕಳು ತಾವು ಕೇಳಿದ ಕಥೆಗಳನು ಮರೆಯುವದು ಕಡಿಮೆ. ಕಾರಣವೇನಂದರೆ ಕಥೆಯಲ್ಲಿಯ ಸನ್ನಿವೇಶಗಳು ಒಂದಕ್ಕೊಂದು ಹೊಂದಿಕೊಂಡಿರುವುದರಿಂದ ಅದು ಅರ್ಥವುಳ್ಳದ್ದು ಆಗುತ್ತದೆ. ಅಂದ ಮೇಲೆ ವಿಷಯಗಳಲ್ಲಿ ಹೊಂದಿಕೆ ಅಥವಾ ಸಂವಿಧಾನ ಅಥವಾ ಸಂಘಟನೆ ತಂದು ಕೊಡುವದು ಮಹತ್ವದ್ದು. ಒಳ್ಳೆಯ ಸ್ಮೃತಿಯ ರಹಸ್ಯವನ್ನು ಕುರಿತು ವಿಲಿಯಮ್ ಜೇಮ್ಸ ಎಂಬ ಮನೋವಿಜ್ಞಾನಿಯು ಹೇಳುವದೇನಂದರೆ— " ನೆನಪಿನಲ್ಲಿ ಇಟ್ಟುಕೊಳ್ಳಬೇಕಾದುದನ್ನು ನಾವು ವಿವಿಧ ರೀತಿಯಾಗಿ ಸಂಬಂಧಿಸಬೇಕು. ತನ್ನ ಅನುಭವಗಳನ್ನು ( ಅಂದರೆ ಕಲಿತ ವಿಷಯವನ್ನು ) ಹೆಚ್ಚು ಹೆಚ್ಚು ವಿಚಾರಿಸುವವನ ನೆನಪಿನ ಶಕ್ತಿಯು ಬಹಳ ಉತ್ತಮವಾಗಿರುತ್ತದೆ. " ನಮಗೆ ಅಭಿರುಚಿಯುಳ್ಳ ವಿಷಯವನ್ನು ನಾವು

ಅನೇಕ ವಿಧದಿಂದ ವಿಚಾರಿಸುತ್ತೇವೆ, ಮತ್ತು ಅನೇಕ ಸಂಗತಿಗಳಿಗೆ ಸಂಬಂಧಿಸುತ್ತೇವೆ. ಹೀಗಾಗುವುದರಿಂದ ಆ ವಿಷಯವು ನಮ್ಮ ಮನಸ್ಸಿನಲ್ಲಿ ಸುಸಂಬದ್ಧವಾಗುತ್ತದೆ. ಈ ರೀತಿಯಾಗಿ ಅದನ್ನು ನೆನಪಿನಲ್ಲಿ ಇಡುವದು ಸುಲಭವಾಗುತ್ತದೆ.

ಶಿಕ್ಷಕನು ಮಕ್ಕಳಿಗೆ ವಿಷಯವು ತಿಳಿಯುವಂತೆ ಕಲಿಸಬೇಕು. ಅದರಲ್ಲಿ ಅವರ ಅಭಿರುಚಿಯು ಹುಟ್ಟುವಂತೆ ಮಾಡಬೇಕು. ವಿಷಯದ ಬಗೆಗೆ ಆಗಬೇಕಾದ ಜ್ಞಾನವು ಸುಸಂಬದ್ಧವಾಗುವಂತೆ ಪ್ರಯತ್ನಿಸಬೇಕು. ವಿಷಯದಲ್ಲಿ ಹೊಂದಿಕೆಯು ಅಥವಾ ಸುಸಂಬದ್ಧತೆಯು ಎಷ್ಟರ ಮಟ್ಟಿಗೆ ಇರುವದಿಲ್ಲವೋ ಅಷ್ಟರ ಮಟ್ಟಿಗೆ ಅದನ್ನು ಮರೆಯಲಿಕ್ಕೆ ಅನುಕೂಲವಾದ ಸನ್ನಿವೇಶವನ್ನು ಉಂಟುಮಾಡಿದಂತೆ ಆಗುವದು. ಅಂಕಿ ಮಗ್ಗಿಗಳನ್ನು, ವ್ಯಾಕರಣ ಮತ್ತು ಗಣಿತದ ಸೂತ್ರಗಳನ್ನು ಮಕ್ಕಳು ಬಾಯಿಪಾಠ ಮಾಡಬಹುದು. ಆದರೆ ಅವುಗಳನ್ನು ಕೇವಲ ಕುರುಡು ಪಾಠಮಾಡುವದಕ್ಕಿಂತ ತಿಳಿದುಕೊಂಡ ಮೇಲೆ ಬಾಯಿಪಾಠ ಮಾಡುವದು ಒಳ್ಳೆಯದು.

ಶಾಲೆಯಲ್ಲಿ ಮಕ್ಕಳು ಬುದ್ಧಿಯ ವಿಷಯಗಳನ್ನು ಮತ್ತು ಕಲೆಯ ಕುಶಲತೆಗಳನ್ನು ಕಲಿಯುತ್ತಾರೆ. ಇವುಗಳಲ್ಲಿ ಕಲೆಯ ನಿಪುಣತೆಗಿಂತ ಜ್ಞಾನವು ಬೇಗ ಮರೆಯುತ್ತದೆ. ಒಮ್ಮೆ ಈಸು ಕಲಿತು ಬಿಟ್ಟವನು ಇಪ್ಪತ್ತು ವರುಷಗಳ ಮೇಲೆ ಪ್ರಸಂಗ ಬಂದರೆ ಈಸ ಬಲ್ಲನು. ಆದರೆ ಶಾಲೆಯಲ್ಲಿ ಕಲಿತ ಭೂಮಿತಿಯ ಪ್ರಮೇಯವನ್ನು ಇಪ್ಪತ್ತು ವರುಷಗಳ ಮೇಲೆ ಹೇಳುವದು ಬಹಳ ಕಠಿಣವಾಗುತ್ತದೆ ಅದರಂತೆ ಟಾಯಪಿಂಗ ಕಲಿತು ಎರಡು ವರುಷ ಬಿಟ್ಟಿದ್ದರೂ ಎಂಟು ಹತ್ತು ದಿವಸಗಳಲ್ಲಿ ಮೊದಲಿನಷ್ಟೇ ವೇಗವನ್ನು ಸಂಪಾದಿಸಬಹುದು. ಆದರೆ ಅಭ್ಯಾಸ ಪತ್ರಿಕೆಯಲ್ಲಿಯ ಬುದ್ಧಿಯ ವಿಷಯಗಳನ್ನು ಅಷ್ಟು ಬೇಗ ಮತ್ತೆ ಕಲಿಯುವದು ಸಾಧ್ಯವಾಗಲಾರದು. ಸಾಮಾನ್ಯವಾಗಿ ಕಹಿ ಅನುಭವಗಳನ್ನು ನಾವು ಬುದ್ಧಿಪೂರ್ವಕವಾಗಿ ಹತ್ತಿಕ್ಕಲು ಅಥವಾ ಅಲಕ್ಷಿಸಲು ಪ್ರಯತ್ನಿಸುತ್ತೇವೆ ಆದ್ದರಿಂದ ಅವುಗಳನ್ನು ಬೇಗ ಮರೆಯುತ್ತೇವೆ ಆದರೆ ಸಿಹಿ ಅನುಭವಗಳನ್ನು ನಾವು ಮೇಲಿಂದ ಮೇಲೆ ನೆನಪು ಮಾಡಿಕೊಳ್ಳುವುದರಿಂದ ಅವು ಬಹಳ ದಿವಸ ನೆನಪಿನಲ್ಲಿ

ನಿಲ್ಲುತ್ತವೆ. ಕೆಲವು ಕಹಿ ಅನುಭವಗಳು ಜೀವನದಲ್ಲಿ ಮಹತ್ವದ ಪಾಠಗಳನ್ನು ಕಲಿಸಬಹುದು. ಅಂಥವು ಕಡೆತನಕ ನೆನಪಿನಲ್ಲಿ ನಿಲ್ಲುತ್ತವೆ. ಒಟ್ಟಿನಲ್ಲಿ, ನಮಗೆ ಅಭಿರುಚಿಯುಳ್ಳ ಅಥವಾ ಮಹತ್ವವೆಂದು ಎನಿಸುವ ಅನುಭವಗಳನ್ನು ಬಹಳ ದಿವಸಗಳ ವರೆಗೆ ನಾವು ನೆನಪಿನಲ್ಲಿ ಇಡುತ್ತೇವೆ.

ಮರೆಯುವದರ ಕಾರಣಗಳ ಬಗ್ಗೆ ಇತ್ತೀಚೆಗೆ ಕೆಲವು ಹೊಸ ಸಂಗತಿಗಳನ್ನು ಕಂಡು ಹಿಡಿದಿದ್ದಾರೆ. **ಪ್ರತಿಬಂಧಕ ಕ್ರಿಯೆ, ನಿರುಪಯುಕ್ತತೆ** ಮತ್ತು **ಕಾಲವ್ಯಯ** ಇವು ಮರವೆಯನ್ನು ತರುತ್ತವೆ. ಈ ಮೂರು ಕಾರಣಗಳಲ್ಲಿ ಪ್ರತಿಬಂಧಕಕ್ರಿಯೆಯು (Retroactive Inhibition) ಹೆಚ್ಚು ಪರಿಣಾಮಕಾರಕವೆಂದು ಈಗಿನ ಮನೋವಿಜ್ಞಾನಿಗಳು ಪ್ರಯೋಗದಿಂದ ಕಂಡು ಹಿಡಿದಿದ್ದಾರೆ. ಮೊದಲು ಕಲಿತ ವಿಷಯಕ್ಕೆ ಹೊಸದಾಗಿ ಕಲಿತ ವಿಷಯವು ಅಡ್ಡಿಯಾಗಿದ್ದರೆ ಈ ಹೊಸ ಅಭ್ಯಾಸವು ಪ್ರತಿಬಂಧಕ ಕ್ರಿಯೆ ಆಗುತ್ತದೆ. ೫ × ೭ ಅಂದರೆ ೩೫ ಎಂದು ಸೋಮವಾರ ಕಲಿತದ್ದನ್ನು ಮಗುವು ಶುಕ್ರವಾರ ಮರೆತರೆ ನಡುವೆ ಇಂಥ ಇತರ ಮಗ್ಗಿಗಳನ್ನು ಕಲಿತದ್ದು ಕಾರಣವಾಗುತ್ತದೆ. ಕಲಿಯುವ ಎರಡು ವಿಷಯಗಳಲ್ಲಿ ಹೋಲಿಕೆಯು ಹೆಚ್ಚು ಇದ್ದಹಾಗೆ ಮನಸ್ಸಿನಲ್ಲಿ ಗೊಂದಲ ಉಂಟಾಗುತ್ತದೆ. ಮಕ್ಕಳಿಗೆ ಆರಂಭದ ಓದು ಕಲಿಸುವಾಗ ಕೆಲವು ಪ್ರಾಥಮಿಕ ಶಿಕ್ಷಕರು 'ರ ಠ ಈ ಕ' ಮುಂತಾಗಿ ಹೋಲಿಕೆಯ ಅಕ್ಷರಗಳ ಗುಂಪುಗಳನ್ನು ಮಾಡಿ ಕಲಿಸುವದು ಕಂಡುಬರುತ್ತದೆ. ಆದರೆ ಈ ಪದ್ಧತಿಯಿಂದ ಕಲಿಯುವದು ಮಕ್ಕಳಿಗೆ ಬಹಳ ಕಠಿಣವಾಗುತ್ತದೆ. ಏಕೆಂದರೆ ಈ ಅಕ್ಷರಗಳ ಆಕಾರದಲ್ಲಿ ಒಂದು ಬಗೆಯ ಹೋಲಿಕೆ ಇರುತ್ತದೆ. ವರ್ಣ ಮಾಲೆಯಲ್ಲಿ ಹೋಲಿಕೆಯ ದೃಷ್ಟಿಯಿಂದಲೇ ಈ ತೆರನಾದ ಅಕ್ಷರಗಳ ಬೇರೆ ಬೇರೆ ಗುಂಪುಗಳನ್ನು ಮಾಡಿದ್ದಾರೆ. ಮರೆವನ್ನು ಕಡಿಮೆ ಮಾಡಬೇಕಾದರೆ ಹೋಲಿಕೆಗಿಂತ ವ್ಯತ್ಯಾಸವನ್ನು ಒತ್ತಿಹೇಳಬೇಕು. ಒಂದು ವಿಷಯವನ್ನು ಕಲಿಯುವಾಗ ಅದನ್ನು ಬಿಟ್ಟು ನಡುವೆ ಮತ್ತೊಂದು ವಿಷಯವನ್ನು ಕಲಿಯುವದೂ ಪ್ರತಿಬಂಧಕ ಕ್ರಿಯೆ ಎನಿಸುತ್ತದೆ. ಇತಿಹಾಸದ ಅಭ್ಯಾಸವನ್ನು ಮುಗಿಸಿದ ಮೇಲೆ ಕವಿತೆಯ ಅಭ್ಯಾಸವನ್ನು ಮಾಡಿ ಆ ಮೇಲೆ ಇತಿಹಾಸದ ಪರೀಕ್ಷೆಗೆ ಕುಳಿತರೆ ಆ ಪರೀಕ್ಷೆಯು ಚನ್ನಾಗಿ ಆಗುವದಿಲ್ಲ. ವ್ಯವಹಾರದ ದೃಷ್ಟಿಯಿಂದ ನೋಡಿದರೆ ಅಭ್ಯಾಸ ಪತ್ರಿಕೆಯಲ್ಲಿಯ ಅನೇಕ

ವಿಷಯಗಳನ್ನು ಮಗುವು ಕಲಿಯಬೇಕಾಗುತ್ತದೆ. ಆದರೆ ಪ್ರತಿಯೊಂದನ್ನು ಚನ್ನಾಗಿ ಕಲಿಯುವದು ಮತ್ತು ಅವಶ್ಯಬಿದ್ದಾಗ ಅದನ್ನು ಪುನರಾವಲೋಕನ (Review) ಮಾಡುವದು ಮುಖ್ಯ ಸಂಗತಿ.

ಕಲಿತ ವಿಷಯವನ್ನು ಪದೇ ಪದೇ ಉಪಯೋಗ ಮಾಡದೇ ಬಿಟ್ಟರೆ ಅದು ಮರೆತು ಹೋಗುತ್ತದೆ. ಇದು ಎರಡನೇ ಕಾರಣ. ಜೀವನದ ಸನ್ನಿವೇಶಗಳಲ್ಲಿಯೇ ಆಗಲಿ ಅಥವಾ ಶಾಲೆಯ ಸನ್ನಿವೇಶಗಳಲ್ಲಿಯೇ ಆಗಲಿ ಯಾವ ವಿಷಯ ಹೆಚ್ಚು ಉಪಯೋಗ ಬೀಳುವದೋ ಆ ವಿಷಯವು ಹೆಚ್ಚು ದಿವಸ ನೆನಪಿನಲ್ಲಿ ನಿಲ್ಲುವದು. ಉಪಯೋಗ ಮಾಡುವ ಸನ್ನಿವೇಶಗಳು ಇರದಿದ್ದರೆ ಅಥವಾ ಕಡಿಮೆಯಾದರೆ ಕಲಿತದ್ದು ಮರೆಯುತ್ತ ಹೋಗುತ್ತದೆ. ಮರೆಯುವುದರ ಮೂರನೆಯ ಕಾರಣವೇನಂದರೆ ಕಾಲವ್ಯಯ. ದಿವಸಗಳು ಕಳೆದ ಹಾಗೆ ಕಲಿತ ವಿಷಯವು ಮರೆಯುತ್ತ ಹೋಗುತ್ತದೆ ಎಂಬುದು ಎಲ್ಲರ ಅನುಭವದಲ್ಲಿ ಬಂದ ಮಾತಾಗಿದೆ. ಮೇಲೆ ಉದಾಹರಿಸಿದಂತೆ ಇದು ಪ್ರಯೋಗದಿಂದ ಸಿದ್ಧವಾಗಿದೆ.

## ನೆನಪಿನ ಶಕ್ತಿಯನ್ನು ಬಲಪಡಿಸುವದು

ಮನಸ್ಸಿನಲ್ಲಿ ಬೇರೆ ಬೇರೆ ಶಕ್ತಿಗಳು ಉಂಟು ಮತ್ತು ಅವುಗಳಲ್ಲಿ ನೆನಪಿನ ಶಕ್ತಿಯು ಒಂದು ಎಂಬುದಾಗಿ ಅರ್ಥ ಮಾಡಕೂಡದು. ಮನಸ್ಸು ಅಖಂಡವಾದ ಒಂದು ವಸ್ತು. ಯಾವ ವಿಷಯಗಳು ಬಹಳ ದಿವಸಗಳವರೆಗೆ ಮನಸ್ಸಿನಲ್ಲಿ ಹಿಡಿಯುತ್ತವೆ ಎಂಬುದರ ಕಲ್ಪನೆಯು ಮೇಲೆ ಕೊಟ್ಟ ವಿವರಣೆ ಯಿಂದ ಓದುಗರಿಗೆ ಗೊತ್ತಾಗಿರಬಹುದು. ಅದನ್ನೇ ಇಲ್ಲಿ ಸಾರಾಂಶ ರೂಪದಿಂದ ಕೊಡಲಾಗಿದೆ. **ಮೊದಲನೆಯದಾಗಿ** ವಿಷಯದಲ್ಲಿ ಅಭಿರುಚಿ ಹುಟ್ಟಿಸುವದು. ತಮ ತಮಗೆ ಅಭಿರುಚಿ ಎನಿಸಿದ ವಿಷಯವನ್ನು ಮಕ್ಕಳು ಹೆಚ್ಚು ದಿವಸ ನೆನಪಿನಲ್ಲಿ ಇಡುತ್ತಾರೆ. ಅವರಲ್ಲಿ ಸ್ವಾಭಾವಿಕವಾಗಿ ಇರುವ ಪ್ರೇರಣೆಗಳನ್ನು ಎಚ್ಚರಿಸಿ ಕಲಿಯಬೇಕಾದ ವಿಷಯಗಳಲ್ಲಿ ಅವರ ಅಭಿರುಚಿ ಯನ್ನು ಹುಟ್ಟಿಸಬೇಕು. ದೊಡ್ಡವರು ತಮ್ಮ ತಮ್ಮ ಮನೋವೃತ್ತಿಗಳಿಗೆ ಹೊಂದಿಕೆಯಾಗುವ ಸಂಗತಿಗಳನ್ನು ಸುಲಭವಾಗಿ ನೆನಪು ಇಡುತ್ತಾರೆ. ಸಮತಾವಾದ ಅಥವಾ ಸಮಾಜವಾದ ಅಥವಾ ಲೋಕಸತ್ತಾವಾದದ ಕಡೆಗೆ

ಒಲವು ಇದ್ದವರು ಲೋಕಕಾರಣಕ್ಕೆ ಸಂಬಂಧಿಸಿದ ಒಂದು ಭಾಷಣವನ್ನು ಕೇಳಿದರೆ ಅಥವಾ ಓದಿದರೆ ಅದರಲ್ಲಿ ತಮ್ಮ ವಾದವನ್ನು ಸಮರ್ಥಿಸುವ ಅಂಶ ಗಳನ್ನೇ ಅವರು ಹೆಚ್ಚಾಗಿ ನೆನಪಿನಲ್ಲಿ ಇಡುತ್ತಾರೆ. ಮತ್ತು ತಮ್ಮ ಒಲವಿಗೆ ಹೊರತಾದ ಅಂಶಗಳನ್ನು ಬೇಗ ಮರೆಯುತ್ತಾರೆ. ಇದು ಪ್ರಯೋಗದಿಂದ ಹೊರಟ ಸಿದ್ಧಾಂತ. ಅಭಿರುಚಿಯು ಸ್ಮೃತಿಯ ಮೂಲ. **ಎರಡನೆಯ** ನಿಯಮವೆಂದರೆ ವಿಷಯವು ಮಗುವಿಗೆ ಅರ್ಥವುಳ್ಳದ್ದು ಆಗಿರಬೇಕು. ಮಗುವು ಯಾವ ವಿಷಯವನ್ನು ಚನ್ನಾಗಿ ತಿಳಿದುಕೊಂಡಿರುತ್ತಾನೆಯೋ ಅದನ್ನು ಅವನು ಚನ್ನಾಗಿ ನೆನಪಿನಲ್ಲಿ ಇಟ್ಟುಕೊಳ್ಳುತ್ತಾನೆ. ಕೇವಲ ಕುರುಡು ಪಾಠ ಮಾಡಲಿಕ್ಕೆ ಮಕ್ಕಳನ್ನು ಒತ್ತಾಯ ಮಾಡುವದು ತಪ್ಪು ಪದ್ಧತಿಯು. ಚಿಕ್ಕ ಮಕ್ಕಳು ಬಿಡಿ ಬಿಡಿಯಾದ ಅಕ್ಷರಗಳನ್ನು ಎಷ್ಟೋ ಬಾರೆ ತೀಡಿದರೂ ಅವು ಅವರ ನೆನಪಿನಲ್ಲಿ ನಿಲ್ಲುವದೇ ಇಲ್ಲ. ಏಕೆಂದರೆ ಆ ಅಕ್ಷರಗಳಿಗೆ ಅರ್ಥ ಇರುವದಿಲ್ಲ. **ಮೂರನೆಯದಾಗಿ** ಶಬ್ದಾರ್ಥಕ್ಕಿಂತ ಸಾಮಾನ್ಯ ನಿಯಮ ಗಳಿಗೆ ಹೆಚ್ಚು ಮಹತ್ವ ಕೊಡಬೇಕು. ಒಂದು ವಿಷಯವನ್ನು ಕಲಿತ ಮೇಲೆ ಅದರಲ್ಲಿ ಅಡಕವಾಗಿರುವ ಸಾಮಾನ್ಯ ನಿಯಮಗಳನ್ನು ಕಂಡು ಹಿಡಿಯಲು ಮಕ್ಕಳಿಗೆ ಕಲಿಸತಕ್ಕದ್ದು. ಒಂದು ಪಾಠದ ತಾತ್ಪರ್ಯವನ್ನು ಅಥವಾ ಸಾರಾಂಶವನ್ನು ನೆನಪಿಡುವದು ಸುಲಭ; ಆದರೆ ಅದನ್ನು ಶಬ್ದಶಃ ಬಾಯಿ ಪಾಠ ಮಾಡುವದು ಬಹಳ ಕಠಿಣ. **ನಾಲ್ಕನೆಯ** ನಿಯಮವೆಂದರೆ ವಿಷಯ ಜ್ಞಾನದಲ್ಲಿ ಸಂಘಟನೆಯನ್ನು ಅಥವಾ ಹೊಂದಿಕೆಯನ್ನು ಉಂಟು ಮಾಡ ಬೇಕು. ಒಳ್ಳೆಯ ಸ್ಮೃತಿಯ ರಹಸ್ಯವನ್ನು ಕುರಿತು ಜೇಮ್ಸನು ಹೇಳುವು ದೇನಂದರೆ— "ನೆನಪಿನಲ್ಲಿ ಇಡಬೇಕಾದುವನ್ನು ನಾವು ನಾನಾ ಬಗೆಯಾಗಿ ಸಂಬಂಧಿಸಬೇಕು.... ತನ್ನ ಅನುಭವಗಳನ್ನು ಹೆಚ್ಚು ಹೆಚ್ಚು ವಿಚಾರಿಸುವ ವನು ಒಳ್ಳೆಯ ಸ್ಮೃತಿಯುಳ್ಳವನು ಆಗುತ್ತಾನೆ" ಒಬ್ಬ ವಿದ್ಯಾರ್ಥಿಗೆ 'ಶಿವಾಜಿಯು ಎಂದು ಹುಟ್ಟಿದನು ?' ಎಂದು ಕೇಳಿದರೆ ಅವನು '೧೬೨೭ ರಲ್ಲಿ' ಎಂದು ತಟ್ಟನೇ ಉತ್ತರ ಕೊಡಬಹುದು. ಆದರೆ "ಶಿವಾಜಿಯು ಹುಟ್ಟಿ ದಾಗ ಶಹಾಜಹಾನನು ಬದುಕಿದ್ದನೇ ? ಎಂದು ವಿಚಾರಿಸಿದಾಗ ಅವನು ಗಾಬರಿಗೊಳ್ಳಬಹುದು? ಒಂದು ವಿಷಯಕ್ಕೆ "ಸಂಬಂಧಿಸಿದ ಬೇರೆ ಬೇರೆ ಭಾಗಗಳನ್ನು ವಿಚಾರವರಿತು ಹೊಂದಿಸದೆ ಇರುವದು ಅಥವಾ

ಸಂಘಟನೆ ಮಾಡದೇ ಇರುವದು. ಇದಕ್ಕೆ ಕಾರಣ **ಐದನೆಯ** ನಿಯಮ ವೆಂದರೆ ಅಭ್ಯಾಸವು ಉಪಯುಕ್ತವಾಗಿರಬೇಕು. ಕಲಿತ ವಿಷಯವನ್ನು ಮೇಲಿಂದ ಮೇಲೆ ಬೇರೆ ಬೇರೆ ಸನ್ನಿವೇಶಗಳಲ್ಲಿ ಉಪಯೋಗಿಸಬೇಕು. ಅಂದರೆ ಮಾತ್ರ ಅದು ಮನಸ್ಸಿನಲ್ಲಿ ಗಟ್ಟಿಯಾಗುವದು. **ಆರನೆಯ** ನಿಯಮ ವೆಂದರೆ ವಿಷಯವನ್ನು ಪುನರಾವಲೋಕನ ( Review ) ಮಾಡಬೇಕು. ನೆನಪು ಹಾರುವ ಕಾಲಕ್ಕೆ ಕಲಿತ ವಿಷಯವನ್ನು ಪುನರಾವಲೋಕನ ಅಥವಾ ಓನ್ನೋಟ ಮಾಡುವುದರಿಂದ ಮರೆವೆಗೆ ತಡೆಯನ್ನು ಉಂಟು ಮಾಡಿದಂತೆ ಆಗುವದು. ಸಾಮಾನ್ಯವಾಗಿ ನಾಲ್ಕು ತಿಂಗಳಲ್ಲಿ ಒಮ್ಮೆ ಅಥವಾ ಎರಡು ಬಾರಿ ವಿಮರ್ಶೆ ಅಥವಾ ಉಜಳಣಿ ಮಾಡಬಹುದು. ಗೊತ್ತು ಪಡಿಸಿದ ಕಾಲಕ್ಕೆ ಉಜಳಣಿ ಮಾಡುವದಲ್ಲದೆ ಪಾಠದ ಅವಧಿಯಲ್ಲಿ ವಿಷಯವನ್ನು ಮುಂದುವ ರಿಸುವಾಗ ಪೂರ್ವ ತಯಾರಿ ಎಂದು ಹಿಂದೆ ಕಲಿತ ವಿಷಯದ ಸಿಂಹಾವಲೋ ಕನ ಮಾಡುವದು ಕೂಡ ಅವಶ್ಯವೆನಿಸುವದು. ಪುನರಾವಲೋಕನದಲ್ಲಿ ಮುಖ್ಯ ವಿಚಾರಗಳನ್ನು ಮಾತ್ರ ವಿಮರ್ಶೆ ಮಾಡುವದು ಒಳ್ಳೇ ಪದ್ಧತಿ. ಅಭ್ಯಾಸ ಕ್ರಮದ ಪ್ರತಿಯೊಂದು ವಿಷಯವನ್ನು ಸಾಮಾನ್ಯವಾಗಿ ವಾರಕ್ಕೆ ಒಮ್ಮೆ ಅಥವಾ ಎರಡು ವಾರಕ್ಕೆ ಒಮ್ಮೆ ಪುನರಾವಲೋಕನ ಮಾಡಬಹುದು. ಹುಡು ಗರು ಚಿಕ್ಕವರಿದ್ದರೆ ಅದೇ ಅವಧಿಯಲ್ಲಿ ಅರ್ಧ ವೇಳೆ ಹೊಸ ವಿಷಯವನ್ನು ಮತ್ತು ಅರ್ಧ ವೇಳೆ ಅದರ ಓನ್ನೋಟವನ್ನು ಮಾಡುವದು ಒಳ್ಳೆಯದು. ದೊಡ್ಡವರಿಗೆ ಪಾಠದ ಅವಧಿಯ ಒಂದು ಕಾಲುಭಾಗ ಅಥವಾ ಅದಕ್ಕೂ ಕಡಿಮೆ ವೇಳೆ ' ಉಜಳಣಿ ' ಇಟ್ಟುಕೊಳ್ಳಬಹುದು. ಒಟ್ಟಿನಲ್ಲಿ ಎಷ್ಟು ಬಾರಿ ಮತ್ತು ಯಾವಾಗ ವಿಮರ್ಶೆ ಮಾಡತಕ್ಕದ್ದು ಎಂಬುದು ಹುಡುಗರ ವಯ, ಅನುಭವ ಮತ್ತು ವಿಷಯದ ಸ್ವರೂಪವನ್ನು ಅವಲಂಬಿಸಿರುತ್ತದೆ. **ಕೊನೆಯದಾಗಿ** ಕಲಿಯುವ ಮತ್ತು ಕಲಿಸುವ ಪದ್ಧತಿಗಳು ಚನ್ನಾಗಿರ ಬೇಕು. ಯಾವ ಪದ್ಧತಿಯಿಂದ ಕಲಿತರೆ ವಿಷಯವು ಹೆಚ್ಚು ಕಾಲ ನೆನಪಿನಲ್ಲಿ ನಿಲ್ಲುವದು ಎಂಬುದನ್ನು ಪ್ರಯೋಗದಿಂದ ಹುಡುಕಿ ತೆಗೆದಿದ್ದಾರೆ. ಕಾಲದ ದೃಷ್ಟಿಯಿಂದ ನೋಡಿದರೆ ನಿರಂತರ ಪದ್ಧತಿ ಮತ್ತು ಕಾಲಾಂತರ ಪದ್ಧತಿ ಎಂಬ ಎರಡು ಪದ್ಧತಿಗಳು ಉಂಟು. ಇವೆರಡರಲ್ಲಿ ಕಾಲಾಂತರ ಪದ್ಧತಿಯು ನಿರಂತರ ಪದ್ಧತಿಗಿಂತ ಮೂರು ಪಟ್ಟು ಒಳ್ಳೆಯದೆಂದು

ಪ್ರಯೋಗದಿಂದ ಕಂಡು ಬಂದಿದೆ. ವಿಷಯದ ದೃಷ್ಟಿಯಿಂದ ಅಖಂಡ ಅಥವಾ ಇಡಿ ಪದ್ಧತಿ, ಖಂಡ ಅಥವಾ ಬಿಡಿ ಪದ್ಧತಿ ಮತ್ತು ಮಿಶ್ರ ಪದ್ಧತಿ ಎಂದು ಮೂರು ಭಾಗಗಳನ್ನು ಮಾಡುವದುಂಟು. ಈ ಎಲ್ಲ ಬಗೆಯ ಪದ್ಧತಿಗಳ ಬಗ್ಗೆ ಹೆಚ್ಚಿನ ವಿವರಣೆಗಳನ್ನು ಈ ಮೊದಲೇ ಕೊಡಲಾಗಿದೆ. ಮುಖ್ಯ ತತ್ವವೇನಂದರೆ ಪಾಠದಲ್ಲಿ ಅಭಿರುಚಿಯನ್ನು ಹುಟ್ಟಿಸುವ ಪದ್ಧತಿಯೇ ಶ್ರೇಷ್ಠವಾದ ಪದ್ಧತಿ. ಒಟ್ಟಿನಲ್ಲಿ ಚನ್ನಾಗಿ ಕಲಿತದ್ದು ಮತ್ತು ಚನ್ನಾಗಿ ಕಲಿಸಿದ್ದು ಹೆಚ್ಚು ಕಾಲ ನೆನಪಿನಲ್ಲಿ ನಿಲ್ಲುವದು.

## ಕಲಿತ ವಿಷಯದ ವರ್ಗಾಂತರ

## ( Transfer of Training )

### ಸಾಮಾನ್ಯ ನಂಬುಗೆ

"ಸಾಲೆಯನ್ನು ಕಲಿತವರು ಹೀಗೆ ಮಾಡುತ್ತಾರೆಯೇ?", "ಇಂಗ್ಲೀಷ ಕಲಿತ ಹುಡುಗರು ಹಳೆಯ ಪದ್ಧತಿಗಳನ್ನು ಅಲ್ಲಗಳೆಯುತ್ತಾರೆ" ಮುಂತಾಗಿ ಸಾಮಾನ್ಯ ಜನರು ಆಡುವದುಂಟು. ಸಾಲೆ, ಕಾಲೇಜಗಳಲ್ಲಿ ಶಿಕ್ಷಣ ಹೊಂದುವುದರಿಂದ ಹುಡುಗರ ಬುದ್ಧಿಸಾಮರ್ಥ್ಯ, ವಿಚಾರಶಕ್ತಿ, ಮನೋವೃತ್ತಿ ಮತ್ತು ವರ್ತನಗಳು ಮಾರ್ಪಡುತ್ತವೆ ಎಂಬ ನಂಬುಗೆಯೇ ಈ ಹೇಳಿಕೆಗಳಿಗೆ ಆಧಾರ. ಇಂಗ್ಲೀಷ ಶಿಕ್ಷಣದಿಂದ ಹುಡುಗರ ಆಚಾರ ವಿಚಾರಗಳು ಬದಲಾಗುತ್ತವೆಂದು ಅನ್ನುವದು ನಿಜ. ಯಾಕಂದರೆ ಪಾಶ್ಚಾತ್ಯ ಪದ್ಧತಿಯ ಶಿಕ್ಷಣದಿಂದ ಸ್ವಾತಂತ್ರ್ಯಪ್ರೇಮ, ಸಮತಾಭಾವ, ವಿಜ್ಞಾನ ದೃಷ್ಟಿ, ಮೂಢ ನಂಬುಗೆಗಳ ಉಚ್ಚಾಟನೆ ಮೊದಲಾದ ಪಾಶ್ಚಾತ್ಯರ ವಿಶೇಷ ಗುಣಗಳು ಅವರಲ್ಲಿ ಒಡಮೂಡುತ್ತವೆ ಮತ್ತು ಅವರು ಅವುಗಳನ್ನು ತಮ್ಮ ನಡೆನುಡಿಗಳಲ್ಲಿ ವ್ಯಕ್ತ ಮಾಡುತ್ತಾರೆ. ಕಲಿಯುವಿಕೆಯು ಅಥವಾ ಶಿಕ್ಷಣವು ಮಕ್ಕಳ ಮೇಲೆ ಪರಿಣಾಮವನ್ನು ಮಾಡದೇ ಇರದು. ಆದರೆ ಸಾಲೆಯಲ್ಲಿ ಕಲಿಯಬೇಕಾದ ಪ್ರತಿಯೊಂದು ವಿಷಯವು ಅಷ್ಟೇ ಪ್ರಮಾಣದಲ್ಲಿ ಪರಿಣಾಮವನ್ನು ಮಾಡಲಾರದು. ಅಲ್ಲದೆ ಕಲಿಯುವ ಪದ್ಧತಿಯೂ ಮನಸ್ಸಿನ ಮೇಲೆ

ಪರಿಣಾಮವನ್ನು ಉಂಟು ಮಾಡುವದು. ಕಲಿತದ್ದು ನೆನಪಿನಲ್ಲಿ ನಿಂತರೆ ಮಾತ್ರ ಸಾಲೆಯನ್ನು ಬಿಟ್ಟ ನಂತರ ಮಗುವು ನಾಗರಿಕನಾದ ಮೇಲೆ ಜೀವನ ಸನ್ನಿವೇಶಗಳಲ್ಲಿ ಅವನಿಗೆ ಅದರ ಉಪಯೋಗವು ಬೀಳುವದು. ಶಿಕ್ಷಣದಿಂದ ಮನಸ್ಸಿನ ಮೇಲೆ ಸ್ಥಿರವಾಗಿ ಉಳಿಯುವ ಪರಿಣಾಮಕ್ಕೆ **ಶಿಕ್ಷಣದ ವರ್ಗಾಂತರ ಅಥವಾ ಕಲಿತ ವಿಷಯದ ವರ್ಗಾಂತರ** ( Transfer of Training) ಅನ್ನುವರು ಈ ವರ್ಗಾಂತರ ಸಮಸ್ಯೆಯಲ್ಲಿ ಮನೋವಿಜ್ಞಾನದ ಯಾವ ತತ್ವಗಳು ಅಡಕವಾಗಿರುತ್ತವೆ ಎಂಬುದನ್ನು ಕುರಿತು ಸ್ವಲ್ಪ ವಿವೇಚಿಸುವ.

## ಹಳೆಯ "ಶಕ್ತಿ"ವಾದ ( Faculty Theory )

ವರ್ಗಾಂತರ ಸಮಸ್ಯೆಯು ಮೊದಲಿನಿಂದಲೂ ಒಂದಿಲ್ಲೊಂದು ರೂಪದಲ್ಲಿ ಶಿಕ್ಷಣ ಪ್ರಪಂಚದಲ್ಲಿ ತಲೆದೋರುತ್ತಲಿದೆ. ಮನಸ್ಸು ಎಂಬುದು ಅನೇಕ ಶಕ್ತಿಗಳ ಸಿವುಡು ಎಂಬ ನಂಬುಗೆಯು ಹತ್ತೊಂಬತ್ತನೆಯ ಶತಮಾನದ ವರೆಗೆ ಪ್ರಸಾರವಾಗಿತ್ತು. ಸ್ಮರಣೆ, ಅವಧಾನ, ಊಹೆ, ತರ್ಕ, ವಿಚಾರ, ಇಚ್ಛೆ ಮುಂತಾಗಿ ಬೇರೆ ಬೇರೆ ಶಕ್ತಿಗಳು ಮನಸ್ಸಿನಲ್ಲಿ ಉಂಟೆಂದೂ, ಅವುಗಳನ್ನು ತರಬೇತುಗೊಳಿಸಿ ಸುಧಾರಿಸಲು ಮತ್ತು ಬಲಪಡಿಸಲು ಬರುವದೆಂದೂ ನಂಬುಗೆ ಇತ್ತು. ಈ ಶಕ್ತಿವಾದದ ಪ್ರಕಾರ ಒಮ್ಮೆ ನೆನಪಿನ ಶಕ್ತಿಯನ್ನು ಬಲಪಡಿಸಿದ ಮೇಲೆ ಅದನ್ನು ಬೇಕಾದ ಕಾಲಕ್ಕೆ ಮತ್ತು ಬೇಕಾದ ವಿಷಯ ದಲ್ಲಿ ಉಪಯೋಗಿಸಲು ಬರುತ್ತದೆ. ಈ ಶಕ್ತಿಗಳನ್ನು ತರಬೇತುಗೊಳಿಸುವದೇ ಸಾಲೆಯ ಶಿಕ್ಷಣದ ಮುಖ್ಯ ಉದ್ದೇಶವಾಗಿತ್ತು. ಭೂಮಿತಿ ಕಲಿಯುವದರಿಂದ ತರ್ಕ ಶಕ್ತಿ, ಸಾಹಿತ್ಯದ ಅಭ್ಯಾಸದಿಂದ ಕಲ್ಪನಾ ಶಕ್ತಿ, ವಿಜ್ಞಾನದಿಂದ ನಿರೀಕ್ಷಣ ಶಕ್ತಿ ಮತ್ತು ಕವಿತೆಗಳನ್ನು ಬಾಯಿಪಾಠ ಮಾಡುವುದರಿಂದ ಸ್ಮರಣ ಶಕ್ತಿಯು ಹೆಚ್ಚುವದೆಂದು ಜನರು ನಂಬಿದ್ದರು. ಆದರೆ ಈಗಿನ ವಿಜ್ಞಾನಿಗಳು ಶಕ್ತಿವಾದವನ್ನು ಅಲ್ಲಗಳೆಯುತ್ತಾರೆ. ಈ ಶಕ್ತಿಗಳ ತರಬೇತಿನ ಬಗ್ಗೆ ವಿಲಿಯಮ್ ಜೇಮ್ಸ ಮೊದಲಾದವರು ಅನೇಕ ಪ್ರಯೋಗಗಳನ್ನು ಮಾಡಿ ಕಂಡು ಹಿಡಿದ ಸಿದ್ಧಾಂತವೇನಂದರೆ ಮನೋಶಕ್ತಿಗಳ ತರಬೇತಿನ ವರ್ಗಾಂತರವು ಒಮ್ಮೊಮ್ಮೆ ಅತಿ ಸ್ವಲ್ಪ ಪ್ರಮಾಣದಲ್ಲಿ ಆಗುವದು ಮತ್ತು ಒಮ್ಮೊಮ್ಮೆ ಆಗುವದೇ ಇಲ್ಲ.

**ಸಮಘಟಕವಾದ** (Theory of Identical Components)

ಈಗಿನ ಮನೋವಿಜ್ಞಾನಿಗಳು ಶಕ್ತಿವಾದವನ್ನು ಬಿಟ್ಟು ಶಿಕ್ಷಣದ ವರ್ಗಾಂತರದ ಬಗ್ಗೆ ಬೇರೆ ತತ್ವಗಳನ್ನು ಮುಂದೆ ಮಾಡುತ್ತಾರೆ. ಯಾವ ವಿಷಯವು ವರ್ಗಾಂತರ ಹೊಂದುತ್ತದೆ, ಎಷ್ಟು ಪ್ರಮಾಣದಲ್ಲಿ ಅದು ವರ್ಗಾಂತರ ಹೊಂದುತ್ತದೆ ಮತ್ತು ಹೇಗೆ ಅದು ವರ್ಗಾಂತರ ಹೊಂದುತ್ತದೆ ಎಂಬುದನ್ನು ಈ ತತ್ವಗಳು ತಿಳಿಸುತ್ತವೆ. ಎಷ್ಟೋ ಪ್ರಯೋಗಗಳನ್ನು ಮಾಡಿ ಈ ತತ್ವಗಳನ್ನು ಕಂಡು ಹಿಡಿದಿದ್ದಾರೆ. ಇವುಗಳಲ್ಲಿ ಮುಖ್ಯ ತತ್ವಗಳು ಎರಡು : (ಅ) ಸಮಘಟಕಗಳು ಅಥವಾ ಸಮ ಸನ್ನಿವೇಶಗಳು, ಮತ್ತು (ಆ) ಸಾಮಾನ್ಯೀಕರಣ ಅಥವಾ ಸಿದ್ಧಾಂತ ಹೊರಡಿಸುವದು. ಹಳೆ ಮತ್ತು ಹೊಸ ಚಟುವಟಿಕೆಗಳಲ್ಲಿ, ಸನ್ನಿವೇಶಗಳಲ್ಲಿ, ಸಮಸ್ಯೆಗಳಲ್ಲಿ, ಅಥವಾ ಕಲಿಯುವ ಪದ್ಧತಿಯಲ್ಲಿ ಎಷ್ಟರ ಮಟ್ಟಿಗೆ ಏಕರೂಪತೆ ಅಥವಾ ಹೋಲಿಕೆ ಇರುತ್ತದೆಯೋ ಅಷ್ಟರ ಮಟ್ಟಿಗೆ ಒಂದು ಸಂದರ್ಭದಿಂದ ಮತ್ತೊಂದು ಸಂದರ್ಭಕ್ಕೆ ಶಿಕ್ಷಣದ ವರ್ಗಾಂತರವು ಸಾಗುತ್ತದೆ. ಸಾಯಕಲ್ಲ ಹೊಡೆಯಲಿಕ್ಕೆ ಕಲಿತವನಿಗೆ ಮೋಟಾರ ಹೊಡೆಯಲಿಕ್ಕೆ ಕಲಿಯುವದು ಸುಲಭವಾಗುತ್ತದೆ. ಏಕೆಂದರೆ ಎರಡೂ ಚಟುವಟಿಕೆಗಳಲ್ಲಿ ಬಹುಮಟ್ಟಿಗೆ ಸಮಸ್ಯೆಗಳು ಒಂದೇಯಾಗಿರುತ್ತವೆ. ಒಬ್ಬ ಮಗುವಿಗೆ ಅಭ್ಯಾಸ ಮಾಡುವ ಹಿಡಿತ ಸಿಕ್ಕರೆ (ಅದು ಇಡಿ ಪದ್ಧತಿಯಾಗಿರಬಹುದು, ಅಥವಾ ಬಿಡಿ ಪದ್ಧತಿಯಾಗಿರಬಹುದು; ಮಿಶ್ರ ಪದ್ಧತಿಯಾಗಿರಬಹುದು, ಅಥವಾ ಸಾರಾಂಶ ತೆಗೆಯುವ ಪದ್ಧತಿಯಾಗಿರಬಹುದು; ಅಥವಾ ನೆನಪಿನಲ್ಲಿ ಇಟ್ಟುಕೊಳ್ಳುವ ಬೇರೆ ಯಾವುದಾದರೊಂದು ವಿಧಾನವಾಗಿರಬಹುದು) ಆಗ ಅವನು ಅದೇ ಪದ್ಧತಿಯನ್ನು ತಾನು ಕಲಿಯುವ ಎಲ್ಲ ವಿಷಯಗಳಲ್ಲಿ ಉಪಯೋಗಿಸುತ್ತಾನೆ. ಬೇರೀಜು ಮಾಡುವ ಪದ್ಧತಿಯನ್ನು ಮಗುವು ಗುಣಾಕಾರದ ಲೆಕ್ಕಗಳಲ್ಲಿ ಉಪಯೋಗಿಸಬಹುದು. ಇತಿಹಾಸದ ಸಂಗತಿಗಳು ಸಾಹಿತ್ಯದಲ್ಲಿ ಬಂದಾಗ ವಾಚನ ಪಾಠಗಳು ಹೆಚ್ಚು ತಿಳಿಯಾಗುವವು. ಮನೋವಿಜ್ಞಾನದ ತತ್ವಗಳನ್ನು ಚನ್ನಾಗಿ ಅರಗಿಸಿಕೊಂಡವನು ಲೇಖನಗಳನ್ನು ಬರೆಯುವಾಗ, ಭಾಷಣಗಳನ್ನು ಮಾಡುವಾಗ, ಪಾಠಗಳನ್ನು ಕೊಡುವಾಗ ಮತ್ತು ಜನರ ಕೂಡ ಒಡನಾಡುವಾಗ ಅವುಗಳನ್ನು ಉಪಯೋಗಿಸಬಲ್ಲನು. ಆದರೆ ಎರಡು ಸನ್ನಿವೇಶಗಳಲ್ಲಿ ಹೋಲಿಕೆ ಇದ್ದ

ಮಾತ್ರಕ್ಕೆ ವರ್ಗಾಂತರವು ನಿಶ್ಚಯವಾಗಿ ಆಗುವದೆಂದು ತಿಳಿಯುವದು ತಪ್ಪು. ಹೋಲಿಕೆಯನ್ನು ಕಂಡು ಹಿಡಿಯುವ ದೃಷ್ಟಿ ಮತ್ತು ಅದರ ಉಪಯೋಗ ಮಾಡುವ ಪ್ರಯತ್ನ ಇದ್ದರೆ ಮಾತ್ರ ಅದು ಸಾಧ್ಯವಾಗುತ್ತದೆ. ಹೊರಗಿನ ಹೋಲಿಕೆಗಿಂತ ಒಳಗಿನ ಮನೋವೃತ್ತಿಯೇ ಹೆಚ್ಚು ಮಹತ್ವದ್ದು. ಅಚ್ಚುಕಟ್ಟುತನ, ಸ್ವಾವಲಂಬನ, ಸಹಕಾರ ನ್ಯಾಯ ನಿಷ್ಠುರತೆ, ಸರಿಸಮಾನತೆ, ವಿಶಾಲ ದೃಷ್ಟಿ ಮುಂತಾದ ಗುಣಗಳು ಮಕ್ಕಳಲ್ಲಿ ಅವರ ಮನಸ್ಸಿನ ಚಟಗಳಾಗಿ ಪರಿಣಮಿಸಿದ್ದರೆ ಮಾತ್ರ ಎಲ್ಲ ಸಂದರ್ಭಗಳಲ್ಲಿ ಅವು ವ್ಯಕ್ತವಾಗುವವು. ಯಾವ ಮನೋವೃತ್ತಿಗಳು ಅನುರಾಗಗಳಾಗಿ ಅಥವಾ ಭಾವನೆಗಳಾಗಿ (Sentiments) ಬೆಳೆಯುತ್ತವೆಯೋ ಅವು ಮನುಷ್ಯನಲ್ಲಿ ಗಟ್ಟಿಯಾಗಿ ಊರುತ್ತವೆ ಎಂದು ಮನೋವಿಜ್ಞಾನವು ಸಾರುತ್ತದೆ. ಸಾಲೆಯ ಒಂದು ವಿಷಯವನ್ನು ಅಚ್ಚುಕಟ್ಟುತನದಿಂದ ಮಾಡುವ ರೂಢಿಯು ಉಂಟಾದರೆ ಅದರ ಪರಿಣಾಮವು ಇತರ ವಿಷಯಗಳಲ್ಲಿಯೂ ಕಂಡು ಬರುವದೋ ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಪ್ರಯೋಗಗಳನ್ನು ನಡೆಯಿಸಿದ್ದರು. ಗಣಿತ ವಿಷಯದಲ್ಲಿ ರೂಢಿಯ ಬಲದಿಂದ ಅಚ್ಚುಕಟ್ಟುತನವನ್ನು ತೋರಿಸಿದ ಹುಡುಗರು ಭಾಷಾ ವಿಷಯದಲ್ಲಿಯಾಗಲಿ ಇತರ ವಿಷಯದಲ್ಲಿಯಾಗಲಿ ಅಚ್ಚುಕಟ್ಟುತನವನ್ನು ತೋರಿಸಲಿಲ್ಲ. ದಿನದ ಇತರ ಕೆಲಸಗಳ ಮೇಲೆಯೂ ಅದರ ಪರಿಣಾಮವು ಕಂಡು ಬರಲಿಲ್ಲ. ಆದರೆ ಮತ್ತೊಬ್ಬ ನಿರೀಕ್ಷಕನು ತನ್ನ ಸಾಲೆಯ ಹುಡುಗರಲ್ಲಿ ಅಚ್ಚುಕಟ್ಟುತನದ ಮನೋವೃತ್ತಿಯನ್ನು ಅಥವಾ ಅನುರಾಗವನ್ನು ಬೆಳೆಯಿಸಿದ್ದನು. ಅದರ ಪರಿಣಾಮವಾಗಿ ಆ ಹುಡುಗರು ತಮ್ಮ ಪ್ರತಿಯೊಂದು ಕೆಲಸದಲ್ಲಿ ಅಚ್ಚುಕಟ್ಟುತನದಿಂದ ನಡೆಯುತ್ತಿದ್ದರು. ಈ ಪ್ರಯೋಗದಿಂದ ಸಿದ್ಧವಾಗುವದೇನಂದರೆ, ಕಲಿತ ವಿಷಯವು ವರ್ಗಾಂತರವನ್ನು ಹೊಂದಬೇಕಾದರೆ ಆ ವಿಷಯದಿಂದ ಕಲಿಯಬೇಕಾದ ತತ್ವದ ಕಡೆಗೆ ಅಥವಾ ನಿಯಮದ ಕಡೆಗೆ ಮಕ್ಕಳ ಲಕ್ಷ್ಯವನ್ನು ಮೇಲಿಂದ ಮೇಲೆ ಎಳೆದು ಅದರ ಬಗೆಗೆ ಅವರ ಮನೋವೃತ್ತಿಯನ್ನು ಬಲಪಡಿಸಬೇಕು. ಮನದಲ್ಲಿ ಒಳ್ಳೆಯ ಧ್ಯೇಯಗಳನ್ನು ನಡುವದೇ ಶಿಕ್ಷಣದ ಮುಖ್ಯ ಗುರಿಯಾಗಿರುತ್ತದೆ. ಸಾಲೆಯ ಕಾರ್ಯಕ್ರಮವು ಇದಕ್ಕೆ ಅನುಕೂಲವಾಗಿದ್ದರೆ ಶಿಕ್ಷಣವು ಜೀವನ ನಾಟಕದ ರಂಗಭೂಮಿಯಾಗುವದು.

ಸಾಲೆಯಲ್ಲಿ ಯಾವ ವಿಷಯವನ್ನೇ ಕಲಿಸಲಿ ಅದನ್ನು ಕಲಿಸುವ ಪದ್ಧತಿಯು ಜೀವನ ಪದ್ಧತಿಯನ್ನು ಹೋಲಬೇಕೆಂದು ಈಗಿನ ಮನೋವಿಜ್ಞಾನಿಗಳ ಮತ. ಮಕ್ಕಳು ಮುಂದೆ ದೊಡ್ಡವರಾಗಿ ಬದುಕು ಬಾಳುವೆಯನ್ನು ಸಾಗಿಸುವಾಗ ಬಗೆಬಗೆಯ ಸಮಸ್ಯೆಗಳು ಮತ್ತು ಸನ್ನಿವೇಶಗಳು ಎದುರಾಗುತ್ತವೆ. ಅಂಥವುಗಳನ್ನೇ ಸಾಲೆಯಲ್ಲಿ ಒದಗಿಸಿ ಕೊಟ್ಟರೆ ಮಾತ್ತ ಸಾಲೆ ಕಲಿತದ್ದು ಉಪಯೋಗ ಬೀಳುವದು. ಎಷ್ಟರ ಮಟ್ಟಿಗೆ ಸಾಲೆಯ ಮತ್ತು ಹೊರಗಿನ ಜೀವನದ ಸನ್ನಿವೇಶಗಳಲ್ಲಿ ಹೋಲಿಕೆ ಇರುವದೋ ಅಷ್ಟರ ಮಟ್ಟಿಗೆ ಶಿಕ್ಷಣದ ವರ್ಗಾಂತರವು ಸಾಧ್ಯವಾಗುವದು. ಸಮಘಟಕವಾದವು ಇದಕ್ಕೆ ಆಧಾರವಾಗಿದೆ. **ಸಾಮಾಜಿಕ ಉಪಯುಕ್ತತೆ** ಎಂಬುದು ಶಿಕ್ಷಣದ ಒಂದು ಮುಖ್ಯ ಉದ್ದೇಶವಾಗಿರತಕ್ಕದ್ದು. ವಾಚನದ ಶಬ್ದಗಳು, ಗಣಿತದ ಲೆಕ್ಕಗಳು, ಇತಿಹಾಸ, ಸಾಯನ್ಸ, ನಾಗರಿಕ ನೀತಿ ಮೊದಲಾದ ಪಾಠಗಳು, ಉದ್ಯೋಗ, ವ್ಯವಸಾಯ, ಸಾಮಾಜಿಕ ವರ್ತನ ಮುಂತಾದ ವಿಷಯಗಳು ಎಷ್ಟರ ಮಟ್ಟಿಗೆ ಜೀವನದಲ್ಲಿ ಉಪಯೋಗ ಬೀಳುವವೋ ಅಷ್ಟರ ಮಟ್ಟಿಗೆ ಸಾಲೆಗಳಲ್ಲಿ ಅವುಗಳನ್ನು ಕಲಿಸಬೇಕು. ನಾಗರಿಕ ಜೀವನದ ಅನೇಕ ಪ್ರಸಂಗಳಲ್ಲಿ ಧೈರ್ಯ, ವಿಶಾಲ ದೃಷ್ಟಿ, ಸಮತೋಲ ಭಾವ, ಎಚ್ಚರಿಕೆ, ಸತ್ಯಶೋಧನೆ, ದಯೆ, ನ್ಯಾಯ ನಿಷ್ಠುರತೆ, ಪ್ರಾಮಾಣಿಕತನ, ಸ್ವಯಂ ಪ್ರೇರಣೆ, ಸಮಸ್ಯೆ ಬಿಡಿಸುವ ವಿಧಾನ ಮುಂತಾದ ಸದ್ಗುಣಗಳು ಅವಶ್ಯ ಬೀಳುವವು. ಮಕ್ಕಳಲ್ಲಿ ಅವು ಬೆಳೆಯಬೇಕಾದರೆ ಸಾಲೆಯ ಎಲ್ಲ ಚಟುವಟಿಕೆಗಳು ಜೀವನದ ಅಂಥ ಸನ್ನಿವೇಶಗಳನ್ನು ಹೋಲತಕ್ಕದ್ದು.

ಕಲಿಯುವ ಪದ್ಧತಿಗಳು ಕೂಡ ಪ್ರತ್ಯಕ್ಷ ಜೀವನದಲ್ಲಿ ಸಮಸ್ಯೆಗಳನ್ನು ಬಿಡಿಸುವ ಪದ್ಧತಿಗಳನ್ನು ಹೋಲತಕ್ಕದ್ದು. ಯೋಜನೆಗಳನ್ನು ಕೈಕೊಳ್ಳುವದು, ಉದ್ದೇಶಯುತ ಚಟುವಟಿಕೆಗಳಲ್ಲಿ ತೊಡಗುವದು, ಗುರಿ ಮುಟ್ಟಲಿಕ್ಕೆ ಪ್ರಯತ್ನಿಸುವದು, ತೊಂದರೆಗಳನ್ನು ಎದುರಿಸುವದು, ಸಮಸ್ಯೆಗಳನ್ನು ಬಿಡಿಸುವದು ಮುಂತಾದವು ಜೀವನದಲ್ಲಿ ಇದ್ದಂತೆ ಸಾಲೆಯ ಚಟುವಟಿಕೆಗಳಲ್ಲಿಯೂ ಇರತಕ್ಕದ್ದು. ಒಟ್ಟಿನಲ್ಲಿ ಹೇಳಬೇಕೆಂದರೆ ಶಿಕ್ಷಣದ ಪ್ರತಿಯೊಂದು ಭಾಗವು ಹೊರಗಿನ ಪ್ರತ್ಯಕ್ಷ ಜೀವನವನ್ನು ಪ್ರತಿಬಿಂಬಿಸಬೇಕು.

## ಸಾಮಾನ್ಯ ನಿಯಮ ಹೊರಡಿಸುವದು

ಬಿಡಿಬಿಡಿಯಾದ ಅನುಭವಗಳಲ್ಲಿ ಅಥವಾ ಸಂಗತಿಗಳಲ್ಲಿ ಅಡಕವಾದ ಮತ್ತು ಅವೆಲ್ಲವುಗಳಲ್ಲಿ ಸಾಮಾನ್ಯವಾಗಿ ಕಂಡು ಬರುವ ನಿಯಮವನ್ನು ಹುಡುಕಿ ತೆಗೆಯುವದು ಬುದ್ಧಿಯ ಕೆಲಸ. ಈ ಬುದ್ಧಿ ಶಕ್ತಿಯನ್ನು ಹದಗೊಳಿಸುವದು ಅಥವಾ ಹೇಗೆ ವಿಚಾರ ಮಾಡಬೇಕೆಂಬುದನ್ನು ತೋರಿಸುವದು ಶಿಕ್ಷಣದ ಮುಖ್ಯ ಕೆಲಸ ಶಿಕ್ಷಣವು ವರ್ಗಾಂತರವನ್ನು ಹೊಂದಬೇಕಾದರೆ ಸಾಮಾನ್ಯ ನಿಯಮವನ್ನು ಹೊರಡಿಸುವ ವಿಜ್ಞಾನ ದೃಷ್ಟಿಯು ಮಕ್ಕಳಲ್ಲಿ ಬೆಳೆಯಬೇಕಾಗುತ್ತದೆ ಕೆಳಗೆ ಕೊಟ್ಟ ಉದಾಹರಣೆಗಳಿಂದ ಈ ಮಾತಿನ ಅರ್ಥವು ಹೆಚ್ಚು ಹೊಳೆಯುವದು. ನೀರು ತುಂಬಿದ ಪಾತ್ರೆಯಲ್ಲಿ ಇಟ್ಟ ಒಂದು ಗುರಿಯನ್ನು ಹೊಡೆಯುವ ಪ್ರಯೋಗ ನಡೆಸಲಾಗಿತ್ತು. ಹುಡುಗರಲ್ಲಿ ಎರಡು ಗುಂಪುಗಳನ್ನು ಮಾಡಲಾಗಿತ್ತು. ಒಂದು ಪ್ರಯೋಗದ ಗುಂಪು ಮತ್ತೊಂದು ನಿಯಂತ್ರಿಸಿದ ಗುಂಪು. ಪ್ರಕಾಶದ ಕಿರಣಗಳು ನೀರಿನಲ್ಲಿ ಹಾಯ್ದು ಹೋಗುವಾಗ ಬಾಗುವವೆಂಬುದನ್ನು ಪ್ರಯೋಗದ ಗುಂಪಿನ ಹುಡುಗರಿಗೆ ಮಾತ್ರ ತಿಳಿಸಲಾಗಿತ್ತು ಎರಡೂ ಗುಂಪುಗಳು ಕೆಲವು ಸಾರೆ ರೂಢಿ ಮಾಡಿದ ಮೇಲೆ ಪಾತ್ರೆಯಲ್ಲಿ ಹೆಚ್ಚು ನೀರು ಹಾಕಿ ಗುರಿ ಹೊಡೆಯುವ ಕೊನೆಯ ಪರೀಕ್ಷಣವನ್ನು ಕೊಡಲಾಗಿತ್ತು. ಆಗ ಕಿರಣಗಳ ಗತಿಯ ತತ್ವವನ್ನು ತಿಳಿದುಕೊಂಡಿದ್ದ ಹುಡುಗರು ಮತ್ತೊಂದು ಗುಂಪಿಗಿಂತ ಹೆಚ್ಚು ಬೇಗ ಕೌಶಲ್ಯವನ್ನು ತೋರಿಸಿದರು. ಯಾಕಂದರೆ ಅವರು ಕಿರಣಗಳ ಗತಿಯ ಸಾಮಾನ್ಯ ನಿಯಮವನ್ನು ಹೊಸ ಸನ್ನಿವೇಶದಲ್ಲಿ ಉಪಯೋಗಿಸಿಕೊಂಡರು. ಆದುದರಿಂದ ವಸ್ತುಗಳ ಏಕರೂಪತೆಗಿಂತ ಸಾಮಾನ್ಯ ನಿಯಮದ ತಿಳುವಳಿಕೆಯು ಶಿಕ್ಷಣದ ವರ್ಗಾಂತರದಲ್ಲಿ ಹೆಚ್ಚು ಉಪಯೋಗ ಬೀಳುವದು. ಈ ಮಾತು ಕೆಳಗೆ ವಿವರಿಸಿದ ಪ್ರಯೋಗದಿಂದಲೂ ಸಿದ್ಧವಾಗುತ್ತದೆ ಪ್ರೊಫೆಸರ್ ಕೊಯಲರನು ಅದೇ ಬಣ್ಣದ ಎರಡು ತಾಟುಗಳಲ್ಲಿ ಕೋಳಿಗಳಿಗೆ ಆಹಾರವನ್ನು ಇಡುತ್ತಿದ್ದನು. ಆದರೆ ಆ ತಾಟುಗಳಲ್ಲಿ ಒಂದು ಕಡಿಮೆ ಹೊಳೆಯುವಂತೆ (ಹೊ) ಮತ್ತೊಂದು ಹೆಚ್ಚು ಹೊಳೆಯುವಂತೆ (ಹೊ ಹೊ) ಮಾಡಿದ್ದನು. ಕೋಳಿಗಳು ಹೆಚ್ಚು ಹೊಳೆಯುವ ತಾಟನ್ನು ಮುಟ್ಟಿದಾಗ ಮಾತ್ರ ಆಹಾರವನ್ನು

ತಿನ್ನಲಿಕ್ಕೆ ಅವುಗಳನ್ನು ಬಿಡುತ್ತಿದ್ದನು. ಮತ್ತು ಮಂದ ಬಣ್ಣದ ತಾಟನ್ನು ಆರಿಸಿದಾಗ ಅವುಗಳನ್ನು ಚದುರಿಸುತ್ತಿದ್ದನು. ಕೋಳಿಗಳಿಗೆ ಇದು ರೂಢಿಯಾದ ಮೇಲೆ ಅದರ ಪರಿಣಾಮವನ್ನು ಪರೀಕ್ಷಿಸಬೇಕೆಂದು ಒಮ್ಮೆ ಮಂದ ಬಣ್ಣದ (ಹೊ) ತಾಟಿನ ಬದಲು ಎರಡನೆಯ ತಾಟಿಗಿಂತಲೂ ಹೆಚ್ಚು ಹೊಳೆಯುವ (ಹೊ ಹೊ ಹೊ) ತಾಟಿನಲ್ಲಿ ಆಹಾರವನ್ನು ಇಟ್ಟಿದ್ದನು. ಆ ಪ್ರಸಂಗದಲ್ಲಿ ಕೋಳಿಗಳು ಮೊದಲು ಆರಿಸುತ್ತಿದ್ದ (ಹೊ ಹೊ) ತಾಟನ್ನು ಬಿಟ್ಟು ಮೂರು ಪಟ್ಟು ಹೊಳೆಯುತ್ತಿದ್ದ (ಹೊ ಹೊ ಹೊ) ತಾಟನ್ನೇ ಆರಿಸಿ ಆಹಾರವನ್ನು ತಿಂದವು. ಮುಂದುವರಿಸಿದ ಇಂಥ ಪರೀಕ್ಷಣಗಳಲ್ಲಿ ಅನೇಕ ಬಾರಿ ಅವು ಹಾಗೆಯೇ ವರ್ತಿಸಿದವು. ಕೇವಲ ಸಮಘಟಕದ ತತ್ವವು ನಿಜವಾಗಿದ್ದರೆ ಕೋಳಿಗಳು ಬದಲಾಗದೇ ಇದ್ದ ಎರಡನೆಯ (ಹೊ ಹೊ) ತಾಟನ್ನೇ ಆರಿಸಬೇಕಾಗಿತ್ತು. ಆದರೆ ಅವು ಹಾಗೆ ಮಾಡಲಿಲ್ಲ. ಅವು ತಮ್ಮ ಒಳನೋಟದ ಸಹಾಯದಿಂದ ಸನ್ನಿವೇಶದ ಪೂರ್ಣ ಪರಿಶೀಲನೆಯನ್ನು ಮಾಡಿ ಯೋಗ್ಯವಾದುದನ್ನೇ ಕಂಡು ಹಿಡಿದವು. ಇದರಿಂದ ಹೊರಡುವ ಸಿದ್ಧಾಂತವೇನಂದರೆ ಕಲಿಯುವ ವಿಷಯಕ್ಕಿಂತ ಕಲಿಯುವ ಅಥವಾ ಕಲಿಸುವ ಪದ್ಧತಿಯು ಹೆಚ್ಚು ಮಹತ್ವದ್ದು.

ಸಾರಾಂಶವೇನಂದರೆ ವರ್ಗಾಂತರವು ಮುಖ್ಯವಾದ ಮೂರು ಸಂಗತಿಗಳನ್ನು ಅವಲಂಬಿಸಿರುತ್ತದೆ. ವಿಚಾರವರಿತು ವಿಷಯವನ್ನು ತಿಳಿದುಕೊಳ್ಳುವದು ಮೊದಲನೆಯ ಕೆಲಸ. ಆಮೇಲೆ ಅನೇಕ ಉದಾಹರಣೆಗಳನ್ನು ಮತ್ತು ಅನುಭವಗಳನ್ನು ವಿಮರ್ಶಿಸಿ ಅವುಗಳ ಹಿನ್ನೆಲೆಯ ತತ್ವಗಳನ್ನು ಅಥವಾ ಸಿದ್ಧಾಂತಗಳನ್ನು ಕಂಡು ಹಿಡಿಯುವದು ಎರಡನೆಯ ಕೆಲಸ. ಕಂಡು ಹಿಡಿದ ಸಾಮಾನ್ಯ ತತ್ವಗಳನ್ನು ಹೊಸ ಸನ್ನಿವೇಶಗಳಲ್ಲಿ ಪ್ರಯತ್ನ ಪೂರ್ವಕ ಉಪಯೋಗಿಸುವದು ಮೂರನೆಯ ಕೆಲಸ. ಈ ಮೂರೂ ಕೆಲಸಗಳನ್ನು ಹೇಗೆ ಮಾಡಬೇಕೆಂಬುದನ್ನು ಶಿಕ್ಷಕನು ಮಕ್ಕಳಿಗೆ ತೋರಿಸಿಕೊಡಬೇಕು. ಅಂಕಗಣಿತದ ಮಾದರಿಯ ಲೆಕ್ಕಗಳನ್ನು ಬಿಡಿಸುವ ಪದ್ಧತಿಯನ್ನು ಮಕ್ಕಳು ವಿಚಾರ ಮಾಡಿ ತಿಳಿದುಕೊಳ್ಳಬೇಕು. ಅವುಗಳಲ್ಲಿ ಅಡಕವಾಗಿದ್ದ ಮೂಲ ರೀತಿಯನ್ನು ಕಂಡು ಹಿಡಿದರೆ ಸಾಕು. ಪ್ರತಿಯೊಂದು ಲೆಕ್ಕ ತಿಳಿಸುವ

ಅವಶ್ಯಕತೆ ಬೀಳುವದಿಲ್ಲ ಏಕೆಂದರೆ ಅದೇ ಬಗೆಯ ಲೆಕ್ಕ ಬಿಡಿಸುವ ಸಾಮಾನ್ಯ ರೀತಿಯು ಮನದಟ್ಟಾದ ಮೇಲೆ ಅದರ ವರ್ಗಾಂತರವು ಸಾಧ್ಯವಾಗುತ್ತದೆ. ಅದೇ ಮಾದರಿಯ ಹೊಸ ಲೆಕ್ಕಗಳನ್ನು ಬಿಡಿಸುವಾಗ ಮೊದಲು ಕಲಿತ ರೀತಿಯು ಸಹಾಯವಾಗುತ್ತದೆ. ಆದ್ದರಿಂದ ಶಿಕ್ಷಕರು ಲೆಕ್ಕಗಳನ್ನು ತಿಳಿಸುವಾಗ ಯಾಂತ್ರಿಕ ಪುನರುಕ್ತಿಯನ್ನು ಬಿಟ್ಟು ಅವು ಮಕ್ಕಳಿಗೆ ಅರ್ಥವಾಗುವಂತೆ ತಿಳಿಸಬೇಕು. ಇನ್ನೊಂದು ಉದಾಹರಣೆ. ಟ್ರೇನಿಂಗ ಕಾಲೇಜದಲ್ಲಿ ಇದ್ದಾಗ ವಿದ್ಯಾರ್ಥಿ-ಶಿಕ್ಷಕರು ಅದೆಷ್ಟೋ ಶಿಕ್ಷಣ ತತ್ವಗಳನ್ನು ಕಲಿಯುತ್ತಾರೆ. ಟ್ರೇನಿಂಗ ಕಾಲೇಜದಿಂದ ಹೊರಬಿದ್ದ ಮೇಲೆ ಸಾಲೆಗಳಲ್ಲಿ ಪ್ರತಿದಿವಸ ಕಲಿಸುವ ತಮ್ಮ ವ್ಯವಸಾಯದಲ್ಲಿ ತೊಡಗಿದಾಗ ತಾವು ಕಾಲೇಜದಲ್ಲಿ ಕಲಿತ ತತ್ವಗಳು ಉಪಯೋಗ ಬೀಳುವದಿಲ್ಲವೆಂದು ಉದ್ಗಾರ ತೆಗೆಯುವದುಂಟು. ಇದಕ್ಕೆ ಕಾರಣವಿಲ್ಲದೆ ಇರುವದಿಲ್ಲ. ಕಾಲೇಜದ ಪ್ರಾಧ್ಯಾಪಕರು ಶಿಕ್ಷಣದ ಬೇರೆ ಬೇರೆ ತತ್ವಗಳನ್ನು, ಬೇರೆ ಬೇರೆ ಪದ್ಧತಿಗಳನ್ನು, ಮತ್ತು ಬೇರೆ ಬೇರೆ ಉಪಾಯಗಳನ್ನು ಅಥವಾ ಯುಕ್ತಿಗಳನ್ನು ತಮ್ಮ ಭಾಷಣಗಳಲ್ಲಿ ತಿಳಿಸಬಹುದು. ಆದರೆ ಸಾಲೆಗಳಲ್ಲಿ ಶಿಕ್ಷಣದ ಹೊಸ ಹೊಸ ಸಮಸ್ಯೆಗಳು ಉಂಟಾದಾಗ ಕಾಲೇಜದಲ್ಲಿ ಕಲಿತ ತತ್ವಗಳನ್ನು ಹೇಗೆ ಉಪಯೋಗಿಸಬೇಕು ಎಂಬುದನ್ನು ಶಿಕ್ಷಕರು ಕಲಿತಿರುವದಿಲ್ಲ. ಸಾಲೆಯ ಪ್ರತ್ಯಕ್ಷ ಸನ್ನಿವೇಶಗಳ ಮತ್ತು ಚಟುವಟಿಕೆಗಳ ಸಂಪರ್ಕ ಇಲ್ಲದೆ ಕೇವಲ ಸಾಮಾನ್ಯ ನಿಯಮಗಳನ್ನು ಭಾಷಣ ಮುಖಾಂತರ ಅಥವಾ ಪುಸ್ತಕದ ಮುಖಾಂತರ ಕಲಿಯುವದರಿಂದ ಪ್ರಯೋಜನವಿಲ್ಲ. ಪ್ರತಿಯೊಬ್ಬ ಶಿಕ್ಷಕನು ತಾನು ಕಲಿತ ತತ್ವಗಳನ್ನು ಮಕ್ಕಳಿಗೆ ಪಾಠ ಕಲಿಸುವಾಗ ಹೇಗೆ ಉಪಯೋಗಿಸಬೇಕು ಎಂಬುದನ್ನು ವಿಚಾರಿಸಿ ಹಾಗೆ ಮಾಡಲು ಪ್ರಯತ್ನಿಸಬೇಕು. ಇದು ಮುಖ್ಯವಾದದ್ದು.

## ಶೈಕ್ಷಣಿಕ ಸೂಚನೆಗಳು

ಅಭ್ಯಾಸ ಕ್ರಮದ ವಿಷಯಗಳನ್ನು ಯಾವ ದೃಷ್ಟಿಯಿಂದ ಆರಿಸಬೇಕು ಮತ್ತು ಅವುಗಳನ್ನು ಯಾವ ವಿಧಾನದಿಂದ ಕಲಿಸಬೇಕು ಎಂಬುದರ ಬಗ್ಗೆ ಶಿಕ್ಷಣದ ವರ್ಗಾಂತರದ ಸಮಸ್ಯೆಯಿಂದ ಕೆಲವು ಮಾರ್ಗದರ್ಶಕ ತತ್ವಗಳು ಹೊರಡುತ್ತವೆ. ಸಾಲೆಯ ಎಲ್ಲ ಬಗೆಯ ಚಟುವಟಿಕೆಗಳು ಸಾಮಾಜಿಕ

೬. ಈಸು, ಟಾಯಪಿಂಗ ಮತ್ತು ಲೇಜೀಮ ಇವುಗಳಲ್ಲಿಯ ಕುಶಲತೆಗಳನ್ನು ಹೇಗೆ ಇಡಿ ಪದ್ಧತಿಯಿಂದ ಮತ್ತು ಬಿಡಿ ಪದ್ಧತಿಯಿಂದ ಕಲಿಸಬಹುದು ಎಂಬುದನ್ನು ತಿಳಿಸಿ ಹೇಳಿರಿ.

೭. ಕಲೆಯ ನಿಪುಣತೆಗಳಲ್ಲಿ ಸರಿಯಾದ ರೂಢಿ ಇಲ್ಲದ ಮೂಲಕ ಅಥವಾ ಅಭಿರುಚಿ ಇಲ್ಲದ ಮೂಲಕ ಅಥವಾ ಬೇಸರಿಕೆ ಉಂಟಾದ ಮೂಲಕ ಪ್ರಗತಿಯು ಕಾಣದೇ ಇದ್ದ ಕೆಲವು ಪ್ರಸಂಗಗಳನ್ನು ಉದಾಹರಿಸಿರಿ.

೮. "ಅಭ್ಯಾಸವು (ರೂಢಿಯು) ಮನುಷ್ಯನನ್ನು ಸಂಪೂರ್ಣ ಗೊಳಿಸುವದು ಎಂದು ಇಂಗ್ಲೀಷಿನಲ್ಲಿ ಗಾದೆಯ ಮಾತುಂಟು." ಇದನ್ನು ನೀವು ಹೇಗೆ ಸಮರ್ಥಿಸುವಿರಿ?

೯. ತಮ್ಮ ವರ್ಗದ ಎದುರು ನಿಂತು ಗಟ್ಟಿಯಾಗಿ ಓದಲು ಹೇಳಿದಾಗ ಕೆಲವು ಹುಡುಗರಿಗೆ ತಾವು ಓದಿದ್ದು ತಮಗೇ ತಿಳಿಯುವದಿಲ್ಲ. ಇದರ ಕಾರಣವೇನು ?

೧೦. ಚೀನ ದೇಶದ ಕೆಲವು ಸಾಲೆಗಳಲ್ಲಿ ವರ್ಗದ ಎಲ್ಲ ಹುಡುಗರು ಕೂಡಿಯೇ ಕವಿತೆಯನ್ನು ಗಟ್ಟಿಯಾಗಿ ಓದುತ್ತಾರೆ. ಈ ಪದ್ಧತಿಯ ಲಾಭ ಹಾನಿಗಳು ಯಾವವು? ನಿಮ್ಮ ಸಾಲೆಯಲ್ಲಿ ಇದೇ ಪದ್ಧತಿಯನ್ನು ಅನುಕರಿಸಬೇಕೆಂದು ನೀವು ಅಭಿಪ್ರಾಯ ಪಡುವಿರೋ ? ಏಕೆ ?

೧೧. ಕನ್ನಡದಲ್ಲಿ ಉತ್ತಮ ಪ್ರಬಂಧ ಬರೆಯುವದನ್ನು ನೀವು ಹೇಗೆ ಕಲಿಸುವಿರಿ? ಈ ಅಧ್ಯಾಯದಲ್ಲಿ ವಿವರಿಸಿದ ತತ್ವಗಳನ್ನು ಪ್ರಬಂಧ ಬರೆಯುವದನ್ನು ಕಲಿಸುವಾಗ ಹೇಗೆ ಉಪಯೋಗಿಸಿಕೊಳ್ಳುವಿರಿ ? ಹೆಸರಾದ ಸಾಹಿತಿಗಳು ಬರೆದ ಪ್ರಬಂಧವನ್ನು ಓದುವದರಿಂದ ಅಥವಾ ಅನುಕರಣ ಮಾಡುವುದರಿಂದ ಯಾವ ಲಾಭಗಳು ಇರುವವು ?

೧೨. ಪುನರಾವಲೋಕನದ ಅವಧಿ ಮತ್ತು ಇಡಿ ಬಿಡಿ ಪದ್ಧತಿ ಇವುಗಳ ದೃಷ್ಟಿಯಿಂದ ಮನೋವಿಜ್ಞಾನದ ಒಂದು ವಿಷಯವನ್ನು ಕಲಿಯುವ ಪರಿಣಾಮಕಾರಕ ಪದ್ಧತಿಯನ್ನು ಯೋಚಿಸಿರಿ.

೧೩. ಭಾಷಣವು ನಡೆದಾಗ ಆದರ ಮುಖ್ಯಾಂಶಗಳ ಟಿಪ್ಪಣಿಗಳನ್ನು ತಕ್ಕೊಂಡು ಅವುಗಳನ್ನು ಆಮೇಲೆ ಪೂರ್ಣ ವಿಸ್ತರಿಸಿ ಬರೆಯುವದು ಲಾಭದಾಯಕವೋ ಅಥವಾ ಭಾಷಣದ ಪೂರ್ಣ ನಕಲನ್ನು ಮಾಡಿಕೊಂಡು ಆಮೇಲೆ ಅದನ್ನು ಓದುವದು ಲಾಭದಾಯಕವೋ? ಈ ಎರಡೂ ಪದ್ಧತಿಗಳನ್ನು ಪ್ರಯೋಗದಿಂದ ಪರೀಕ್ಷಿಸಲು ಬರುವದೋ ?

೧೪. ಕಲಿತ ವಿಷಯದ ಉಜಳಣಿಯನ್ನು ಯಾವ ಯಾವ ಕಾಲಕ್ಕೆ ಮತ್ತು ಹೇಗೆ ಮಾಡಿದರೆ ಅದು ಹೆಚ್ಚು ಪರಿಣಾಮಕಾರಕವಾಗುವದು ?

೧೫. ಭಾಷೆಯ ಲಿಪಿಯನ್ನು ಮತ್ತು ಚಿತ್ರಕಲೆಯನ್ನು ಕಲಿಯುವಾಗ ತೀಡಿ ಕಲಿಯುವ ಪದ್ಧತಿಯು ಸಹಾಯಕವಾಗುವದೊ ?

೧೬. ಒಂದು ಸಾಮಾಜಿಕ ವಿಷಯವನ್ನು ಅಭ್ಯಾಸ ಮಾಡುವದಕ್ಕಾಗಿ ಪ್ರವಾಸವನ್ನು ಕೈಕೊಳ್ಳಬಹದು, ಚಲಚಿತ್ರವನ್ನು ನೋಡಬಹುದು, ಭಾಷಣವನ್ನು ಕೇಳಬಹುದು ಅಥವಾ ಪುಸ್ತಕವನ್ನು ಓದಬಹುದು. ಕಲಿಯುವ ಈ ನಾಲ್ಕು ವಿಧಾನಗಳನ್ನು ಒಂದಕ್ಕೊಂದು ಹೋಲಿಸಿ ಪ್ರತಿಯೊಂದರ ಗುಣ ಮತ್ತು ಅವಗುಣಗಳನ್ನು ವಿವೇಚಿಸಿರಿ.

೧೭. ಒಂದು ವಿಷಯದಲ್ಲಿ ಪಾಂಡಿತ್ಯ ಉಳ್ಳವನು ಅದನ್ನು ಚನ್ನಾಗಿ ಕಲಿಸಬಲ್ಲನು ಎಂದು ನಿಶ್ಚಯವಾಗಿ ಹೇಳಬಹುದೋ ? ಮತ್ತು ಪಾಂಡಿತ್ಯದಲ್ಲಿ ಕಡಿಮೆ ಇದ್ದವನು ಉತ್ತಮ ಶಿಕ್ಷಕನಾಗಬಲ್ಲನೋ ?

೧೮. ಯಾವ ರೀತಿಯಿಂದ ಕಲಿಸಿದ ಅಥವಾ ಕಲಿತ ವಿಷಯವು ಹೆಚ್ಚು ಕಾಲ ನೆನಪಿನಲ್ಲಿ ನಿಲ್ಲುವದು ? ಹೆಚ್ಚು ಅರ್ಥವುಳ್ಳ ವಿಷಯವು ಹೆಚ್ಚು ನೆನಪಿನಲ್ಲಿ ನಿಲ್ಲುವದು ಎಂಬ ಹೇಳಿಕೆಯನ್ನು ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ.

೧೯. ವಿಷಯ ಜ್ಞಾನಕ್ಕಿಂತ ಕಲಾ ಕೌಶಲ್ಯವು ಚನ್ನಾಗಿ ನೆನಪಿನಲ್ಲಿ ನಿಲ್ಲುತ್ತದೆ ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೨೦. ವಿಷಯದ ಸಾರಾಂಶವು ಹೆಚ್ಚು ನೆನಪಿನಲ್ಲಿ ನಿಲ್ಲುತ್ತದೆಯೊ ಅಥವಾ ಅಕ್ಷರಶಃ ಬಾಯಿಪಾಠ ಮಾಡಿದ್ದು ಹೆಚ್ಚು ನೆನಪಿನಲ್ಲಿ ನಿಲ್ಲುತ್ತದೆಯೊ ? ಕಾರಣ ಸಹಿತ ವಿವರಿಸಿರಿ.

೨೧. ನೆನಪಿನ ಶಕ್ತಿಯು ಉತ್ತಮಗೊಳ್ಳಬೇಕಾದರೆ ಯಾವ ಯಾವ ನಿಯಮಗಳನ್ನು ಪಾಲಿಸಬೇಕು?

೨೨. ಪ್ರತಿಬಂಧಕ ಕ್ರಿಯೆ ( Retroactive Inhibition ) ಅಂದರೇನು ? ಅದು ಮರವೆಯನ್ನು ಹೇಗೆ ಉಂಟುಮಾಡುತ್ತದೆ? ಮರವೆಯ ಮುಖ್ಯ ಮೂರು ಕಾರಣಗಳು ಯಾವವು?

೨೩. ಕಲಿಯುವ ಎರಡು ವಿಷಯಗಳಲ್ಲಿ ಹೋಲಿಕೆ ಇದ್ದ ಹಾಗೆ ಅದು ಮರವೆಯ ಕಾರಣವೆಂದು ಹೇಳುವರು. ಉದಾಹರಣೆ ಕೊಟ್ಟು ವಿವರಿಸಿರಿ. ಹೋಲಿಕೆಯಿಂದ ಒಮ್ಮೊಮ್ಮೆ ನೆನಪಿಗೆ ಸಹಾಯವಾಗುವದೆಂದೂ ಹೇಳುವರು. ಈ ವಿರೋಧ ಅಭಿಪ್ರಾಯವನ್ನು ನೀವು ಹೇಗೆ ಸಮರ್ಥಿಸುವಿರಿ ?

೨೪. ನಮ್ಮ ಅನುಭವಗಳನ್ನು ನಾವು ಮರೆಯುತ್ತೇವೆ ಎಂಬುದು ಎಲ್ಲರಿಗೆ ಗೊತ್ತಿದ್ದ ಮಾತು. ಆದರೆ ಜೇಮ್ಸನು ಹೇಳುವದೇನಂದರೆ— " ವೈಜ್ಞಾನಿಕ ದೃಷ್ಟಿಯಿಂದ ನೋಡಿದರೆ ನಾವು ಅನುಭವಿಸಿದ್ದು ಎಂದೂ ಅಳಿಸಿ ಹೋಗುವದಿಲ್ಲ. " ಇದರ ಅರ್ಥವೇನು ? ನಾವು ಯಾವ ವಿಷಯವನ್ನು ಮರೆಯುತ್ತೇವೆ ? ಏಕೆ ? ಮರೆತದ್ದು ಎಲ್ಲಿ ಹೋಗುತ್ತದೆ? ಮತ್ತು ಅದು ಅಪ್ರತ್ಯಕ್ಷ ರೀತಿಯಿಂದ ಹೇಗೆ ನಮ್ಮ ಮೇಲೆ ಪರಿಣಾಮವನ್ನು ಉಂಟು ಮಾಡುತ್ತದೆ ?

೨೫. ಪುಸ್ತಕದ ಒಂದು ಅಧ್ಯಾಯವನ್ನು ಓದಿ ಅಭ್ಯಾಸ ಮಾಡುವ ಮೊದಲು ಮತ್ತು ಅಭ್ಯಾಸದ ಕೊನೆಗೆ ಅದರ ರೂಪ ರೇಷೆಗಳನ್ನು ನೋಡುವದು ಒಳ್ಳೆಯದೆಂದು ಹೇಳುವರು. ಏಕೆ ? ಇದು ವಿಷಯವನ್ನು ನೆನಪಿಡಲು ಹೇಗೆ ಸಹಾಯವಾಗುವದು?

೨೬. "ಹಗುರಾಗಿ ಕಲಿತದ್ದು ಹಗುರಾಗಿ ಮರೆಯುತ್ತದೆ" ಎಂದು ಅನ್ನುವದುಂಟು. ಇದು ತಪ್ಪಲ್ಲ ಎಂದು ನೀವು ಹೇಗೆ ಸಿದ್ಧ ಮಾಡುವಿರಿ ? ಉದಾಹರಣೆ ಕೊಟ್ಟು ವಿವರಿಸಿರಿ ಯಾವ ಸಂದರ್ಭಗಳಲ್ಲಿ ಈ ಮಾತು ನಿಜವೆನಿಸಬಹುದು ?

೨೭ ಶಿಕ್ಷಣದ ವರ್ಗಾಂತರ ಮತ್ತು ಪ್ರತಿಬಂಧಕ ಕ್ರಿಯೆ ಇವುಗಳಲ್ಲಿಯ ಸಂಬಂಧವೇನು ? ಕನಿಷ್ಟ ಮೂರು ಉದಾಹರಣೆಗಳನ್ನು ಕೊಟ್ಟು ವಿವರಿಸಿರಿ.

೨೮. ಹಾರ್ಮೋನಿಯಮ್ ನುಡಿಸುವಾಗ ಕಲಿತ ಪ್ರತಿಕ್ರಿಯೆಗಳು ಟಾಯಪಿಂಗ ಮತ್ತು ಗಾಯನ ಕಲಿಯುವಾಗ ವರ್ಗಾಯಿಸಲ್ಪಡುವವೋ ?

೨೯. ಆರೋಗ್ಯದ ನಿಯಮಗಳನ್ನು ಓದಿದವರಲ್ಲಿ ಎಷ್ಟು ಜನರು ಅವುಗಳನ್ನು ಆಚರಣೆಯಲ್ಲಿ ತರುತ್ತಾರೆ? ಕೆಲವರು ಅವುಗಳನ್ನು ಆಚರಣೆಯಲ್ಲಿ ತಾರದೇ ಇರಲಿಕ್ಕೆ ಕಾರಣವೇನು ? ಆರೋಗ್ಯದ ಜ್ಞಾನವು ಆರೋಗ್ಯದ ಚಟವಾಗಿ ಪರಿಣಮಿಸಬೇಕಾದರೆ ಸಾಲೆಯಲ್ಲಿ ಯಾವ ಕಾರ್ಯಕ್ರಮಗಳು ಇರಬೇಕು ಎಂಬುದನ್ನು ಸೂಚಿಸಿರಿ.

೩೦. ಯಾವುದು ಸರಿಯಾದ ಕೃತಿ ಮತ್ತು ಯಾವುದು ತಪ್ಪು ಕೃತಿ ಎಂಬುದನ್ನು ಮಕ್ಕಳು ಸಾಮಾನ್ಯವಾಗಿ ಹೇಳಬಲ್ಲರು. ಆದರೆ ತಾವು ಸ್ವತಃ ಕಾರ್ಯಮಾಡುವ ಪ್ರಸಂಗವು ಒದಗಿದಾಗ ಅವರು ಸರಿಯಾದ ಕೃತಿಯನ್ನು ಮಾಡುವದಿಲ್ಲ. ಇದರ ಕಾರಣವೇನು ?

೩೧. ಪುಸ್ತಕಗಳಲ್ಲಿ, ಜಾಹಿರಾತುಗಳಲ್ಲಿ ಅಥವಾ ಸಂಭಾಷಣೆಗಳಲ್ಲಿ ಎಷ್ಟೋ ಬಾರೆ ಶಿಕ್ಷಣದ ವರ್ಗಾಂತರದ ಬಗ್ಗೆ ತಪ್ಪು ಉದಾಹರಣೆಗಳನ್ನು ಕೊಡುವದುಂಟು. ನಿಮಗೆ ಗೊತ್ತಿದ್ದ ಇಂಥ ಕೆಲವು ಉದಾಹರಣೆಗಳನ್ನು ವಿಮರ್ಶಿಸಿರಿ.

೩೨. ಭೂಮಿತಿಯನ್ನು ಅಭ್ಯಾಸ ಮಾಡಿದವರು ಚನ್ನಾಗಿ ತರ್ಕ ಮಾಡಬಲ್ಲರು ಎಂಬ ನಂಬುಗೆಯ ಬಗ್ಗೆ ನಿಮ್ಮ ಅಭಿಪ್ರಾಯ ವೇನು? ನಿಮ್ಮ ಅನುಭವದಲ್ಲಿ ಕಂಡು ಬಂದ ಉದಾಹರಣೆ ಕೊಟ್ಟು ವಿವೇಚಿಸಿರಿ.

೩೩. ಆಟಗಳಲ್ಲಿ, ವ್ಯಾಕರಣದಲ್ಲಿ ಮತ್ತು ಮನೋವಿಜ್ಞಾನದಲ್ಲಿ ದೊರಕಿದ ಶಿಕ್ಷಣವು ಹೇಗೆ ಪ್ರತಿನಿತ್ಯ ಜೀವನದಲ್ಲಿ ಉಪಯೋಗ ಬೀಳುವದು ಎಂಬುದನ್ನು ಉದಾಹರಣೆ ಕೊಟ್ಟು ತಿಳಿಸಿ ಹೇಳಿರಿ.

೩೪. ಕರ್ನಾಟಕದಲ್ಲಿ ಇದ್ದ ಮೂವತ್ತು ವರ್ಷದ ಒಬ್ಬ ತಾಯಿ ಮತ್ತು ಅವಳ ಆರು ವರುಷದ ಮಗಳು ಇವರಿಬ್ಬರು ಮಹಾರಾಷ್ಟ್ರದಲ್ಲಿ ಹೋಗಿ ಇರುತ್ತಾರೆ. ಎರಡು ವರ್ಷಗಳಲ್ಲಿ ಮಗಳು ತಾಯಿಗಿಂತ ಹೆಚ್ಚು ಶುದ್ಧವಾಗಿ ಮರಾಠಿ ಶಬ್ದಗಳನ್ನು ಉಚ್ಚರಿಸಲಿಕ್ಕೆ ಕಲಿಯುತ್ತಾಳೆ. ಏಕೆ? ಮತ್ತು ಈ ಎರಡು ವರ್ಷಗಳಲ್ಲಿ ಮರಾಠಿ ಶಬ್ಧಗಳನ್ನು ಯಾರು ಹೆಚ್ಚು ಕಲಿಯುತ್ತಾರೆ? ಕಾರಣ ಕೊಟ್ಟು ವಿವರಿಸಿರಿ.

೩೫. ನಾಲ್ಕನೆಯ ಇಯತ್ತೆಯ ವಿದ್ಯಾರ್ಥಿಗಳಿಗೆ ಅಂಕಗಣಿತವನ್ನು ಅರ್ಥವುಳ್ಳದ್ದನ್ನಾಗಿ ಮಾಡುವ ಹತ್ತು ವಿಧಾನಗಳನ್ನು ಸೂಚಿಸಿರಿ. ಅನೇಕ ಉದಾಹರಣೆಗಳಿಂದ ಸಾಮಾನ್ಯ ನಿಯಮಗಳನ್ನು ಶಿಕ್ಷಕನು ಹೇಗೆ ಹೊರಡಿಸಬಲ್ಲನು?

೩೬. ಪ್ರಾಥಮಿಕ ಶಿಕ್ಷಣದ ಉದ್ದೇಶವು "ಔಪಚಾರಿಕ ಶಿಸ್ತು" (Formal Discipline) ಕಲಿಸುವದು ಇರುತ್ತದೆಯೋ ಅಥವಾ "ಸಾಮಾಜಿಕ ಉಪಯುಕ್ತತೆ" (Social Utility) ಕಲಿಸುವದು ಇರುತ್ತದೆಯೋ? ನಿಮ್ಮ ಅಭಿಪ್ರಾಯದ ಪ್ರಕಾರ ಈಗಿನ ಪ್ರಾಥಮಿಕ ಅಭ್ಯಾಸ ಪತ್ರಿಕೆಯಲ್ಲಿ ಯಾವ ಬದಲಾವಣೆಗಳು ಆಗತಕ್ಕದ್ದು? ನಿರ್ದಿಷ್ಟವಾಗಿ ಸೂಚಿಸಿರಿ.

೩೭. ಈಗಿನ ಹಾಯಸ್ಕೂಲ ಅಭ್ಯಾಸಕ್ರಮದಲ್ಲಿ ಜೀವನ ಉಪಯುಕ್ತತೆಯ ದೃಷ್ಟಿಯಿಂದ ಯಾವ ಬದಲಾವಣೆಗಳು ಅವಶ್ಯವಾಗಿವೆ ?

೩೮. ವಿಲಿಯಮ್ ಜೇಮ್ಸನು "ಚಟ"ಗಳ ಬಗ್ಗೆ ಒಂದೆಡೆ ಹೀಗೆ ಬರೆಯುತ್ತಾನೆ: "ಪ್ರತಿದಿವಸ ಉಚಿತವಾಗಿಯಾದರೂ ಒಂದಿಲ್ಲೊಂದು ಪ್ರಯತ್ನವನ್ನು ಮಾಡುತ್ತಲೇ ಇರು". ಈ ಹೇಳಿಕೆಯನ್ನು ಪೂರ್ಣವಾಗಿ ವಿಮರ್ಶಿಸಿ ಶಿಕ್ಷಣದ ವರ್ಗಾಂತರಕ್ಕೆ ಅದು ಹೇಗೆ ಸಂಬಂಧಿಸಿದೆ ಎಂಬುದನ್ನು ತಿಳಿಸಿರಿ.

೩೯. ಕೆಲವು ಶಿಕ್ಷಕರು ಬೇರೆ ಶಿಕ್ಷಕರಿಗಿಂತ ತಮ್ಮ ವಿದ್ಯಾರ್ಥಿಗಳಲ್ಲಿ ಹೆಚ್ಚು ವರ್ಗಾಂತರವನ್ನು ಉಂಟುಮಾಡಬಲ್ಲರು. ಹೇಗೆ ?

೪೦. ಇತರ ಸನ್ನಿವೇಶಗಳಲ್ಲಿ ಅಥವಾ ಪ್ರತಿನಿತ್ಯ ಜೀವನದಲ್ಲಿ ನಿಮಗೆ ಉಪಯೋಗ ಬೀಳುವ, ಈ ಅಧ್ಯಾಯದಿಂದ ಕಲಿತ, ಎರಡು ಸಾಮಾನ್ಯ ನಿಯಮಗಳನ್ನು ವಿವರಿಸಿರಿ. ಮತ್ತು ವರ್ಗಾಂತರದ ಬಗ್ಗೆ ನಿಮ್ಮ ಅನುಭವದಲ್ಲಿ ಬಂದ ಮೂರು ಉದಾಹರಣೆಗಳನ್ನು ಕೊಡಿರಿ.

## ಅಧ್ಯಾಯ ೯

# ಬುದ್ಧಿಯ ಬೆಳವಣಿಗೆ

ಬುದ್ಧಿ ಎಂಬುದು ಮನಸ್ಸಿನ ಒಂದು ಲಕ್ಷಣ, ಅನುಭವದ ಒಂದು ಭಾಗ. ಅರಿವು, ಅನಿಸಿಕೆ ಮತ್ತು ಬಯಕೆ ಎಂಬ ಮೂರು ಮುಖಗಳು ಅನುಭವದಲ್ಲಿ ಉಂಟೆಂಬುದನ್ನು ಎರಡನೆಯ ಅಧ್ಯಾಯದಲ್ಲಿ ತೋರಿಸಿದೆ. ಅರಿವು ಎಂದರೆ ತಿಳುವಳಿಕೆ, ಜ್ಞಾನ ಅಥವಾ ಬುದ್ಧಿ. ವಯಸ್ಸು ಮತ್ತು ಅನುಭವವು ಹೆಚ್ಚಾಗುತ್ತ ಹೋದ ಹಾಗೆ ಬುದ್ಧಿಯೂ ಸಾಮಾನ್ಯವಾಗಿ ಬೆಳೆಯುತ್ತದೆ. ಮಗುವಿನ ಬುದ್ಧಿಯನ್ನು ಬೆಳೆಯಿಸುವದು ಶಿಕ್ಷಣದ ಒಂದು ಧ್ಯೇಯ. ಹಿಂದಿನ ಅಧ್ಯಾಯಗಳಲ್ಲಿ ವಿಶೇಷವಾಗಿ ಅನಿಸಿಕೆ ಮತ್ತು ಬಯಕೆಗಳು ಪ್ರಾಮುಖ್ಯವಾಗಿದ್ದ ಪ್ರೇರಣೆಗಳ ವಿವರಣೆಯನ್ನು ಮತ್ತು ಶಿಕ್ಷಣದ ಕಾರ್ಯಕ್ರಮಗಳಲ್ಲಿ ಅವುಗಳ ಉಪಯೋಗವನ್ನು ಕುರಿತು ಹೇಳಲಾಗಿದೆ. ಬುದ್ಧಿಯ ಲಕ್ಷಣಗಳು ಯಾವವು,ಅದು ಬೆಳೆಯುವ ಬಗೆ ಯಾವುದು, ಮಕ್ಕಳ ಬುದ್ಧಿಯನ್ನು ಬೆಳೆಯಿಸುವುದಕ್ಕೆ ಶಿಕ್ಷಕನು ಹೇಗೆ ನೆರವಾಗಬಲ್ಲನು ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ವಿವೇಚಿಸಲಾಗುವದು.

### ಬುದ್ಧಿ ಬೆಳವಣಿಗೆಯ ಸಾಮಾನ್ಯ ಲಕ್ಷಣಗಳು

ತಿಳುವಳಿಕೆ, ವಿಚಾರ, ವಿವೇಕ, ಸ್ಮರಣೆ, ಮುಂದಾಲೋಚನೆ, ಊಹ, ಕಲ್ಪನೆ, ಅನುಮಾನ ಮತ್ತುತರ್ಕ ಇವು ಬುದ್ಧಿಯಿಂದ ನಡೆಯುವ ಕ್ರಿಯೆಗಳು. ಇವುಗಳ ಸಾಮಾನ್ಯ ಸ್ವರೂಪವನ್ನು ಕುರಿತು ಈ ಅಧ್ಯಾಯದಲ್ಲಿ ವಿವರಿಸಲಾಗುವದು. ಮುಂದಿನ ಅಧ್ಯಾಯದಲ್ಲಿ ಬುದ್ಧಿಯನ್ನು ಅಳೆಯುವ ವಿಷಯದ ಬಗೆಗೆ ವಿವೇಚಿಸಲಾಗಿದೆ.

ಮಗುವು ಒಂದೆರಡು ವರುಷದವನು ಆಗುವವರೆಗೆ ಅವನ ಶರೀರದ ಬೇಡಿಕೆಗಳ ಮತ್ತು ಸುಖದುಃಖಗಳ ಅರಿವು ಮೊದಲು ಅವನಿಗೆ ಉಂಟಾಗುತ್ತದೆ. ಅವನು ಹಸಿದಾಗ ಅಳುವನು, ಹಾಲುಣಿಸಿದಾಗ ಸಮಾಧಾನ

ಪಡುವನು. ತೊಟ್ಟಿಲಲ್ಲಿ ಮೈಗೆ ಏನಾದರೂ ಚುಚ್ಚಿದಾಗ ಹೊರಳಾಡುವನು. ಬರಬರುತ್ತ ಇಂದ್ರಿಯಗಳ ಮುಖಾಂತರ ಅವನ ಜ್ಞಾನವು ಬೆಳೆಯುವದು. ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ತ್ವಚಗಳ ಸಹಾಯದಿಂದ ಅವನು ತನ್ನ ಸುತ್ತುಮುತ್ತಲಿನ ಪ್ರಪಂಚದ ಜ್ಞಾನವನ್ನು ಪಡೆಯುವನು. ಕೈಗೆ ಸಿಕ್ಕ ಪದಾರ್ಥವನ್ನು ಬಾಯಲ್ಲಿ ಇಟ್ಟುಕೊಳ್ಳುವನು, ಕಡಿಯುವನು, ಮುರಿಯುವನು, ಚಲ್ಲುವನು. ಈ ರೀತಿಯಾಗಿ ಬೇರೆ ಬೇರೆ ವಸ್ತುಗಳ ಜ್ಞಾನವು ಅವನಿಗೆ ಆಗುವದು. ಕಣ್ಣುಗಳಿಂದ ಸರಿದಾಡುವ ವಸ್ತುಗಳ ಮತ್ತು ಬಗೆ ಬಗೆಯ ಬಣ್ಣಗಳ ಪರಿಚಯವು ಆಗುವದು; ಕಿವಿಗಳಿಂದ ಸಪ್ಪಳಗಳ ಜ್ಞಾನವು ಆಗುವದು. ಇದರಂತೆ ನಾಲಿಗೆಯಿಂದ ರುಚಿಗಳ ಜ್ಞಾನ, ಮೂಗಿನಿಂದ ವಾಸನೆಗಳ ಜ್ಞಾನ ಮತ್ತು ತ್ವಚದಿಂದ ಒರಟು-ನುಣುಪುಗಳ ಜ್ಞಾನ, ಹಸಿ-ಬಿಸಿಗಳ ಜ್ಞಾನ ಉಂಟಾಗುವದು. ಇಂದ್ರಿಯಗಳ ಮುಖಾಂತರ ಪಡೆಯುವ ಈ ಜ್ಞಾನಕ್ಕೆ **ಪ್ರತ್ಯಕ್ಷ ಜ್ಞಾನ** (Perception) ಎಂದು ಅನ್ನುತ್ತಾರೆ. ಪ್ರತ್ಯಕ್ಷಜ್ಞಾನವು ವಿಚಾರ ಶಕ್ತಿಯ ಮೊದಲನೆಯ ಮೆಟ್ಟು. ವಸ್ತುಗಳು ಇಂದ್ರಿಯಗಳ ಎದುರಿನಲ್ಲಿ ಇಲ್ಲದಾಗಲೂ ಅವುಗಳ ಬಗೆಗೆ ಮನಸ್ಸು ವಿಚಾರವನ್ನು ಮಾಡಬಲ್ಲದು. ಓದುವ ಕೋಣೆಯನ್ನು ಬಿಟ್ಟು ಹೊರಗೆ ಬಂದಾಗ ನಾನು ಓದುತ್ತಿದ್ದ ಪುಸ್ತಕದ ಬಣ್ಣ, ಆಕಾರ ಮೊದಲಾದ ವಿಶೇಷ ಗುಣಗಳನ್ನು ಕುರಿತು ವಿಚಾರಿಸಬಲ್ಲೆನು. ಇದು ನನ್ನ ಕಲ್ಪನಾಶಕ್ತಿ. ಹೀಗೆ ಕಣ್ಣಿಗೆ ಕಾಣದ ವಸ್ತುಗಳ ಬಗ್ಗೆ ಮನಸ್ಸಿನಲ್ಲಿಯೇ ವಿಚಾರ ಮಾಡುವದು **ಕಲ್ಪನಾಶಕ್ತಿ.** ಇದೇ ರೀತಿಯಾಗಿ ಹಿಂದಿನ ಕಾಲದಲ್ಲಿ ಆಗಿ ಹೋದ ಮತ್ತು ಮುಂದಿನ ಕಾಲದಲ್ಲಿ ಆಗಬಹುದಾದ ಸಂಗತಿಗಳ ವಿಚಾರವನ್ನೂ ನಾನು ಮಾಡಬಲ್ಲೆನು. ಈ ಕಾಲ್ಪನಿಕ ವಿಚಾರವು ಬುದ್ಧಿಶಕ್ತಿಯ ಎರಡನೆಯ ಮೆಟ್ಟು.

ಮಗುವು ತನ್ನ ಬುದ್ಧಿಬಲದಿಂದ ಸಂಕೇತಗಳನ್ನು ಉಪಯೋಗಿಸುತ್ತಾನೆ. ಹಾಲನ್ನು ಉಂಡು ಸಮಾಧಾನವಾಗುತ್ತಿದ್ದ ಕೂಸು ಹಾಲಿನ ಬಾಟ್ಲಿಯನ್ನು ಕಂಡು ತನಗೆ ಹಾಲನುಣಿಸಲಿಕ್ಕೆ ಅದನ್ನು ತಂದಿರುವರೆಂದು ತಿಳಿದು ಅದು ಹಿಗ್ಗುವದು. ತಂದೆಯು ಪೋಷಾಕು ಹಾಕಿಕೊಂಡು ಸಜ್ಜಾಗುವದನ್ನು ಕಂಡು ಅವನು ಪೇಟೆಗೆ ಅಥವಾ ಕಚೇರಿಗೆ ಹೋಗುವನೆಂದು ಮಗುವು

ತರ್ಕ ಮಾಡಿ ನಾನೂ ಪೇಟೆಯಲ್ಲಿ ಬರುತ್ತೇನೆಂದು ಅನ್ನುವನು. ಬರಬರುತ್ತ ಶಬ್ದಗಳನ್ನು ಉಪಯೋಗಿಸಿ ಮಾತಾಡುವದನ್ನು ಕಲಿಯುವನು. ಭಾಷೆಯ ಸಹಾಯದಿಂದ ಬೇರೆಯವರ ವಿಚಾರಗಳನ್ನು ತಿಳಿದುಕೊಳ್ಳುವನು, ತನ್ನ ವಿಚಾರಗಳನ್ನು ಅವರಿಗೆ ತಿಳಿಸುವನು. ಕೈಕೊಳ್ಳಬೇಕಾದ ಕೆಲಸದ ಬಗ್ಗೆ ಗುರಿಯನ್ನು ನಿಶ್ಚಯಿಸುವದು. ಮುಂದಾಲೋಚನೆಯನ್ನು ಮಾಡುವದು, ಒಂದು ವಿಷಯವನ್ನು ತಕ್ಕೊಂಡು ಅದರಬಗ್ಗೆ ಸೂಕ್ಷ್ಮ ವಿಚಾರಮಾಡುವದು, ಹೀಗೆ ಮಾಡಿದರೆ ಹೀಗೆ ಆದೀತು, ಹಾಗೆ ಮಾಡಿದರೆ ಹಾಗೆ ಆದೀತು ಎಂದು ಮನಸ್ಸಿನಲ್ಲಿಯೇ ಪ್ರಯೋಗ ಮಾಡುವದು ಮತ್ತು ಸಿದ್ಧಾಂತಗಳನ್ನು ಊಹಿಸುವದು ಇವೆಲ್ಲವು ಬುದ್ಧಿಯ ಕೆಲಸ.

ಬುದ್ಧಿಯ ಬೆಳವಣಿಗೆಯ ಮೆಟ್ಟುಗಳು ಹೀಗೆಯೇ ಇರುತ್ತವೆಂದು ಹೇಳಲು ಬರುವಂತಿಲ್ಲ. ಆದರೆ ಬೇರೆ ಬೇರೆ ವಯಸ್ಸಿನಲ್ಲಿ ಬುದ್ಧಿಯ ಕೆಲವೊಂದು ವಿಶೇಷ ಲಕ್ಷಣಗಳು ಒಡೆದು ಕಾಣುತ್ತವೆ. ಮಗುವು ಮೊದಲಿನ ಒಂದೆರಡು ವಯಸ್ಸಿನಲ್ಲಿ ಇಂದ್ರಿಯಗಳ ಮುಖಾಂತರವೇ ಜ್ಞಾನವನ್ನು ಪಡೆಯುವನು. ವಸ್ತುಗಳನ್ನು ಮುಟ್ಟಿ ನೋಡಿ ಅವುಗಳ ಪರಿಚಯ ಮಾಡಿಕೊಳ್ಳುವನು. ಸುಮಾರು ಎರಡನೆಯ ವಯಸ್ಸಿನಲ್ಲಿ ತೊದಲು ನುಡಿಗಳನ್ನು ಆಡಲು ಪ್ರಾರಂಭಿಸುವನು. ಬಾಲ್ಯದಲ್ಲಿ ಕೃತಕ ನಂಬುಗೆಯ ಆಟಗಳಲ್ಲಿ ಆನಂದಪಡುವನು. ಮೂರನೆಯ ವಯಸ್ಸಿನಿಂದ ಸುಮಾರು ಹನ್ನೆರಡನೆಯ ವಯಸ್ಸಿನವರೆಗೆ ಕುತೂಹಲ ಪ್ರೇರಣೆಯು ಅಥವಾ ಚಿಕಿತ್ಸಕ ಬುದ್ಧಿಯು ಪ್ರಬಲವಾಗುತ್ತದೆ. ಚಿಕ್ಕಮಕ್ಕಳು ಪ್ರಶ್ನೆಗಳ ಸುರಿಮಳೆಯನ್ನು ಕರೆಯುವದು ಎಲ್ಲರಿಗೆ ಗೊತ್ತಿದ್ದ ಮಾತು. ಏಕೆ, ಏನು, ಹೇಗೆ ಮುಂತಾದ ಪ್ರಶ್ನೆಗಳು ಸಣ್ಣ ಹುಡುಗರ ನಾಲಿಗೆಯ ಮೇಲೆ ಕುಣಿಯುತ್ತಿರುತ್ತವೆ ತಾನು ತನ್ನದು ಎಂಬ ಅಭಿಮಾನ ಮಕ್ಕಳಲ್ಲಿ ಕೂಡಲೇ ಹೊರಬೀಳುತ್ತದೆ. ಐದರಿಂದ ಹನ್ನೆರಡು ವಯಸ್ಸಿನಲ್ಲಿಯ ಮಕ್ಕಳು ಶೂರತನದ ಕೆಲಸ ಮಾಡಲು ಹಾತೊರೆಯುತ್ತಾರೆ. ಮುಂದೆ ಮಗುವು ತಾರುಣ್ಯದಲ್ಲಿ ಇದ್ದಾಗ ಶೃಂಗಾರದ ಲೀಲೆಗಳು ಅವನ ಮನಸ್ಸನ್ನು ಮರುಳು ಮಾಡುತ್ತವೆ.

## ಭಾಷೆಯ ಬೆಳವಣಿಗೆ

ದೊಡ್ಡವರು ಆಡುವ ಮಾತುಗಳನ್ನೂ ಅವರ ಭಾಷೆಯನ್ನೂ ಮಗುವು ಪ್ರತಿನಿತ್ಯ ಲಕ್ಷ್ಯಗೊಟ್ಟು ಕೇಳಿ ಕೇಳಿ ಅದನ್ನೇ ಅನುಕರಿಸಹತ್ತುವನು. ಶಬ್ದಗಳನ್ನು ಕೇಳುವದರಿಂದ ಮತ್ತು ಉಪಯೋಗಿಸುವದರಿಂದ ಅವನು ಭಾಷೆಯನ್ನು ಕಲಿಯುವನು. ಅವನು ತಾನಾಗಿಯೇ ಶಬ್ದಗಳನ್ನು ಉಚ್ಚರಿಸಿ ಮಾತುಗಳನ್ನು ಆಡುವ ಮೊದಲು ದೊಡ್ಡವರ ಮಾತುಗಳ ಅರ್ಥವನ್ನು ತಿಳಿದುಕೊಳ್ಳಲು ಪ್ರಯತ್ನಿಸುವನು. ಇದು ಬುದ್ಧಿಯ ಕೆಲಸ. ಆ ಮೇಲೆ ಮಗುವಿನ ಬಾಯಿಂದ ತೊದಲು ನುಡಿಗಳು ಹೊರಡುವವು. ಅವನು ತನ್ನ ಆನಂದ ನೋವು, ಸಿಟ್ಟು ಸೆಡವು, ಬೇಕು ಬೇಡ, ಮುಂತಾದ ಮನೋಗತ ಗಳನ್ನು ಸ್ಪಷ್ಟವಾದ ಶಬ್ದಗಳಿಂದ ಹೇಳದಿದ್ದರೂ ಒಂದು ಬಗೆಯ ಧ್ವನಿ ಯಿಂದ ಅವುಗಳನ್ನು ಸೂಚಿಸುವನು. ಬರಬರುತ್ತ ಬಾಲಭಾಷೆಯು ಪ್ರೌಢ ಭಾಷೆಯಾಗಿ ಪರಿಣಮಿಸುವದು. ಮಗುವು ತನ್ನ ಯಾವ ವಯಸ್ಸಿನಲ್ಲಿ ಶಬ್ದಗಳನ್ನು ಉಪಯೋಗಿಸಿ ಮಾತಾಡಲಿಕ್ಕೆ ಪ್ರಾರಂಭಿಸುವನು ಎಂಬುದನ್ನು ನಿಶ್ಚಯವಾಗಿ ಹೇಳಲು ಬರುವಂತಿಲ್ಲ. ಕೆಲವು ಹುಡುಗರು ಮಾತುಗಳನ್ನು ಬೇಗ ಕಲಿಯುವರು, ಕೆಲವರು ತಡವಾಗಿ ಕಲಿಯುವರು. ಸಾಮಾನ್ಯವಾಗಿ ಮಂದ ಬುದ್ಧಿಯ ಹುಡುಗರಿಗೆ ಮಾತುಗಳು ಬೇಗ ಬರುವದಿಲ್ಲ. ದಿವಸಗಳು ಕಳೆದ ಹಾಗೆ, ಜನರ ಒಡನಾಟವು ಹೆಚ್ಚಿದ ಹಾಗೆ ಮತ್ತು ವಿಚಾರಶಕ್ತಿಯು ಬೆಳೆದ ಹಾಗೆ ಶಬ್ದಸಂಪತ್ತು ಬೆಳೆಯುವದು. ಕೆಲವು ಶಬ್ದಗಳನ್ನು ಆಡಲಿಕ್ಕೆ ಬಂದ ಮೇಲೆ ಎಷ್ಟೋ ಹುಡುಗರು ಬಳಬಳ ಮಾತು ಸುರಿಸುವರು. ಎರಡನೆ ಯವರು ಉಪಯೋಗಿಸಿದ ಶಬ್ದಗಳ ಅರ್ಥವನ್ನು ತಿಳಿದುಕೊಳ್ಳುವದು ಮತ್ತು ಶಬ್ದಗಳನ್ನು ಸ್ವತಃ ಉಪಯೋಗಿಸುವದು, ಇವು ಎರಡು ಬೇರೆ ಬೇರೆ ಸಾಮರ್ಥ್ಯಗಳು. ತಮಗೆ ಅರ್ಥವಾಗುವ ಎಷ್ಟೋ ಶಬ್ದಗಳನ್ನು ಉಪಯೋಗಿ ಸಲು ಜನರು ಅಸಮರ್ಥರಾಗಿರುತ್ತಾರೆ. ಪ್ರತಿಯೊಬ್ಬನಲ್ಲಿ ಬಳಸುವ ಶಬ್ದಗಳ (Active Vocabulary) ಪ್ರಮಾಣವು ಪರಿಚಯ ಶಬ್ದಗಳ (Recognition Vocabulary) ಪ್ರಮಾಣಕ್ಕಿಂತ ಕಡಿಮೆಯಾಗಿರುತ್ತದೆ. ಮಕ್ಕಳು ಪುಸ್ತಕದಲ್ಲಿಯ ಶಬ್ದಗಳನ್ನು ಮತ್ತು ವಾಕ್ಯಗಳನ್ನು ಓದಿ ಅರ್ಥಮಾಡಿಕೊಳ್ಳ ಬಹುದು ಆದರೆ ಶಬ್ದಗಳನ್ನು ಮತ್ತು ವಾಕ್ಯರಚನೆಯನ್ನು ತಾವಾಗಿ ಉಪ

ಯೋಗಿಸಬೇಕಾದರೆ ರೂಢಿಯು ಹೆಚ್ಚಾಗಿ ಬೇಕಾಗುತ್ತದೆ- ಸಾಮಾನ್ಯವಾಗಿ ವಯಸ್ಸು ಹೆಚ್ಚಿದ ಹಾಗೆ ಶಬ್ದಗಳ ಮತ್ತು ಪದಗಳ ಪ್ರಯೋಗವು ಹೆಚ್ಚುವದು

ಮಗುವು ಯಾವ ಆವರಣದಲ್ಲಿ ಹುಟ್ಟಿ ಬೆಳೆಯುವನೋ ಆ ಆವರಣದ ಪರಿಣಾಮವು ಅವನ ಭಾಷೆಯ ಮೇಲೆ ಆಗದೇ ಇರದು. ಅವನ ಉಚ್ಚಾರ ಶಬ್ದಪರಿಚಯ, ಪದಪ್ರಯೋಗ, ವಾಕ್ಯರಚನೆ ಮತ್ತು ಭಾಷೆಯ ಶೈಲಿ ಇವು ಅವನ ಒಡನಾಡಿಗಳಂತೆಯೇ ಮಾರ್ಪಡುತ್ತವೆ. ಸುಶಿಕ್ಷಿತ ಮನೆತನದಲ್ಲಿ ಬೆಳೆದ ಮಗುವಿನ ಭಾಷೆ ಅಶಿಕ್ಷಿತ ಮನೆತನದಲ್ಲಿ ಬೆಳೆದ ಮಗುವಿನ ಭಾಷೆಗಿಂತ ಸುಧಾರಿಸಿದ್ದು ಇರುತ್ತದೆ. ತಂದೆ ತಾಯಿಗಳು ಕಲಿತವರು ಇದ್ದರೆ ಅವರ ಮಕ್ಕಳ ಶಬ್ದಸಂಗ್ರಹ ದೊಡ್ಡದಾಗಿರುತ್ತದೆ; ಅದರಂತೆ ತಂದೆ ತಾಯಿಗಳು ಕಲಿಯದವರು ಇದ್ದರೆ ಅವರ ಮಕ್ಕಳ ಶಬ್ದಸಂಗ್ರಹವು ಸಣ್ಣದಾಗಿರುತ್ತದೆ. ಅಶಿಕ್ಷಿತರ ಮನೆಯಲ್ಲಿ ಬೆಳೆದ ಹುಡುಗರು ಶಾಲೆಯಲ್ಲಿ ಪ್ರಯೋಗಿಸುವ ಭಾಷೆಯ ಪದ್ಧತಿಗಳನ್ನು ಕಲಿಯಬೇಕಾದರೆ ಬಹಳ ಶ್ರಮಪಡಬೇಕಾಗುವದು. ಶಿಕ್ಷಕರು ಇಂಥ ಹುಡುಗರ ಭಾಷಾಶಿಕ್ಷಣಕ್ಕೆ ವಿಶೇಷ ಲಕ್ಷ್ಯವನ್ನು ಪೂರೈಸಬೇಕಾಗುವದು. ಭಾಷೆಯ ಬೆಳವಣಿಗೆಯು ಬುದ್ಧಿಯ ಬೆಳವಣಿಗೆಯನ್ನು ಅವಲಂಬಿಸಿರುತ್ತದೆ. ಎರಡು ವರುಷದ ಅವಳಿ-ಜವಳಿ ಮಕ್ಕಳ ಒಂದು ಪ್ರಯೋಗವನ್ನು ಮಾಡಲಾಗಿತ್ತು. ಅವರಲ್ಲಿ ಒಬ್ಬ ಹುಡುಗನಿಗೆ ೬ ವಾರಗಳ ವರೆಗೆ ಭಾಷೆಯನ್ನು ಕೇಳುವ ಪ್ರಸಂಗವನ್ನೇ ತಪ್ಪಿಸಿತ್ತು. ಆ ಅವಧಿಯಲ್ಲಿ ಮತ್ತೊಬ್ಬ ಹುಡುಗನು ಭಾಷೆಯ ಸಂಪರ್ಕದಿಂದ ಕೆಲವು ಹೊಸ ಶಬ್ದಗಳನ್ನು ಕಲಿತಿದ್ದನು. ಆದರೆ ಆ ಅವಧಿಯ ನಂತರ ನಿಯಂತ್ರಿತ ಹುಡುಗನು ಕೆಲವು ದಿವಸಗಳಲ್ಲಿಯೇ ಶಬ್ದಗಳ ಪ್ರಯೋಗದಲ್ಲಿ ಎರಡನೆಯ ಹುಡುಗನಿಗೆ ಸರಿಸಮಾನನಾದನು. ಇದರಿಂದ ಹೊರಡುವ ಮಹತ್ವದ ಶೈಕ್ಷಣಿಕ ಸಿದ್ಧಾಂತವೇನಂದರೆ ಮಕ್ಕಳು ಹೆಚ್ಚಿನ ವಯದವರು ಆಗದ ಮುನ್ನ, ಅವರ ಬುದ್ಧಿಯು ಹದನವಾಗದ ಮುನ್ನ ಅವರ ಎಳೆಯ ವಯಸ್ಸಿನಲ್ಲಿ ಅವಸರಪಟ್ಟು ಭಾಷೆಯ ಅಭ್ಯಾಸವನ್ನಾಗಲಿ ಅಥವಾ ಶಾಲೆಯ ಇತರ ಅಭ್ಯಾಸವನ್ನಾಗಲಿ ಮಾಡಿಸುವದು ಶ್ರಮದ ಮತ್ತು ವೇಳೆಯ ಹಾನಿ. ಅಭ್ಯಾಸದ ಕ್ರಮವು ಮಗುವಿನ ಬೆಳವಣಿಗೆಗೆ ಹೊಂದಿಕೆಯಾಗಿರಬೇಕು.

ಶಬ್ದಗಳನ್ನು ಸರಿಯಾದ ಅರ್ಥದಲ್ಲಿ ಉಪಯೋಗಿಸುವದು ಭಾಷೆಯ ಬೆಳವಣಿಗೆಯ ಒಂದು ಮಹತ್ವದ ಲಕ್ಷಣ. ಕೆಲವೊಂದು ಶಬ್ದಗಳಿಗೆ ಅನೇಕ ಅರ್ಥಗಳು ಆಗುವದುಂಟು. ಯಾವ ಅರ್ಥದಲ್ಲಿ ಒಂದು ಶಬ್ದವು ಉಪಯೋಗಿಸಲ್ಪಟ್ಟಿದೆ ಎಂಬುದನ್ನು ಸಂದರ್ಭದ ಮೇಲಿಂದ ತಿಳಿದುಕೊಳ್ಳ ಬೇಕಾಗುತ್ತದೆ.

ಶಿಕ್ಷಕನು ಪಾಠ ಕೊಡುವಾಗ ತಾನು ಉಪಯೋಗಿಸುವ ಶಬ್ದಗಳು ಮಕ್ಕಳಿಗೆ ತಿಳಿಯುವವೋ ಇಲ್ಲವೋ ಎಂಬುದನ್ನು ವಿಚಾರಿಸತಕ್ಕದ್ದು. ಶಿಕ್ಷಕನು ಒಂದು ಅರ್ಥದಲ್ಲಿ ಶಬ್ದವನ್ನು ಉಪಯೋಗಿಸಿದ್ದರೆ ಮಕ್ಕಳು ಬೇರೊಂದು ಅರ್ಥದಲ್ಲಿ ಅದನ್ನು ತಿಳಿದುಕೊಳ್ಳಬಹುದು. ಇದರಿಂದ ಮಕ್ಕಳಲ್ಲಿ ವಿಚಾರಗಳ ಗೊಂದಲವು ಉಂಟಾಗುವದು. ಉದಾಹರಣಾರ್ಥವಾಗಿ ಸಮಾಜ ವಿಜ್ಞಾನದ ( Social Science ) ಅಥವಾ ಲೋಕದಾಡಳಿತೆಯ ( Administration ) ವಿಷಯವನ್ನು ಕಲಿಸುವಾಗ 'ರಾಜ್ಯಪಾಲಕ', 'ಚಾಣಕ್ಯನೀತಿ', 'ಪರರಾಷ್ಟ್ರ ನೀತಿ', 'ಸಂಯುಕ್ತ ರಾಷ್ಟ್ರ', 'ಪಾರ್ಲಿಮೆಂಟ', 'ಅಸೆಂಬ್ಲಿ', 'ಕೌನ್ಸಿಲ್', 'ಲೋಕಸಭೆ', 'ನಿಯಂತ್ರಣ', 'ಮಿತವ್ಯಯ', 'ಶರೀರಸಂಬಂಧ', 'ಸಂಸ್ಕೃತಿ', ಮೊದಲಾದ ಪದಗಳನ್ನು ಶಿಕ್ಷಕನು ಉಪಯೋಗಿಸಬೇಕಾಗುತ್ತದೆ. ಆದರೆ ಇಂಥ ಪಾರಿಭಾಷಿಕ ಶಬ್ದಗಳ ಸರಿಯಾದ ಅರ್ಥವು ಮಕ್ಕಳಿಗೆ ಆಗದಿದ್ದರೆ ಶಿಕ್ಷಕನ ವಿವರಣೆಯು ಕೇವಲ ಶಬ್ದಾಡಂಬರವಾಗುವದು. ಅರ್ಥವಾಗದ ಪಾಠಗಳಿಂದ ಮಕ್ಕಳಿಗೆ ವಿಷಯ ಜ್ಞಾನದ ಗಂಧವೇ ಇಲ್ಲದಂತಾಗುವದು. ಶಿಕ್ಷಕನು ಉಪಯೋಗಿಸುವ ಎಲ್ಲ ಶಬ್ದಗಳು ಮಕ್ಕಳಿಗೆ ತಿಳಿಯುವವು ಎಂದು ನಂಬುವದು ತಪ್ಪು. ಮಕ್ಕಳ ಶಬ್ದಪರಿಚಯವನ್ನು ಆಗಾಗ್ಗೆ ಪರೀಕ್ಷಿಸುವದು ಒಳ್ಳೆಯದು. ಒಂದು ವಿಶಿಷ್ಟ ಶಬ್ದವನ್ನು ತಾವಾಗಿಯೇ ರಚಿಸಿದ ವಾಕ್ಯದಲ್ಲಿ ಉಪಯೋಗಿಸಲಿಕ್ಕೆ ಮಕ್ಕಳಿಗೆ ಹೇಳಿ ಅವರ ಶಬ್ದಸಂಪತ್ತನ್ನು ಪರೀಕ್ಷಿಸಬೇಕು.

**ತಿಳುವಳಿಕೆಯ ಬೆಳವಣಿಗೆ**

ಮಕ್ಕಳಿಗೆ ವಿಷಯವು ತಿಳಿಯುವಂತೆ ಕಲಿಸುವದು ಶಿಕ್ಷಣ ಮನೋ ವಿಜ್ಞಾನದ ಒಂದು ಕೇಂದ್ರ ಪ್ರಶ್ನೆ. ಶಿಕ್ಷಕನು ಹೇಳುವದು ಅಥವಾ ಪಠ್ಯ

ಪುಸ್ತಕದಲ್ಲಿ ಬರೆದಿರುವದು ಮಕ್ಕಳಿಗೆ ಅರ್ಥವಾಗದಿದ್ದರೆ ಅದರಿಂದ ಪ್ರಯೋಜನವಾದರೂ ಏನು ? ವಿಷಯುವನ್ನು ತಿಳಿಸುತ್ತಿರುವಾಗ ಮಕ್ಕಳಿಗೆ ಅರ್ಥವಾಗುವ ಶಬ್ದಗಳನ್ನೇ ಒಳಸಬೇಕು.

ಭಾಷೆಯು ಅಥವಾ ಶಬ್ದಗಳು ಮಕ್ಕಳಿಗೆ ಅಭ್ಯಾಸವನ್ನು ಹೇಳಿಕೊಡುವ ಮುಖ್ಯ ಸಾಧನವಾಗಿರುತ್ತದೆ. ಶಿಕ್ಷಕನು ಉಪಯೋಗಿಸುವ ಶಬ್ದಗಳು ಮತ್ತು ಪುಸ್ತಕದಲ್ಲಿ ಉಪಯೋಗಿಸಲ್ಪಟ್ಟ ಶಬ್ದಗಳು ಮಕ್ಕಳ ತಿಳುವಳಿಕೆಯು ಮಟ್ಟಕ್ಕೆ ನಿಲುಕುವಂತಹವು ಅಥವಾ ಅವರ ತಿಳುವಳಿಕೆಯನ್ನು ಹೆಚ್ಚಿಸುವಂತಹವು ಇರತಕ್ಕದ್ದು. ರಾಜಪ್ರಮುಖ, ಲೋಕಸತ್ತೆ, ನ್ಯಾಯ, ಸಮಾನತೆ, ಮಿತವ್ಯಯ, ಕ್ಷೇತ್ರ ಮುಂತಾದ ಪದಗಳಿಗೆ ವಿಶೇಷ ಅರ್ಥವಿರುತ್ತದೆ. ಇಂಥ ಪಾರಿಭಾಷಿಕ ಶಬ್ದಗಳನ್ನು ಪ್ರಯೋಗಿಸುವ ಮೊದಲು ಅವುಗಳ ಅರ್ಥವನ್ನೂ ವಿದ್ಯಾರ್ಥಿಗಳಿಗೆ ಪರಿಚಯ ಮಾಡಿಕೊಡಬೇಕು. ಸಂದರ್ಭಗಳ ಮೇಲೆ ಅವುಗಳ ಅರ್ಥವು ಬದಲಾಗಲೂ ಬಹುದು. ಆದರೆ ಶಬ್ದಗಳನ್ನು ಬರಹಗಾರನು ಒಂದು ಅರ್ಥದಲ್ಲಿ, ಶಿಕ್ಷಕನು ಮತ್ತೊಂದು ಅರ್ಥದಲ್ಲಿ ಮತ್ತು ವಿದ್ಯಾರ್ಥಿಗಳು ಬೇರೊಂದು ಅರ್ಥದಲ್ಲಿ ತಿಳಿದುಕೊಂಡರೆ ವಿಚಾರಗಳ ಗೊಂದಲವಾಗುತ್ತದೆ. ಹೀಗಾಗದಂತೆ ನೋಡಿಕೊಳ್ಳುವದು ಶಿಕ್ಷಕನ ಒಂದು ಮುಖ್ಯ ಕೆಲಸ.

ಕಲೆಯುವದಕ್ಕೆ ಮೊದಲು ಅನುಭವ. ಮಕ್ಕಳ ಅನುಭವದಲ್ಲಿ ಯಾವದು ಬಂದಿರುತ್ತದೆಯೋ ಅದು ಅವರಿಗೆ ಅರ್ಥವಾಗುತ್ತದೆ. ಮತ್ತು ಅವರ ಅನುಭವದಲ್ಲಿ ಯಾವದು ಬಂದಿರುವದಿಲ್ಲವೋ ಅದು ಅವರಿಗೆ ಅರ್ಥವಾಗುವದಿಲ್ಲ. ಅನುಭವವು ಪ್ರತ್ಯಕ್ಷವಾಗಿದ್ದರೆ ಒಳ್ಳೆಯದು. ಆದರೆ ಅನೇಕ ಬಾರೆ ಅನುಭವಗಳನ್ನು ಸೂಚಿಸಲಿಕ್ಕೆ ಬಗೆಬಗೆಯ ಸಂಕೇತಗಳನ್ನು ಅಥವಾ ಸನ್ನೆಗಳನ್ನು ಉಪಯೋಗಿಸಬೇಕಾಗುತ್ತದೆ. ಶಬ್ದ, ಚಿತ್ರ, ಪ್ರತಿಮೆ ನಕಾಶ ಮೊದಲಾದ ಸಾಧನಗಳಿಂದ ಬೇರೆ ಬೇರೆ ಅನುಭವಗಳನ್ನು ಸೂಚಿಸುವದುಂಟು. ಇವುಗಳಲ್ಲಿ ಮುಖ್ಯವಾದುದು ಶಬ್ದಸಂಕೇತ. ಏಕೆಂದರೆ ಅದು ಮೇಲಿಂದ ಮೇಲೆ ಉಪಯೋಗಿಸಲ್ಪಡುತ್ತದೆ. ಒಂದು ವಸ್ತುವನ್ನು ವಿಚಾರವನ್ನು, ಕ್ರಿಯೆಯನ್ನು ಅಥವಾ ಸನ್ನಿವೇಶವನ್ನು ಪ್ರತಿನಿಧಿಸಲಿಕ್ಕೆ ಶಬ್ದಗಳನ್ನು ಉಪಯೋಗಿಸುತ್ತೇವೆ. ಅಂದರೆ ಪ್ರತಿಯೊಂದು ಶಬ್ದಕ್ಕೆ

ಅರ್ಥವಿರುತ್ತದೆ. ಶಬ್ದವು ಧ್ವನಿಯ ರೂಪದಲ್ಲಿ ಅಥವಾ ಅಕ್ಷರಗಳ ರೂಪದಲ್ಲಿ ಹೊರಬೀಳುತ್ತದೆ. ಅರ್ಥದ ಬೆಳವಣಿಗೆ ಆದಂತೆ ಬುದ್ಧಿಯ ಬೆಳವಣಿಗೆ ಆಗುತ್ತದೆ.

ಒಂದು ವಸ್ತುವಿನ ಉಪಯೋಗದಿಂದ ಅದರ ವಿಶೇಷ ಕಲ್ಪನೆಯು ಮಗುವಿಗೆ ಬರುತ್ತದೆ. 'ಚಂಡು' ಅಂದರೆ 'ಒಗೆದಾಡುವ ವಸ್ತು' 'ಕುರ್ಚಿ' ಅಂದರೆ 'ಕೂಡ್ರುವ ವಸ್ತು' ಎಂದು ಅವನು ತಿಳಿದುಕೊಳ್ಳುತ್ತಾನೆ. ವಸ್ತುವಿನ ಬಗೆಗೆ ಜ್ಞಾನವು ಹೆಚ್ಚಿದ ಹಾಗೆ ಅದರ ಅರ್ಥವೂ ಹೆಚ್ಚಾಗುತ್ತದೆ. 'ವಿಮಾನ' ಎಂಬ ಶಬ್ದದ ಅರ್ಥವು ಮಗುವಿಗೆ ಬೇರೆಯಾಗಿರುತ್ತದೆ. ಪ್ರವಾಸಿಕನಿಗೆ ಬೇರೆಯಾಗಿರುತ್ತದೆ. ಮತ್ತು ವಿಜ್ಞಾನಿಗೆ ಬೇರೆಯಾಗಿರುತ್ತದೆ. ಏಕೆಂದರೆ ಆ ವಸ್ತುವಿನ ಬಗ್ಗೆ ಅವರವರ ಅನುಭವಗಳು ಬೇರೆ ಬೇರೆಯಾಗಿರುತ್ತವೆ. ಅದರಂತೆ ಜಗತ್ತು ಒಂದೇಯಾಗಿದ್ದರೂ ಅದು ಬೇರೆ ಬೇರೆ ಜನರಿಗೆ ಬೇರೆ ಬೇರೆಯಾಗಿ ಕಾಣುತ್ತದೆ. ಮನುಷ್ಯನು ತಾನು ಹೇಗೆ ಇರುತ್ತಾನೆಯೋ ಹಾಗೆಯೇ ಅವನಿಗೆ ಜಗತ್ತು ಕಾಣುತ್ತದೆ.

ಆದುದರಿಂದ ಯಾವ ವಿಷಯದ ಬಗ್ಗೆ ಮಗುವಿನ ಜ್ಞಾನವು ಬೆಳೆಯಬೇಕಾಗಿದೆಯೋ ಆ ವಿಷಯದ ಬಗ್ಗೆ ಅವನಿಗೆ ಹೆಚ್ಚಾದ ಅನುಭವವನ್ನು ಕೊಡಬೇಕಾಗುವದು. ಶಬ್ದದ ಹಿಂದೆ ವಸ್ತು, ಆ ವಸ್ತುವಿನ ಹಿಂದೆ ಅನುಭವ ಮತ್ತು ಆ ಅನುಭವದ ಹಿಂದೆ ಅರ್ಥ. ಹೀಗೆ ಇವೆಲ್ಲವು ಒಂದನ್ನೊಂದು ಆಶ್ರಯಿಸಿರುತ್ತವೆ. ಅರ್ಥವು ಅನುಭವವನ್ನು ಅವಲಂಬಿಸಿರುವುದರಿಂದ ನಾವು ನಮ್ಮ ಅನುಭವದಲ್ಲಿ ಬಂದಷ್ಟನ್ನು ಮಾತ್ರ ಶಬ್ದಕ್ಕೆ ಅರ್ಥವನ್ನು ಹಚ್ಚುತ್ತೇವೆ. ಶಿಕ್ಷಣದಲ್ಲಿ ಅನುಭವದ ಮಹತ್ವವು ಎಷ್ಟೆಂಬುದು ಶಿಕ್ಷಕನು ಇದರಿಂದ ತಿಳಿದುಕೊಳ್ಳಬೇಕು. ಓದುವ ಪುಸ್ತಕವಲ್ಲಿಯ ಶಬ್ದಗಳು ಮಕ್ಕಳ ಅನುಭವಕ್ಕೆ ಸಂಬಂಧವಾಗಿದ್ದರೆ ಮಾತ್ರ ಅವು ಅವರಿಗೆ ಅರ್ಥವಾಗುವವು ಇಲ್ಲದಿದ್ದರೆ ಆ ಪುಸ್ತಕದಿಂದ ಅವರಿಗೆ ಉಪಯೋಗವಾಗುವದಿಲ್ಲ.

**ಮಕ್ಕಳ ಶಬ್ದಕೋಶ :** ಮಕ್ಕಳ ಶಬ್ದಕೋಶವು ಮಿತವಾಗಿರಬೇಕು ಮತ್ತು ಹಗುರಾಗಿರಬೇಕು. ಅಂದರೆ ಮಕ್ಕಳ ಸಲುವಾಗಿ ಬಳಸುವ ಶಬ್ದ

ಗಳು ಅವರಿಗೆ ಅರ್ಥವಾಗುವಂತಹವು, ಅವರಿಗೆ ತಿಳಿಯುವಂತಹವು ಇರತಕ್ಕದ್ದು. ಮಕ್ಕಳು ಓದುವ ಪುಸ್ತಕಗಳಲ್ಲಿ ಶಬ್ದಗಳನ್ನು ಯೋಗ್ಯರೀತಿಯಿಂದ ಆರಿಸಿ ಉಪಯೋಗಿಸತಕ್ಕದ್ದು. ಥಾರ್ನಡಾಯಿಕ್ ಮತ್ತು ಗೇಟ್ಸ ಎಂಬವರು ಇಂಗ್ಲೀಷ ಶಬ್ದಗಳ ಪಟ್ಟಿಗಳನ್ನು ತಯಾರಿಸಿದ್ದಾರೆ. ಇದೇ ಬರೆಹಗಾರನು ಅವರ ಅವರ ಮಾರ್ಗವನ್ನು ಅನುಸರಿಸಿ ಮಕ್ಕಳ ದೃಷ್ಟಿಯಿಂದ ಎರಡು ಸಾವಿರ ಶಬ್ದಗಳ 'ಮಕ್ಕಳ ಶಬ್ದಕೋಶವನ್ನು' ತಯಾರಿಸಿದ್ದಾನೆ. ಮಕ್ಕಳ ಶಿಕ್ಷಕರು ಮತ್ತು ಮಕ್ಕಳ ಪುಸ್ತಕ ಬರಹಗಾರರು ಇಂಥ ಕೋಶಗಳಲ್ಲಿ ಬಂದಿರುವ ಶಬ್ದಗಳನ್ನು ಹೆಚ್ಚಾಗಿ ಬಳಸುವದು ಅವಶ್ಯ. ಮಕ್ಕಳ ವಯಸ್ಸು, ಬುದ್ಧಿ ಮಟ್ಟ ಮತ್ತು ಅನುಭವಗಳನ್ನು ಲಕ್ಷಕ್ಕೆ ತಂದು ಶಬ್ದಗಳನ್ನು ಮಿತವಾಗಿ ಪ್ರಯೋಗಿಸಬೇಕು. ಮಕ್ಕಳ ಬುದ್ಧಿ ಮಟ್ಟಕ್ಕೆ ಅನುಗುಣವಾಗಿ ಶಬ್ದಗಳ ಬಳಕೆಯು ಹತೋಟಿಯಲ್ಲಿ ಇರಬೇಕು.

ಒಂದು ಪಾಠದಲ್ಲಿ ಅಥವಾ ಪಠ್ಯ ಪುಸ್ತಕದಲ್ಲಿ ಬರುವ ಶಬ್ದಗಳ ಭಾರವು ಅಂದರೆ ಹೊಸ ಶಬ್ದಗಳ ಸಂಖ್ಯೆಯು ಮಿತವಾಗಿರಬೇಕು. ಪುಸ್ತಕದಲ್ಲಿ ಪಾರಿಭಾಷಿಕ ಶಬ್ದಗಳು (Technical Terms), ಸೂಕ್ಷ್ಮ ವಿಚಾರದ ಶಬ್ದಗಳು ಅಥವಾ ಓದುಗರ ಅನುಭವಕ್ಕೆ ಮೀರಿದ ಶಬ್ದಗಳು ಹೇರಳವಾಗಿದ್ದರೆ ಅವರಲ್ಲಿ ಕೊಟ್ಟ ವಿಷಯಗಳನ್ನು ತಿಳಿದುಕೊಂಡು ಕಲಿಯುವದು ಮಕ್ಕಳಿಗೆ ಬಹಳ ಕಠಿಣವಾಗುತ್ತದೆ. ಶಬ್ದಗಳ ಅರ್ಥವು ತಿಳಿಯದಿದ್ದ ಮೇಲೆ ವಿಷಯವು ತಿಳಿಯುವ ಬಗೆ ಎಂತು ? ಮಕ್ಕಳ ಬೆಳವಣಿಗೆಯ ಮಟ್ಟವನ್ನು ನೋಡಿ ಪಾಠದಲ್ಲಿ ಹೊಸ ಶಬ್ದಗಳನ್ನು ತೂಗಿ ಉಪಯೋಗಿಸಬೇಕು. ವಾಕ್ಯರಚನೆ ಮತ್ತು ಶೈಲಿಯು ಕೂಡ ಸುಲಭವಾಗಿರಬೇಕು. ಗಣಿತ, ವಾಚನ, ಸಾಯನ್ಸ, ಸಮಾಜ ವಿಜ್ಞಾನ ಹೀಗೆ ಮಕ್ಕಳು ಅಭ್ಯಾಸ ಮಾಡಬೇಕಾಗಿರುವ ಎಲ್ಲ ವಿಷಯಗಳ ಮೇಲೆ ಬರೆಯಲ್ಪಟ್ಟ ಪಠ್ಯ ಪುಸ್ತಕಗಳಲ್ಲಿಯ ಶಬ್ದಕೋಶವು ಹಿಡಿತದಲ್ಲಿ ಇರಬೇಕಾಗುತ್ತದೆ. ಅಪರಿಚಿತ ಶಬ್ದಗಳನ್ನು ತಿಳಿದುಕೊಳ್ಳುವದು ಮಕ್ಕಳಿಗೆ ಎದುರಾಗುವ ಮೊದಲನೆಯ ತೊಡಕು; ಮತ್ತು ತಮ್ಮ ಅನುಭವಕ್ಕೆ ಸಿಲುಕದ ಗಡುಚಾದ ವಿಚಾರಗಳನ್ನು ತಿಳಿದುಕೊಳ್ಳುವದು ಎರಡನೆಯ ತೊಡಕು. ಮಕ್ಕಳ ಕಲಿಯುವಿಕೆಯು ಮುಂದುವರಿಯಬೇಕಾದರೆ ಈ ತೊಡಕುಗಳು ಬಾರದಂತೆ ನೋಡಿಕೊಳ್ಳುವದು ಅವಶ್ಯ.

ಶಾಲೆಯಲ್ಲಿ ಕಲಿಯುವ ವಿಷಯಗಳ ಬಗ್ಗೆ ಮಕ್ಕಳ ತಿಳಿವಳಿಕೆಯು ಹೆಚ್ಚಾಗಬೇಕಾದರೆ ಶಿಕ್ಷಕನು ಕೆಳಗೆ ಸೂಚಿಸಿದ ಉಪಾಯಗಳನ್ನು ಕೈಕೊಳ್ಳ ಬೇಕಾಗುವದು. ಮೊದಲಿನ ವರ್ಗದ ಆರಂಭದ ವಾಚನ ಪಾಠಗಳಲ್ಲಿ ಮಕ್ಕಳ ಪ್ರತ್ಯಕ್ಷ ಅನುಭವಕ್ಕೆ ಸಂಬಂಧಿಸಿದ ಶಬ್ದಗಳನ್ನೇ ಉಪಯೋಗಿಸ ಬೇಕು. ಗೊಂಬೆ, ಅಂಗಡಿ, ಆಟ, ಓಡು, ಬೀಳು ಮೊದಲಾದ ಶಬ್ದಗಳು ಮಕ್ಕಳ ನಿತ್ಯದ ಅನುಭವದ ಸಂಗತಿಗಳನ್ನು ನೆನಪಿಗೆ ತಂದುಕೊಡುವುದರಿಂದ ಅವರು ಓದುವ ಪಾಠಗಳಲ್ಲಿ ಅಂಥ ಶಬ್ದಗಳನ್ನೇ ಉಪಯೋಗಿಸಬೇಕು. ಒಂದೇ ವರುಷದಲ್ಲಿ ಮಗುವಿಗೆ ಎಲ್ಲ ಮೂಲಾಕ್ಷರಗಳನ್ನು ಪರಿಚಯ ಮಾಡಿ ಕೊಡುವ ಉದ್ದೇಶದಿಂದ 'ಐರಾವತ', 'ಸಂರಕ್ಷಣೆ', 'ಋಣ', 'ಪ್ರಾಜ್ಞ' ಮೊದ ಲಾದ ಮಗುವಿಗೆ ಅರ್ಥವಾಗದ ಶಬ್ದಗಳನ್ನು ಆರಂಭದ ಪಾಠಗಳಲ್ಲಿ ಸೇರಿಸುವದು ಶುದ್ಧ ತಪ್ಪು. ಹೀಗೆ ಅವಸರ ಪಡುವದು ಅವಶ್ಯವಿಲ್ಲ. ಹೊಸ ಶಬ್ದಗಳನ್ನು ಮಕ್ಕಳಿಗೆ ಕ್ರಮೇಣ ಪರಿಚಯ ಮಾಡಿಕೊಡಬೇಕು. ಪ್ರಾಥಮಿಕ ಶಾಲೆಯ ಮತ್ತು ಹೈಸ್ಕೂಲಿನ ಹುಡುಗರ ಸಲುವಾಗಿ ಬರೆಯಲ್ಪಟ್ಟ ಈಗಿನ ಯಾವ ಪಠ್ಯ ಪುಸ್ತಕವನ್ನು ತಕ್ಕೊಂಡರೂ ಅದರಲ್ಲಿಯ ಶಬ್ದ ಭಾರವು ಬಹಳ ದೊಡ್ಡ ದಾಗಿರುತ್ತದೆ. ಇದರಿಂದ ಮೊದಲು ಶಬ್ದಗಳ ಅರ್ಥವನ್ನು ತಿಳಿದುಕೊಳ್ಳುವದು ಆ ಮೇಲೆ ವಿಷಯವನ್ನು ತಿಳಿದುಕೊಳ್ಳುವದು ಹುಡುಗರಿಗೆ ಬಹಳ ಗಡಚ ಗುತ್ತದೆ. ಪ್ರತ್ಯಕ್ಷ ವಸ್ತುಗಳನ್ನು ತೋರಿಸಿ ಅಥವಾ ಅನೇಕ ಉದಾಹರಣೆಗಳನ್ನು ಕೊಟ್ಟು ಹೊಸ ಶಬ್ದಗಳ ಅರ್ಥವನ್ನು ಶಿಕ್ಷಕನು ತಿಳಿಸಿ ಕೊಡಬೇಕು. ಲೋಕಸತ್ತೆ, ಸಮತಾವಾದ ಮೊದಲಾದ ಸಾಮಾನ್ಯ ಪದಗಳ ಅರ್ಥವು ಸ್ಪಷ್ಟವಾಗಬೇಕಾದರೆ ಪ್ರತ್ಯಕ್ಷ ವ್ಯವಹಾರದ ಉದಾಹರಣೆ ಗಳನ್ನು ಕೊಡಬೇಕು. ಕಲಿಯಬೇಕಾದ ವಿಷಯಕ್ಕೆ ಸಂಬಂಧಪಟ್ಟ ಅನುಭವಗಳನ್ನು ಮಕ್ಕಳಿಗೆ ತಂದು ಕೊಡುವದು ಮಿಗಿಲಾದ ಉಪಾಯ. ಅದಕ್ಕಾಗಿ ಅವಶ್ಯವೆನಿಸಿದಾಗೆಲ್ಲ ಪ್ರೊಜಕ್ಟ ಪದ್ಧತಿಯನ್ನು ಅಥವಾ ಮಾಡಿ ಕಲಿ ಎಂಬ ಪದ್ಧತಿಯನ್ನು ಉಪಯೋಗಿಸಬೇಕು. ಚಿತ್ರ, ಚಲಚಿತ್ರ ನಟನೆ, ನಾಟಕ, ಮ್ಯೂಜಿಯಮ್‌ಗಳ ಸಂದರ್ಶನ, ಶಾಲೆಯ ಪ್ರವಾಸ ಮುಂತಾದ ಸಾಧನಗಳಿಂದ ಮಕ್ಕಳ ಅನುಭವಗಳನ್ನು ಹೆಚ್ಚಿಸಬೇಕು.

# ವಿಚಾರ ಶಕ್ತಿಯ ಬೆಳವಣಿಗೆ

## ಪ್ರತ್ಯಕ್ಷ ವಿಚಾರ (Perceptual Thinking)

ಮನಸ್ಸಿನಲ್ಲಿಯೇ ವಿಚಾರ ಮಾಡುವದು ಬುದ್ಧಿಯ ಕೆಲಸ. ನಿಜವಾದ ಬುದ್ಧಿಯ ಬೆಳವಣಿಗೆ ಎಂದರೆ ವಿಚಾರ ಶಕ್ತಿಯ ಬೆಳವಣಿಗೆ. ಈ ವಿಚಾರ ಕ್ರಮವು ಎರಡು ಮಟ್ಟಿನಲ್ಲಿ ಸಾಗುತ್ತದೆ. ಹೊರಗೆ ಜಗತ್ತಿನಲ್ಲಿ ಇರುವ ವಸ್ತುಗಳ ಜ್ಞಾನವನ್ನು ಇಂದ್ರಿಯಗಳ ಮುಖಾಂತರ ಪಡೆಯುವದು ಮೊದಲನೆಯ ಮಟ್ಟ. ಇದಕ್ಕೆ **ಪ್ರತ್ಯಕ್ಷ ವಿಚಾರ** (Perceptual Thinking) ಎನ್ನುತ್ತಾರೆ. ಇಂದ್ರಿಯಗಳ ಸಹಾಯವಿಲ್ಲದೆ ಮನಸ್ಸಿನಲ್ಲಿ ವಿಚಾರಿಸುವದು ಎರಡನೆಯ ಮಟ್ಟ. ಇದಕ್ಕೆ **ಕಾಲ್ಪನಿಕ ವಿಚಾರ** ( Conceptual Thinking ) ಎಂದು ಅನ್ನುತ್ತಾರೆ.

ಹುಟ್ಟಿದ ಕೂಸು ಬೆಳೆಯುತ್ತ ಹೋದ ಹಾಗೆ ಅವನ ಇಂದ್ರಿಯಗಳ ವ್ಯಾಪಾರಗಳು ಹರತಾಗುತ್ತವೆ. ಇವು ಸ್ವಂತ ಸರಿದಾಡುವ ಚೇತನ ವಸ್ತುಗಳು, ಇವು ಸ್ವಂತ ಸರಿದಾಡದೆ ಇದ್ದ ಜಡ ವಸ್ತುಗಳು ಎಂಬ ಎರಡು ಭಾಗಗಳನ್ನು ಮಗುವು ಮೊಟ್ಟಮೊದಲು ಬೇರೆ ಮಾಡುವಂತೆ ತೋರುತ್ತದೆ. ಬರಬರುತ್ತ ಜಡ ವಸ್ತುಗಳು ಅನೇಕ ತೆರನಾಗಿ ಇರುತ್ತವೆ ಮತ್ತು ಚೇತನ ವಸ್ತುಗಳು ಅನೇಕ ತೆರನಾಗಿ ಇರುತ್ತವೆ ಎಂಬ ವಿಚಾರವು ಒಡಮೂಡುತ್ತದೆ. ಬೆಕ್ಕು, ನಾಯಿ, ಪೆಟ್ಟಿಗೆ, ಗಿಡ ಮೊದಲಾದ ಬೇರೆ ಬೇರೆ ವಸ್ತುಗಳ ಅನುಭವವು ಬೇರೆ ಬೇರೆಯಾಗಿ ತೋರುತ್ತದೆ. ಕಣ್ಣು, ಕಿವಿ, ಮೂಗು, ನಾಲಿಗೆ ಮತ್ತು ತ್ವಚಗಳ ಸಹಾಯದಿಂದ ವಸ್ತುಗಳ ಬಣ್ಣ, ಸಪ್ಪಳ, ವಾಸನೆ, ರುಚಿ, ತೂಕ, ಬಿಸಿ ಮೊದಲಾದ ಗುಣಗಳನ್ನು ತಿಳಿದುಕೊಳ್ಳುತ್ತೇವೆ. ಮಗುವಿಗೆ ಬೇರೆ ಬೇರೆ ವಸ್ತುವಿನ ಪ್ರತ್ಯಕ್ಷ ಜ್ಞಾನದಿಂದ ಬೇರೆ ಬೇರೆ **ಅರ್ಥವು** ( Meaning ) ಆಗುತ್ತದೆ. ಇದು ' ನಾಯಿ ', ಇದು ' ಬೆಕ್ಕು ', ಇದು ' ಪುಸ್ತಕ ', ಇದು 'ಗಿಡ' ಎಂದು ವಸ್ತುಗಳನ್ನು ಬೇರೆ ಬೇರೆಯಾಗಿ ಗುರುತಿಸ ತೊಡಗುತ್ತಾನೆ. ಹೀಗೆ ಮಾಡುವಲ್ಲಿ ಅವನು ಕಲಿಯಲಾರಂಭಿಸಿದ ಶಬ್ದಗಳು ಮತ್ತು ಭಾಷೆಯು ಅವನಿಗೆ ನೆರವಾಗುತ್ತದೆ. ಒಂದು ವಸ್ತುವಿನ ಒಗೆಗೆ

ಅನುಭವವು ಹೆಚ್ಚು ಹೆಚ್ಚು ಆದ ಹಾಗೆ ಆ ವಸ್ತುವಿನ ಅರ್ಥವು ವಿಶಾಲ ವಾಗುತ್ತ ಹೋಗುತ್ತದೆ. ಇದಕ್ಕೆ ಅನುಬೋಧೆ ( Apperception ) ಎಂದು ಅನ್ನುತ್ತಾರೆ. 'ಬೆಕ್ಕು', ಅಂದರೆ 'ಮೆವ್ ಅನ್ನುವ ಪ್ರಾಣಿ' ಎಂದು ಮಗುವು ಮೊದಲು ತಿಳಿದುಕೊಂಡಿರಬಹುದು. ಒಂದು ದಿವಸ ಅದು ಹಾಲು ಕುಡಿಯುವದನ್ನು ನೋಡಿ 'ಇದು ಹಾಲು ಕುಡಿಯುವ ಪ್ರಾಣಿ' ಎಂದು ತಿಳಿದುಕೊಳ್ಳುವನು. ಅದರ ಒಡನಾಟವು ಹೆಚ್ಚಿದ ಹಾಗೆ ಇದು ಮಾಂಸಾಹಾರಿ ಎಂದೂ, ಮತ್ತು ಸಿಂಹ, ಹುಲಿ, ಚಿರ್ಚ ಮೊದಲಾದ ಕ್ರೂರ ಪ್ರಾಣಿಗಳ ವರ್ಗಕ್ಕೆ ಸೇರಿದ್ದೆಂದೂ ವಿಚಾರಿಸುವನು. ಹೀಗೆ ಬೆಕ್ಕಿನ ಅನುಭವವು ಹೆಚ್ಚಿದ ಹಾಗೆ ಬೆಕ್ಕಿನ ಅರ್ಥವೂ ಹೆಚ್ಚುತ್ತ ಹೋಗುತ್ತದೆ. ಮಗುವಿಗೆ ಬೆಕ್ಕಿನ ಹೊಸ ಹೊಸ ಲಕ್ಷಣಗಳು ತಿಳಿಯುತ್ತ ಹೋದಂತೆ ಅದರ ಬಗೆಗೆ ಆದ ಅವನ ಅನುಭವಶೇಷಗಳು ( Engram complex ) ರೂಪಾಂತರ ಹೊಂದುತ್ತ ನಡೆಯುವವು. ಹೀಗೆ ಅನುಭವವು ಹೆಚ್ಚಿದಾಗೆಲ್ಲ ವಸ್ತುವಿಗೆ ಹೊಸ ಅರ್ಥವು ಬರುತ್ತದೆ. ವಸ್ತುವಿನ ಬಗೆಗೆ ಹೆಚ್ಚು ಹೆಚ್ಚು ಜ್ಞಾನ, ಲಕ್ಷಣ ಅಥವಾ ಅರ್ಥ ಆದ ಹಾಗೆ ಅನುಬೋಧೆಯು ಹೆಚ್ಚುತ್ತ ಹೋಗುತ್ತದೆ.

ವಸ್ತುಗಳಲ್ಲಿರುವ ವಿಶಿಷ್ಟ ಗುಣಗಳಿಗೆ ತಕ್ಕಂತೆ ಅವುಗಳನ್ನು ವಿಂಗಡಿಸಿ ವಿಚಾರಿಸುವಾಗ ಮಗುವಿನ ಮನಸ್ಸಿನಲ್ಲಿ ಯಾವ ಕ್ರಿಯೆಯು ನಡೆದಿರುತ್ತದೆ ಎಂದು ತಿಳಿದುಕೊಳ್ಳುವದು ಶಿಕ್ಷಣದ ದೃಷ್ಟಿಯಿಂದ ಮಹತ್ವದ್ದು. ಬೆಕ್ಕಿನ ಮೈಬಣ್ಣ, 'ಮೆವ್' ಅನ್ನುವ ದನಿ, ಮೆತ್ತನ್ನ ಕೂದಲು ಮುಂತಾದ ಅನುಭವಗಳನ್ನು ಅಥವಾ ಲಕ್ಷಣಗಳನ್ನು ಒಟ್ಟುಗೂಡಿಸುವ ಕೆಲಸವು ಮಗುವಿನ ಮನಸ್ಸಿನಲ್ಲಿ ನಡೆದು ಅವುಗಳನ್ನು ಸೂಚಿಸುವ ವಸ್ತುವಿಗೆ 'ಬೆಕ್ಕು' ಎಂಬ ಅರ್ಥವನ್ನು ಕೊಡುತ್ತಾನೆ. ಹೀಗೆ ಅನುಭವಗಳನ್ನು ಒಂದುಗೂಡಿಸುವ ಕ್ರಿಯೆಗೆ '**ಸಂಶ್ಲೇಷಣ**' ಅಥವಾ 'ಸಂಯೋಜನೆ' ( Synthesis ) ಎನ್ನುತ್ತಾರೆ. ಅಲ್ಲದೆ 'ಬೆಕ್ಕು' ಎಂಬ ವಸ್ತುವನ್ನು 'ಪುಸ್ತಕ', 'ನಾಯಿ', 'ಪೆಟ್ಟಿಗೆ' ಮುಂತಾದ ಇತರ ವಸ್ತುಗಳಿಂದ ಬೇರೆ ಮಾಡಿ ವಿಚಾರಿಸುವ ಕೆಲಸವೂ ಮಗುವಿನ ಮನಸ್ಸಿನಲ್ಲಿ ನಡೆದು 'ಬೆಕ್ಕು' ಎಂಬ ವಸ್ತುವಿನ ಅರ್ಥವು ಹೆಚ್ಚು ನಿಶ್ಚಿತವಾಗುತ್ತದೆ. ಹೀಗೆ ವಸ್ತುಗಳನ್ನು ಅಥವಾ ಅನುಭವಗಳನ್ನು

ಬೇರೆ ಬೇರೆ ಮಾಡಿ ವಿಚಾರಿಸುವ ಮಾನಸಿಕ ಕ್ರಿಯೆಗೆ 'ವಿಶ್ಲೇಷಣ' ಅಥವಾ ವಿಭಜನೆ ( Analysis ) ಎಂದು ಅನ್ನುತ್ತಾರೆ. ಬುದ್ಧಿಯು ನಡೆಯಿಸುವ ಎಲ್ಲ ಬಗೆಯ ವಿಚಾರ ಕ್ರಮದಲ್ಲಿ ಈ ಸಂಶ್ಲೇಷಣ ತತ್ವವು ಅಡಕವಾಗಿರುತ್ತದೆ.

ಇಂದ್ರಿಯಗಳು ಜ್ಞಾನದ ಬಾಗಿಲುಗಳು. ಒಂದು ವಸ್ತುವಿನ ಬಗ್ಗೆ ಹೆಚ್ಚು ಜ್ಞಾನವು ಉಂಟಾಗಬೇಕಾದರೆ ಐದೂ ಇಂದ್ರಿಯಗಳ ಮುಖಾಂತರ ಅದನ್ನು ಪರೀಕ್ಷಿಸಬೇಕು. "ಇದು ನೋಡಿ ಗುಲಾಬಿಯ ಹೂವು" ಎಂದು ಕೇವಲ ಕಣ್ಣಿನಿಂದ ನೋಡಲು ಹೇಳಿದರೆ ಆ ಹೂವಿನ ಬಗ್ಗೆ ಸಂಪೂರ್ಣ ಜ್ಞಾನವನ್ನು ಮಾಡಿಕೊಟ್ಟಂತೆ ಆಗುವದಿಲ್ಲ. ಮಕ್ಕಳು ಅದರ ಪಕಳೆಗಳ ಕೋಮಲತೆಯನ್ನು ಮತ್ತು ಮುಳ್ಳುಗಳ ಒರಟುತನವನ್ನು ಕೈಯಿಂದ ಮುಟ್ಟಿ ನೋಡಬೇಕು, ಅದರ ಸುಗಂಧವನ್ನು ಮೂಗಿನಿಂದ ಮೂಸಿ ನೋಡ ಬೇಕು, ಮತ್ತು ಅದರ ರುಚಿಯನ್ನು ನಾಲಿಗೆಯಿಂದ ನೆಕ್ಕಿ ನೋಡಬೇಕು. ಹೀಗೆ ಶಿಕ್ಷಕನು ವಸ್ತುಗಳ ಪರಿಚಯವನ್ನು ಬೇರೆ ಬೇರೆ ಇಂದ್ರಿಯಗಳ ಸಹಾಯ ದಿಂದ ಮಕ್ಕಳಿಗೆ ಮಾಡಿಕೊಟ್ಟು ಅವುಗಳ ಬಗೆಗೆ ಜ್ಞಾನವನ್ನು ಹೆಚ್ಚಿಸಬೇಕು.

**ಕಾಲ್ಪನಿಕ ವಿಚಾರ** ( Conceptual Thinking )

ವಸ್ತುಗಳು ನಮ್ಮ ಎದುರು ಇಲ್ಲದಾಗಲೂ ಅವುಗಳ ಬಗ್ಗೆ ನಾವು ನಮ್ಮ ಮನಸ್ಸಿನಲ್ಲಿ ವಿಚಾರವನ್ನು ನಡೆಯಿಸಬಹುದು. ನಾನು ಇದೀಗ ಓದುತ್ತಿದ್ದ ಪುಸ್ತಕವನ್ನು ತಗೆದು ಇಟ್ಟು ಕಣ್ಣು ಮುಚ್ಚಿಕೊಂಡು ಅಥವಾ ಹೊರಗೆ ಹೋಗಿ ಆ ಪುಸ್ತಕದ ಆಕಾರ, ಬಣ್ಣ, ತೂಕ ಮೊದಲಾದ ಸಂಗತಿಗಳ ಬಗ್ಗೆ ನಾನು ವಿಚಾರಿಸಬಲ್ಲೆನು. ಇಂಥ ವಿಚಾರಗಳಿಗೆ ಮಾನಸಿಕ '**ಕಲ್ಪನೆಗಳು**' (Concepts) ಎಂದು ಅನ್ನುತ್ತಾರೆ. ನಾನು ಪುಸ್ತಕವನ್ನು ಕಣ್ಣಿನಿಂದ ನೋಡುವದಿಲ್ಲ ಅಥವಾ ಕೈಯಿಂದ ಮುಟ್ಟುವದಿಲ್ಲ ಆದರೂ ಅದರ ಬಗ್ಗೆ ಬೇರೆ ಬೇರೆ ಕಲ್ಪನೆಗಳನ್ನು ನನ್ನ ಮನಸ್ಸಿನಲ್ಲಿ ತಂದು ಕೊಳ್ಳುತ್ತೇನೆ. ಪುಸ್ತಕವು ನನ್ನ ಎದುರು ಇರದಿದ್ದರೂ ಅದರ ಪ್ರತಿಬಿಂಬವು ನನ್ನ ಮನಸ್ಸಿನಲ್ಲಿ ಮೂಡುತ್ತದೆ. ಪ್ರತಿಯೊಂದು ಇಂದ್ರಿಯಕ್ಕೂ ಆ ಆ ಇಂದ್ರಿಯಕ್ಕೆ ಸಂಬಂಧಪಟ್ಟ ಮಾನಸಿಕ ಪ್ರತಿಬಿಂಬವು (Mental Image)

ಇರುತ್ತದೆ. ಈ ಪ್ರತಿಬಿಂಬಗಳು ಅಥವಾ ಕಲ್ಪನೆಗಳು ಪ್ರತ್ಯಕ್ಷ ವಸ್ತುಗಳ ಮನಸ್ಸಿನ ಪ್ರತಿನಿಧಿಗಳು.

ಕಲ್ಪನೆಗಳಲ್ಲಿ ಅನೇಕ ಪ್ರಕಾರಗಳುಂಟು. ಅನುಭವಿಸಿದ ವಸ್ತುಗಳನ್ನು ಅಥವಾ ಸಂಗತಿಗಳನ್ನು ಮನಸ್ಸಿನಲ್ಲಿ ಮತ್ತೆ ಹುಟ್ಟಿಸಬಹುದು. ಇದಕ್ಕೆ ವಾಡಿಕೆಯಲ್ಲಿ ಸ್ಮೃತಿ ಅಥವಾ ನೆನಹು ಅನ್ನುತ್ತೇವೆ. ಬೇರೆಯವರ ಕೃತಿಯನ್ನು ಅನುಕರಣ ಮಾಡುವಾಗ ಆ ಕೃತಿಯ ವಿಚಾರವನ್ನು ಮೊದಲು ಮನಸ್ಸಿನಲ್ಲಿ ಮಾಡಬೇಕಾಗುತ್ತದೆ. ಇದು ಕಲ್ಪನಾ ಶಕ್ತಿಯ ಕೆಲಸ. ಇದಕ್ಕೆ ಅನುಕರಣ ಅನ್ನುತ್ತಾರೆ ಒಂದು ಕಾರ್ಯವನ್ನು ಮಾಡುವಾಗ ಅಥವಾ ಒಂದು ಪ್ರಯೋಗವನ್ನು ಸಾಗಿಸುವಾಗ ಅದರ ಬಗೆಗೆ ಅನುಮಾನವು ನಡೆದಿರುತ್ತದೆ. ಇದಕ್ಕೆ ತರ್ಕ ಅನ್ನುತ್ತಾರೆ. ಇದು ಬುದ್ಧಿ ಶಕ್ತಿಯ ಮಿಗಿಲಾದ ಕಾರ್ಯ ಸೂಕ್ಷ್ಮ ಸಂಗತಿಗಳನ್ನು ತರ್ಕಿಸುವಾಗ. ಸತ್ಯ ಅಸತ್ಯಗಳನ್ನು ತರ್ಕಿಸುವಾಗ ವಿವೇಕವು ತನ್ನ ಪರಮಾವಧಿ ಕಾರ್ಯವನ್ನು ಮಾಡುತ್ತಿರುತ್ತದೆ ಕಲಾಕೃತಿಯನ್ನು ಹೊರಡಿಸುವಾಗಲೂ ಕಲ್ಪನಾ ಶಕ್ತಿಯ ಕಾರ್ಯವು ನಡೆದಿರುತ್ತದೆ. ಬುದ್ಧಿಯ ಅಥವಾ ವಿವೇಕದ ಬೆಳವಣಿಗೆಯು ವಿಶೇಷವಾಗಿ ಸಾಮಾನ್ಯ ಕಲ್ಪನೆಗಳಲ್ಲಿ, ತರ್ಕದಲ್ಲಿ ಮತ್ತು ಸಮಸ್ಯೆ ಬಿಡಿಸುವದರಲ್ಲಿ ಕಂಡು ಬರುವದರಿಂದ ಇವುಗಳನ್ನು ಕುರಿತು ಸ್ವಲ್ಪ ವಿವರಿಸುವ.

## ಸಾಮಾನ್ಯ ಕಲ್ಪನೆ (General Concept or Idea)

ಒಂದೇ ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳನ್ನು ಸೂಚಿಸುವ ಅಥವಾ ಅನೇಕ ವಸ್ತುಗಳಲ್ಲಿ ಕಂಡು ಬರುವ ಒಂದು ಗುಣವನ್ನು ಸೂಚಿಸುವ ವಿಚಾರಕ್ಕೆ ಸಾಮಾನ್ಯ ಕಲ್ಪನೆ ಎಂದು ಅನ್ನುತ್ತಾರೆ. 'ಬೆಕ್ಕು', 'ಗಿಡ', 'ಪ್ರಾಮಾಣಿಕತನ', 'ಸನ್ಮತಿ' ಮುಂತಾದ ಶಬ್ದಗಳು ಸಾಮಾನ್ಯ ಕಲ್ಪನೆಗಳನ್ನು ಸೂಚಿಸುತ್ತವೆ. ಬೇರೆ ಬೇರೆ ತರಹದ ಎಷ್ಟೋ ಬೆಕ್ಕುಗಳನ್ನು ನೋಡಿ ಇವೆಲ್ಲವೂ 'ಬೆಕ್ಕು' ಎಂಬ ಒಂದು ವರ್ಗಕ್ಕೆ ಸೇರಿದ ಪ್ರಾಣಿಗಳೆಂಬ ಸಾಮಾನ್ಯ ಕಲ್ಪನೆಯು ಬರುತ್ತದೆ. ಅದರಂತೆ 'ಪ್ರಾಮಾಣಿಕತನ' ಎಂಬ ಒಂದು ಗುಣವು ವಿಶಿಷ್ಟ ರೀತಿಯಿಂದ ಅನೇಕ ವರ್ತನಗಳಲ್ಲಿ ವ್ಯಕ್ತವಾಗುತ್ತದೆ.

ಬೇರೆ ಬೇರೆ ಮಾಡಿ ವಿಚಾರಿಸುವ ಮಾನಸಿಕ ಕ್ರಿಯೆಗೆ 'ವಿಶ್ಲೇಷಣ' ಅಥವಾ ವಿಭಜನೆ ( Analysis ) ಎಂದು ಅನ್ನುತ್ತಾರೆ. ಬುದ್ಧಿಯು ನಡೆಯಿಸುವ ಎಲ್ಲ ಬಗೆಯ ವಿಚಾರ ಕ್ರಮದಲ್ಲಿ ಈ ಸಂಶ್ಲೇಷಣ ತತ್ವವು ಅಡಕವಾಗಿರುತ್ತದೆ.

ಇಂದ್ರಿಯಗಳು ಜ್ಞಾನದ ಬಾಗಿಲುಗಳು. ಒಂದು ವಸ್ತುವಿನ ಬಗ್ಗೆ ಹೆಚ್ಚು ಜ್ಞಾನವು ಉಂಟಾಗಬೇಕಾದರೆ ಐದೂ ಇಂದ್ರಿಯಗಳ ಮುಖಾಂತರ ಅದನ್ನು ಪರೀಕ್ಷಿಸಬೇಕು. "ಇದು ನೋಡಿ ಗುಲಾಬಿಯ ಹೂವು" ಎಂದು ಕೇವಲ ಕಣ್ಣಿನಿಂದ ನೋಡಲು ಹೇಳಿದರೆ ಆ ಹೂವಿನ ಬಗ್ಗೆ ಸಂಪೂರ್ಣ ಜ್ಞಾನವನ್ನು ಮಾಡಿಕೊಟ್ಟಂತೆ ಆಗುವದಿಲ್ಲ. ಮಕ್ಕಳು ಅದರ ಪಕಳೆಗಳ ಕೋಮಲತೆಯನ್ನು ಮತ್ತು ಮುಳ್ಳುಗಳ ಒರಟುತನವನ್ನು ಕೈಯಿಂದ ಮುಟ್ಟಿ ನೋಡಬೇಕು, ಅದರ ಸುಗಂಧವನ್ನು ಮೂಗಿನಿಂದ ಮೂಸಿ ನೋಡ ಬೇಕು, ಮತ್ತು ಅದರ ರುಚಿಯನ್ನು ನಾಲಿಗೆಯಿಂದ ನೆಕ್ಕಿ ನೋಡಬೇಕು. ಹೀಗೆ ಶಿಕ್ಷಕನು ವಸ್ತುಗಳ ಪರಿಚಯವನ್ನು ಬೇರೆ ಬೇರೆ ಇಂದ್ರಿಯಗಳ ಸಹಾಯ ದಿಂದ ಮಕ್ಕಳಿಗೆ ಮಾಡಿಕೊಟ್ಟು ಅವುಗಳ ಬಗೆಗೆ ಜ್ಞಾನವನ್ನು ಹೆಚ್ಚಿಸಬೇಕು.

**ಕಾಲ್ಪನಿಕ ವಿಚಾರ** ( Conceptual Thinking )

ವಸ್ತುಗಳು ನಮ್ಮ ಎದುರು ಇಲ್ಲದಾಗಲೂ ಅವುಗಳ ಬಗ್ಗೆ ನಾವು ನಮ್ಮ ಮನಸ್ಸಿನಲ್ಲಿ ವಿಚಾರವನ್ನು ನಡೆಯಿಸಬಹುದು. ನಾನು ಇದೀಗ ಓದುತ್ತಿದ್ದ ಪುಸ್ತಕವನ್ನು ತೆಗೆದು ಇಟ್ಟು ಕಣ್ಣು ಮುಚ್ಚಿಕೊಂಡು ಅಥವಾ ಹೊರಗೆ ಹೋಗಿ ಆ ಪುಸ್ತಕದ ಆಕಾರ, ಬಣ್ಣ, ತೂಕ ಮೊದಲಾದ ಸಂಗತಿಗಳ ಬಗ್ಗೆ ನಾನು ವಿಚಾರಿಸಬಲ್ಲೆನು. ಇಂಥ ವಿಚಾರಗಳಿಗೆ ಮಾನಸಿಕ '**ಕಲ್ಪನೆಗಳು**' (Concepts) ಎಂದು ಅನ್ನುತ್ತಾರೆ. ನಾನು ಪುಸ್ತಕವನ್ನು ಕಣ್ಣಿನಿಂದ ನೋಡುವದಿಲ್ಲ ಅಥವಾ ಕೈಯಿಂದ ಮುಟ್ಟುವದಿಲ್ಲ ಆದರೂ ಅದರ ಬಗ್ಗೆ ಬೇರೆ ಬೇರೆ ಕಲ್ಪನೆಗಳನ್ನು ನನ್ನ ಮನಸ್ಸಿನಲ್ಲಿ ತಂದು ಕೊಳ್ಳುತ್ತೇನೆ. ಪುಸ್ತಕವು ನನ್ನ ಎದುರು ಇರದಿದ್ದರೂ ಅದರ ಪ್ರತಿಬಿಂಬವು ನನ್ನ ಮನಸ್ಸಿನಲ್ಲಿ ಮೂಡುತ್ತದೆ. ಪ್ರತಿಯೊಂದು ಇಂದ್ರಿಯಕ್ಕೂ ಆ ಆ ಇಂದ್ರಿಯಕ್ಕೆ ಸಂಬಂಧಪಟ್ಟ ಮಾನಸಿಕ ಪ್ರತಿಬಿಂಬವು (Mental Image)

ಇರುತ್ತದೆ. ಈ ಪ್ರತಿಬಿಂಬಗಳು ಅಥವಾ ಕಲ್ಪನೆಗಳು ಪ್ರತ್ಯಕ್ಷ ವಸ್ತುಗಳ ಮನಸ್ಸಿನ ಪ್ರತಿನಿಧಿಗಳು.

ಕಲ್ಪನೆಗಳಲ್ಲಿ ಅನೇಕ ಪ್ರಕಾರಗಳುಂಟು. ಅನುಭವಿಸಿದ ವಸ್ತುಗಳನ್ನು ಅಥವಾ ಸಂಗತಿಗಳನ್ನು ಮನಸ್ಸಿನಲ್ಲಿ ಮತ್ತೆ ಹುಟ್ಟಿಸಬಹುದು. ಇದಕ್ಕೆ ವಾಡಿಕೆಯಲ್ಲಿ ಸ್ಮೃತಿ ಅಥವಾ ನೆನಹು ಅನ್ನುತ್ತೇವೆ. ಬೇರೆಯವರ ಕೃತಿಯನ್ನು ಅನುಕರಣ ಮಾಡುವಾಗ ಆ ಕೃತಿಯ ವಿಚಾರವನ್ನು ಮೊದಲು ಮನಸ್ಸಿನಲ್ಲಿ ಮಾಡಬೇಕಾಗುತ್ತದೆ. ಇದು ಕಲ್ಪನಾ ಶಕ್ತಿಯ ಕೆಲಸ. ಇದಕ್ಕೆ ಅನುಕರಣ ಅನ್ನುತ್ತಾರೆ ಒಂದು ಕಾರ್ಯವನ್ನು ಮಾಡುವಾಗ ಅಥವಾ ಒಂದು ಪ್ರಯೋಗವನ್ನು ಸಾಗಿಸುವಾಗ ಅದರ ಬಗೆಗೆ ಅನುಮಾನವು ನಡೆದಿರುತ್ತದೆ. ಇದಕ್ಕೆ ತರ್ಕ ಅನ್ನುತ್ತಾರೆ. ಇದು ಬುದ್ಧಿ ಶಕ್ತಿಯ ಮಿಗಿಲಾದ ಕಾರ್ಯ ಸೂಕ್ಷ್ಮ ಸಂಗತಿಗಳನ್ನು ತರ್ಕಿಸುವಾಗ. ಸತ್ಯ ಅಸತ್ಯಗಳನ್ನು ತರ್ಕಿಸುವಾಗ ವಿವೇಕವು ತನ್ನ ಪರಮಾವಧಿ ಕಾರ್ಯವನ್ನು ಮಾಡುತ್ತಿರುತ್ತದೆ ಕಲಾಕೃತಿಯನ್ನು ಹೊರಡಿಸುವಾಗಲೂ ಕಲ್ಪನಾ ಶಕ್ತಿಯ ಕಾರ್ಯವು ನಡೆದಿರುತ್ತದೆ. ಬುದ್ಧಿಯ ಅಥವಾ ವಿವೇಕದ ಬೆಳವಣಿಗೆಯು ವಿಶೇಷವಾಗಿ ಸಾಮಾನ್ಯ ಕಲ್ಪನೆಗಳಲ್ಲಿ, ತರ್ಕದಲ್ಲಿ ಮತ್ತು ಸಮಸ್ಯೆ ಬಿಡಿಸುವದರಲ್ಲಿ ಕಂಡು ಬರುವದರಿಂದ ಇವುಗಳನ್ನು ಕುರಿತು ಸ್ವಲ್ಪ ವಿವರಿಸುವ.

## ಸಾಮಾನ್ಯ ಕಲ್ಪನೆ (General Concept or Idea)

ಒಂದೇ ವರ್ಗಕ್ಕೆ ಸೇರಿದ ಎಲ್ಲ ವಸ್ತುಗಳನ್ನು ಸೂಚಿಸುವ ಅಥವಾ ಅನೇಕ ವಸ್ತುಗಳಲ್ಲಿ ಕಂಡು ಬರುವ ಒಂದು ಗುಣವನ್ನು ಸೂಚಿಸುವ ವಿಚಾರಕ್ಕೆ ಸಾಮಾನ್ಯ ಕಲ್ಪನೆ ಎಂದು ಅನ್ನುತ್ತಾರೆ. 'ಬೆಕ್ಕು', 'ಗಿಡ', 'ಪ್ರಾಮಾಣಿಕತನ', 'ಸಮತೆ' ಮುಂತಾದ ಶಬ್ದಗಳು ಸಾಮಾನ್ಯ ಕಲ್ಪನೆಗಳನ್ನು ಸೂಚಿಸುತ್ತವೆ. ಬೇರೆ ಬೇರೆ ತರಹದ ಎಷ್ಟೋ ಬೆಕ್ಕುಗಳನ್ನು ನೋಡಿ ಇವೆಲ್ಲವೂ 'ಬೆಕ್ಕು' ಎಂಬ ಒಂದು ವರ್ಗಕ್ಕೆ ಸೇರಿದ ಪ್ರಾಣಿಗಳೆಂಬ ಸಾಮಾನ್ಯ ಕಲ್ಪನೆಯು ಬರುತ್ತದೆ. ಆದರಂತೆ 'ಪ್ರಾಮಾಣಿಕತನ' ಎಂಬ ಒಂದು ಗುಣವು ವಿಶಿಷ್ಟ ರೀತಿಯಿಂದ ಅನೇಕ ವರ್ತನಗಳಲ್ಲಿ ವ್ಯಕ್ತವಾಗುತ್ತದೆ.

ಒಂದೇ ತೆರನಾದ ವಸ್ತುಗಳನ್ನು, ವ್ಯಕ್ತಿಗಳನ್ನು, ಸಂಗತಿಗಳನ್ನು, ಸನ್ನಿವೇಶ ಗಳನ್ನು, ಗುಣಗಳನ್ನು ಅಥವಾ ಲಕ್ಷಣಗಳನ್ನು ಬೇರೆ ಮಾಡಿ ಒಂದುಗೂಡಿಸುವ ವಿಶ್ಲೇಷಣ-ಸಂಶ್ಲೇಷಣ ಕ್ರಿಯೆಯಿಂದ ಸಾಮಾನ್ಯ ಕಲ್ಪನೆಗಳು ಉಂಟಾಗುತ್ತವೆ. ಇದರಲ್ಲಿ ವಿಚಾರ ಶಕ್ತಿಯು ಅಡಕವಾಗಿರುತ್ತದೆ. ಮಗುವು ಅಂಕ ಗಣಿತದ ಲೆಕ್ಕಗಳನ್ನು ಬಿಡಿಸುವ ರೀತಿಯನ್ನು ಕಲಿಯುವಾಗ ಅವನ ಮನಸ್ಸಿನಲ್ಲಿ ವಿಶ್ಲೇಷಣ-ಸಂಶ್ಲೇಷಣ ಕ್ರಿಯೆಗಳು ನಡೆಯುತ್ತವೆ. ಸರಳ ಬಡ್ಡಿಯ ಲೆಕ್ಕಗಳಲ್ಲಿ ಅಸಲು, ಮುದ್ದತು ಮತ್ತು ರಾಸು ಕೊಟ್ಟರೆ ಬಡ್ಡಿಯ ದರವನ್ನು ತೆಗೆಯುವ ರೀತಿಯು ಅನೇಕ ಉದಾಹರಣೆಗಳಲ್ಲಿ ಒಂದೇ ಆಗಿರುತ್ತದೆ.

ಬಗೆ ಬಗೆಯ ಕಲ್ಪನೆಗಳನ್ನು ಕಟ್ಟಲಿಕ್ಕೆ ಮತ್ತು ಮನಸ್ಸಿನಲ್ಲಿ ಅವುಗಳನ್ನು ಊರಲಿಕ್ಕೆ ಭಾಷೆಯು ಸಹಾಯವಾಗುತ್ತದೆ. ಶಬ್ದಗಳು ವಸ್ತುಗಳ ಅಥವಾ ಗುಣಗಳ ಪ್ರತಿನಿಧಿಗಳು ‘ಬೆಕ್ಕು’ ಎಂಬ ಶಬ್ದವನ್ನು ಉಪಯೋಗಿಸಿದ ಕೂಡಲೆ ಬೆಕ್ಕಿನ ಕಲ್ಪನೆಯು ಮನಸ್ಸಿನಲ್ಲಿ ಬರುತ್ತದೆ. ‘ನ್ಯಾಯ’ ಎಂಬ ಶಬ್ದವನ್ನು ಉಪಯೋಗಿಸಿದ ಕೂಡಲೆ ನ್ಯಾಯವಾದ ವರ್ತನದ ಕಲ್ಪನೆಯು ಮನಸ್ಸಿನಲ್ಲಿ ಬರುತ್ತದೆ. ಸ್ವಂತ ವಿಚಾರವನ್ನು ಬೆಳೆಯಿಸಲಿಕ್ಕೂ ಮತ್ತು ಬೇರೆಯವರೊಡನೆ ವಿಚಾರ ವಿನಿಮಯ ಮಾಡಲಿಕ್ಕೂ ನಾವು ಭಾಷೆಯನ್ನು ಉಪಯೋಗಿಸುತ್ತೇವೆ ಬೇರೆ ಬೇರೆ ವಿಜ್ಞಾನ ವಿಷಯಗಳನ್ನು ವಿವೇಚಿಸುವಾಗ ಆ ಆ ವಿಜ್ಞಾನಕ್ಕೆ ಸಂಬಂಧಪಟ್ಟ ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಬೇಕಾಗುತ್ತದೆ ವಿದ್ಯಾರ್ಥಿಗಳಿಗೆ ವಿಷಯವು ತಿಳಿಯಬೇಕಾದರೆ ಅದಕ್ಕೆ ಸಂಬಂಧಿಸಿದ ಪಾರಿಭಾಷಿಕ ಶಬ್ದಗಳ ಪರಿಚಯವನ್ನು ಮಾಡಿಕೊಡುವದು ಅವಶ್ಯ ಬೀಳುತ್ತದೆ.

ಪಾಠಗಳನ್ನು ಕಲಿಸುವಾಗ ಮಕ್ಕಳಿಗೆ ಅರ್ಥವಾಗದ ಎಷ್ಟೋ ಶಬ್ದಗಳನ್ನು ಶಿಕ್ಷಕರು ಉಪಯೋಗಿಸುವದುಂಟು. ಇದರಿಂದ ಮಕ್ಕಳಿಗೆ ವಿಷಯ ಜ್ಞಾನವು ಆಗುವದಿಲ್ಲ ಪ್ರತ್ಯಕ್ಷ ಕಾಣದ ವಸ್ತುಗಳ ಬಗ್ಗೆಯೇ ವಿಚಾರಿಸುವದು ಮಕ್ಕಳಿಗೆ ಬಿಗಿ ಹೋಗುತ್ತದೆ. ಹೀಗಿರುವಾಗ ಸಾಮಾನ್ಯ ಕಲ್ಪನೆಗಳನ್ನು ಮತ್ತು ಸೂಕ್ಷ್ಮ ವಿಚಾರಗಳನ್ನು ತಿಳಿದುಕೊಳ್ಳುವದಕ್ಕಂತೂ ಅವರಿಗೆ ಮತ್ತಿಷ್ಟು ಗಡಚಾಗುತ್ತದೆ. ಸಾಮಾನ್ಯ ಕಲ್ಪನೆಗಳನ್ನು ಉದಾಹರಿ

ಸುವಾಗ ಅವಕ್ಕೆ ಸಂಬಂಧಿಸಿದ ಒಂದೆರಡು ವಸ್ತುಗಳನ್ನು ಅವೇ ಸನ್ನಿವೇಶದಲ್ಲಿ ಪದೇ ಪದೇ ತೋರಿಸಿದರೂ ಪ್ರಯೋಜನವಿಲ್ಲ. ಆದರೆ ಒಂದೇ ಗುಣವನ್ನು ಉದಾಹರಿಸುವ ಬೇರೆ ಬೇರೆ ಸನ್ನಿವೇಶಗಳಲ್ಲಿ ಅದನ್ನು ತೋರಿಸುವದು ಅವಶ್ಯ. ಒಬ್ಬ ತಾಯಿಯು ಪೆಟ್ಟಿಗೆಯ ಮುಚ್ಚಳವನ್ನು ಆಗಾಗ್ಗೆ ತೋರಿಸಿ 'ಚೌಕು' ಶಬ್ದದ ಪರಿಚಯುವನ್ನು ತನ್ನ ಮಗುವಿಗೆ ಮಾಡಿಕೊಟ್ಟಿದ್ದಳು. ತಂದೆಯು ಅದನ್ನು ಪರೀಕ್ಷಿಸುವದಕ್ಕೆಂದು ಮಗುವಿಗೆ ಒಂದು ಚೌಕು ಕಾಗದವನ್ನು ತೋರಿಸಿ "ಇದು ಏನು ?" ಎಂದು ಕೇಳಿದ. "ಅದು ಕಾಗದ" ಎಂದು ಮಗುವಿನಿಂದ ಉತ್ತರ ಬಂದಿತು. "ಹೌದು, ಆದರೆ ಎಂಥ ಕಾಗದ ?" ಎಂದು ಮತ್ತೆ ಪ್ರಶ್ನೆ ಕೇಳಿದನು. "ಬಿಳಿಯ ಕಾಗದ" ಎಂದು ಮಗುವಿನ ಉತ್ತರ. ಅದರಂತೆ ರಟ್ಟು ಮೊದಲಾದ ಬೇರೆ ವಸ್ತುಗಳನ್ನು ತೋರಿಸಿ ಇದೇ ರೀತಿಯಾಗಿ ಪ್ರಶ್ನೆಗಳನ್ನು ಕೇಳಿದನು. ಆದರೆ ತಂದೆಗೆ ಬೇಕಾದ ಉತ್ತರವು ಮಗುವಿನಿಂದ ಹೊರಡಲೇ ಇಲ್ಲ. ಕಡೆಗೆ "ಚೌಕು ಅಂದರೇನು ?" ಎಂದು ತಂದೆಯು ಪ್ರಶ್ನೆ ಕೇಳಿದನು. ಆಗ ಮಗುವು ಕೂಡಲೆ ಓಡಿ ಹೋಗಿ ಪೆಟ್ಟಿಗೆಯ ಮುಚ್ಚಳವನ್ನು ತೋರಿಸಿದನು. ಈ ಉದಾಹರಣೆಯಲ್ಲಿ 'ಚೌಕು' ಎಂಬ ಸಾಮಾನ್ಯ ಕಲ್ಪನೆಯನ್ನು ತಾಯಿಯು ಮಗುವಿಗೆ ಬೇರೆ ಬೇರೆ ಸನ್ನಿವೇಶ ಗಳಿಗೆ ಹೊಂದಿಸಿ ತೋರಿಸಿಕೊಟ್ಟಿದ್ದಿಲ್ಲ. ಪೆಟ್ಟಿಗೆಗೆ ಸಂಬಂಧಿಸಿ ಮಾತ್ರ ಮಗುವು ಅದನ್ನು ತಿಳಿದುಕೊಂಡಿದ್ದನು. ಚೌಕು ಇದ್ದ ಕಾಗದ, ರಟ್ಟು, ಟೇಬಲ್, ಕಟ್ಟಿಗೆ ತುಂಡು, ಚಿತ್ರ ಮುಂತಾದ ಬೇರೆ ಬೇರೆ ವಸ್ತು ಗಳನ್ನು ತೋರಿಸಿದ್ದರೆ 'ಚೌಕು' ಎಂಬ ಸಾಮಾನ್ಯ ಕಲ್ಪನೆಯು ಹೆಚ್ಚು ಸ್ಪಷ್ಟವಾಗುತ್ತಿತ್ತು. ಒಬ್ಬ ಶಿಕ್ಷಕನು 'ಅರಸು' ಅಂದರೆ ಯಾರು ?' ಎಂದು ಕೇಳಿದಾಗ ವರ್ಗದಲ್ಲಿಯ ಒಬ್ಬ ಹುಡುಗನು ಎದ್ದು ನಿಂತು "ಅವನಿಗೆ ಎರಡು ತಲೆಗಳು ಇರುತ್ತವೆ." ಎಂದು ಕೂಡಲೇ ಉತ್ತರ ಕೊಟ್ಟನು. ಏಕಂದರೆ ಆ ಮಗುವು ಇಸ್ಪೇಟಿನಲ್ಲಿ ಮುದ್ರಿತವಾದ ಅರಸನ ಚಿತ್ರಕ್ಕೆ ಎರಡು ತಲೆಗಳು ಇದ್ದುದನ್ನು ನೋಡಿದ್ದನು. ಒಟ್ಟಿನಲ್ಲಿ ಶಬ್ದಗಳ ಅರ್ಥವು ಸರಿಯಾಗಿ ತಿಳಿಯಬೇಕಾದರೆ ಅವುಗಳ ಬೇರೆ ಬೇರೆ ಸನ್ನಿವೇಶಗಳಲ್ಲಿಯ ಉದಾಹರಣೆಗಳನ್ನು ಸ್ವಂತ ಹುಡುಕಿ ತೆಗೆಯಲಿಕ್ಕೆ ಹುಡುಗರಿಗೆ ಹೇಳಬೇಕು. ಹೊಸ ಶಬ್ದಗಳನ್ನು ತಾವು ಸ್ವಂತ ವಾಕ್ಯಗಳಲ್ಲಿ ಉಪಯೋಗಿಸಲಿಕ್ಕೆ

ವಿದ್ಯಾರ್ಥಿಗಳಿಗೆ ಹೇಳಬೇಕು. ಬರೇ ವ್ಯಾಖ್ಯೆಯನ್ನು ಹೇಳಿದರೆ ಅಥವಾ ನಿಘಂಟಿನಲ್ಲಿ ಕೊಟ್ಟಿರುವ ಸಮಾನ ಅರ್ಥದ ಬೇರೆ ಶಬ್ದವನ್ನು ಹೇಳಿದರೆ ತೀರದು. ವಸ್ತುಗಳನ್ನು ಪ್ರತ್ಯಕ್ಷ ನೋಡಿ ಮುಟ್ಟಿ ತಿಳಿದುಕೊಳ್ಳುವದು ಅವರಿಗೆ ಸುಲಭವಾಗುವದು. ಇಂದ್ರಿಯಗಳ ಸಹಾಯವಿಲ್ಲದೆ ವಿಚಾರ ಮಾಡುವದು ದೊಡ್ಡವರಿಗೇ ಕಠಿಣವೆನಿಸಿದಾಗ ಸಣ್ಣ ಮಕ್ಕಳಿಗೆ ಅದೆಷ್ಟು ಬಿಗಿಯಾಗ ಬಹುದು ? ಒಂದು ಬಾಯಿಲೆಕ್ಕವನ್ನು ಸಹ ಮಾಡುವಾಗ ಹುಡುಗರು ಬೆರಳು ಎಣಿಸುವದನ್ನೂ ದೊಡ್ಡವರು ಕಾಗದ ತಕ್ಕೊಂಡು ಅಂಕಿ ಹಾಕುವ ದನ್ನೂ ನಾವು ನೋಡುತ್ತೇವೆ. ಇದರಿಂದ ಗೊತ್ತಾಗುವದೇನಂದರೆ ವಿಷಯವು ಸ್ಥೂಲವಾಗಿ ಕಣ್ಣು ಮುಂದೆ ಇದ್ದಲ್ಲಿ ಅದನ್ನು ತಿಳಿದುಕೊಳ್ಳಲಿಕ್ಕೆ ಹಗುರಾಗು ತ್ತದೆ. ಗಣಿತ, ಇತಿಹಾಸ, ಭೂಗೋಲ ಮತ್ತು ವಿಜ್ಞಾನದ ವಿಷಯಗಳನ್ನು ಕಲಿಸುವಾಗ ಆಯಾ ವಿಷಯಕ್ಕೆ ಸಂಬಂಧಿಸಿದ ಪ್ರತ್ಯಕ್ಷ ವಸ್ತುಗಳನ್ನು ಅವು ಇಲ್ಲದಲ್ಲಿ ಅವುಗಳ ಚಿತ್ರಗಳನ್ನು ಅಥವಾ ಆಕೃತಿಗಳನ್ನು ಉಪಯೋಗಿಸ ಬೇಕು. ಇತಿಹಾಸ ಪಾಠಗಳಲ್ಲಿ ನಟನೆಗಳು ಮತ್ತು ಭೂಗೋಲ ಪಾಠಗಳಲ್ಲಿ 'ಮಾಡೆಲ್' ಗಳು ಹೆಚ್ಚು ಪರಿಣಾಮಕಾರಕವಾಗುವವು. ಏಕಂದರೆ ಅವು ಕಲಿಸಬೇಕಾದ ವಿಷಯಗಳನ್ನು ಮೂರ್ತಿಮಂತ ಮಾಡುವವು. ಮಕ್ಕಳು ಚಟುವಟಿಕೆ ಪ್ರಿಯರು. ಅವರು ಕೇಳಿ ಕಲಿಯುವದಕ್ಕಿಂತ ನೋಡಿ ಕಲಿಯು ವದು ಮಿಗಿಲು, ಮತ್ತು ನೋಡಿ ಕಲಿಯುವದಕ್ಕಿಂತ ಮಾಡಿ ಕಲಿಯುವದು ಮಿಗಿಲು. ಮಕ್ಕಳಿಗೆ ಪ್ರತ್ಯಕ್ಷ ಅನುಭವವು ಹೆಚ್ಚಾಗಿ ದೊರೆಯಬೇಕು. ಪಟ್ಟಣದ ಹುಡುಗರಿಗೆ ಹಳ್ಳಿಯ ಎಷ್ಟೋ ಸಂಗತಿಗಳೂ ಹಳ್ಳಿಯ ಹುಡುಗರಿಗೆ ಪಟ್ಟಣದ ಎಷ್ಟೋ ಸಂಗತಿಗಳೂ ಗೊತ್ತಿರುವದಿಲ್ಲ. ಇವುಗಳ ಜ್ಞಾನವನ್ನು ಪ್ರತ್ಯಕ್ಷ ಮಾಡಿಕೊಡಲು ಶಾಲೆಯ ಪ್ರವಾಸಗಳನ್ನು ಏರ್ಪಡಿಸಬೇಕು. ಪಾಲಕರು ಹುಡುಗರನ್ನು ಜಾತ್ರೆಗಳಿಗೆ, ಮತ್ತು ಇತರ ಮಹತ್ವದ ಸ್ಥಳಗಳಿಗೆ ಕರೆದುಕೊಂಡು ಹೋಗಬೇಕು. ಪ್ರವಾಸವು ಒಂದು ಬಗೆಯ ಶಿಕ್ಷಣವೇ ಆಗಿರುತ್ತದೆ.

### ತರ್ಕ ( Reasoning )

ತರ್ಕವೆಂದರೆ ಸಮಸ್ಯೆ ಬಿಡಿಸುವದು ಅಥವಾ ಗುರಿಯನ್ನು ಮುಟ್ಟುವ ಹಾದಿಯನ್ನು ಹುಡುಕುವದು. ಅಥವಾ ಅನುಭವಗಳಲ್ಲಿ ಹೊಸ ಸಂಬಂಧ

ಗಳನ್ನು ಹುಡುಕಿ ತೆಗೆಯುವದೇ ತರ್ಕ. ಒಂದು ಸಮಸ್ಯೆಗೆ ಉತ್ತರವನ್ನು ಹುಡುಕುವ ಉದ್ದೇಶದಿಂದ ಮನಸ್ಸಿನಲ್ಲಿ ಒಂದು ಪ್ರಯೋಗವು ನಡೆದಿರುತ್ತದೆ. ಹೀಗೆ ಮಾಡಿದರೆ ಹೀಗೆ ಆದೀತು, ಹಾಗೆ ಮಾಡಿದರೆ ಹಾಗೆ ಆದೀತು, ಎಂದು ಮನಸ್ಸು ವಿಚಾರಿಸತೊಡಗುತ್ತದೆ. ಪಂಜರದಲ್ಲಿ ಇಟ್ಟ ಆಹಾರವನ್ನು ತಿನ್ನಲಿಕ್ಕೆ ಇಲಿಯು ಪ್ರಯತ್ನಿಸುವಾಗ ಅದರ ಮನಸ್ಸಿನಲ್ಲಿ ತರ್ಕವು ನಡೆದಿರುತ್ತದೆ. ಮೇಲೆ ನೇತಾಡುವ ಬಾಳೆಯ ಹಣ್ಣುಗಳನ್ನು ಹೇಗೆ ದೊರಕಿಸಬೇಕು ಎಂದು ಮಂಗವು ಪ್ರಯತ್ನಿಸುವಾಗ ಅದರ ಮನಸ್ಸಿನಲ್ಲಿ ತರ್ಕವು ನಡೆದಿರುತ್ತದೆ. ಇದನ್ನು ಕೊಯಿಲರ್ ಎಂಬ ಮನೋವಿಜ್ಞಾನಿಯು ಆಫ್ರಿಕೆಯಲ್ಲಿ ಚಿಂಪೆಂಜಿ ಎಂಬ ಪ್ರಕಾರದ ಮಂಗಗಳ ಮೇಲೆ ನಡೆಯಿಸಿದ ಪ್ರಯೋಗದಿಂದ ಸಿದ್ಧವಾಗುತ್ತದೆ. ಅಂಕಗಣಿತ ಮತ್ತು ಬೀಜಗಣಿತದ ಲೆಕ್ಕಗಳನ್ನು, ಭೂಮಿತಿಯ ಪ್ರಮೇಯಗಳನ್ನು, ಸಾಯನ್ಸದಲ್ಲಿಯ ಸಮಸ್ಯೆಗಳನ್ನು ಬಿಡಿಸುವಾಗ ಈ ಬಗೆಯ ಕಾಲ್ಪನಿಕ ಪ್ರಯೋಗವು ಮನಸ್ಸಿನಲ್ಲಿ ನಡೆದಿರುತ್ತದೆ. ಒಬ್ಬ ಕಾಯಿಪಲ್ಲೆ ಮಾರುವವನಲ್ಲಿ ನಾವು ಐದೂವರೆ ಆಣೆಯ ಕಾಯಿಪಲ್ಲೆ ಕೊಂಡು ಒಂದು ರೂಪಾಯಿಯನ್ನು ಅವನಿಗೆ ಕೊಟ್ಟರೆ ಅವನು ತನ್ನ ಮನಸ್ಸಿನಲ್ಲಿ ಲೆಕ್ಕ ಮಾಡಿ ಹತ್ತೂವರೆ ಆಣೆಗಳನ್ನು ನಮಗೆ ತಿರುಗಿ ಕೊಡುವನು. ಆದರೆ ಈ ಮಾನಸಿಕ ಪ್ರಯೋಗವನ್ನು ಮಾಡಲು ಅಸಮರ್ಥನಾದವನು ನಮಗೆ ಹದಿನಾರು ಆಣೆಗಳ ಚಿಲ್ಲರ ಕೊಟ್ಟು ನಮ್ಮಿಂದ ಐದೂವರೆ ಆಣೆಗಳನ್ನು ತಿರುಗಿ ಬೇಡುವನು. ಹುಲಿಯಾಟ, ಚಕ್ಕದ ಆಟ, ಪಗಡಿಯ ಆಟ, ಚದುರಂಗ ಮುಂತಾದ ಆಟಗಳಲ್ಲಿಯೂ ಕಾಲ್ಪನಿಕ ಪ್ರಯೋಗ ನಡೆದಿರುತ್ತದೆ. ತರ್ಕಕ್ಕೆ ಬದಲಾಗಿ ಅನುಮಾನ, ವಿವೇಕ, ಸಿದ್ಧಾಂತ ಹೊರಡಿಸುವದು ಎಂಬ ಪದಗಳನ್ನೂ ಉಪಯೋಗಿಸಬಹುದು.

ನಮ್ಮ ಮನಸ್ಸಿನಲ್ಲಿ ತರ್ಕವು ನಡೆದಾಗ ಅದು ಎರಡು ತತ್ವಗಳನ್ನು ಅನುಸರಿಸುತ್ತದೆ—(೧) ಎರಡು ವಸ್ತುಗಳಲ್ಲಿ **ಸಂಬಂಧವನ್ನು ಹುಡುಕುವದು** ಅಥವಾ (೨) ಸಂಬಂಧಪಟ್ಟ ಜೋಡಿಯ **ವಸ್ತುವನ್ನು ಹುಡುಕುವದು.** 'ದೇಶ' ಮತ್ತು 'ಆಡಳಿತೆ' ಎಂಬ ಎರಡು ಶಬ್ದಗಳನ್ನು ಕೇಳಿದಾಗ ಯಾವ ದೇಶದಲ್ಲಿ ಯಾವ ತರಹದ ಆಡಳಿತೆ ಇರುತ್ತದೆ ಎಂಬುದನ್ನು ನಾವು ಊಹಿಸುತ್ತೇವೆ. ಈ ಸಂಬಂಧವು ಲೋಕಸತ್ತೆ

ಯಾಗಿರಬಹುದು ಅಥವಾ ಬೇರೊಂದು ಪ್ರಕಾರದ ಸಂಬಂಧವಿರಬಹುದು. 'ಕರಿ' ಮತ್ತು 'ಬಿಳಿ' ಎಂಬ ಎರಡು ವಸ್ತುಗಳನ್ನು ನೋಡಿ ನಾವು ಅವುಗಳಲ್ಲಿ ವಿರೋಧ ಸಂಬಂಧವನ್ನು ಕಲ್ಪಿಸುತ್ತೇವೆ. ಇದರಂತೆ ಒಂದು ಸಂಬಂಧ ಮತ್ತು ಒಂದು ವಸ್ತುವನ್ನು ಕೊಟ್ಟರೆ ಇತರ ಸಂಬಂಧಪಟ್ಟ ವಸ್ತುವನ್ನು ಅಥವಾ ಜೋಡಿಯನ್ನು ನಾವು ಊಹಿಸಬಹುದು. 'ತಂದೆಗೆ ಮಗನು ಇದ್ದಂತೆ, ರಾಜನಿಗೆ—?' ಎಂಬ ವಾಕ್ಯವನ್ನು ಕೇಳಿ ನಾವು 'ಪ್ರಜರು' ಎಂಬ ಜೋಡಿಯ ಶಬ್ದವನ್ನು ಊಹಿಸಬಹುದು. '೩ ಕ್ಕೆ ೯ ಇದ್ದಂತೆ ೫ ಕ್ಕೆ—?' ಎಂದು ಪ್ರಶ್ನೆ ಕೇಳಿದಾಗ ಮೂರು ಪಟ್ಟು ಸಂಬಂಧವನ್ನು ಸೂಚಿಸುವ ೧೫ ಎಂಬ ಅಂಕಿಯನ್ನು ಹೇಳುತ್ತೇವೆ. ಈ ವಿಚಾರ ಕ್ರಮದ ಎರಡೂ ತತ್ವಗಳನ್ನು ಕೆಳಗೆ ಕೊಟ್ಟ ಆಕೃತಿಗಳಿಂದ ಸುಲಭ ವಾಗಿ ತಿಳಿದುಕೊಳ್ಳಬಹುದು:—

[ ಅ ] .... [ ಆ ] .... [ ಸ ? ] ಇದು ಸಂಬಂಧ ಹುಡುಕುವದು.

[ ಅ ] .... [ ಸ ] .... [ ಆ ? ] ಇದು ಜೋಡಿವಸ್ತು ಹುಡುಕುವದು.

ಮೊದಲನೇ ಆಕೃತಿಯು 'ಅ' ಮತ್ತು 'ಆ' ಎಂಬವು ಕೊಟ್ಟ ವಸ್ತುಗಳನ್ನು ಮತ್ತು 'ಸ' ಎಂಬುದು ಹುಡುಕಬೇಕಾದ ಸಂಬಂಧವನ್ನು ಸೂಚಿಸುತ್ತವೆ. ಎರಡನೆಯ ಆಕೃತಿಯಲ್ಲಿ 'ಅ' ಎಂಬುದು ಕೊಟ್ಟ ವಸ್ತುವನ್ನು 'ಸ' ಎಂಬುದು ಕೊಟ್ಟ ಸಂಬಂಧವನ್ನು ಮತ್ತು 'ಆ' ಎಂಬುದು ಹುಡುಕಬೇಕಾದ ಜೋಡಿಯ ವಸ್ತುವನ್ನು ಸೂಚಿಸುತ್ತವೆ.

### ಸಮಸ್ಯೆ ಬಿಡಿಸುವದು

ಸಮಸ್ಯೆ ಬಿಡಿಸುವದು ಅಂದರೆ ಗುರಿಯನ್ನು ಮುಟ್ಟಲು ಸರಿಯಾದ ಹಾದಿಯನ್ನು ಹುಡುಕುವದು. ಸಮಸ್ಯೆಯನ್ನು ಬಿಡಿಸುವಾಗ ಐದು ಮೆಟ್ಟಿಲುಗಳನ್ನು ದಾಟಬೇಕಾಗುತ್ತದೆ— (೧) ಗುರಿ (೨) ಪರೀಕ್ಷಣೆ (೩) ಪ್ರಮಾಣ (Hypothesis) (೪) ಪ್ರಯತ್ನ ಮತ್ತು (೫) ಸಿದ್ಧಾಂತ. ಈ ಮೆಟ್ಟಿಲುಗಳ ಕ್ರಮವನ್ನು ಒಂದೆರಡು ಉದಾಹರಣೆಗಳಿಂದ ಸ್ಪಷ್ಟ ಮಾಡ

ಬಹುದು ಇಲಿಯು ಅಗಳಿಗಳನ್ನು ಸರಿಸಿ ಪಂಜರದಲ್ಲಿ ಇಟ್ಟ ಆಹಾರವನು ಹುಡುಕಿ ತಿನ್ನುತ್ತದೆ. ಪಂಜರದಲ್ಲಿ ಇದ್ದ ಆಹಾರವನ್ನು ದೊರಕಿಸಬೇಕು ಎಂದು ಅದು ಮೊಟ್ಟ ಮೊದಲು ನಿಶ್ಚಯಿಸುತ್ತದೆ. ಇದು ಗುರಿ. ಆ ಮೇಲೆ ಆ ಸ್ಥಳಕ್ಕೆ ಹೋಗಬಹುದಾದ ಹಾದಿ ಅಥವಾ ಹಾದಿಗಳು ಯಾವು ಎಂದು ನೋಡುತ್ತದೆ. ಇದು ನಿರೀಕ್ಷಣೆ. ಬಹಳವಾಡಿ ಈ ಹಾದಿಯು ಆಹಾರ ಇದ್ದ ಸ್ಥಳದವರೆಗೆ ಹೋಗುತ್ತದೆ ಎಂದು ಊಹಿಸುತ್ತದೆ. ಇದು ಪ್ರಮಾಣ ಅಥವಾ ಪೂರ್ವ ಸಿದ್ಧಾಂತ (Hypothesis). ಇಷ್ಟಾದ ಮೇಲೆ ಅಲ್ಲಿಗೆ ಹೋಗಲಿಕ್ಕೆ ಪ್ರಾರಂಭ ಮಾಡಿ ಮುಂದುವರಿಯುತ್ತದೆ. ಇಲ್ಲಿ ಪ್ರ ಕೆಲಸವು ನಡೆಯುತ್ತದೆ. ನಡು ನಡುವೆ ಅಡ್ಡಿ ಆತಂಕಗಳು ಬರುತ್ತವೆ. ಆಗ ಈ ಹಾದಿಯನ್ನು ಬಿಟ್ಟು ಆ ಹಾದಿಗೆ, ಆ ಹಾದಿಯನ್ನು ಬಿಟ್ಟು ಈ ಹಾದಿಗೆ ಅಲೆದಾಡುತ್ತದೆ. ಒಮ್ಮೊಮ್ಮೆ ತಪ್ಪು ಹಾದಿಗೆ ಹೋಗಿ ತಿರುಗಿ ಬರುತ್ತದೆ. ಹೀಗೆ ತಪ್ಪು ತಡೆಗಳನ್ನು ಮಾಡುತ್ತ ಸರಿಯಾದ ಹಾದಿಯನ್ನು ಹುಡುಕುತ್ತ ಮುಂದೆ ಸಾಗುತ್ತದೆ. ಇದು ಪ್ರಯತ್ನ. ಕೊನೆಗೆ ಸರಿಯಾದ ಹಾದಿಯಿಂದ ಆಹಾರವಿದ್ದಲ್ಲಿಗೆ ಬಂದು ತನ್ನ ಹಸಿವೆಯನ್ನು ಹಿಂಗಿಸುತ್ತದೆ. ಹೀಗೆ ತನ್ನ ಗುರಿಯನ್ನು ಸಾಧಿಸುತ್ತದೆ. ಆಗ ಈ ಹಾದಿಯು ಸರಿಯಾದ ಹಾದಿಯು ಎಂದು ನಿರ್ಣಯಿಸುತ್ತದೆ. ಇದು ಕೊನೆಯ ಸಿದ್ಧಾಂತ. ಇದು ಒಂದು ಸಣ್ಣ ಉದಾಹರಣೆ. ಮನುಷ್ಯನು ಯಾವ ಸಮಸ್ಯೆಯನ್ನು ಬಿಡಿಸಬೇಕಾದರೂ ಮೇಲೆ ಕಾಣಿಸಿದ ಐದೂ ಮೆಟ್ಟುಗಳನ್ನು ಅನುಸರಿಸಬೇಕಾಗುತ್ತದೆ. ಬುದ್ಧಿಯು ಹೆಚ್ಚು ಚುರುಕು ಇದ್ದಷ್ಟು ಈ ಪ್ರತಿಯೊಂದು ಮೆಟ್ಟಿನ ವಿಚಾರವು ಹೆಚ್ಚು ಯಶಸ್ವಿ ರೀತಿಯಿಂದ ಸಾಗುತ್ತದೆ ಬುದ್ಧಿಯು ಮಂದ ಇದ್ದಲ್ಲಿ ಸಮಸ್ಯೆಯನ್ನು ಬಿಡಿಸುವದು ಆಗುವದಿಲ್ಲ. ಒಬ್ಬ ನಾವಿಕನು ನದಿಯ ಒಂದು ದಂಡೆಯಿಂದ ಮತ್ತೊಂದು ದಂಡೆಗೆ ತೋಳ, ಕುರಿ ಮತ್ತು ತರಕಾರಿಯನ್ನು ಒಯ್ಯುವದಿತ್ತು. ಆದರೆ ಸರತಿಗೆ ಒಂದೇ ವಸ್ತುವನ್ನು ಒಯ್ಯುವ ಕರಾರು ಇತ್ತು. ಹಾನಿ ಆಗದಂತೆ ಹೇಗೆ ಒಂದೊಂದೇ ಒಯ್ಯುವದು ಎಂಬುದು ಆವನ ಸಮಸ್ಯೆ. ಈ ದಂಡೆಯಲ್ಲಿ ಆಗಲಿ ಆ ದಂಡೆಯಲ್ಲಿ ಆಗಲಿ ಆವನು ಇಲ್ಲದಿದ್ದರೆ ತೋಳವು ಕುರಿಯನ್ನು ಅಥವಾ ಕುರಿಯು ತರಕಾರಿಯನ್ನು ತಿನ್ನುವದು. ತೋಳವನ್ನು ಮೊದಲು ಒಯ್ದರೆ ಕುರಿಯು

ತರಕಾರಿಯನ್ನು ತಿನ್ನುತ್ತದೆ, ತರಕಾರಿಯನ್ನು ಮೊದಲು ಒಯ್ದರೆ ತೋಳವು ಕುರಿಯನ್ನು ತಿನ್ನುತ್ತದೆ. ಆದರೆ ಕುರಿಯನ್ನು ಒಯ್ದರೆ ಯಾವ ಹಾನಿಯೂ ತಟ್ಟುವದಿಲ್ಲ. ಆ ಮೇಲೆ ಏನು ಒಯ್ಯಬೇಕು? ತರಕಾರಿಯನ್ನು ಒಯ್ದು ಇಟ್ಟು ಬಂದರೆ ಕುರಿಯು ಅದನ್ನು ತಿನ್ನುವದು. ಅದನ್ನು ಬಿಟ್ಟು ತೋಳವನ್ನು ಇಟ್ಟು ಬಂದರೆ ಅದು ಕುರಿಯನ್ನು ತಿನ್ನುವದು ಆಗ ತೋಳವನ್ನು ಒಯ್ದು ಇಟ್ಟು ಕುರಿಯನ್ನು ತಿರುಗಿ ತಂದು ಆ ಮೇಲೆ ತರಕಾರಿಯನ್ನು ಒಯ್ದು ಇಟ್ಟು ಕೊನೆಗೆ ಕುರಿಯನ್ನು ಒಯ್ಯಬೇಕಾಗುತ್ತದೆ. ಜಾಣನಾದ ನಾವಿಕನು ಮನಸ್ಸಿನಲ್ಲಿ ಮೊದಲು ಯಶಸ್ವಿಯಾಗಿ ಈ ರೀತಿಯ ಪ್ರಯೋಗ ಮಾಡಿ ಆ ಮೇಲೆ ತಾನು ಯೋಚಿಸಿದಂತೆ ಒಯ್ಯುವ ಮತ್ತು ತರುವ ಕೆಲಸವನ್ನು ಮಾಡುವನು. ಆದರೆ ನಾವಿಕನ ಬುದ್ಧಿಶಕ್ತಿಯು ಚುರುಕು ಇರದಿದ್ದರೆ ಅವನ ಪ್ರಯತ್ನದಲ್ಲಿ ಗೆಲವು ದೊರಕುವ ಮೊದಲು ಅವನು ಹಾನಿಗೆ ಒಳಗಾಗುವನು.

ಶಾಲೆಯ ಪ್ರತಿಯೊಂದು ಮೆಟ್ಟಿನಲ್ಲಿ ಮಕ್ಕಳ ವಿಚಾರಶಕ್ತಿಯನ್ನು ಹೆಚ್ಚಿಸುವ ಪ್ರಯತ್ನಗಳು ಸಾಗಿಯೇ ಇರಬೇಕು. ವಿಚಾರಿಸುವದು ಹೇಗೆ ಮತ್ತು ಸಮಸ್ಯೆ ಬಿಡಿಸುವದು ಹೇಗೆ ಎಂಬುದನ್ನು ಕಲಿಯುವದೂ ಬಿಗಿ ಮತ್ತು ಕಲಿಸುವದೂ ಬಿಗಿ. ಮಗುವು ಬೆಳೆಯುತ್ತ ಹೋದ ಹಾಗೆ ಅವನ ಅನುಭವವು ಹೆಚ್ಚುತ್ತದೆ. ಅವನ ವಿಚಾರ ಶಕ್ತಿಯು ಬೆಳೆಯುತ್ತದೆ. ವಯಸ್ಸು ಆದ ಹಾಗೆ ಸಮಸ್ಯೆ ಬಿಡಿಸುವ ಶಕ್ತಿಯೂ ಬೆಳೆಯುತ್ತದೆ. ಆದರೂ ಐದಾರು ವರುಷದ ಸಣ್ಣ ಮಕ್ಕಳು ಕೂಡ ತಮ್ಮ ಬುದ್ಧಿ ಶಕ್ತಿಗೆ ತಕ್ಕಂತೆ ವಿಚಾರಿಸಿ ಸಂಗತಿಗಳ ಕಾರಣ ಪರಿಣಾಮಗಳನ್ನು ತಿಳಿಸಬಲ್ಲರು. ವಿವೇಕ ಶಕ್ತಿಯು ಎಲ್ಲರಲ್ಲಿಯೂ ಉಂಟು. ಆದರೆ ಅದು ಬೇರೆ ಬೇರೆ ವ್ಯಕ್ತಿಗಳಲ್ಲಿ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇರುತ್ತದೆ. ತರ್ಕ ಮಾಡುವ ಪದ್ಧತಿಯನ್ನು ತಿಳಿಸಿ ಕೊಟ್ಟರೆ ಎಲ್ಲರೂ ಅದರಲ್ಲಿ ಮುಂದುವರಿಯಬಲ್ಲರು. ಜೀವನದ ಪ್ರತಿಯೊಂದು ಸಮಸ್ಯೆಯನ್ನು ಮಕ್ಕಳು ತಾವಾಗಿಯೇ ತಮ್ಮ ಸ್ವಂತ ಬುದ್ಧಿಯಿಂದ ವಿಚಾರಿಸುವ ಮನೋವೃತ್ತಿಯನ್ನು ಬೆಳೆಸುವದು ಶಿಕ್ಷಣದ ಒಂದು ಮುಖ್ಯ ಧ್ಯೇಯ. ವಿಷಯವನ್ನು ಮಕ್ಕಳ ತಲೆಯಲ್ಲಿ ತುರುಕುವದು

ನಿಜವಾದ ಶಿಕ್ಷಣವಲ್ಲ. ಅದರಂತೆ ವಿಷಯವನ್ನು ಬಾಯಿಪಾಠ ಮಾಡುವದು ಕಲಿಯುವಿಕೆಯಲ್ಲ. ಸಾಯನ್ಸ, ಗಣಿತ, ಸಮಾಜವಿಜ್ಞಾನ ಮೊದಲಾದ ವಿಷಯಗಳನ್ನು ಕಲಿಸುವಾಗ ಶಿಕ್ಷಕನು ಸಮಸ್ಯೆ ಪದ್ಧತಿಯನ್ನು (Problem Method) ಅನುಸರಿಸಬೇಕು. ಸಮಸ್ಯೆಗಳ ಉತ್ತರಗಳನ್ನು ಅಥವಾ ಸಂಗತಿಗಳ ಕಾರಣ ಪರಿಣಾಮಗಳನ್ನು ಶಿಕ್ಷಕನು ತಾನಾಗಿಯೇ ಹೇಳಲು ಹಾತೊರೆಯಬಾರದು. ಅವುಗಳನ್ನು ವಿದ್ಯಾರ್ಥಿಗಳಿಂದ ಹೊರಡಿಸಲು ಪ್ರಯತ್ನಿಸಬೇಕು. ಯಾವುದಾದರೊಂದು ಸಮಸ್ಯೆಯನ್ನು ಬಿಡಿಸುವಾಗ ಮೊದಲು ಗುರಿಯನ್ನು ನಿಶ್ಚಯಿಸುವದು ಅವಶ್ಯ. ಹುಡುಗರಿಗೆ "ನೀವೇ ವಿಚಾರಿಸಿರಿ!" ಎಂದು ಹೇಳಿ ಬಿಡುವುದರಿಂದ ಪ್ರಯೋಜನವಿಲ್ಲ. ಏನನ್ನು ಹುಡುಕಿ ತಗೆಯಬೇಕಾಗಿದೆ ಎಂಬುದರ ಸ್ಪಷ್ಟ ಕಲ್ಪನೆಯನ್ನು ಅವರಿಗೆ ಮಾಡಿಕೊಡುವದು ಅವಶ್ಯ. ಸಮಸ್ಯೆಗೆ ಸಂಬಂಧಪಟ್ಟ ಎಲ್ಲ ಸಂಗತಿಗಳನ್ನು ಕಲೆಹಾಕಲಿಕ್ಕೆ ಮತ್ತು ಅವುಗಳ ಅನ್ಯೋನ್ಯ ಸಂಬಂಧವನ್ನು ಪರೀಕ್ಷಿಸಿ ನೋಡಲಿಕ್ಕೆ ಕಲಿಸುವದು ಎರಡನೇ ಮೆಟ್ಟು. ಒಳನೋಟದ ಸಹಾಯದಿಂದ ಹಾದಿಯನ್ನು ಹುಡುಕುವದು ಸುಲಭವಾಗುತ್ತದೆ. ಕೊಟ್ಟ ಸಂಗತಿಗಳ ಮೇಲಿಂದ ಸಾರಾಂಶವನ್ನು ಹೊರಡಿಸುವದನ್ನು ಮತ್ತು ಸಾಮಾನ್ಯ ತತ್ವವನ್ನು ಕಂಡುಹಿಡಿಯುವದನ್ನು ಹುಡುಗರು ಕಲಿಯುವದು ಅವಶ್ಯ. ಪ್ರತ್ಯಕ್ಷ ಕಂಡರೂ ಪ್ರಮಾಣಿಸಿ ನೋಡಬೇಕೆಂಬ ಗಾದೆಯ ಮಾತು ಇದನ್ನೇ ಹೇಳುತ್ತದೆ. ಸನ್ನಿವೇಶದ ಒಳನೋಟದಿಂದ ಸರಿಯಾದ ಸಂಬಂಧವನ್ನು ಊಹಿಸಿ ಗುರಿಯನ್ನು ಮುಟ್ಟುವ ಸುಲಭ ಹಾದಿಯನ್ನು ಹುಡುಕುವದು ಮನಸ್ಸಿನ ಸೂಕ್ಷ್ಮವಾದ ಕೆಲಸ. ತರ್ಕಿಸಿದ ಅನೇಕ ಹಾದಿಗಳಲ್ಲಿ ಕೆಲವು ತಪ್ಪು ಇರಬಹುದು ಕೆಲವು ಸರಿ ಇರಬಹುದು. ಸರಿಯಾದ ಹಾದಿಗಳಲ್ಲಿ ಕೆಲವು ಅಥವಾ ಒಂದು ಸಮೀಪದ ಹಾದಿ ಆಗಿರಬಹುದು, ಕೆಲವು ದೂರದವು ಆಗಿರಬಹುದು ಕೊನೆಗೆ ಇದು ಸರಿಯಾದ ಹಾದಿ ಅಥವಾ ಸಮೀಪದ ಹಾದಿ ಎಂದು ಮನಸ್ಸು ಪೂರ್ವಸಿದ್ಧಾಂತವನ್ನು (Hypothesis) ಕಟ್ಟುವದು. ಆಮೇಲೆ ಅದು ಸರಿಯೋ ತಪ್ಪೋ ಎಂಬುದನ್ನು ಕಾರ್ಯರೂಪದಲ್ಲಿ ತಂದು ನೋಡಬೇಕಾಗುತ್ತದೆ. ಹೀಗೆ ಪ್ರಮಾಣಿಸಿ ನೋಡುವದು ಮೂರನೇ ಮೆಟ್ಟು. ಕಾರ್ಯವನ್ನು ಪ್ರಾರಂಭಿಸಿದ ಮೇಲೆ ಅನೇಕ ತಪ್ಪು ತಡೆಗಳನ್ನು

ಮಾಡುತ್ತ ಹಲವಾರು ಪ್ರಯತ್ನಗಳು ನಡೆಯುತ್ತವೆ. ತೊಂದರೆಗಳಿಗೆ ಎದೆಗುಂದದೆ ಮುಂದೆ ಸಾಗಲಿಕ್ಕೆ ಮಕ್ಕಳನ್ನು ಪ್ರೋತ್ಸಾಹಿಸಬೇಕು. ಓಡುವವನು ಎಡಹುವದು, ಕಲಿಯುವವನು ತಪ್ಪುವದು ಸಹಜ. ಈ ಮಾತನ್ನು ಕಲಿಯುವವನೂ ಮತ್ತು ಕಲಿಸುವವನೂ ತಿಳಿದಿರಬೇಕು. ಗುರಿ ಮುಟ್ಟಿದ ಮೇಲೆ ಇದು ಮಾತ್ರ ಸರಿಯಾದ ಹಾದಿ ಎಂಬ ಸಿದ್ಧಾಂತ ಕಟ್ಟುವದು ಕೊನೆಯ ಮೆಟ್ಟು.

ಮಕ್ಕಳ ವಿವೇಕ ಬುದ್ಧಿಯನ್ನು ಬೆಳೆಯಿಸಿ ಅವರ ಮೂಢ ನಂಬುಗೆಗಳನ್ನು ತೆಗೆದುಹಾಕಬೇಕು. ಚಂದ್ರಗ್ರಹಣ ಸೂರ್ಯಗ್ರಹಣಗಳು ಸೃಷ್ಟಿಯ ಸ್ವಾಭಾವಿಕ ನಿಯಮಗಳಿಗೆ ಅನುಸರಿಸಿ ನಡೆಯುತ್ತವೆ ಎಂಬು ತೋರಿಸಿಕೊಟ್ಟರೆ ಅವು ರಾಹುಗಳಿಂದ ಅಥವಾ ರಾಕ್ಷಸರಿಂದ ಸೂರ್ಯಚಂದ್ರರಿಗೆ ಉಂಟಾದ ಪೀಡೆಗಳು ಎಂಬ ಮೂಢ ನಂಬುಗೆಯು ಮಾಯವಾಗುವದು. ಅದರಂತೆ ಪುರಾಣಗಳಲ್ಲಿ ಬರುವ ಎಷ್ಟೋ ಅಸಂಗತದ ಕತೆಗಳು ಬೇರೆ ಜನಾಂಗದ ಅಥವಾ ಸಂಸ್ಕೃತಿಯ ದ್ವೇಷವನ್ನು ವ್ಯಕ್ತಮಾಡುವವೊ ಅಥವಾ ಇಲ್ಲವೊ ಎಂಬುದನ್ನು ಮಕ್ಕಳು ತಮ್ಮ ಬುದ್ಧಿಶಕ್ತಿಯಿಂದ ತಿಳಿದುಕೊಳ್ಳಲಿ. ಮಕ್ಕಳಲ್ಲಿ ವಿವೇಕ ಶಕ್ತಿಯನ್ನು ಬೆಳೆಯಿಸುವದು ಶಿಕ್ಷಣದ ಒಂದು ಮುಖ್ಯ ಧ್ಯೇಯ. ನಡತೆಯ ಬಗ್ಗೆಯೂ ಸಾಮಾಜಿಕ ರೂಢಿಗಳ ಬಗ್ಗೆಯೂ ಎಷ್ಟೋ ಅವಿವೇಕದ ನಂಬುಗೆಗಳು ಮಕ್ಕಳಲ್ಲಿ ಸೇರಿರುತ್ತವೆ. ಈ ನಡತೆ ಸರಿ ಆ ನಡತೆ ತಪ್ಪು ಎಂಬ ಕಲ್ಪನೆಯನ್ನು ಹುಡುಗರು ತಮ್ಮ ತಂದೆತಾಯಿಗಳಿಂದಾಗಲಿ ನೆರೆಹೊರೆಯವರಿಂದಾಗಲಿ ಅಥವಾ ಮತ ಬೋಧಕರಿಂದಾಗಲಿ ಕಲಿಯುತ್ತಾರೆ. ಎಷ್ಟೋ ವರ್ಷಗಳಿಂದ "ಅಸ್ಪೃಶ್ಯತೆ" ಯನ್ನು ಆಚರಿಸುತ್ತ ಬಂದುದು ಕೇವಲ ಅಜ್ಞಾನವೆಂಬುದನ್ನು ಮಕ್ಕಳಿಗೆ ವಿಚಾರದ ಬಲದಿಂದ ತಿಳಿಸಿಕೊಡಬೇಕು. ಜಾತಿಯ ಉಚ್ಚ ನೀಚ ಕಲ್ಪನೆ, ವಿಧವಾ ವಿವಾಹದ ವಿರೋಧ, ಊಟ ಉಡುಗೆಯ ನಿರ್ಬಂಧ ಮುಂತಾದ ಎಷ್ಟೋ ಸಾಮಾಜಿಕ ವರ್ತನಗಳನ್ನು ವಿವೇಕದ ಒರೆಗಲ್ಲಿಗೆ ಹಚ್ಚಿ ನೋಡಿದರೆ ಜನರಲ್ಲಿ ಅವುಗಳ ಬಗ್ಗೆ ಮೂಢ ನಂಬುಗೆಗಳು ತುಂಬಿರುವವೆಂದು ತಿಳಿಸಿಕೊಡಬೇಕು. ಜೀವನದ ಎಲ್ಲ ಬಗೆಯ ಸಮಸ್ಯೆಗಳನ್ನು ಕುರಿತು ಸಾರಾಸಾರ ವಿಚಾರ ಮಾಡುವ ಮನೋವೃತ್ತಿಯನ್ನು ಮಕ್ಕಳಲ್ಲಿ ಬೆಳೆಯಿಸಬೇಕು.

ಸಾಲೆಯಲ್ಲಿ ಯಾವ ವಿಷಯವನ್ನೆ ಕಲಿಸಲಿ ಮಕ್ಕಳ ಸದಸದ್ ವಿವೇಕವನ್ನು ತರಬೇತುಗೊಳಿಸುವದು ಅತ್ಯವಶ್ಯ. ಜಾಣನಾದ ಶಿಕ್ಷಕನು ಯಾವಾಗಲು ಈ ದೃಷ್ಟಿಯದ್ನು ಇಟ್ಟುಕೊಂಡೇ ವಿಷಯವನ್ನು ಕಲಿಸುತ್ತಾನೆ. ಇಂದಿನ ಮಕ್ಕಳು ನಾಳಿನ ನಾಗರಿಕರು. ಅವರಿಂದ ಹೊಸ ಸಮಾಜ ರಚನೆಯು ಆಗಬೇಕಾದರೆ ಮತ್ತು ಲೋಕಸತ್ತೆಯ ಆಡಳಿತೆಯು ಒಳ್ಳೇ ರೀತಿಯಿಂದ ಸಾಗಬೇಕಾದರೆ ವಿಚಾರಪರಿತು ಕೆಲಸಮಾಡುವ ಪದ್ಧತಿಯನ್ನು ಮತ್ತು ವಿಚಾರಪರಿತು ಸಮಸ್ಯೆ ಬಿಡಿಸುವ ಪದ್ಧತಿಯನ್ನು ಸಾಲೆಯಲ್ಲಿ ಮಕ್ಕಳಿಗೆ ಕಲಿಸುವದು ಅವಶ್ಯ.

## ಶಿಕ್ಷಣದಲ್ಲಿ ಉಪಯೋಗ

ಮಕ್ಕಳ ಬುದ್ಧಿಯ ಬೆಳವಣಿಗೆಯನ್ನೂ ಮತ್ತು ಜ್ಞಾನದ ಬೆಳವಣಿಗೆಯನ್ನೂ ಹೆಚ್ಚಿಸುವದು ಶಿಕ್ಷಣದ ಒಂದು ಮುಖ್ಯ ಉದ್ದೇಶ. ಇಂದ್ರಿಯಗಳ ಮುಖಾಂತರ ದೊರೆಯುವ ಪ್ರತ್ಯಕ್ಷ ಜ್ಞಾನವು ಮೊದಲನೆಯ ಮೆಟ್ಟು, ಆಲೋಚನೆಯ ಮುಖಾಂತರ ದೊರೆಯುವ ಕಾಲ್ಪನಿಕ ಜ್ಞಾನವು ಎರಡನೆಯ ಮೆಟ್ಟು. ಆದರೆ ಕಾಲ್ಪನಿಕ ಜ್ಞಾನಕ್ಕೂ ಇಂದ್ರಿಯಗಳೇ ತಳಹದಿ. ಪಂಚೇಂದ್ರಿಯಗಳು ಜ್ಞಾನದ ಹೆಬ್ಬಾಗಿಲುಗಳು. ಚಿಕ್ಕ ಮಕ್ಕಳ ಶಿಕ್ಷಣದಲ್ಲಂತೂ ಹೆಚ್ಚು ಹೆಚ್ಚಾಗಿ ಇಂದ್ರಿಯಗಳ ಉಪಯೋಗವನ್ನು ಮಾಡಿಕೊಳ್ಳಬೇಕು. ವಸ್ತುಗಳನ್ನು ಪ್ರತ್ಯಕ್ಷ ನೋಡಿ ಮುಟ್ಟಿ ತಿಳಿದುಕೊಳ್ಳುವದು ಮಕ್ಕಳಿಗೆ ಸುಲಭವಾಗುವದು ಇಂದ್ರಿಯಗಳ ಸಹಾಯವಿಲ್ಲದೆ ವಿಚಾರ ಮಾಡುವದು ದೊಡ್ಡವರಿಗೇನೆ ಬಿಗಿ ಎನಿಸಿದಾಗ ಎಳೆಯ ಬಾಲಕರಿಗೆ ಅದೆಷ್ಟು ಬಿಗಿಯಾಗಲಾರದು! ಸಣ್ಣ ಹುಡುಗರು ಮತ್ತು ಅಶಿಕ್ಷಿತರು ಸ್ಥೂಲವಾದ ಪ್ರತ್ಯಕ್ಷ ಜ್ಞಾನದ ಮಟ್ಟದಲ್ಲಿ ವ್ಯವಹರಿಸುತ್ತಾರೆ. ಕಾಲ್ಪನಿಕ ಮಟ್ಟವನ್ನು ಏರಿ ಮನಸ್ಸಿನಲ್ಲಿಯೇ ಆಲೋಚಿಸುವದು ಅವರಿಗೆ ಅಸಾಧ್ಯವಾದ ಮಾತು. ಜ್ಞಾನೇಂದ್ರಿಯದಂತೆ ಕರ್ಮೇಂದ್ರಿಯಗಳನ್ನೂ ಮಕ್ಕಳ ಶಿಕ್ಷಣದಲ್ಲಿ ಉಪಯೋಗಿಸಬೇಕು. ಮೊಂಟೇಸರಿ ಶಿಕ್ಷಣ ಪದ್ಧತಿಯಲ್ಲಿ ಇಂದ್ರಿಯಗಳ ಶಿಕ್ಷಣಕ್ಕೆ ಮತ್ತು ಚಟುವಟಿಕೆಗಳಿಗೆ ಹೆಚ್ಚು ಮಹತ್ವವನ್ನು ಕೊಡಲಾಗಿದೆ. ಮೊಂಟೇಸರಿ ಸಾಲೆಯಲ್ಲಿ 'ಬೋಧಕ ಉಪಕರಣಗಳನ್ನು' (Didactic Apparatus) ಉಪಯೋಗಿಸಲಾಗುತ್ತದೆ.

ಮಕ್ಕಳಿಗೆ ಇಂದ್ರಿಯಗಳ ಮುಖಾಂತರ ಅನುಭವವು ಹೆಚ್ಚಾಗಿ ದೊರೆಯ ಬೇಕು. ಪಟ್ಟಣದ ಹುಡುಗರಿಗೆ ಹಳ್ಳಿಯ ಎಷ್ಟೋ ಸಂಗತಿಗಳು ಮತ್ತು ಹಳ್ಳಿಯ ಹುಡುಗರಿಗೆ ಪಟ್ಟಣದ ಎಷ್ಟೋ ಸಂಗತಿಗಳು ಗೊತ್ತಿರುವದಿಲ್ಲ. ಇವು ಗಳ ಜ್ಞಾನವನ್ನು ಪ್ರತ್ಯಕ್ಷ ಮಾಡಿಕೊಡಲು ಸಾಲೆಯ ಪ್ರವಾಸಗಳನ್ನು ಏರ್ಪ ಡಿಸಬೇಕು. ಪಾಲಕರು ಮತ್ತು ಶಿಕ್ಷಕರು ಮಕ್ಕಳನ್ನು ಜಾತ್ರೆಗಳಿಗೆ, ಸೃಷ್ಟಿ ಸೌಂದರ್ಯದ ಸ್ಥಳಗಳಿಗೆ ಇತಿಹಾಸದ ಪ್ರಸಿದ್ಧ ಸ್ಥಳಗಳಿಗೆ ವಸ್ತು ಸಂಗ್ರಹಾಲ ಯಗಳಿಗೆ ಸ್ಟೇಶನ್, ಮುನಸಿಪಾಲಿಟಿ, ಹಾಸ್ಪಿಟಲ್, ಕೋರ್ಟು, ಜೇಲ, ಅಂಗಡಿ ಸಾಲು; ಪೇಟೆ, ಮಠ ಮತ್ತು ಸಾರ್ವಜನಿಕ ಸಂಸ್ಥೆಗಳಿಗೆ, ಕರೆದುಕೊಂಡು ಹೋಗ ಬೇಕು ಶಿಕ್ಷಕನು ಸಾಲೆಯ ಅಭ್ಯಾಸಗಳನ್ನು ಸಾಗಿಸುವಾಗ ಆ ಆ ವಿಷಯಗಳಿಗೆ ಸಂಬಂಧಿಸಿದ ವಸ್ತುಗಳನ್ನು ವಿದ್ಯಾರ್ಥಿಗಳಿಗೆ ತೋರಿಸಬೇಕು. ಮತ್ತು ಸಮ ಯೋಚಿತ ಚಟುವಟಿಕೆಗಳನ್ನು ಏರ್ಪಡಿಸಬೇಕು. ಚಿತ್ರಗಳನ್ನು, ಪ್ರತಿಮೆಗಳನ್ನು, ನಕಾಶಗಳನ್ನು, ಮಾಡೆಲ್‌ಗಳನ್ನು ಮತ್ತು ನಟನೆಗಳನ್ನು ಉಪಯೋಗಿಸ ಬೇಕು, ಮತ್ತು ಕೈಕೆಲಸಗಳನ್ನೂ ಮಾಡಿಸಬೇಕು. ಶಿಕ್ಷಣದಲ್ಲಿ ಆಟದ ಪದ್ಧ ತಿಯ ರಹಸ್ಯವಾದರೂ ಇದೇ. ಕೈಕೆಲಸಗಳು ಮತ್ತು ಕೈಕಸಬುಗಳು ಕಡಿಮೆ ಎಂದು ತಿಳಿಯುವ ಮೂಢ ನಂಬುಗೆಗೆ ಮನೋವಿಜ್ಞಾನದ ಆಧಾರವಿಲ್ಲ. ಕೈಕೆಲಸಗಳಲ್ಲಿ ಕೂಡ ಬುದ್ಧಿಯ ಉಪಯೋಗವು ಇದ್ದೇ ಇರುತ್ತದೆ. ಮಕ್ಕಳು ಸ್ವಂತ ಕೃತಿಯಿಂದ ಕಲಿಯುವದು ಹೆಚ್ಚು ಪರಿಣಾಮಕಾರಕವಾದುದು. ಕ್ರಿಯಾ ಪದ್ಧತಿಯ ರಹಸ್ಯವಾದರೂ ಇದೇ. "ಮಾಡುತ್ತ ಕಲಿಯುವದು" ಎಂಬ ಶಿಕ್ಷಣ ತತ್ವವು ಹೇಳುವದಾದರೂ ಇದೇ. ಕೆಲಸ ಮಾಡುವಲ್ಲಿ ಕ್ರಿಯೆಗೂ ಬುದ್ಧಿಗೂ ಸಂಬಂಧವಿರುತ್ತದೆ. ಕೆಲಸ ಮಾಡುವಾಗ ಬುದ್ಧಿಯ ಸಹಾಯವು ಬೇಕೇಬೇಕು. ಕ್ರಿಯೆ ಅಥವಾ ಪ್ರಯೋಗವು ಒಂದು ಬಗೆಯ ಕ್ರಿಯಾತ್ಮಕ ವಿಚಾರವೇ ಆಗಿರುತ್ತದೆ. ವಿಜ್ಞಾನಿಗಳ ಮತ್ತು ಸಂಶೋಧಕರ ವಿಚಾರ ಶಕ್ತಿಯು ಒಂದೇ ತೆರನಾಗಿ ಇರುತ್ತದೆ. ಕೈಕೆಲಸ ಅಥವಾ ಶಾರೀರಿಕ ಉದ್ಯೋ ಗವು ಗೌಣವೆಂಬ ಹಳೆಯ ನಂಬುಗೆಗೆ ಮನೋವಿಜ್ಞಾನದ ಬೆಂಬಲವಿಲ್ಲ.

ಮಕ್ಕಳ ವಿಚಾರ ಶಕ್ತಿಯನ್ನು ಬಲಪಡಿಸುವದು ಶಿಕ್ಷಣದ ಒಂದು ಮುಖ್ಯ ಉದ್ದೇಶ. ವಿಚಾರ ಶಕ್ತಿಯ ಮೇಲಿನ ಮಟ್ಟವೆಂದರೆ ತರ್ಕ ಅಥವಾ

ಅನುಮಾನ ಇದನ್ನು ಪ್ರೋತ್ಸಾಹಿಸುವದೂ ಶಿಕ್ಷಕರ ಕೆಲಸ. ಆದರೆ ತರ್ಕಕ್ಕೆ ಹೊರತಾದ ಕಟ್ಟು ಕಥೆಗಳನ್ನು ಅಥವಾ ಯಕ್ಷಿಣಿ ಕಥೆಗಳನ್ನು ಮಕ್ಕಳಿಗೆ ಹೇಳುವದು ಸರಿಯೊ? ಅಥವಾ ತಪ್ಪೊ? ಎಂಬ ಪ್ರಶ್ನೆಯು ಇಲ್ಲಿ ಬರುತ್ತದೆ. ಇಂಥ ಕಥೆಗಳನ್ನು ಕಲಿಸಬಾರದೆಂದು ಡಾ|| ಮೊಂಟೆಸರಿಯ ವಾದ. ಏಕೆಂದರೆ ಅವು ಮಕ್ಕಳ ತರ್ಕ ಶಕ್ತಿಯನ್ನು ಕುಂಠಿತಮಾಡುತ್ತವೆಯಂತೆ. ಮಕ್ಕಳು ಅದ್ಭುತವಾದ ಕಾಲ್ಪನಿಕ ಸಂಗತಿಗಳಿಗೆ ಮೋಹಿತರಾಗಿ ವಸ್ತುಸ್ಥಿತಿಯನ್ನು ಮರೆಯುತ್ತಾರಂತೆ. ಈ ವಾದವು ಕೆಲಮಟ್ಟಿಗೆ ನಿಜವಾಗಿರುತ್ತದೆ. ಮಕ್ಕಳು ಕಾಲ್ಪನಿಕ ಕಥೆಗಳಲ್ಲಿ ವಿಶ್ವಾಸ ಇಡುವದರಿಂದ ಅವರಲ್ಲಿ ಮೂಢ ನಂಬುಗೆಗಳು ಸೇರಿಕೊಳ್ಳುತ್ತವೆ. ಡಾ|| ಮೊಂಟೆಸರಿಯು ಕೊಟ್ಟ ಎಚ್ಚರಿಕೆಯನ್ನು ವಿಶೇಷವಾಗಿ ಇಂಡಿಯಾ ದೇಶದವರು ಗಮನಿಸುವದು ಅವಶ್ಯವೆನಿಸುತ್ತದೆ. ನಮ್ಮಲ್ಲಿ ಎಷ್ಟೋ ಜನರು ಚಿಕ್ಕಂದಿನಲ್ಲಿ ನಟ್ಟ ಮೂಢ ನಂಬುಗೆಗಳ ಬಲೆಗೆ ಸಿಕ್ಕಿರುವರು. ಕೀಳು ಮೇಲಿನ ಕಲ್ಪನೆ, ಅಸ್ಪೃಶ್ಯತೆಯ ಕಲ್ಪನೆ, ರಾಕ್ಷಸರ ಕಲ್ಪನೆ ಮೊದಲಾದವು ತರ್ಕಕ್ಕೂ ವಿವೇಕಕ್ಕೂ ಒಪ್ಪಿಗೆಯಿಲ್ಲದ ನಂಬುಗೆಗಳು. ರಾವಣನು ಹತ್ತುಪಟ್ಟು ಶೂರನಿದ್ದ ಒಬ್ಬ ಮಹಾ ವ್ಯಕ್ತಿ ಎಂಬ ವಿಚಾರವನ್ನು ಮರೆತು ಅವನು ಹತ್ತು ತಲೆಗಳುಳ್ಳ ರಾಕ್ಷಸನೆಂದು ಕಲ್ಪಿಸುವದಾಗಲಿ, ಹನುಮಂತನು ಬಾಲವುಳ್ಳ ವಾನರನೆಂದು ಕಲ್ಪಿಸುವದಾಗಲಿ ಮೂಢ ನಂಬುಗೆಗಳು. ಕಪಿಗಳು ಸೈನ್ಯದ ಅಧಿಕಾರವನ್ನು ವಹಿಸಬಲ್ಲವೇ ಎಂದು ಎಷ್ಟು ಜನರು ತರ್ಕಿಸುತ್ತಾರೆ? ಇಂಥ ಅಸಂಗತ ವಿಚಾರಗಳು ಕೇವಲ ಕವಿಯ ಕಲ್ಪನೆಗಳೆಂದು ಎಷ್ಟು ಜನರು ತಿಳಿಯುತ್ತಾರೆ? ವಿವೇಕಕ್ಕೆ ಒಪ್ಪಿಗೆಯಾಗದ ಸಂಗತಿಗಳನ್ನು ಐತಿಹಾಸಿಕ ವಿಷಯವೆಂದು ಬೋಧಿಸುವ ಪಾಠಗಳನ್ನು ಮಕ್ಕಳು ಓದುವ ಪಠ್ಯಪುಸ್ತಕಗಳಲ್ಲಿ ಸೇರಿಸಕೂಡದು. ಮಕ್ಕಳ ಚಿಕಿತ್ಸಕ ಬುದ್ಧಿಗೆ ಬಾಲ್ಯದಿಂದಲೂ ಉತ್ತೇಜನವನ್ನು ಕೊಡಬೇಕು. ಯಾವದು ನಿಜ ಯಾವದು ಸುಳ್ಳು, ಯಾವದು ಸತ್ಯ ಯಾವದು ಅಸತ್ಯ, ಎಂದು ತಿಳಿದುಕೊಳ್ಳುವ ವಿಚಾರ ಶಕ್ತಿಯನ್ನು ಅವರಲ್ಲಿ ಬೆಳೆಯಿಸಬೇಕು. ಆದರೆ ಕಟ್ಟು ಕಥೆಗಳಿಗೆ ಶಿಕ್ಷಣದಲ್ಲಿ ಸ್ಥಾನವು ಇಲ್ಲದೇ ಇರುವದಿಲ್ಲ. ಕವಿಯಂತೆ ಬಾಲಕನಾದರೂ ಕಲ್ಪನಾಲೋಲನು. ತನಗೆ ಒದಗಿದ ಬಿಕ್ಕಟ್ಟಿನ ಪ್ರಸಂಗಗಳನ್ನು ಎದುರಿಸಲು ಅಸಮರ್ಥನಾದ ಮಗುವು ತನ್ನ ಭಾವ

ವಿಮೋಚನೆಗೆ ಕೆಲವೊಂದು ಮಾರ್ಗಗಳನ್ನು ಹುಡುಕುತ್ತಾನೆ. ಕಟ್ಟು ಕಥೆಗಳೂ ಮತ್ತು "ಕೃತಕ ನಂಬುಗೆಯ" ಆಟಗಳೂ ಮಗುವಿಗೆ ಇಂಥ ಅವಕಾಶಗಳನ್ನು ಒದಗಿಸಿ ಕೊಡುತ್ತವೆ.

ಸಾಲೆಯಲ್ಲಿ ಯಾವ ಪಾಠವನ್ನೇ ಕಲಿಸಲಿ ಶಿಕ್ಷಕನು ಮಕ್ಕಳಿಗೆ ವಿಚಾರ ಪ್ರಚೋದಕ ಪ್ರಶ್ನೆಗಳನ್ನು ಕೇಳಬೇಕು. ಅವರ ಕುತೂಹಲ ವೃತ್ತಿಯನ್ನು ಪ್ರೋತ್ಸಾಹಿಸಬೇಕು. ಶಿಕ್ಷಕನು ತಾನಾಗಿಯೇ ಎಲ್ಲವನ್ನು ಹೇಳಿಬಿಡಬಾರದು. ಬಾಲಕರ ಅನುಭವದ ಮಟ್ಟ, ವಿಚಾರಶಕ್ತಿ, ಮತ್ತು ಕಲ್ಪನಾಶಕ್ತಿಯನ್ನು ಅನುಲಕ್ಷಿಸಿ ಅವರಿಗೆ ತಿಳಿಯುವ ಮಾತುಗಳಲ್ಲಿ ವಿಷಯ ವಿವರಣೆಯನ್ನು ಮಾಡಬೇಕು. ಅವರಿಗೆ ತಿಳಿಯದ ಶಬ್ದಗಳನ್ನು ಬಳಸಬಾರದು. ಈ ಅಧ್ಯಾಯದಲ್ಲಿ ಕೇವಲ ಬುದ್ಧಿ ಬೆಳವಣಿಗೆಯ ವಿಷಯವನ್ನು ಕುರಿತು ವಿವೇಚಿಸಲಾಗಿದೆ. ಆದರೆ ಜ್ಞಾನದ ಬೆಳವಣಿಗೆಯೊಂದೇ ಶಿಕ್ಷಣದ ಗುರಿ ಅಲ್ಲ. ಮಗುವಿನ ನಡೆ ನುಡಿಗಳನ್ನು ತಿದ್ದುವದು, ಅವನ ಶೀಲ ಬೆಳೆಯಿಸುವದು, ಶಿಕ್ಷಣದ ಮುಖ್ಯ ಗುರಿ. ಶೀಲವಿಲ್ಲದ ಶಿಕ್ಷಣ ದೇವರಿಲ್ಲದ ದೇಗುಲದಂತೆ. ಈ ಶೀಲ ಶಿಕ್ಷಣ (Character Education) ವನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿವೇಚಿಸಲಾಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಪ್ರತ್ಯಕ್ಷ ವಿಚಾರ ಮತ್ತು ಕಾಲ್ಪನಿಕ ವಿಚಾರ ಇವುಗಳಲ್ಲಿಯ ಅಂತರವೇನು ? ಶಿಕ್ಷಣದಲ್ಲಿ ಇದರ ಉಪಯೋಗವನ್ನು ಹೇಗೆ ಮಾಡುವಿರಿ ?

೨. ವಿಚಾರ ಮತ್ತು ಭಾಷೆ ಇವುಗಳಲ್ಲಿಯ ಸಂಬಂಧವನ್ನು ಹೇಳಿರಿ. ಈ ದೃಷ್ಟಿಯಿಂದ ಕಲಿಸುವಿಕೆಯಲ್ಲಿ ಶಿಕ್ಷಕನು ಯಾವ ನಿಯಮಗಳನ್ನು ಅನುಸರಿಸಬೇಕು ? ಉದಾಹರಣೆಗಳಿಂದ ಸ್ಪಷ್ಟ ಮಾಡಿರಿ.

೩. ಕಲ್ಪನೆಗಳು ಅಥವಾ ಭಾವಗಳು (Concepts) ಮನಸ್ಸಿನಲ್ಲಿ ಹೇಗೆ ಉಂಟಾಗುತ್ತವೆ ? ಕಲ್ಪನೆಗಳನ್ನು ಬೆಳೆಯಿಸಲಿಕ್ಕೆ ಶಿಕ್ಷಕನು ಮಕ್ಕಳಿಗೆ ಯಾವ ರೀತಿಯಿಂದ ನೆರವಾಗಬಹುದು ?

೪. ಚಿಕ್ಕ ಮಕ್ಕಳಿಗೆ ಒಂದು ಅರ್ಥವಾಗುವ ಮತ್ತು ಶಿಕ್ಷಕರಿಗೆ ಬೇರೊಂದು ಅರ್ಥವಾಗುವ ಕೆಲವು ಶಬ್ದಗಳನ್ನು ಅಥವಾ ವಿಚಾರಗಳನ್ನು ಹೇಳಿರಿ. ಅವುಗಳ ಸರಿಯಾದ ಅರ್ಥವನ್ನು ಮಕ್ಕಳಿಗೆ ತಿಳಿಸಲಿಕ್ಕೆ ಶಿಕ್ಷಕರು ಯಾವ ಉಪಾಯಗಳನ್ನು ಕೈಕೊಳ್ಳಬೇಕು ?

೫. ಅಭ್ಯಾಸ ಪತ್ರಿಕೆಯಂತೆ ವಿಷಯಗಳನ್ನು ಕಲಿಸುವಾಗ ವಿದ್ಯಾರ್ಥಿಗಳಿಗೆ ಕೆಲವು ಸೂಕ್ಷ್ಮ ವಿಚಾರಗಳನ್ನು ತಿಳಿಸಿ ಕೊಡುವದು ಅವಶ್ಯ ಬೀಳುತ್ತದೆ ಅವುಗಳನ್ನು ಸ್ಥೂಲವಾಗಿ ಮತ್ತು ಪರಿಣಾಮಕಾರಕವಾಗಿ ಮಾಡಬೇಕಾದರೆ ಶಿಕ್ಷಕನು ಯಾವ ಉಪಾಯಗಳನ್ನು ಕೈಕೊಳ್ಳಬೇಕು ? ಉದಾಹರಣೆ ಕೊಟ್ಟು ವಿವರಿಸಿರಿ.

೬. ಅಭಿಪ್ರಾಯಗಳು ಮತ್ತು ಒಲವುಗಳು ಬದಲಾಗಲಿಕ್ಕೆ ಕಾರಣಗಳು ಯಾವವು ? ಹೆಚ್ಚಿನ ಅನುಭವ ಅಥವಾ ಜ್ಞಾನ, ಸ್ವಂತ ಬಯಕೆ ಅಥವಾ ಬೇಡಿಕೆ, ಪ್ರೇಮ ಅಥವಾ ದ್ವೇಷ, ಸದಸದ್ವಿವೇಕ ಮತ್ತು ಬುದ್ಧಿ ಇವು ಒಂದೊಂದು ಎಷ್ಟರ ಮಟ್ಟಿಗೆ ಇದಕ್ಕೆ ಕಾರಣ ? ಉದಾಹರಣೆ ಕೊಟ್ಟು ಸ್ಪಷ್ಟ ಮಾಡಿರಿ.

೭. ಸಿನೇಮಾ ಮತ್ತು ರೇಡಿಯೋ ಕಾರ್ಯಕ್ರಮದಿಂದ ಒಳ್ಳೇ ಮತ್ತು ಕೆಟ್ಟ ಪರಿಣಾಮಗಳು ಯಾವವು ? ಯಾವ ನಿಯಮಗಳನ್ನು ಇಟ್ಟುಕೊಂಡು ಇಂಥ ಕಾರ್ಯಕ್ರಮಗಳನ್ನು ಯೋಜಿಸಬೇಕು ? ಕಾರಣ ಸಹಿತ ಉದಾಹರಿಸಿರಿ.

೮. ಮಕ್ಕಳಿಗೆ ನೀತಿ ಶಿಕ್ಷಣ ಕೊಡುವಲ್ಲಿ ಬರತಕ್ಕ ಅಡಚಣಿಗಳು ಯಾವವು? ನೀತಿಯ ಯಾವ ನಿಯಮಗಳನ್ನು ಹೆಚ್ಚಾಗಿ

ಉದಾಹರಣೆಗಳಿಂದ ಮತ್ತು ಯಾವ ನಿಯಮಗಳನ್ನು ಹೆಚ್ಚಾಗಿ ಬೋಧೆಯಿಂದ ಕಲಿಸಬಹುದು ? ನೀತಿಯ ಉಪದೇಶಕ್ಕಿಂತ ಶಿಕ್ಷಕನ ಅಥವಾ ಮಹಾಪುರುಷರ ವ್ಯಕ್ತಿತ್ವವು ಹೆಚ್ಚು ಪರಿಣಾಮಕಾರಕವೆಂದು ಏಕೆ ಹೇಳುವರು ?

೯. "ನೀನು ಏನು ನೋಡುತ್ತಿ ಎಂಬುದು ನೀನು ಏನು ಇರುತಿ ಎಂಬುದನ್ನು ಅವಲಂಬಿಸಿರುತ್ತದೆ." ಉದಾಹರಣೆ ಕೊಟ್ಟು ಈ ಮಾತನ್ನು ಸ್ಪಷ್ಟ ಮಾಡಿರಿ.

೧೦. ಮಗುವಿನ ವಿಚಾರಶಕ್ತಿಯು ಎಷ್ಟರ ಮಟ್ಟಿಗೆ ಅವನ ಸಾಮಾನ್ಯ ಬುದ್ಧಿಶಕ್ತಿಯನ್ನು ಅವಲಂಬಿಸಿರುತ್ತದೆ ?

೧೧. ಸಾಲೆಯ ಬೇರೆ ಬೇರೆ ಕಾರ್ಯಕ್ರಮದಲ್ಲಿ ವಿಚಾರಶಕ್ತಿಯನ್ನು ಹೇಗೆ ಹದಗೊಳಿಸಬಹುದು ಎಂಬುದನ್ನು ಉದಾಹರಣೆ ಕೊಟ್ಟು ವಿವೇಚಿಸಿರಿ.

೧೨. ಲೋಕಸತ್ತೆಯ ಆಡಳಿತೆಯಲ್ಲಿ ವಿಚಾರವರಿತು ಕೆಲಸ ಮಾಡುವದು ವಿಶೇಷ ಮಹತ್ವದ್ದು ಇರುತ್ತದೆ. ಉದಾಹರಣೆ ಸಹಿತ ಇದನ್ನು ಸಮರ್ಥಿಸಿರಿ.

೧೩. ಕೆಳಗೆ ಕೊಟ್ಟ ಹೇಳಿಕೆಗಳ ಬಗ್ಗೆ ಕಾರಣ ಸಹಿತ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ:—

(ಅ) ಸಾಲೆಯಲ್ಲಿ ಎಷ್ಟೋ ಸಂಗತಿಗಳನ್ನು ಬಾಯಿಪಾಠ ಮಾಡಿ ಕಲಿಯಬೇಕಾಗುತ್ತದೆ.

(ಆ) ವಿದ್ಯಾರ್ಥಿಗೆ ಬಾಯಿಪಾಠ ಮಾಡಲಿಕ್ಕೆ ಹೇಳುವದರಿಂದ ಅವನ ವಿಚಾರಸರಣಿಯನ್ನು ತಡೆಗಟ್ಟಿದಂತೆ ಆಗುತ್ತದೆ.

(ಇ) ಕೆಲವು ಸಂಗತಿಗಳನ್ನು ಬಾಯಿಪಾಠ ಮಾಡುವದು ಕೆಟ್ಟದ್ದಲ್ಲ. ಆದರೆ ಅವು ಉಪಯೋಗ ಬೀಳದಂತೆ ಬಾಯಿಪಾಠ ಮಾಡುವದು ಕೆಟ್ಟದ್ದು.

೧೪. "ವಿಚಾರಶಕ್ತಿ" ಮತ್ತು "ಸಾಮಾನ್ಯ ಕಲ್ಪನೆ" ಇವುಗಳಲ್ಲಿರುವ ಅಂತರವನ್ನು ಸಂಕ್ಷಿಪ್ತದಲ್ಲಿ ವಿವರಿಸಿರಿ.

೧೫. ಪ್ರಾಥಮಿಕ ಶಾಲೆಯ ಒಂದು ವಿಷಯವನ್ನು ತಕ್ಕೊಂಡು ಅದು ವಿಚಾರಪ್ರಚೋದಕವಾಗುವಂತೆ ಒಂದು ಪಾಠದ ಟಿಪ್ಪಣಿಗಳನ್ನು ತಯಾರಿಸಿರಿ.

೧೬. ವಾಚನ ಪಾಠಗಳನ್ನು ಓದುವಾಗ ಮಕ್ಕಳ ವಿಚಾರಸರಣಿಯನ್ನು ಬೆಳೆಸುವಂತಹ ಕೆಲವು ಹೊಸ ಬಗೆಯ ಅಭ್ಯಾಸಗಳನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೧೭. ಒಂದು ವಾರದ ಪ್ರವಾಸ ಕಾರ್ಯಕ್ರಮವನ್ನು ತಯಾರಿಸಿರಿ. ಮತ್ತು ಈ ಸಮಸ್ಯೆಯನ್ನು ಬಿಡಿಸುವಾಗ ಈ ಅಧ್ಯಾಯದಲ್ಲಿ ಹೇಳಿದ ಯಾವ ನಿಯಮಗಳನ್ನು ಉಪಯೋಗಿಸುವಿರಿ ಎಂಬುದನ್ನು ತಿಳಿಸಿ ಹೇಳಿರಿ.

೧೮. ಎರಡು ವಸ್ತುಗಳಲ್ಲಿ ಇರುವ ಹೊಸ ಸಂಬಂಧವನ್ನು ಹುಡುಕುವ ಬಗ್ಗೆ ಮತ್ತು ಒಂದು ವಸ್ತು ಮತ್ತು ಅದರ ಸಂಬಂಧವನ್ನು ಕೊಟ್ಟಲ್ಲಿ ಅದರ ಜೋಡಿ ವಸ್ತುವನ್ನು ಹುಡುಕುವ ಬಗ್ಗೆ ನಿಮ್ಮ ಸ್ವಂತ ಉದಾಹರಣೆಗಳನ್ನು ಕೊಡಿರಿ.

೧೯. ಒಗಟುಗಳನ್ನು ಬಿಡಿಸುವಾಗ ಮನಸ್ಸಿನಲ್ಲಿ ನಡೆಯುವ ವಿಚಾರ ಕ್ರಮವನ್ನು ವಿವರಿಸಿರಿ. ಇಲ್ಲಿ ತರ್ಕದ ತತ್ವಗಳು ಹೇಗೆ ಅನ್ವಯಿಸುತ್ತವೆ? ಅಂಥ ಕೆಲವು ಒಗಟುಗಳ ಉದಾಹರಣೆಗಳನ್ನು ಕೊಡಿರಿ.

ಅಧ್ಯಾಯ ೧೦

# ಬುದ್ಧಿಯನ್ನು ಮತ್ತು ಪ್ರಗತಿಯನ್ನು ಅಳೆಯುವದು

## ಪರೀಕ್ಷೆಗಳ ಉದ್ದೇಶ

ಮಗುವು ಕಲಿತದ್ದು ಏನು? ಎಷ್ಟು? ಎಂದು ತಿಳಿದುಕೊಳ್ಳಲು ತಂದೆತಾಯಿಗಳು ಮತ್ತು ಶಿಕ್ಷಕರು ಬಯಸುತ್ತಾರೆ. ಮಗುವು ಎಷ್ಟರಮಟ್ಟಿಗೆ ಕಲಿತಿದ್ದಾನೆ, ಯಾವ ವಿಷಯವನ್ನು ತಿಳಿದುಕೊಂಡಿದ್ದಾನೆ, ಯಾವ ವಿಷಯವನ್ನು ತಿಳಿದುಕೊಂಡಿರುವದಿಲ್ಲ, ಯಾವದು ಆವನಿಗೆ ಕಠಿಣವೆನಿಸುತ್ತದೆ, ಯಾವುದು ಸುಲಭವಾಗಿರುತ್ತದೆ, ಎಂಬುದನ್ನು ತಿಳಿದುಕೊಳ್ಳುವದು ಅವಶ್ಯ. ಮಗುವಿನ ಅಭಿರುಚಿಗಳು ಮತ್ತು ಒಲವುಗಳು ಯಾವವು? ಶಕ್ತಿ ಸಾಮರ್ಥ್ಯಗಳು ಎಷ್ಟರಮಟ್ಟಿಗೆ ಬೆಳೆದಿವೆ? ಎಂಬುದನ್ನು ಪರೀಕ್ಷಿಸಿ ತಿಳಿದುಕೊಳ್ಳುವದು ಎಲ್ಲ ದೃಷ್ಟಿಯಿಂದಲೂ ಹಿತವಾದುದು. ಮಕ್ಕಳ ಬೇಡಿಕೆಗಳಂತೆ ಶಿಕ್ಷಣವು ಸಾಗಿದೆಯೋ ಇಲ್ಲವೋ ಎಂಬುದನ್ನು ಮನೆಯವರು ತಿಳಿದುಕೊಳ್ಳಬೇಕಾದರೆ ಮತ್ತು ಶಾಲೆಯ ಅಭ್ಯಾಸದಲ್ಲಿ ಸುಧಾರಣೆಯು ಆಗಿರುವದೋ ಇಲ್ಲವೋ ಎಂಬುದನ್ನು ಶಿಕ್ಷಣ ಅಧಿಕಾರಿಗಳು ತಿಳಿದುಕೊಳ್ಳಬೇಕಾದರೆ ಶಾಲೆಯಲ್ಲಿ ವಿದ್ಯಾರ್ಥಿಗಳು ಕಲಿತದ್ದನ್ನು ಅಳೆದು ನೋಡಬೇಕಾಗುತ್ತದೆ. ಪ್ರತಿಯೊಬ್ಬ ವಿದ್ಯಾರ್ಥಿಯು ತನ್ನ ಶಕ್ತಿಸಾಹಸದ ಫಲಗಳನ್ನು, ತನ್ನ ಕುಂದು ಕೊರತೆಗಳನ್ನು ತಾನೂ ತಿಳಿದುಕೊಳ್ಳುವದು ಅವಶ್ಯ. ತಾನು ಮುಟ್ಟಬೇಕಾದ ಗುರಿ ಯಾವುದು, ಆ ಗುರಿಯನ್ನು ತಾನು ಎಲ್ಲಿಯವರೆಗೆ ಸಮೀಪಿಸಿದ್ದಾನೆ, ಇನ್ನು ಮುಂದೆ ಯಾವ ಮೆಟ್ಟನ್ನು ಹತ್ತಬೇಕು, ಯಾವ ಸುಧಾರಣೆಗಳನ್ನು ಮಾಡಿಕೊಳ್ಳಬೇಕು, ಎಂಬುದನ್ನು ಅವನು ತಿಳಿದುಕೊಳ್ಳಬೇಕಾಗುತ್ತದೆ. ವಿದ್ಯಾರ್ಥಿಯು ತನ್ನ ಪ್ರಗತಿಯ ಅರಿವನ್ನು ತಾನು ಮಾಡಿಕೊಳ್ಳುವದು ಮಹತ್ವದ್ದು ಎಂಬುದನ್ನು ಕಲಿಯುವಿಕೆಯನ್ನು ಕುರಿತು ಬರೆದ ಹಿಂದಿನ ಅಧ್ಯಾಯಗಳಲ್ಲಿ ತೋರಿಸಲಾಗಿದೆ.

ವರುಷಕ್ಕೆ ಒಮ್ಮೆ ವರ್ಗದ ಪರೀಕ್ಷೆ ತಕ್ಕೊಳ್ಳುವದಾಗಲಿ ಮತ್ತು ಪಾಸು ನಪಾಸು ಮಾಡುವದಾಗಲಿ ಪರೀಕ್ಷೆಯ ನಿಜವಾದ ಉದ್ದೇಶವಲ್ಲ. ವಿದ್ಯಾರ್ಥಿಗಳಲ್ಲಿ ಬೇರೆ ಬೇರೆ ಹುಡುಗರ ಬುದ್ಧಿಮಟ್ಟ ಬೇರೆ ಬೇರೆ ಉಂಟು. ಮತ್ತು ಅವರಿಗೆ ಕಲಿಸುವ ಪದ್ಧತಿಗಳೂ ಬೇರೆ ಬೇರೆ ಉಂಟು. ಇದನ್ನು ತಿಳಿದುಕೊಂಡು ಶಿಕ್ಷಕನು ತಾನು ಕಲಿಸುವ ಪದ್ಧತಿಯನ್ನು ಮಕ್ಕಳ ಬುದ್ಧಿ ಮಟ್ಟಕ್ಕೆ ನೋಡಿ ಹೊಂದಿಸಿಕೊಳ್ಳಬೇಕು. ಪರಿಣಾಮಕಾರವಾದ ಒಳ್ಳೇ ಪದ್ಧತಿಗಳನ್ನು ಆರಿಸಿಕೊಳ್ಳಲಿಕ್ಕೆ ಮತ್ತು ಅಭ್ಯಾಸದಲ್ಲಿ ಸುಧಾರಣೆಯನ್ನು ತಂದುಕೊಳ್ಳಲು ಮಕ್ಕಳಿಗೆ ನೆರವಾಗಲಿಕ್ಕೆ ಪರೀಕ್ಷೆಗಳನು ಉಪಯೋಗಿಸ ಬೇಕು. ಶಿಕ್ಷಣದ ಒಳ್ಳೇ ಫಲಗಳನ್ನು ಕೊಡುವ ಉದ್ದೇಶದಿಂದ ಕಲಿಯುವ ಅನುಕೂಲತೆಗಳನ್ನು ವಿದ್ಯಾರ್ಥಿಗಳಿಗೆ ಒದಗಿಸಿಕೊಡುವದೇ ಪರೀಕ್ಷೆ ತಕ್ಕೊಳ್ಳು ವುದರ ಮುಖ್ಯ ಉದ್ದೇಶ.

ಪರೀಕ್ಷೆಯನ್ನು ತಕ್ಕೊಳ್ಳುವ ಪದ್ಧತಿಯು ಬಹಳ ಹಿಂದಿನ ಕಾಲ ದಿಂದಲೂ ರೂಢಿಯಲ್ಲಿ ಬಂದಿರುತ್ತದೆ. ಚೀನ ದೇಶದಲ್ಲಿ ಸರಕಾರೀ ಆಡಳಿತೆಯ ಕೆಲಸಕ್ಕೆ ಅಧಿಕಾರಿಗಳನ್ನು ಆರಿಸುವಾಗ ಅವರವರ ಯೋಗ್ಯತೆ ಯನ್ನು ಅಳೆಯುವದಕ್ಕೆ ಕೆಲವೊಂದು ಪರೀಕ್ಷೆಯ ಪದ್ಧತಿಯನ್ನು ಪ್ರಾರಂಭಿಸಿದರೆಂದು ಹೇಳುತ್ತಾರೆ. ಬರಬರುತ್ತ ಇಂಥ ಪದ್ಧತಿಗಳು ಜಗತ್ತಿನ ಎಲ್ಲ ದೇಶಗಳಲ್ಲಿ ಪ್ರಚಾರದಲ್ಲಿ ಬಂದವು. ಆದರೆ ಫ್ರಾನ್ಸ ದೇಶದ ಮನೋ ವಿಜ್ಞಾನಿಯಾದ ಆಲ್‌ಫ್ರೆಡ್ ಬಿನೇ ಎಂಬುವನು ೧೯೦೫ ರಲ್ಲಿ ಮೊಟ್ಟ ಮೊದಲು ಬುದ್ಧಿಯನ್ನು ಅಳೆಯುವ ೩೦ ಒರೆಗಳ (Tests) ಒಂದು ಪಟ್ಟಿಯನ್ನು ಪ್ರಸಿದ್ಧಿಸಿದನು. ಸಾಲೆಯ ಓರಿಗೆಯ ಹುಡುಗರಿಗಿಂತ ಒಬ್ಬ ಮಗುವು ಅಭ್ಯಾಸದಲ್ಲಿ ಹಿಂದುಳಿಯಬೇಕಾದರೆ ಅದಕ್ಕೆ ಕಾರಣವು ಹುಟ್ಟು ಗುಣದ ದೋಷವೋ ಅಥವಾ ಪ್ರತಿಕೂಲ ಪರಿಸ್ಥಿತಿಯೋ ಎಂಬುದನ್ನು ಕಂಡುಹಿಡಿಯುವದೇ ಬಿನೇನ ಸಮಸ್ಯೆಯಾಗಿತ್ತು. ಇದಕ್ಕಾಗಿ ಅವನು ಪ್ಯಾರಿಸ್ ಪಟ್ಟಣದ ಸಾಲೆಯ ಕೆಲವು ಹುಡುಗರನ್ನು ಪರೀಕ್ಷಿಸಿದನು. ಬೇರೆ ಬೇರೆ ವಯಸ್ಸಿನ ಹುಡುಗರ ಅನುಭವಕ್ಕೆ ತಕ್ಕಂತೆ ಬೇರೆ ಬೇರೆ ಪ್ರಶ್ನೆ ಗಳ ಗುಂಪುಗಳನ್ನು ತಯಾರಿಸಿದನು. ಕೆಲವೊಂದು ಪ್ರಶ್ನೆಗಳನ್ನು ಕೆಲವೊಂದು ವಯಸ್ಸಿನ ಹುಡುಗರು ಮಾತ್ರ ಹೆಚ್ಚಾಗಿ ಬಿಡಿಸುತ್ತಾರೆ

ಎಂಬುದನ್ನು ಈ ಪ್ರಯೋಗದಿಂದ ಅವನು ಸಿದ್ಧ ಮಾಡಿದನು. ಒಂದೊಂದು ವಯಸ್ಸಿಗೆ ಐದೈದು ಪ್ರಶ್ನೆಗಳನ್ನು ಅವನು ನಿಶ್ಚಯಿಸಿದನು. ಇವೇ ಪ್ರಶ್ನೆಗಳನ್ನು ಲಂಡನ್‌ದಲ್ಲಿ ಡಾಕ್ಟರ ಸಿರಿಲ್‌ಬರ್ಟ್ ಎಂಬವನು ಮತ್ತು ಅಮೇರಿಕೆಯಲ್ಲಿ ಸ್ಟಾನ್‌ಫೊರ್ಡ್ ಯುನಿವ್ಹರ್ಸಿಟಿಯ ಪ್ರೊಫೆಸರನಾದ ಟರ್ಮನ್ ಎಂಬವನು ತಮ್ಮ ತಮ್ಮ ದೇಶದ ಸಂಸ್ಕೃತಿಗೆ ಹೊಂದಿಕೆಯಾಗುವಂತೆ ಇಂಗ್ಲೀಷಿನಲ್ಲಿ ಭಾಷಾಂತರಿಸಿರುವರು. ಇಂಡಿಯಾದ ಕೆಲವು ಪ್ರಾದೇಶಿಕ ಭಾಷೆಗಳಲ್ಲಿಯೂ ಇವು ಭಾಷಾಂತರಿಸಲ್ಪಟ್ಟಿರುವವು. ಡಾ|| ಕಾಮತ ಎಂಬುವವರು ಕನ್ನಡ ಮತ್ತು ಮರಾಠಿ ಹುಡುಗರಿಗೆ ಹೊಂದಿಕೆಯಾಗುವಂತೆ ಇವುಗಳನ್ನು ಎರಡೂ ಭಾಷೆಗಳಲ್ಲಿ ಪ್ರಸಿದ್ಧಿಸಿರುವರು. ಇಪ್ಪತ್ತನೇ ಶತಮಾನದ ಪ್ರಾರಂಭದಿಂದ ಮನುಷ್ಯನ ವ್ಯಕ್ತಿತ್ವವನ್ನು ಅಳೆಯುವ ಬಗ್ಗೆ ಅನೇಕ ಸಂಶೋಧನೆಗಳು ನಡೆದಿರುತ್ತವೆ. ವ್ಯಕ್ತಿತ್ವವೆಂದರೆ ಕೇವಲ ಬುದ್ಧಿಶಕ್ತಿಯೊಂದೇ ಅಲ್ಲ. ವ್ಯಕ್ತಿತ್ವದಲ್ಲಿ ಒಬ್ಬ ವ್ಯಕ್ತಿಯ ಸಾಮಾಜಿಕ ವರ್ತನ, ನೀತಿಯ ಆಚರಣೆ, ಉದ್ಯೋಗದ ಕೌಶಲ್ಯ, ಬುದ್ಧಿಯ ಚಟುವಟಿಕೆ, ಅಭಿರುಚಿಗಳು, ಒಲವುಗಳು ಮುಂತಾದ ಅಂಶಗಳು ಕೂಡಿರುತ್ತವೆ. ಈ ಬೇರೆ ಬೇರೆ ಅಂಶಗಳನ್ನು ವಿಜ್ಞಾನದ ದೃಷ್ಟಿಯಿಂದ ಅಳೆಯುವ ಬಗೆ ಬಗೆಯ ಹೊಸ ಮಾದರಿಯ ಒರೆಗಳನ್ನು ಇತ್ತೀಚೆಗೆ ಹೆಚ್ಚಾಗಿ ರಚಿಸಿರುವರು. ಆದರೆ ಇಷ್ಟು ಮಾತ್ರ ನಿಜ. ಬುದ್ಧಿ ಎಂಬುದು ಮನುಷ್ಯನ ಎಲ್ಲ ಬಗೆಯ ನಡೆ ನುಡಿಗಳಲ್ಲಿ ತೋರಿಬರುತ್ತದೆ ಮಂದಮತಿಯ ಕೆಲಸಗಳಲ್ಲಿ ಬುದ್ಧಿಯು ಕಡಿಮೆ ಇರುವದೆಂದೂ ಪ್ರತಿಭಾವಂತನ ಕೆಲಸಗಳಲ್ಲಿ ಬುದ್ಧಿಯ ಬೆಳಕು ಹೆಚ್ಚು ಇರುವದೆಂದೂ ನಾವೆಲ್ಲರು ಒಪ್ಪುತ್ತೇವೆ. ಪ್ರತಿಯೊಬ್ಬನ ಬುದ್ಧಿ ಬಲವನ್ನು ಹೇಗೆ ಗೊತ್ತುಹಚ್ಚಬೇಕೆಂಬುದು ಒಂದು ಸಮಸ್ಯೆ. ಬುದ್ಧಿಯ ಅಂಶಗಳಾದ ಅವಧಾನ, ವಿಚಾರ, ತರ್ಕ, ನಿರ್ಣಯ, ತಿಳುವಳಿಕೆ ಮುಂತಾದ ಶಕ್ತಿಗಳನ್ನು ಅಳೆಯಲಿಕ್ಕೆ ಬಿನೇ, ಟರ್ಮನ್ ಮೊದಲಾದವರು ಕೆಲವೊಂದು ಪ್ರಶ್ನೆಮಾಲೆಗಳನ್ನು ತಯಾರಿಸಿದ್ದಾರೆ. ಅವುಗಳಿಗೆ ಬುದ್ಧಿ ಒರೆಗಳು (Intell igence Tests) ಎಂಬ ಹೆಸರು. ವ್ಯಕ್ತಿಯ ಬೇರೆ ಬೇರೆ ಯೋಗ್ಯತೆಗಳನ್ನು ವಿಜ್ಞಾನದ ದೃಷ್ಟಿಯಿಂದ ಅಳೆಯುವದೂ ಈಗಿನ ಪರೀಕ್ಷೆಗಳ ಉದ್ದೇಶವಾಗಿದೆ. ಈ ಹೊಸ ಮಾದರಿಯ ಒರೆಗಳ ವಿಶೇಷ ವಿವರಗಳನ್ನು ಈ ಅಧ್ಯಾಯದಲ್ಲಿ ಕೊಡಲಾಗಿದೆ.

## ಬುದ್ಧಿಯ ಸ್ವರೂಪ

'ಓದು ಒಕ್ಕಾಲು ಬುದ್ಧಿ ಮುಕ್ಕಾಲು' ಎಂಬ ನಾಡನುಡಿಯು ಕನ್ನಡದಲ್ಲಿ ಉಂಟು. ಓದಿ ಕಲಿತದ್ದಕ್ಕಿಂತ ಬುದ್ಧಿಯಿಂದ ತಿಳಿದುಕೊಂಡದ್ದು ಹೆಚ್ಚು ಮಹತ್ವದ್ದು ಎಂದು ಇದರ ಅರ್ಥ. ಒಬ್ಬ ಆಂಗ್ಲ ತತ್ವಜ್ಞಾನಿಯು ಹೇಳುವದೇನಂದರೆ— "ಬುದ್ಧಿವಂತಿಕೆ ಇಲ್ಲದೆ ನೀನು ಪಂಡಿತನಾಗಬಲ್ಲಿ." ಪಾಂಡಿತ್ಯವೆಂದರೆ ವಸ್ತುಸ್ಥಿತಿಗಳ ಜ್ಞಾನಸಂಗ್ರಹ. ಇದು ವಿಶೇಷವಾಗಿ ನೆನಪಿನ ಶಕ್ತಿಯ ಕೆಲಸ. ಬುದ್ಧಿವಂತಿಕೆ ಎಂದರೆ ಈ ಜ್ಞಾನವನ್ನು ಉಪಯೋಗಿಸುವ ಚತುರತನ ಪಾಂಡಿತ್ಯವು ಓದಿ ಅಥವಾ ಕೇಳಿ ಕಲಿತ ವಿಷಯ ಸಂಗ್ರಹ.

ಬಿನೇನ ಅಭಿಪ್ರಾಯದ ಪ್ರಕಾರ ಬುದ್ಧಿ ಅಂದರೆ "ವ್ಯವಹಾರ ಜ್ಞಾನ, ಹೊಂದಿಕೊಳ್ಳುವ ಸಾಮರ್ಥ್ಯ, ಸರಿಯಾಗಿ ನಿರ್ಣಯ ಕೊಡುವ ಸಾಮರ್ಥ್ಯ, ಚನ್ನಾಗಿ ತಿಳಿದುಕೊಳ್ಳುವ ಸಾಮರ್ಥ್ಯ ಮತ್ತು ಚನ್ನಾಗಿ ತರ್ಕ ಮಾಡುವ ಸಾಮರ್ಥ್ಯ" ಟರ್ಮನ್‌ನ ಅಭಿಪ್ರಾಯದ ಪ್ರಕಾರ ಬುದ್ಧಿ ಅಂದರೆ "ಸೂಕ್ಷ್ಮ ವಿಚಾರ ಮಾಡುವ ಸಾಮರ್ಥ್ಯ." ವುಡ್‌ವರ್ಥನ ಅಭಿಪ್ರಾಯದ ಪ್ರಕಾರ "ಗುರಿ ಮುಟ್ಟಲು ಸಾಧನಗಳನ್ನು ಹೊಂದಿಸುವ ಸಾಮರ್ಥ್ಯ" ಒಟ್ಟಿನಲ್ಲಿ ಅನೇಕ ಮನೋವಿಜ್ಞಾನಿಗಳು ಒಪ್ಪಿಕೊಳ್ಳುವದೇನಂದರೆ ಬುದ್ಧಿ ಎಂಬುದು **ಕಲಿಯುವ ಸಾಮರ್ಥ್ಯ, ಸಮಸ್ಯೆ ಬಿಡಿಸುವ ಸಾಮರ್ಥ್ಯ** ಮತ್ತು **ಹೊಸ ಸನ್ನಿವೇಶಗಳಿಗೆ ಹೊಂದಿಕೊಳ್ಳುವ ಸಾಮರ್ಥ್ಯ**

## ಸೃಷ್ಟಿ ಮತ್ತು ಶಿಕ್ಷಣ (Nature aud Nurture)

ಮನುಷ್ಯನ ಬುದ್ಧಿಯು ಅವನ ಬೇರೆ ಬೇರೆ ಸಾಮರ್ಥ್ಯಗಳಲ್ಲಿ ವ್ಯಕ್ತವಾಗುತ್ತದೆ. ಎಂದು ಮೇಲೆ ವಿವರಿಸಿದೆ. ಈ ಸಾಮರ್ಥ್ಯಗಳು ಹುಟ್ಟು ಸಾಮರ್ಥ್ಯಗಳೋ ಅಥವಾ ಗಳಿಸಿದ ಸಾಮರ್ಥ್ಯಗಳೋ ? ಮಗುವು ಹುಟ್ಟಿದಾಗಿನಿಂದಲೇ ಅವನ ಬುದ್ಧಿಯ ಮಟ್ಟವು ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಇರುತ್ತದೆಂದು ಬಿನೇ, ಟರ್ಮನ್ ಮೊದಲಾದವರು ಅಭಿಪ್ರಾಯ ಪಡುತ್ತಾರೆ. ಬುದ್ಧಿಯು ಹುಟ್ಟು ಗುಣವೆಂದು ಮತ್ತು ಅದು ಶಿಕ್ಷಣದಿಂದ ಪಡೆದ ಅಥವಾ ಸಾಲೆಯಲ್ಲಿ

ಕಲಿತ ವಿಷಯವಲ್ಲವೆಂದು ಅವರು ಪ್ರತಿಪಾದಿಸುತ್ತಾರೆ. ಬುದ್ಧಿ ಸಾಮರ್ಥ್ಯ ಗಳು ಸಾಲೆಯಲ್ಲಿಯಾಗಲಿ ಅಥವಾ ಮನೆಯಲ್ಲಿಯಾಗಲಿ ವಿಶೇಷ ಶ್ರಮಪಟ್ಟು ಕಲಿಯದೇ ಬೆಳೆಯುತ್ತವೆ. ಆರನೆಯ ಅಧ್ಯಾಯದಲ್ಲಿ ಪರಂಪರೆ ಮತ್ತು ಪರಿಸ್ಥಿತಿ ಎಂಬ ವಿಷಯವನ್ನು ವಿವರಿಸುವಾಗ ಬುದ್ಧಿ ಶಕ್ತಿಯ ಬಗ್ಗೆ ಹೆಚ್ಚಿನ ಸಂಗತಿಗಳನ್ನು ಹೇಳಲಾಗಿದೆ. ಮಗುವು ಹುಟ್ಟಿದಾಗಿನಿಂದ ಅವನ ಬುದ್ಧಿ ಶಕ್ತಿಯು ಕ್ರಮೇಣ ಬೆಳೆಯುತ್ತ ಹೋಗುತ್ತದೆಂದು ಅನೇಕ ಬುದ್ಧಿ ಪರೀಕ್ಷಕರು ಅಭಿಪ್ರಾಯ ಪಡುತ್ತಾರೆ. ಆದರೆ **ಬುದ್ಧಿಯು ಬೆಳೆಯಬೇಕಾದರೆ ಅದಕ್ಕೆ ಪ್ರೋತ್ಸಾಹವು ಬೇಕು. ಪರಿಸ್ಥಿತಿಯು ಪ್ರತಿಕೂಲವಿದ್ದಲ್ಲಿ ಬುದ್ಧಿಯು ಬೆಳವಣಿಗೆಯನ್ನು ಹೊಂದಲಾರದು.** ಪರಿಸ್ಥಿತಿಯು ಅನುಕೂಲವಿದ್ದಲ್ಲಿ ಬುದ್ಧಿಯ ಬೆಳವಣಿಗೆಯು ಚನ್ನಾಗಿ ಸಾಗುತ್ತದೆ. **ಬುದ್ಧಿ ಬೆಳವಣಿಗೆಗೆ ಶಿಕ್ಷಣವು** ಅವಶ್ಯ ಮಕ್ಕಳು ಹೆಚ್ಚು ವಯಸ್ಕರಾಗುವವರೆಗೆ ಸಾಲೆ ಕಲಿಸುವ ಏರ್ಪಾಡು ಇದ್ದ ದೇಶಗಳು ಮುಂದುವರೆದಿರುತ್ತವೆ. ಎಂದು ಚಾರ್ಲ್ಸ ಫಾಕ್ಸನು ಹೇಳುವದು ನಿಜ. ಲಂಡನ್‌ದ ಸಾಲೆಗಳಲ್ಲಿ ನಡೆಯಿಸಿದ ಒಂದು ಪ್ರಯೋಗದ ಮೇಲಿಂದ ಹೊರಡುವ ಸಿದ್ಧಾಂತವನ್ನು ಫಾಕ್ಸನು ಹೀಗೆ ವಿವರಿಸುತ್ತಾನೆ— ಮನುಷ್ಯರಲ್ಲಿ ಕಂಡು ಬರುವ ಬುದ್ಧಿ ಮಟ್ಟದ ಹೆಚ್ಚು ಕಡಿಮೆಯು ಅವರವರ ಪರಿಸ್ಥಿತಿಯ ಮತ್ತು ಶಿಕ್ಷಣದ ಪರಿಣಾಮ.

ಸೃಷ್ಟಿ ಮತ್ತು ಶಿಕ್ಷಣ ಅಥವಾ ಅನುವಂಶೀಯತೆ ಮತ್ತು ಆವರಣ ಇವುಗಳನ್ನು ಬೇರೆ ಬೇರೆ ಮಾಡಿ ಅಭ್ಯಾಸ ಮಾಡಲು ಬರುವಂತಿಲ್ಲ ಎಂಬುದನ್ನು ಎಲ್ಲ ಮನೋವಿಜ್ಞಾನಿಗಳು ಒಪ್ಪುತ್ತಾರೆ. ಆದರೆ ಬುದ್ಧಿಯ ಮೇಲೆ ಯಾವುದರ ಪರಿಣಾಮವು ಎಷ್ಟು ಎಂಬುದರ ಬಗ್ಗೆ ತೀವ್ರ ಮತಭೇದ ಉಂಟು. ' ತಂದೆಯಂತೆ ಮಗ ' ಎಂಬ ನಾಡನುಡಿಯು ಅನುವಂಶೀಯತೆಯನ್ನು ಪ್ರತಿಪಾದಿಸಬಹುದು. ಆದರೆ ಈ ಮಾತನ್ನು ಯಾವಾಗಲೂ ನಂಬುವಂತೆ ಇರುವದಿಲ್ಲ. ಏಕೆಂದರೆ ಜಾಣರಾದ ತಂದೆ ತಾಯಿಗಳಿಗೆ ಧಡ್ಡ ಮಕ್ಕಳೂ ಮತ್ತು ಧಡ್ಡರಾದ ತಂದೆ ತಾಯಿಗಳಿಗೆ ಜಾಣ ಮಕ್ಕಳೂ ಇರುವದು ಕಂಡು ಬರುತ್ತದೆ. ಅಲ್ಲದೆ ತಂದೆಯ ಒಡನಾಟವೂ ಒಂದು ಬಗೆಯ ಪರಿಸ್ಥಿತಿಯೇ. ಅವಳಿ-ಜವಳಿ ಮಕ್ಕಳ ಮತ್ತು ಸಾಕು ಮಕ್ಕಳ

ಬುದ್ಧಿ ಬೆಳವಣಿಗೆಯ ಮತ್ತು ವರ್ತನದ ಅಭ್ಯಾಸವನ್ನು ಫ್ರೀಮನ್ ಮೊದಲಾದವರು ಮಾಡಿದ್ದಾರೆ. ಮನೆಯಲ್ಲಿ ಅನುಕೂಲತೆಗಳು ಒಳ್ಳೆಯವು ಇದ್ದ ಹಾಗೆ ಅವುಗಳ ಪರಿಣಾಮವು ಹೆಚ್ಚು ಆಗುವದೆಂದು ಅವರ ಅಭಿಪ್ರಾಯ. ಹುಡುಗರು ಸಣ್ಣವರು ಇದ್ದ ಹಾಗೆ ಶಿಕ್ಷಣದ ಪರಿಣಾಮವು ಹೆಚ್ಚು ಸ್ಪಷ್ಟವಾಗಿರುತ್ತದೆಂದು ಪ್ರಯೋಗದಿಂದ ಕಂಡು ಬಂದಿದೆ. ಗೆಳೆಯರ, ಶಿಕ್ಷಕರ ಮತ್ತು ಸಾಲೆಯ ಕಾರ್ಯಕ್ರಮದ ಪರಿಣಾಮವು ಮಗುವಿನ ಮೇಲೆ ಆಗದೇ ಇರದು. ಆದುದರಿಂದಲೇ 'ಗುರುವಿನಂತೆ ಶಿಷ್ಯ' 'ಜತೆಯಂತೆ ಮತಿ' 'ಸಂಗತಿಯ ಫಲ' ಎಂಬ ನಾಣ್ಣುಡಿಗಳು ಉಂಟಾಗಿರುವವು. ಮಗುವಿನ ಬುದ್ಧಿಯು ಸಂಗಡಿಗರ ಬುದ್ಧಿಮಟ್ಟಕ್ಕೆ ಏರುವದು ಅಥವಾ ಇಳಿಯುವದು. ಎಂದು ಒಂದು ಅಭ್ಯಾಸದಲ್ಲಿ ಕಂಡು ಬಂದಿದೆ. ಇನ್ನು ಪರಿಸ್ಥಿತಿಗಿಂತ ಮಗುವಿನ ಸ್ವಂತ ಪ್ರಯತ್ನವು ಮಿಗಿಲಾದುದು ಎಂಬ ವಿಷಯವನ್ನು ಹಿಂದಿನ ಅಧ್ಯಾಯದಲ್ಲಿ ಹೇಳಲಾಗಿದೆ. ವಾತಾವರಣವು ನಿರುತ್ಸಾಹ ಉಳ್ಳದ್ದು ಆಗಿದ್ದರೂ ಮತ್ತು ಶಿಕ್ಷಕನು ಸಹಾನುಭೂತಿ ಉಳ್ಳವನು ಇರದಿದ್ದರೂ ಕೆಲವು ಜಾಣ ಹುಡುಗರು ತಮ್ಮ ಸ್ವಂತ ಪರಿಶ್ರಮದಿಂದ ಮುಂದುವರೆಯುವದುಂಟು. ಅದರಂತೆ ಪ್ರಯತ್ನಶೀಲರು ಅಲ್ಲದ ಮಕ್ಕಳನ್ನು ಒಳ್ಳೇ ವಾತಾವರಣದಲ್ಲಿ ಇಟ್ಟರೂ ಅವರ ಬುದ್ಧಿ ಬೆಳವಣಿಗೆಯು ಕುಂಠಿತವಾಗುತ್ತದೆ.

ಬುದ್ಧಿಯ ಮೇಲೆ ಆನುವಂಶೀಯತೆಯ ಮತ್ತು ಆವರಣದ ಪರಿಣಾಮವನ್ನು ಅಳೆಯುವಾಗ ಅವಳಿ–ಜವಳಿ ಮಕ್ಕಳ ಮತ್ತು ಸಾಕು ಮಕ್ಕಳ ಉದಾಹರಣೆಗಳನ್ನು ಕೊಡುವರು. ಅವಳಿ–ಜವಳಿ ಮಕ್ಕಳಲ್ಲಿ ರಕ್ತ ಸಂಬಂಧವು ಒಂದೇ ಇರುವದು. ಅವರನ್ನು ಹುಟ್ಟಿದಾಗಿನಿಂದ ಬೇರೆ ಬೇರೆ ಮನೆಯಲ್ಲಿ ಅಂದರೆ ಬೇರೆ ಬೇರೆ ಆವರಣದಲ್ಲಿ ಇಟ್ಟು ಬೇರೆ ಬೇರೆ ಬಗೆಯ ಶಿಕ್ಷಣ ಕೊಟ್ಟು ಅವುಗಳ ಪರಿಣಾಮವನ್ನು ಅಭ್ಯಾಸಮಾಡುತ್ತಾರೆ. ಈ ಅಭ್ಯಾಸದಿಂದ ಕಂಡು ಬಂದುದೇನಂದರೆ ಅವಳಿ–ಜವಳಿ ಮಕ್ಕಳು ಬೇರೆ ಬೇರೆ ಆವರಣದಲ್ಲಿ ಬೆಳೆದರೂ ಅವರಲ್ಲಿರುವ ಹೋಲಿಕೆಯನ್ನು ಶಿಕ್ಷಣದಿಂದ ಸಂಪೂರ್ಣವಾಗಿ ಅಳಿಸುವದು ಕಠಿಣ. ಆದರೆ ಶಿಕ್ಷಣದ ಪರಿಣಾಮವನ್ನು

ಅಳೆದು ನೋಡುವಾಗ ಪರಿಸ್ಥಿತಿಯ ಅವಧಿಯನ್ನೂ ಎಣಿಕೆಗೆ ಅವಶ್ಯವಾಗಿ ತಕ್ಕೊಳ್ಳಬೇಕಾಗುತ್ತದೆ. ಮದ್ದು ಕುಡಿದ ಕೂಡಲೇ ಎದ್ದು ಕೂಡುವದು ಸಾಧ್ಯವಿಲ್ಲ ಎಂಬ ಗಾದೆಯ ಮಾತು ಇದನ್ನೇ ಹೇಳುತ್ತದೆ. ಒತ್ತಿಗೆ ಇಟ್ಟ ಮಾಡ ಕಾಯಿ ಚನ್ನಾಗಿ ಹಣ್ಣಿಗೆ ಬರಬೇಕಾದರೆ ಬೆಚ್ಚನ್ನ ಹುಲ್ಲಿನಲ್ಲಿ ( ತಕ್ಕ ಆವರಣದಲ್ಲಿ) ಸಾಕಷ್ಟು ಅವಧಿಯವರೆಗೆ ಅದನ್ನು ಉಬ್ಬಿಗೆ ಇಡಬೇಕಾಗುತ್ತದೆ. ಈ ವೇಳೆಯ ವಿಚಾರವನ್ನು ಅಥವಾ ಅವಧಿಯ ಅಂಶವನ್ನು ಎಷ್ಟೋ ಜನರು ಮರೆತು ಬಿಡುತ್ತಾರೆ. ಕಿಲುಬು ನಟ್ಟ ತಂಬಿಗೆಯನ್ನು ಒಂದೆರಡು ಬಾರೆ ಮಾತ್ರ ಬೆಳಗಿದರೆ ಅದು ಬೆಳ್ಳಗೆ ಹೊಳೆಯದು. ಅದನ್ನು ಕೆಲವು ದಿವಸಗಳ ವರೆಗೆ ಬೆಳಗುತ್ತ ಹೋದರೆ ಅದು ಕ್ರಮೇಣ ಬೆಳ್ಳಗಾಗುತ್ತ ಹೋಗುತ್ತದೆ. ಬೀಜಗಳ, ಪ್ರಾಣಿಗಳ ಮತ್ತು ಮನುಷ್ಯರ ಉತ್ತರೋತ್ತರ ಪೀಳಿಗೆಗಳನ್ನು ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಇಟ್ಟು ಅದರ ಪರಿಣಾಮವನ್ನು ನೋಡಬಹುದು ಜಿರಾಫ್ ಪ್ರಾಣಿಯ ಗೋಣು ಉದ್ದವಾಗಬೇಕಾದರೆ ಅದು ಅಂತಃ ಪ್ರೇರಣೆಯ ಮತ್ತು ಪರಸ್ಥಿತಿಯ ಪರಿಣಾಮವೆಂದು ಲೆಮಾರ್ಕನ ಸಿದ್ಧಾಂತ. **ಪರಂಪರೆ ಎಂಬುದು ಪೂರ್ವ ಪರಿಸ್ಥಿತಿ** ಎಂದು ಇದರಿಂದ ಗೊತ್ತಾಗುತ್ತದೆ. ಇತ್ತೀಚೆಗೆ ರಶಿಯಾದಲ್ಲಿ ವನಸ್ಪತಿಗಳ ಮೇಲೆ ಅನೇಕ ಪ್ರಯೋಗಗಳನ್ನು ಮಾಡಿ ಆವರಣದಿಂದ ಆನುವಂಶೀಯ ಫಲವನ್ನು ಬದಲಾಯಿಸಲು ಶಕ್ಯವಿರುತ್ತದೆಂದು ಸಿದ್ಧಮಾಡಿದ್ದಾರೆ. ಆನುವಂಶೀಯತೆಯನ್ನು ಪ್ರತಿ ಪಾದಿಸುವವರಲ್ಲಿ ಮೂಢ ನಂಬಿಗೆ ಅಥವಾ ಸ್ವಾರ್ಥ ದೃಷ್ಟಿ ಇರುತ್ತದೆ. ಸಾಕು ಮಕ್ಕಳಲ್ಲಿ ಆನುವಂಶೀಯತೆಯು ಬೇರೆ ಬೇರೆಯಾಗಿರುತ್ತದೆ. ಆದರೆ ಅವರನ್ನು ಒಂದೇ ಆವರಣದಲ್ಲಿ ( ಅನಾಥ ಮಂದಿರ, ಬೋರ್ಡಿಂಗ, ಸಾಲೆ, ಶ್ರೀಮಂತರ ಮನೆ ಅಥವಾ ಕಲಿತವರ ಮನೆಯಲ್ಲಿ) ಇಟ್ಟು ಆವರ ಮೇಲೆ ಆಗುವ ಶಿಕ್ಷಣದ ಪರಿಣಾಮವನ್ನು ಅಭ್ಯಾಸ ಮಾಡಿದ್ದಾರೆ. ಸಿಪ್‌ಮನ್, ಫ್ರೀಮನ್ ಮತ್ತು ಹಾಲ್‌ಜಿಂಜರ ಅವರು ನಡೆಯಿಸಿದ ಅಭ್ಯಾಸಗಳಲ್ಲಿ ಕಂಡು ಬಂದುದೇನಂದರೆ ಆವರಣವು ಹೆಚ್ಚು ಹೆಚ್ಚು ಒಳ್ಳೆಯದು ಇದ್ದ ಹಾಗೆ ಅದರ ಪರಿಣಾಮವೂ ಹೆಚ್ಚು ಒಳ್ಳೆಯದು ಆಗಿರುತ್ತದೆ.

ಬುದ್ಧಿಶಕ್ತಿಯು ಅನೇಕ ಬಗೆಯಾಗಿ ವ್ಯಕ್ತವಾಗುತ್ತದೆ. ಅದು ಒಂದು ಸಾಮಾನ್ಯ ಶಕ್ತಿಯೋ ಅಥವಾ ಅನೇಕ ವಿಶೇಷ ಶಕ್ತಿಗಳ ಗುಂಪೋ

ಎಂಬುದರ ಬಗ್ಗೆ ಮನೋವಿಜ್ಞಾನಿಗಳ ನಿಶ್ಚಿತ ಅಭಿಪ್ರಾಯವಿಲ್ಲ. ಬುದ್ಧಿಯು ಪ್ರತಿಯೊಬ್ಬ ಮನುಷ್ಯನ ನಡೆನುಡಿಗಳಲ್ಲಿ, ಆಚಾರವಿಚಾರಗಳಲ್ಲಿ ತೋರಿ ಬರುತ್ತದೆ. ಆದರೆ ಬುದ್ಧಿಯ ಪೂರ್ಣ ಸ್ವರೂಪ ಏನೆಂಬುದು ಅಳತೆಗೆ ಸಿಕ್ಕಿಲ್ಲ. ಈ ದಿಶೆಯಲ್ಲಿ ಸಂಶೋಧನೆಗಳು ಇನ್ನೂ ನಡೆದಿರುತ್ತವೆ. ಬುದ್ಧಿ ಶಕ್ತಿಯು ಮನುಷ್ಯನ ವ್ಯಕ್ತಿತ್ವದ ಒಂದು ಭಾಗ ಮಾತ್ರ. ಸ್ವಭಾವ ವಿಚಿತ್ರತೆ, ಕಲಾ ಕುಶಲತೆ, ಸಾಮಾಜಿಕ ಅಥವಾ ಅಸಾಮಾಜಿಕ ವರ್ತನೆ, ಸ್ವಾವಲಂಬನ ಅಥವಾ ಪರಾವಲಂಬನ, ಮನಸ್ಸನ್ನು ಬಿಗಿಹಿಡಿಯುವದು ಅಥವಾ ಹರಿ ಗೊಡುವದು ಮುಂತಾದ ಗುಣಗಳು ವ್ಯಕ್ತಿತ್ವಕ್ಕೆ ಸಂಬಂಧಪಟ್ಟಿರುತ್ತವೆ. ಬುದ್ಧಿ ಶಕ್ತಿಯನ್ನು ಪರೀಕ್ಷಿಸುವಾಗ ಇವುಗಳನ್ನು ಬಿಟ್ಟುಬಿಡುತ್ತಾರೆ. ಆದರೆ ಈ ಗುಣಗಳನ್ನು ಅಳೆಯುವ ವಿಧಾನಗಳೂ ಶಿಕ್ಷಕನಿಗೆ ಗೊತ್ತಿರಬೇಕಾದ ವಿಷಯ.

## ಬುದ್ಧಿ ಒರೆಗಳು ( Intelligence Tests )

ಒಬ್ಬನ ಮುಖಲಕ್ಷಣವನ್ನು ನೋಡಿ ಅವನ ಬುದ್ಧಿಮಟ್ಟದ ಸಾಮಾನ್ಯ ಕಲ್ಪನೆಯನ್ನು ಮಾಡುವದು ರೂಢಿಯಲ್ಲಿ ಉಂಟು. ಬುದ್ಧಿಯನ್ನು ಅಳೆಯುವ ಮೊದಲನೆಯ ಪ್ರಯತ್ನಗಳು ಈ ತೆರನಾಗಿಯೇ ನಡೆದವು. ವ್ಯಕ್ತಿಯ ಮುಖಮುದ್ರೆ, ಅವಯವಗಳ ಉದ್ದಳತೆ, ಇಂದ್ರಿಯಗಳ ಸಾಮರ್ಥ್ಯ ಮೊದಲಾದವುಗಳನ್ನು ನೋಡಿ ವ್ಯಕ್ತಿಯ ಬುದ್ಧಿ ಪ್ರಮಾಣದ ಅಂದಾಜು ಕಟ್ಟುವ ವಿಧಾನಗಳು ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನ ಗಳಲ್ಲಿ ಪ್ರಾರಂಭವಾದವು. ಆದರೆ ಅಂಥ ಪ್ರಯತ್ನಗಳೆಲ್ಲ ಅಯಶಸ್ವಿಯಾದವು. ಆದ್ದರಿಂದ ಮನೋವಿಜ್ಞಾನಿಗಳು ಬುದ್ಧಿಯನ್ನು ಅಳೆಯುವ ಹೊಸ ವಿಧಾನ ಗಳನ್ನು ಹುಡುಕಿ ತೆಗೆದರು. ಬುದ್ಧಿಯ ಉಪಯೋಗವು ಅವಶ್ಯ ಬೀಳುವ ಚಟುವಟಿಕೆಗಳ ಮುಖಾಂತರ ಬುದ್ಧಿಶಕ್ತಿಯನ್ನು ಅಳೆಯುತಕ್ಕದ್ದು ಎಂಬ ಸಿದ್ಧಾಂತವನ್ನು ಬಿನೇ ಮೊಟ್ಟಮೊದಲು ಕಂಡುಹಿಡಿದನು. ಪ್ಯಾರಿಸ್ ಪಟ್ಟಣ ದಲ್ಲಿ ಅವನು ಒಂದು ಪ್ರಯೋಗವನ್ನು ಮಾಡಿದನು. ಮಕ್ಕಳು ಕೇವಲ ತಮ್ಮ ಅನುಭವದ ಮೇಲಿಂದ ಉತ್ತರವನ್ನು ಹೇಳಲು ಬರುವಂತಹ ಅನೇಕ ಪ್ರಶ್ನೆ ಗಳನ್ನು ಅವನು ರಚಿಸಿದನು. ಬೇರೆ ಬೇರೆ ವಯಸ್ಸಿನ ಅನೇಕ ಹುಡುಗರಿಗೆ

ಆ ಪ್ರಶ್ನೆಗಳನ್ನು ಕೊಟ್ಟು ಅವರ ಉತ್ತರಗಳನ್ನು ಕಲೆಹಾಕಿದನು. ಕೆಲವೊಂದು ಪ್ರಶ್ನೆಗಳನ್ನು ಕೆಲವೊಂದು ವಯಸ್ಸಿನ ಮಕ್ಕಳು ಮಾತ್ರ ವಿಶೇಷವಾಗಿ ಬಿಡಿಸುತ್ತಾರೆ ಎಂಬುದನ್ನು ಈ ಪ್ರಯೋಗದಿಂದ ಅವನು ಕಂಡುಹಿಡಿದನು. ಒಂದೊಂದು ವಯಸ್ಸಿಗೆ ತಕ್ಕ ಐದೈದು ಪ್ರಶ್ನೆಗಳನ್ನು ಅವನು ನಿಶ್ಚಯಿಸಿದನು. ೧೯೧೧ ರಲ್ಲಿ ಮೂರನೆಯ ವಯಸ್ಸಿನಿಂದ ಹನ್ನೆರಡನೇ ವಯಸ್ಸಿನವರೆಗೆ ಅನ್ವಯಿಸುವ ಇಂಥ ಪ್ರಶ್ನೆಗಳ ಒಂದು ಪಟ್ಟಿಯನ್ನು ಅವನು ತಯಾರಿಸಿದನು. ಇವುಗಳನ್ನೇ ಮುಂದೆ ಟರ್ಮನ್ ಎಂಬವನು ತಿದ್ದಿ ಅಮೇರಿಕೆಯಲ್ಲಿ ಪ್ರಸಿದ್ಧ ಮಾಡಿದನು. ಅವುಗಳಿಗೆ ಸ್ಟಾನ್‌ಫೋರ್ಡ್-ಬಿನೇ ಸ್ಕೇಲ ಎಂದು ಹೆಸರು. ಇತ್ತೀತ್ತಲಾಗಿ ಈ ಸ್ಕೇಲನ್ನು ಉಪಯೋಗಿಸುವವರು ಬಹಳ. ಈ ಬುದ್ಧಿ ಒರೆಗಳ ಕೆಲವು ಮಾದರಿಗಳನ್ನು ಇಲ್ಲಿ ಕೊಡಲಾಗಿದೆ.

### ಮೂರು ವಯದವರಿಗೆ

(೧) ಕಣ್ಣು, ಮೂಗು ಮೊದಲಾದ ಶರೀರದ ಭಾಗಗಳನ್ನು ತೋರಿಸಲು ಮಗುವಿಗೆ ಹೇಳುವದು.

(೨) ಪರಿಚಯವಿದ್ದ ವಸ್ತುಗಳ ಹೆಸರನ್ನು ( ಹೇಳಲು ) ಕೇಳುವದು.

(೩) ಚಿತ್ರದಲ್ಲಿಯ ವಸ್ತುಗಳನ್ನು ಎಣಿಸಲು ಹೇಳುವದು.

(೪) ತನ್ನ ಮನೆಯ ಅಡ್ಡಹೆಸರು ಕೇಳುವದು.

### ಐದು ವಯದವರಿಗೆ

(೧) ಎರಡು ವಸ್ತುಗಳಲ್ಲಿ ಯಾವುದು ಹಗುರು ಮತ್ತು ಯಾವುದು ಒಜ್ಜೆ ಇರುತ್ತದೆ ಎಂಬುದನ್ನು ಕೇಳುವದು.

(೨) ಬೇರೆ ಬೇರೆ ಬಣ್ಣಗಳ ಹೆಸರುಗಳನ್ನು (ಹೇಳಲು) ಕೇಳುವದು. ಈ ರೀತಿಯಾಗಿ ಬೇರೆ ಬೇರೆ ವಯಸ್ಸಿನ ಮಕ್ಕಳ ಬುದ್ಧಿಯನ್ನು ಅಳೆಯಲಿಕ್ಕೆ ಬೇರೆ ಬೇರೆ ಪ್ರಶ್ನೆಗಳನ್ನು ಬಿನೇ ರಚಿಸಿರುವನು.

### ಬುದ್ಧಿ ವಯ ಮತ್ತು ಬುದ್ಧಿಮಟ್ಟ ( Mental Age and Intelligence Quotient )

ಒಬ್ಬ ಹುಡುಗನು ಸ್ಟ್ಯಾನ್‌ಫೋರ್ಡ್ ಬಿನೇ ಸ್ಕೇಲಿನಲ್ಲಿ ಕೊಟ್ಟ ಯಾವ ವಯಸ್ಸಿನ ಒರೆಗಳನ್ನು ಬಿಡಿಸುತ್ತಾನೆಯೋ ಅದು ಅವನ ಬುದ್ಧಿ ವಯ

(Mental Age). ಹುಡುಗನ ನಿಜವಾದ ವಯ (True Age) ಅಥವಾ ಕಾಲವಯ (Chronological Age) ಯಾವುದೇ ಇರಲಿ ಅವನು ಎಂಟನೇ ವರುಷದ ಪ್ರಶ್ನೆಗಳನ್ನು ಬಿಡಿಸಿದರೆ ಅವನ ಬುದ್ಧಿವಯ ಎಂಟು. ಅವನ ನಿಜ ವಯ ಹತ್ತು ಇದ್ದರೆ ಅವನು ಎರಡು ವರುಷ ಬುದ್ಧಿಯಲ್ಲಿ ಹಿಂದೆ ಇರುವನೆಂದು ತಿಳಿಯಬೇಕು. ಆದರೆ ಅವನು ನಿಜವಯ ಆರು ಇದ್ದರೆ ಅವನು ಬುದ್ಧಿಶಕ್ತಿಯಲ್ಲಿ ಎರಡು ವರುಷ ಮುಂದೆ ಇರುವನೆಂದು ತಿಳಿಯಬೇಕು. ಆದ್ದರಿಂದ ತನ್ನ ಸರಿಕದವರಿಗಿಂತ ಅಥವಾ ಸಮಾನ ವಯದವರಿಗಿಂತ ಮೊದಲನೇ ಹುಡುಗನು ಧಡ್ಡನೆಂದು ಮತ್ತು ಎರಡನೇ ಹುಡುಗನು ಜಾಣನೆಂದು ನಿರ್ಧರಿಸಬಹುದು. ಈ ಬುದ್ಧಿವಯದ ಕಲ್ಪನೆಯನ್ನು ಮೊದಲು ತಂದುಕೊಟ್ಟವನೆಂದರೆ ಬಿನೇ.

ಬುದ್ಧಿ ಪರೀಕ್ಷೆಯ ಪರಿಣಾಮವು ಹೆಚ್ಚು ಅರ್ಥ ಉಳ್ಳದ್ದು ಆಗಬೇಕಾದರೆ ಅದನ್ನು ಒಂದು ಗೊತ್ತುಪಡಿಸಿದ ಒರೆಗಲ್ಲಿಗೆ ಅಥವಾ ಪ್ರಮಾಣಕ್ಕೆ ಹಚ್ಚಿ ನೋಡಬೇಕಾಗುತ್ತದೆ. ನೂರು ಭಾಗಗಳುಳ್ಳ ಒಂದು ಮಾಪಿಗೆ ಹಚ್ಚಿ ಬುದ್ಧಿಶಕ್ತಿಯನ್ನು ಅಳೆಯಬೇಕೆಂದು ಟರ್ಮನ್‌ನು ಸೂಚಿಸಿದನು. ಕಾಲವಯಕ್ಕೂ ಮತ್ತು ಬುದ್ಧಿ ವಯಕ್ಕೂ ಅಂತರ ಉಂಟು ಕೆಲವು ಹುಡುಗರು ಒಂದೇ ವಯಸ್ಸಿನವರು ಇದ್ದರೂ ವೈಯಕ್ತಿಕವಾಗಿ ಅವರವರ ಬುದ್ಧಿ ಪ್ರಮಾಣವು ಬೇರೆ ಬೇರೆಯಾಗಿರಬಹುದು ಒಬ್ಬ ಹುಡುಗನು ಸಾಮಾನ್ಯವಾಗಿ ಚುರುಕು ಬುದ್ಧಿಯವನೋ, ಮಂದ ಬುದ್ಧಿಯವನೋ ಅಥವಾ ಸಾಧಾರಣ ಬುದ್ಧಿಯವನೋ ಎಂಬುದನ್ನು ಗೊತ್ತುಪಡಿಸಲಿಕ್ಕೆ ಬುದ್ಧಿವಯವನ್ನು ಕಾಲವಯದಿಂದ ಭಾಗಿಸಿ ಅದಕ್ಕೆ ನೂರರಿಂದ ಗುಣಿಸುತ್ತಾರೆ. ಹೀಗೆ ಲೆಕ್ಕ ತೆಗೆದ ಅಂಕಿಗೆ **ಬುದ್ಧಿಮಟ್ಟ** ಅಥವಾ "ಆಯ್. ಕ್ಯೂ." ( I. Q. ) ಎಂದು ಅನ್ನುತ್ತಾರೆ. ಮೂವರು ಹುಡುಗರ ನಿಜವಯ ಹತ್ತು ಇದ್ದು ಒಬ್ಬನ ಬುದ್ಧಿವಯ ಹತ್ತು ಇನ್ನೊಬ್ಬನದು ಹನ್ನೆರಡು ಮತ್ತೊಬ್ಬನದು ಎಂಟು ಇದ್ದರೆ ಅವರವರ ಬುದ್ಧಿಮಟ್ಟವನ್ನು ಕೆಳಗೆ ಕೊಟ್ಟ ರೀತಿಯಲ್ಲಿ ತೆಗೆಯಲಾಗುವದು :

ಒಂದನೇ ಹುಡುಗ—

ಬುದ್ಧಿ ಮಟ್ಟ = ೯/೯ × ೧೦೦=೧೦೦. ಇವ ಸಾಧಾರಣ, ಬುದ್ಧಿ ಸರಿ.

ಎರಡನೇ ಹುಡುಗ—

ಬುದ್ಧಿ ಮಟ್ಟ=೮/೧೦×೧೦೦=೮೦. ಇವ ಧಡ್ಡ; ಬುದ್ಧಿ ಕಡಿಮೆ.

ಮೂರನೇ ಹುಡುಗ—

ಬುದ್ಧಿ ಮಟ್ಟ =೧೨/೧೦ ×೧೦೦ = ೧೨೦. ಇವ ಜಾಣ; ಬುದ್ಧಿ ಹೆಚ್ಚು. ಬುದ್ಧಿ ವಯವು ನಿಜ ವಯಕ್ಕೆ ಸರಿಯಾಗಿದ್ದರೆ ಬುದ್ಧಿಮಟ್ಟವು ನೂರು ಇರುತ್ತದೆ; ಬುದ್ಧಿ ವಯವು ನಿಜ ವಯಕ್ಕಿಂತ ಕಡಿಮೆ ಇದ್ದರೆ ಬುದ್ಧಿಮಟ್ಟವು ನೂರಕ್ಕಿಂತ ಕಡಿಮೆ ಇರುತ್ತದೆ; ಮತ್ತು ಬುದ್ಧಿವಯವು ನಿಜವಯಕ್ಕಿಂತ ಹೆಚ್ಚು ಇದ್ದರೆ ಬುದ್ಧಿಮಟ್ಟವು ನೂರಕ್ಕಿಂತ ಹೆಚ್ಚು ಇರುತ್ತದೆ. ಈ ಬುದ್ಧಿ ಮಟ್ಟದ ಉಪಯೋಗವನ್ನು ಪ್ರೊಫೆಸರ ಟರ್ಮನ್ ಪ್ರಸಿದ್ಧಿಗೆ ತಂದನು. ಒಬ್ಬ ಹುಡುಗನ ಬುದ್ಧಿಶಕ್ತಿಯನ್ನು ತಿಳಿದುಕೊಳ್ಳಲಿಕ್ಕೆ ಅವನ ಬುದ್ಧಿ ವಯ ಮತ್ತು ಕಾಲ ವಯದ ಅಂತರಕ್ಕಿಂತ ಅವನ ಬುದ್ಧಿಮಟ್ಟವು ಹೆಚ್ಚು ಸರಿಯಾದ ಅಳತೆಯನ್ನು ಕೊಡುವದು. ಸಾಮಾನ್ಯವಾಗಿ ಹೇಳಬೇಕೆಂದರೆ ಬುದ್ಧಿಮಟ್ಟವು ೭೦ ಇದ್ದರೆ ಅದು ಕೊರತೆಯನ್ನು ಸೂಚಿಸುತ್ತದೆ. ಇಂಥವನಿಗೆ ಶಾಲೆಯ ವಿದ್ಯಾಭ್ಯಾಸವು ಹತ್ತುವದಿಲ್ಲ.

ಜನರನ್ನು ಅವರವರ ಬುದ್ಧಿಮಟ್ಟದ ಪ್ರಕಾರ ಟರ್ಮನ್‌ನು ವರ್ಗೀಕರಿಸುತ್ತಾನೆ. ಸಮಾಜದಲ್ಲಿ ಒಂದೊಂದು ವರ್ಗದವರು ನೂರಕ್ಕೆ ಎಷ್ಟು ಅಂಶ ಇರುತ್ತಾರೆ ಎಂಬುದನ್ನು ಕೆಳಗಿನ ಕೋಷ್ಟಕದಲ್ಲಿ ಕೊಡಲಾಗಿದೆ. ಈ ವರ್ಗದ ಹೆಸರುಗಳು ಬುದ್ಧಿಮಟ್ಟವನ್ನು ಸೂಚಿಸುತ್ತವೆ. ಆದರೆ ಆ ಆ ವರ್ಗದ ಬುದ್ಧಿ ಮಟ್ಟವು ಕೆಲಮಟ್ಟಿಗೆ ಹೆಚ್ಚು ಕಡಿಮೆ ಆಗುವ ಸಂಭವವುಂಟು.

| ಬುದ್ಧಿಮಟ್ಟ (I. Q.) | ಬುದ್ಧಿ ವರ್ಗ | ಜನಸಂಖ್ಯೆ ( ನೂರಕ್ಕೆ ) |
|---|---|---|
| ೧೪೦-೧೬೯ | ಅತಿ ಚುರುಕು ಬುದ್ಧಿ | ೧ ೩೩ |
| ೧೨೦-೧೩೯ | ಚುರುಕು ಬುದ್ಧಿ | ೧ · ೩೩ |
| ೧೧೦-೧೧೯ | ಹೆಚ್ಚು ಸಾಧಾರಣ ಬುದ್ಧಿ | ೧೮ · ೧ |
| ೯೦ ೧೦೯ | ಸಾಧಾರಣ ಬುದ್ಧಿ | ೪೬ · ೫ |
| ೮೦- ೮೯ | ಕಡಿಮೆ ಸಾಧಾರಣ | ೧೪ · ೫ |
| ೭೦- ೭೯ | ಮಂದ ಬುದ್ಧಿ | ೫ · ೭ |
| ೩೦- ೬೯ | ಅತಿಮಂದ ಬುದ್ಧಿ | ೨ · ೬೩ |

ಮಕ್ಕಳು ತೋರಿಸುವ ಸಾಲೆಯ ಅಭ್ಯಾಸದಲ್ಲಿಯ ಪ್ರಗತಿಯು ಅವರವರ ಬುದ್ಧಿಮಟ್ಟವನ್ನು ಅವಲಂಬಿಸಿರುತ್ತದೆಂದು ಸಾಮಾನ್ಯವಾಗಿ ಹೇಳಬಹುದು. ಪ್ರತಿಯೊಂದು ಇಯತ್ತೆಯ ಹುಡುಗರಲ್ಲಿ ಮಂದ ಬುದ್ಧಿಯವರು, ಸಾಧಾರಣ ಬುದ್ಧಿಯವರು ಮತ್ತು ಚುರುಕು ಬುದ್ಧಿಯವರು ಎಂದು ಮೂರು ದೊಡ್ಡ ವರ್ಗಗಳನ್ನು ಮಾಡಬಹುದು. ಬುದ್ಧಿಮಟ್ಟವು ೭೦ ರಿಂದ ೯೫ರ ಒಳಗೆ ಇದ್ದವರು ಮಂದ ಬುದ್ಧಿಯವರು. ಇವರು ಅಭ್ಯಾಸದಲ್ಲಿ ಯಾವಾಗಲೂ ಹಿಂದೆ ಉಳಿಯುವವರು. ಇವರ ಬಗ್ಗೆ ಶಿಕ್ಷಕರು ಬಹಳ ಶ್ರಮಪಡಬೇಕಾಗುತ್ತದೆ. ಈ ವರ್ಗದ ವಿದ್ಯಾರ್ಥಿಗಳು ಕೂಡ ಹೆಚ್ಚು ದುಡಿಯಬೇಕಾಗುತ್ತದೆ. ಎರಡನೇ ಗುಂಪಿನವರು ಸಾಮಾನ್ಯ ಬುದ್ಧಿಯವರು. ಇವರ ಬುದ್ಧಿಮಟ್ಟ ೯೫ ರಿಂದ ೧೦೫ ರ ಒಳಗೆ ಇರುತ್ತದೆ ಇವರು ತಮ್ಮ ಅಭ್ಯಾಸವನ್ನು ತಾವೇ ಸಾಗಿಸಿಕೊಂಡು ಹೋಗುವರು. ಈ ಕಟ್ಟಿನಲ್ಲಿಯ ಹುಡುಗರು ನೂರಕ್ಕೆ ನಾಲ್ವತ್ತರಷ್ಟು ಇರುತ್ತಾರೆ. ಮೂರನೇ ಗುಂಪಿನವರು ಚುರುಕು ಬುದ್ಧಿಯವರು. ಇವರ ಬುದ್ಧಿ ಮಟ್ಟ ೧೦೫ ರಿಂದ ಮೇಲೆ ಇರುತ್ತದೆ. ಇಂಥವರು ವರ್ಗದಲ್ಲಿ ಒಂದು ಮೂರಾಂಶ ಹುಡುಗರು ಇರುತ್ತಾರೆ. ಇವರ ಬಗ್ಗೆ ಶಿಕ್ಷಕರು ಅಷ್ಟೊಂದು ಶ್ರಮಪಡಬೇಕಾಗಿಲ್ಲ. ಇವರು ಶಿಕ್ಷಕರ ಸಲಹೆ ಸೂಚನೆಗಳಿಂದ ತಮ್ಮ ಅಭ್ಯಾಸದಲ್ಲಿ ಮುಂದುವರಿಯುವರು.

ಸಾಮಾನ್ಯವಾಗಿ ಹೇಳಬೇಕೆಂದರೆ ಹೆಚ್ಚು ಬುದ್ಧಿಮಟ್ಟ ಉಳ್ಳವನು ಸಾಲೆಯ ಪರೀಕ್ಷೆಗಳಲ್ಲಿ ಹೆಚ್ಚು ಗುಣಗಳನ್ನು ಮತ್ತು ಕಡಿಮೆ ಬುದ್ಧಿಮಟ್ಟ

ಉಳ್ಳವನು ಕಡಿಮೆ ಗುಣಗಳನ್ನು ಪೂರಕಿಸುವನು. ಶಾಲೆಯಲ್ಲಿ ಕಲಿಸುವ ವಿಷಯವು ಹೆಚ್ಚು ಕ್ಲಿಷ್ಟವಾದ ಹಾಗೆ ಹೆಚ್ಚು ಬುದ್ಧಿ ಶಕ್ತಿಯು ಬೇಕಾಗುತ್ತದೆ. ಶಾಲೆಯಲ್ಲಿ ಇಯತ್ತೆಯ ಅಥವಾ ಯಾವುದಾದರೊಂದು ಕಾರ್ಯಕ್ರಮದ ಹಿರೇಮಣಿಗಳನ್ನು, ಮುಂದಾಳುಗಳನ್ನು ಅಥವಾ ಮಂತ್ರಿಗಳನ್ನು ಆರಿಸುವಾಗ ಕೇವಲ ಬುದ್ಧಿಶಕ್ತಿಯನ್ನು ನೋಡುವದು ಸರಿಯಾಗುವದಿಲ್ಲ. ಬೇರೆಯವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಲಿಕ್ಕೆ ಮತ್ತು ಅವರೊಡನೆ ಹೊಂದಿಕೊಂಡು ಹೋಗಲಿಕ್ಕೆ ಮುಂದಾಳುವಿನಲ್ಲಿ ತಕ್ಕಮಟ್ಟಿಗಾದರೂ ಬುದ್ಧಿ ಶಕ್ತಿಯು ಬೇಕು. ಆದರೆ ಮುಂದಾಳು ಆದವನು ಎಲ್ಲರಿಗಿಂತಲೂ ಹೆಚ್ಚು ಬುದ್ಧಿವಂತನೆಂದು ಹೇಳಲು ಬರುವಂತಿಲ್ಲ. ಮುಂದಾಳುವಿನಲ್ಲಿ ಇರಬೇಕಾದ ಮುಖ್ಯ ಗುಣಗಳೆಂದರೆ ಸಹಕಾರ, ಸ್ನೇಹ, ಸಾಹಸ, ಸಮಾನ ದೃಷ್ಟಿ ಮತ್ತು ಮುಂದಾಲೋಚನೆ. ಇನ್ನು ಅಸಾಮಾಜಿಕ ವರ್ತನವು ಎಲ್ಲ ಬುದ್ಧಿಮಟ್ಟದವರಲ್ಲಿಯೂ ಕಂಡು ಬರುತ್ತದೆ. ಮಂದಬುದ್ಧಿಯ ಹುಡುಗರು ಶಾಲೆಯ ಅಭ್ಯಾಸವು ಕಠಿಣವೆಂದು ನಿರಾಶೆ ಹೊಂದಿ ಅಪರಾಧಗಳನ್ನು ಮಾಡುವುದರಲ್ಲಿ ತೃಪ್ತಿ ಪಡುತ್ತಿದ್ದರೆ ಹರಿತ ಬುದ್ಧಿಯ ಹುಡುಗರು ಶಾಲೆಯ ಅಭ್ಯಾಸವು ತಮ್ಮ ಬುದ್ಧಿ ಶಕ್ತಿಗಿಂತ ಕಡಿಮೆ ತರಗತಿಯದೆಂದು ತಿಳಿದು ಅಪರಾಧಗಳನ್ನು ಮಾಡುವುದರಲ್ಲಿ ಆನಂದ ಪಡುತ್ತಾರೆ.

**ಗುಂಪಿನ ಒರೆಗಳು** (Group Tests)

ಮೇಲೆ ವಿವರಿಸಿದ ಬುದ್ಧಿ ಒರೆಗಳು ವ್ಯಕ್ತಿ ಒರೆಗಳು (Individual Tests). ಅಂದರೆ ಇಲ್ಲಿ ವ್ಯಕ್ತಿಯನ್ನು ಅಥವಾ ಪ್ರತಿಯೊಬ್ಬ ಹುಡುಗನನ್ನು ಪ್ರತ್ಯೇಕವಾಗಿ ಬಾಯಿಮಾತಿನ ಪ್ರಶ್ನೆ ಕೇಳಿ ಪರೀಕ್ಷಿಸುತ್ತಾರೆ. ಇದರಿಂದ ಒಂದೇ ಸಮಯಕ್ಕೆ ಅನೇಕ ಹುಡುಗರನ್ನು ಪರೀಕ್ಷಿಸಲು ಬರುವಂತಿಲ್ಲ. ಪ್ರತಿಯೊಬ್ಬ ಹುಡುಗನನ್ನು ಪರೀಕ್ಷಿಸಲಿಕ್ಕೆ ಸುಮಾರು ಒಂದೊಂದು ತಾಸು ಬೇಕಾಗುತ್ತದೆ. ಒಂದು ವರ್ಗದ ಎಲ್ಲ ಹುಡುಗರಿಗೆ ಪ್ರತ್ಯೇಕವಾಗಿ ಈ ಒರೆಗಳನ್ನು ಕೊಡಬೇಕಾದರೆ ಶ್ರಮವೂ ವೇಳೆಯೂ ಹತ್ತುತ್ತವೆ. ಈ ತೊಂದರೆಯನ್ನು ನೀಗುವ ಅವಶ್ಯಕತೆ (೧೯೧೪–೧೮ ರಲ್ಲಿ) ಮೊದಲನೆಯ ಮಹಾಯುದ್ಧದ ಕಾಲಕ್ಕೆ ಉಂಟಾಯಿತು. ಅಮೇರಿಕೆಯು ಯುದ್ಧದಲ್ಲಿ ತೊಡಗಿದಾಗ ಸೈನ್ಯ

ಖಾತೆಯು ಬೇರೆ ಬೇರೆ ಹುದ್ದೆಗಳಿಗೆ ಯೋಗ್ಯ ಜನರನ್ನು ಹೇಗೆ ಆರಿಸಬೇಕು ಎಂಬ ಸಮಸ್ಯೆ ಉಂಟಾಯಿತು. ಆಗ ಅಮೇರಿಕೆಯ ಮನೋವಿಜ್ಞಾನಿಗಳು ಅನೇಕ ಜನರ ಬುದ್ಧಿ ಪರೀಕ್ಷೆಯನ್ನು ಒಂದೇ ಕಾಲಕ್ಕೆ ತಕ್ಕೊಳ್ಳಲು ಬರುವಂತಹ ಸಾಮೂಹಿಕವಾಗಿ ಕೊಡುವ ಒರೆಗಳನ್ನು ರಚಿಸಿದರು. ಅವಕ್ಕೆ **ಗುಂಪಿನ ಒರೆಗಳು** (Group Tests) ಎಂದು ಹೆಸರು. ಅಂದಿನಿಂದ ಕಾಗದದ ಮೇಲೆ ಕೊಟ್ಟ ಒರೆಗಳಲ್ಲಿಯ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದು ಕೊಡುವದು ಬಳಕೆಯಲ್ಲಿ ಬಂದಿತು. ಬುದ್ಧಿಶಕ್ತಿ ಸಾಮಾನ್ಯ ಜ್ಞಾನ ಮತ್ತು ಉದ್ಯೋಗದ ಒಲವುಗಳನ್ನು ಅಳೆಯುವ ಬಗೆ ಬಗೆಯ ಒರೆಗಳನ್ನು ಬೇರೆ ಬೇರೆ ಮನೋವಿಜ್ಞಾನಿಗಳು ರಚಿಸಿರುವರು. ಪಾಶ್ಚಾತ್ಯ ದೇಶದ ಸಾಲೆಗಳಲ್ಲಿ ಅವುಗಳ ಉಪಯೋಗವನ್ನು ಈಗ ಹೇರಳವಾಗಿ ಮಾಡುತ್ತಿರುತ್ತಾರೆ. ಇಂಡಿಯಾದಲ್ಲಿ ಅವುಗಳ ಪ್ರಚಾರವು ಇನ್ನೂ ಅಷ್ಟೊಂದು ಆಗಿರುವದಿಲ್ಲ. ಆದರೆ ಪ್ರಾಥಮಿಕ ಮತ್ತು ಮಾಧ್ಯಮಿಕ ಸಾಲೆಗಳ ಸ್ಕಾಲರಶಿಪ್ ಪರೀಕ್ಷೆಗಳಲ್ಲಿ ಆ ಮಾದರಿಯ ಕೆಲವು ಪ್ರಶ್ನೆಗಳನ್ನು ಕೇಳುವದುಂಟು.

ಗುಂಪಿನ ಒರೆಗಳಲ್ಲಿ ಬೇರೆ ಬೇರೆ ಪ್ರಕಾರಗಳುಂಟು. ಒಂದು ಶಬ್ದಕ್ಕೆ ಸಮಾನ ಅರ್ಥವುಳ್ಳ ಪ್ರತಿ ಶಬ್ದವನ್ನು (Synonyms) ಆರಿಸುವದು, ಒಂದು ಶಬ್ದಕ್ಕೆ ಅದರ ವಿರೋಧ ಅರ್ಥವನ್ನು (Opposites) ಸೂಚಿಸುವ ಶಬ್ದವನ್ನು ಆರಿಸುವದು, ಒಂದು ಶಬ್ದಕ್ಕೆ ಹೊಂದಿಕೆಯಾಗುವ ಸಾಮ್ಯಗಳನ್ನು (Analogies) ಆರಿಸುವದು, ಒಂದು ವಿಷಯಕ್ಕೆ ಸಂಬಂಧಿಸಿದ ಶಬ್ದಗಳನ್ನು ಆರಿಸಿ ಬೇರೆ ಬೇರೆ ಗುಂಪುಗಳನ್ನು (Classifications) ಮಾಡುವದು, ಕೇಳಿದ ಸಂಗತಿಯನ್ನು (Information) ತಿಳಿಸುವದು, ಅರ್ಥ ಹೇಳುವದು, ಲೆಕ್ಕ ಮಾಡುವದು, ಮುಂತಾಗಿ ಉತ್ತರ ಬರೆಯುವ ಪ್ರಶ್ನೆ ಕಾಗದಗಳು ಇರುತ್ತವೆ. ಒಗಟುಗಳನ್ನು ಇದರಲ್ಲಿ ಸೇರಿಸಬಹುದು. ಅಲ್ಲದೆ ಓದುಬರೆಹ ಬಾರದೆ ಇದ್ದವರ ಬುದ್ಧಿಶಕ್ತಿಯನ್ನು ಅಳೆಯುವ ವಿಶೇಷ ಒರೆಗಳನ್ನು ರಚಿಸಿರುವರು. ಅವಕ್ಕೆ **ಕೃತಿಯ ಒರೆಗಳು** (Performance Tests) ಎಂದು ಹೆಸರು. ಈ ಒರೆಗಳಲ್ಲಿ ಆಕೃತಿಗಳನ್ನು ಜೋಡಿಸುವದು, ಚಿತ್ರಗಳನ್ನು ಪೂರ್ಣಮಾಡುವದು ಮುಂತಾದ ಕೆಲಸಗಳನ್ನು ಪರೀಕ್ಷಕನ ಬಾಯಿಮಾತಿನ ಸೂಚನೆಯ ಪ್ರಕಾರ ಮಾಡುವದು ಇರುತ್ತದೆ. ಇಲ್ಲಿ ಬರಹದ ಪ್ರಶ್ನೆ ಮತ್ತು ಬರಹದ

ಉತ್ತರ ಇರುವದಿಲ್ಲ. ಗುಂಪಿನ ಒರೆಗಳನ್ನು ವಯಸ್ಸಿಗೆ ತಕ್ಕಂತೆ ಭಾಗ ಮಾಡದೆ ಸುಲಭದಿಂದ ಕ್ರಮೇಣ ಕಠಿಣವಾಗುವಂತೆ ಹೊಂದಿಸಿ ಪುಸ್ತಕ ರೂಪದಲ್ಲಿ ಅಚ್ಚುಹಾಕಿಸುತ್ತಾರೆ ಗುಂಪಿನ ಒರೆಗಳ ಕೆಲವು ಮಾದರಿಗಳನ್ನು ಕೆಳಗೆ ಕೊಟ್ಟಿದೆ.

## ೧. ತಿಳುವಳಿಕೆಯ ಒರೆಗಳು

ಸೂಚನೆ : ಕೆಳಗೆ ಕೆಲವು ವರ್ತುಳಗಳನ್ನು ಕೊಟ್ಟಿದೆ. ಎರಡನೇ ವರ್ತುಳದಲ್ಲಿ ಕಾಟು ಮತ್ತು ಮೂರನೇ ವರ್ತುಳದಲ್ಲಿ ಚಿತ್ರ ತೆಗೆಯಿರಿ.



## ೨ ಲೆಕ್ಕದ ಒರೆಗಳು

ಪ್ರಶ್ನೆ : ಸಂಗನು ೬ ಆಣೆಗೆ ಸೇರಿನಂತೆ ೮ ಸೇರು ಹಾಲು ಮಾರಿದರೆ ಅವನಿಗೆ ಬಂದ ಹಣ ಎಷ್ಟು ?

( ಸೂಚನೆ : ಸರಿ ಇದ್ದ ಉತ್ತರದ ಅಂಕಿಗೆ ಸುತ್ತು ಗೆರೆ ಎಳೆಯಿರಿ

ರೂಪಾಯಿ : ೭, ೬, ೩, ೮.

## ೩. ಸಾಮಾನ್ಯ ಜ್ಞಾನದ ಒರೆಗಳು

ಪ್ರಶ್ನೆ : ಹಿತ್ತಾಳಿಯಿಂದ ತಂಬಿಗೆಯನ್ನು ಮಾಡುತ್ತಾರೆ. ಏಕೆಂದರೆ—

ಹಿತ್ತಾಳಿ ಬಂಗಾರಕ್ಕಿಂತ ಸೋವಿ ಇರುತ್ತದೆ, ಮಣ್ಣಿನವು ಬೇಗ ಒಡೆಯುತ್ತವೆ, ಹುಳಿ ಹಚ್ಚಿ ತಿಕ್ಕಿದರೆ ಅವು ಬೆಳ್ಳಗಾಗುತ್ತವೆ, ಹಿತ್ತಾಳಿ ಮೆತ್ತಗೆ ಇರುತ್ತದೆ (ಸೂಚನೆ : ಸರಿ ಇದ್ದ ಉತ್ತರದ ಕೆಳಗೆ ಗೆರೆ ಹಾಕಿರಿ

## ೪. ವಿರುದ್ಧ ಅರ್ಥದ ಒರೆಗಳು

ಪ್ರಶ್ನೆ : ತೆಳ್ಳಗೆ: ದಪ್ಪಗೆ; ನುಣುಪು ;—. ಹಸಿ: —; ಬಾ :— :

ಸೂಚನೆ : ಬಿಟ್ಟ ಸ್ಥಳಗಳಲ್ಲಿ ಮೊದಲಿನ ಶಬ್ದಕ್ಕೆ ವಿರುದ್ಧ ಅರ್ಥಕೊಡುವ ಶಬ್ದವನ್ನು ಬರೆಯಿರಿ

## ೫. ಸಮಾನ ಅರ್ಥದ ಒರೆಗಳು

ಪ್ರಶ್ನೆ : ಸುಂದರ ಅಂದರೆ—ಕುರೂಪಿ, ಉಗ್ರ, ಚಂದ, ಸುಲಭ.

ಸೂಚನೆ : ಮೇಲೆ ಕೊಟ್ಟ ಶಬ್ದಗಳಲ್ಲಿ ಮುಖ್ಯ ಶಬ್ದಕ್ಕೆ ಸಮಾನ ಅರ್ಥ ಕೊಡುವ ಶಬ್ದದ ಕೆಳಗೆ ಗೆರೆ ಹಾಕಿರಿ.

## ೩. ಹೋಲಿಕೆಯ ಒರೆಗಳು

ಪ್ರಶ್ನೆ : ಜೇನುತುಪ್ಪ: ಜೇನುಹುಳ; ಅದರಂತೆ ಬೆಣ್ಣೆ:— (ಎಣ್ಣೆ, ಹಾಲು, ಕಾಳು, ಉಸುಕು.)

ಸೂಚನೆ: ಮೊದಲನೇ ಜೋಡಿಯಲ್ಲಿ ಕೊಟ್ಟ ಶಬ್ದಗಳಲ್ಲಿ ಒಂದು ಬಗೆಯ ಹೋಲಿಕೆ ಅಥವಾ ಸಂಬಂಧ ಇರುತ್ತದೆ. ಉಳಿದ ಜೋಡಿಗಳಲ್ಲಿ ಒಂದು ಶಬ್ದವನ್ನು ಬಿಟ್ಟಿರುತ್ತದೆ. ಆದರೆ ಅದರ ಮುಂದೆ ಕೊಟ್ಟ ಕಂಸಿನೊಳಗೆ ಬೇರೆ ಶಬ್ದಗಳ ಜೊತೆಗೆ ಆ ಬಿಟ್ಟ ಶಬ್ದವನ್ನು ಕೊಟ್ಟಿದೆ. ಅದು ಮೊದಲಿನ ಜೋಡಿಯಂತೆ ಸಂಬಂಧವನ್ನು ಸೂಚಿಸುತ್ತದೆ. ಅದರ ಕೆಳಗೆ ಗೆರೆ ಹಾಕಿರಿ.

## ೭. ವರ್ಗೀಕರಣದ ಒರೆಗಳು

ಸೂಚನೆ: ಕೆಳಗೆ ಪ್ರತಿಯೊಂದು ಗುಂಪಿನಲ್ಲಿ ಕೆಲವು ಶಬ್ದಗಳನ್ನು ಕೂಡಿಸಿ ಕೊಟ್ಟಿದೆ. ಅವುಗಳಲ್ಲಿ ಒಂದು ಶಬ್ದವನ್ನು ಬಿಟ್ಟು ಉಳಿದವು ಒಂದಕ್ಕೊಂದು ಸಂಬಂಧಪಟ್ಟಿರುತ್ತವೆ. ಆ ಗುಂಪಿಗೆ ಸೇರದ ಶಬ್ದದ ಕೆಳಗೆ ಗೆರೆ ಹಾಕಿರಿ.

ಪ್ರಶ್ನೆ : ಅಜ್ಞಾನ, ಸುಳ್ಳು, ಕಳವು,-ಲಂಚ, ಮೋಸ.

## ೮. ಸಂಗತಿಯ ಒರೆಗಳು

ಪ್ರಶ್ನೆ : ಮುತ್ತುಗಳು ಹುಟ್ಟುವದು ಎಲ್ಲಿ? ಹಾವಿನ ಹೆಡೆ, ಸಮುದ್ರ, ಕಣಿವೆ, ಆನೆ.

ಸೂಚನೆ: ಪ್ರತಿಯೊಂದು ಪ್ರಶ್ನೆಯ ಮುಂದೆ ನಾಲ್ಕು ಉತ್ತರಗಳನ್ನು ಕೊಟ್ಟಿದೆ. ಅವುಗಳಲ್ಲಿ ಒಂದೇ ಒಂದು ಉತ್ತರವು ಸರಿ ಇರುತ್ತದೆ. ಆ ಸರಿಯಾದ ಉತ್ತರದ ಕಳಗ ಗೆರೆ ಹಾಕಿರಿ.

## ೯. ಅಂಕಿಗಳ ಒರೆಗಳು

ಸೂಚನೆ: ಕೆಳಗೆ ಆರಾರು ಅಂಕಿಗಳ ಕೆಲವು ಸಾಲುಗಳನ್ನು ಎರಡು ಭಾಗ ಮಾಡಿ ಕೊಟ್ಟಿರುತ್ತದೆ. ಮೊದಲಿನ ಭಾಗದ ಮೂರು ಅಂಕಿಗಳಲ್ಲಿ

ಒಂದು ಕ್ರಮ ಇರುತ್ತದೆ. ಎರಡನೇ ಭಾಗದಲ್ಲಿ ಮೊದಲಿನ ಒಂದು ಅಂಕಿಯನ್ನು ಕೊಟ್ಟು ಉಳಿದ ಎರಡು ಅಂಕಿಗಳನ್ನು ಬಿಟ್ಟಿರುತ್ತದೆ. ಬಿಟ್ಟ ಈ ಅಂಕಿಗಳು ಮೊದಲಿನ ಭಾಗದಲ್ಲಿಯ ಕ್ರಮವನ್ನೇ ತೋರಿಸುತ್ತವೆ. ತೆರವಿನ್ನ ಸ್ಥಳದಲ್ಲಿ ಆ ಅಂಕಿಗಳನ್ನು ಬರೆಯಿರಿ.

ಪ್ರಶ್ನೆ: ೨೧, ೧೪, ೧೬; ಇದರಂತೆ, ೮, — , — .
೪, ೭, ೧೩; ಇದರಂತೆ, ೧೬, — , — .

## ೧೦ ತರ್ಕದ ಒರೆಗಳು

ಸೂಚನೆ: ಕೆಳಗೆ ಕೆಲವು ಪ್ರಶ್ನೆಗಳನ್ನು ಕೊಟ್ಟಿರುತ್ತದೆ. ಪ್ರತಿಯೊಂದು ಪ್ರಶ್ನೆಯ ಮುಂದೆ ಅದರ ಉತ್ತರವನ್ನು—ಹೌದು ಅಥವಾ ಅಲ್ಲ—ಕೊಟ್ಟಿರುತ್ತದೆ. ಸರಿಯಾದ ಉತ್ತರದ ಕೆಳಗೆ ಗೆರೆ ಹಾಕಿರಿ.

ಪ್ರಶ್ನೆ : ಮೋಡ ಬಂದಾಗೆಲ್ಲ ಮಳೆ ಬರುವದೆ? ಹೌದು, ಅಲ್ಲ.

ಮೇಲೆ ವಿವರಿಸಿದವು ಹೊಸ ಮಾದರಿಯ ಒರೆಗಳ ಕೆಲವು ನಮೂನೆಗಳು. ಇನ್ನೂ ಬೇರೆ ಬೇರೆ ರೀತಿಯಾಗಿ ರಚಿಸಿದ ಇಂಥ ಒರೆಗಳನ್ನು ಇಂಗ್ಲಂಡ ಅಮೇರಿಕೆಯ ಸಾಲೆಗಳಲ್ಲಿ ದೊಡ್ಡ ಪ್ರಮಾಣದಿಂದ ಉಪಯೋಗಿಸುವದು ರೂಢಿಯಲ್ಲಿ ಬಂದಿದೆ. ಒಂದೇ ಕಾಲಕ್ಕೆ ನೂರಾರು ಹುಡುಗರಿಗೆ ಇಂಥ ಗುಂಪಿನ ಒರೆಗಳನ್ನು ಕೊಡಬಹುದು. ಮಕ್ಕಳ ಬುದ್ಧಿಶಕ್ತಿಯನ್ನು ಈ ಒರೆಗಳಿಂದ ಅಳೆದು ಸಮಾನ ಬುದ್ಧಿಶಕ್ತಿಯುಳ್ಳ ಹುಡುಗರ ವರ್ಗಗಳನ್ನು ಮಾಡಿ ಸಾಲೆಯ ಅಭ್ಯಾಸ ಕ್ರಮವನ್ನು ಸಾಗಿಸುವದು ಹೆಚ್ಚು ಪರಿಣಾಮಕಾರಕವಾದುದು. ಬುದ್ಧಿಯ ಗುಂಪಿನ ಒರೆಗಳನ್ನು ಎಂ. ಪಿ. ನ [illegible]ಬವರು ಕನ್ನಡದಲ್ಲಿ ಅನೇಕ ಹುಡುಗರಿಗೆ ಕೊಟ್ಟು ಪ್ರಯೋಗ ಮಾಡಿರುವರು.

## ಒಲುವಿನ ಒರೆಗಳು (Aptitude Tests)

ಕಲೆಗಳಲ್ಲಿ ಮತ್ತು ಉದ್ಯೋಗಗಳಲ್ಲಿ ಇರುವ ಕೌಶಲ್ಯ ಅಥವಾ ಅಭಿರುಚಿಯು ಕೇವಲ ಬುದ್ಧಿಶಕ್ತಿಯನ್ನು ಅವಲಂಬಿಸಿರದೆ ಇತರ ಸಾಮರ್ಥ್ಯಗಳನ್ನೂ ಅವಲಂಬಿಸಿರುತ್ತದೆ. ಒಬ್ಬ ವಿದ್ಯಾರ್ಥಿಯನ್ನು ಒಂದು ವಿಶಿಷ್ಟ ಕಲೆಯಲ್ಲಿ

ಅಥವಾ ಉದ್ಯೋಗದಲ್ಲಿ ತೊಡಗಿಸುವ ಮುನ್ನ ಅದರಲ್ಲಿ ಅವನಿಗೆ ಇರುವ ಒಲವನ್ನು ಪರೀಕ್ಷಿಸಬೇಕಾಗುತ್ತದೆ. ಒಲವು ಇದ್ದಲ್ಲಿ ಅಭಿರುಚಿ ಇರುತ್ತದೆ. ಅಭಿರುಚಿ ಇದ್ದಲ್ಲಿ ಪ್ರಗತಿ ತೋರುತ್ತದೆ. ವ್ಯಕ್ತಿಗಳಲ್ಲಿರುವ ಮನೋವೃತ್ತಿಗಳನ್ನು ಅಳೆಯಲಿಕ್ಕೆ ಆ ಆ ಉದ್ಯೋಗಗಳಿಗೆ ಸಂಬಂಧಿಸಿದ ಒಲುವಿನ ಒರೆಗಳನ್ನು ( Aptitude Tests ) ರಚಿಸಿರುವರು. ಯಂತ್ರಕಲೆ, ಗಾಯನಕಲೆ, ಸಾಮಾಜಿಕ ನಡತೆ ಮುಂತಾದ ಸಾಮರ್ಥ್ಯಗಳನ್ನು ಅಳೆಯಲಿಕ್ಕೆ ಬುದ್ಧಿಯ ಒರೆಗಳು ಉಪಯೋಗ ಬೀಳುವದಿಲ್ಲ. ಭೌತಿಕ ವಿಜ್ಞಾನದಲ್ಲಿ ಸಂಶೋಧನೆಗಳು ಬೆಳೆದ ಹಾಗೆ ಹೊಸ ಹೊಸ ಕಲೆಗಳು ಮತ್ತು ಉದ್ಯೋಗಗಳು ಉಂಟಾಗಿ ರುತ್ತವೆ. ಈಗಿನ ಕಾಲದಲ್ಲಿ ಒಂದೇ ಉದ್ಯೋಗಕ್ಕೆ ಸಂಬಂಧಿಸಿದ ಬೇರೆ ಬೇರೆ ಭಾಗಗಳು ಅಥವಾ ವಿಷಯಗಳು ವಿಶೇಷ ಬೆಳೆದಿರುವುದರಿಂದ ಆ ಆ ವಿಷಯಗಳಲ್ಲಿಯ ಕುಶಲತೆ ಬೇರೆ ಬೇರೆಯಾಗಿರುತ್ತದೆ. ಕಟ್ಟುವ ಕೆಲಸ ಒಂದೇ ಆಗಿದ್ದರೂ ಮನೆ ಕಟ್ಟಲಿಕ್ಕೆ ಬೇಕಾಗುವ ಕುಶಲತೆ ಬೇರೆ, ಕೆರೆಕಾಲುವೆ ಕಟ್ಟಿಸುವ ಕುಶಲತೆ ಬೇರೆ, ಮತ್ತು ಸೇತುವೆ ಕಟ್ಟಿಸುವ ಕುಶಲತೆ ಬೇರೆ. ಎಂಜಿನಿಯರಿಂಗ ಕೌಶಲ್ಯವು ಪಶ್ಚಿಮದವರಲ್ಲಿ ಬೆಳೆದಂತೆ ಇಂಡಿಯಾದವರಲ್ಲಿ ಬೆಳೆದಿರುವದಿಲ್ಲ. ಅನೇಕ ವಿಜ್ಞಾನ, ಉದ್ಯೋಗ ಕಲಾಕೌಶಲ್ಯಗಳ ಹಾಡಾದರೂ ಇದೇ. ಇವುಗಳಲ್ಲಿ ಸುಧಾರಣೆಯನ್ನು ಮಾಡಬೇಕೆಂಬ ಬಯಕೆ ಮತ್ತು ಪ್ರಯತ್ನಗಳು ಇಂಡಿಯಾದಲ್ಲಿ ಇಲ್ಲದೇ ಇರುವದೇ ಇದಕ್ಕೆ ಕಾರಣ ಇಂಡಿಯಾದ ಬಹು ದೊಡ್ಡ ಉದ್ಯೋಗವಾದ ಒಕ್ಕಲತನದ ಲ್ಲಿಯೂ ವಿಜ್ಞಾನದ ಸಂಶೋಧನೆಗಳು ಆಗಿರುವದಿಲ್ಲ. ಅದರಂತೆ ವೈದ್ಯಕೀ ವಿಜ್ಞಾನದಲ್ಲಿಯೂ ಸಂಶೋಧನೆಗಳು ಮತ್ತು ಪ್ರಗತಿಗಳು ಆಗಿರುವದಿಲ್ಲ.

ಆದರೆ ಪಶ್ಚಿಮ ದೇಶಗಳಲ್ಲಿ ಈ ಎರಡೂ ಸಾಯನ್ಸಗಳು ಬಹಳ ವಿಧ ವಾಗಿ ಮುಂದುವರೆದಿರುತ್ತವೆ. ಉದ್ಯೋಗದ ಒಲವುಗಳನ್ನು ಅಳೆಯುವಾಗ ಉದ್ಯೋಗದಲ್ಲಿಯ ಪ್ರಗತಿಯ ಪ್ರಶ್ನೆಯೂ ಉಂಟಾಗುತ್ತದೆ ನಮ್ಮ ಜನರಲ್ಲಿ ಬುದ್ಧಿಯ ಬಗ್ಗೆ ತಪ್ಪು ಕಲ್ಪನೆಗಳು ಇರುತ್ತವೆ. " ತಂದೆಯಂತೆ ಮಗ " ಎಂದು ಹೇಳುವಾಗ ಬುದ್ಧಿಯು ಅನುವಂಶಿಕವೆಂದು ವಾದಿಸುವದಲ್ಲದೆ ಉದ್ಯೋಗವೂ ಅನುವಂಶಿಕವೆಂದು ವಾದಿಸುತ್ತಾರೆ. ಈ ವಾದವನ್ನು ಹೂಡುವ ಜನರು ಇಂಡಿಯಾದಲ್ಲಿ ಇದ್ದಷ್ಟು ಜಗತ್ತಿನ ಬೇರೆ ಯಾವ ದೇಶದಲ್ಲಿಯೂ ಇರುವದಿಲ್ಲ.

ಅಂತೆಯೇ ನಮ್ಮಲ್ಲಿ ಯಾವ ಉದ್ಯೋಗವೂ ವಿಜ್ಞಾನದ ದೃಷ್ಟಿಯಿಂದ ಮುಂದುವರೆದಿರುವದಿಲ್ಲ. ವಿದ್ಯೆ, ತಮ್ಮ ಮನೆತನದ ಸಾಮಾಜಿಕ ದರ್ಜೆ, ಮತ್ತು ಸುಖಸಂಪತ್ತುಗಳನ್ನು ವಂಶಪರಂಪರೆಯಾಗಿ ಜಾತಿ ಮತಗಳಿಗೆ ಕಾದಿಡಬೇಕೆಂಬುವ ಸ್ವಾರ್ಥ ಮತ್ತು ಸಂಕುಚಿತ ದೃಷ್ಟಿಯೇ ಈ ವಾದಿಗಳ ಮುಖ್ಯ ಉದ್ದೇಶ.

ಮಕ್ಕಳ ಒಲವುಗಳು ಅವರು ಬೆಳೆಯುವ ಮನೆಯ ಆವರಣದಿಂದ ಮತ್ತು ಕಲಿಯುವ ಸಾಲೆಯ ಆವರಣದಿಂದ ವಿಶೇಷವಾಗಿ ಮಾರ್ಪಡುತ್ತವೆ. ಒಲವುಗಳು ಆನುವಂಶಿಕವಲ್ಲ; ಅವು ನೋಡಿ ಕಲಿತ ಅಭಿರುಚಿಗಳು ತಂದೆಯ ಅಥವಾ ಮನೆಯ ಉದ್ಯೋಗದಲ್ಲಿ ಮಗುವಿನ ಒಲವು ಕಂಡು ಬರುತ್ತಿದ್ದರೆ ಅದು ಅವನು ಆ ಉದ್ಯೋಗದಲ್ಲಿ ಪ್ರತಿ ದಿವಸ ನೋಡಿ ಕಲಿತದ್ದು ಇರುತ್ತದೆ. ಅದೇ ಮಗುವನ್ನು ಸಾಲೆಯಲ್ಲಿ ಬೇರೆ ಉದ್ಯೋಗವನ್ನು ನೋಡಲಿಕ್ಕೆ ಅಥವಾ ಮಾಡಲಿಕ್ಕೆ ಹಚ್ಚಿದರೆ ಆ ಉದ್ಯೋಗದಲ್ಲಿಯೂ ಅವನ ಒಲವು ಅಭಿರುಚಿಗಳು ಬೆಳೆಯುತ್ತವೆ. ಪ್ರಾಥಮಿಕ ಸಾಲೆಯ ಎಳೆಯ ವಯಸ್ಸಿನಲ್ಲಿ ಮಕ್ಕಳ ಉದ್ಯೋಗದ ಒಲವುಗಳನ್ನು ಅಳೆಯುವ ಅಥವಾ ಅವರಿಗೆ ವಿಶಿಷ್ಟ ಉದ್ಯೋಗಗಳನ್ನು ಕಲಿಸುವ ಪದ್ಧತಿಯು ಮುಂದುವರಿಂದ ಯಾವ ದೇಶದಲ್ಲಿಯೂ ಇರುವದಿಲ್ಲ. ಪ್ರಾಥಮಿಕ ಸಾಲೆಯಲ್ಲಿ ಮುಖ್ಯವಾಗಿ ಕಲಿಸಬೇಕಾದುದು ಪ್ರತಿಯೊಬ್ಬನಿಗೂ ದೊಡ್ಡವನಾದ ಮೇಲೆ ತನ್ನ ಬದುಕು ಬಾಳುವೆಯಲ್ಲಿ ಉಪಯೋಗ ಬೀಳುವ ಸಾಮಾನ್ಯ ಶಿಕ್ಷಣ (Geueral Education) ಅಂದರೆ ಓದು, ಬರೆಹ, ಲೆಕ್ಕ, ಆಟ, ಕೆಲಸದ ಚಟುವಟಿಕೆ ನಾಗರಿಕ ನೀತಿ ಮತ್ತು ಲೋಕಸತ್ತೆಯ ಸಾಮಾಜಿಕ ವರ್ತನ. ಪ್ರಾಥಮಿಕ ಸಾಲೆಯ ಚಿಕ್ಕ ಮಕ್ಕಳಿಗೆ ವೃತ್ತಿ ಶಿಕ್ಷಣವನ್ನು (Vocational Education) ಕೊಡುವದು ಸರಿ ಎಂದು ತೋರುವದಿಲ್ಲ. ಆದರೆ ಬಗೆಬಗೆಯ ಉದ್ದೇಶಯುತವಾದ ಚಟುವಟಿಕೆಗಳನ್ನು (Purposeful Activity) ಕಲಿಸಬಹುದು ಬಾಲ್ಯದಲ್ಲಿ ತೋರಿಸುವ ಉದ್ಯೋಗದ ಒಲವುಗಳು ಮತ್ತು ಅಭಿರುಚಿಗಳು ಸ್ಥಿರವಾಗಿ ಉಳಿಯುವದಿಲ್ಲ. ಸೆಕಂಡರಿ ಸಾಲೆಯ ಅವಧಿಯಲ್ಲಿ ಮಕ್ಕಳ ಬುದ್ಧಿಶಕ್ತಿ ಮತ್ತು ಹಸ್ತಕೌಶಲ್ಯವು ಬೆಳೆದಿರುವುದರಿಂದ ಆಗ ಅವರಿಗೆ ಕೆಲವು ಉದ್ಯೋಗಗಳ ಪರಿಚಯವನ್ನು ಮಾಡಿಕೊಡುವದು

ಅವಶ್ಯ. ಹಾಯಸ್ಕೂಲಿನ ಕೊನೆಯ (S. S. C.) ಪರೀಕ್ಷೆ ಪಾಸಾಗ ಬೇಕಾದರೆ ವಿದ್ಯಾರ್ಥಿಯು ಕನಿಷ್ಟ ಒಂದೆರಡು ಉದ್ಯೋಗಪರ ವಿಷಯಗಳನ್ನು ಅಭ್ಯಾಸ ಮಾಡಲಿಕ್ಕೇ ಬೇಕು ಎಂಬ ನಿಯಮವನ್ನು ಇಟ್ಟುಕೊಳ್ಳು ವದು ನಾಡಿನ ಹಿತದ ದೃಷ್ಟಿಯಿಂದ ಒಳ್ಳೆಯದು.

ಕೆಳಗೆ ಕಾಣಿಸಿದ ಉದ್ಯೋಗಗಳ ಬಗ್ಗೆ ಒಲವಿನ ಒರೆಗಳು ಪ್ರಚಾರದಲ್ಲಿ ಇರುತ್ತವೆ. ಚಿತ್ರಗಾರ, ಬಣ್ಣ ಹಚ್ಚುವವ, ಫೋಟೋ ತೆಗೆಯುವವ, ಕಾರಕೂನ, ಗಾಯಕ, ಎಂಜನಿಯರ, ಯಂತ್ರ ನಡೆಸುವವ, ನರ್ಸ, ವೈದ್ಯ, ಶಿಕ್ಷಕ, ವಕೀಲ, ಅಂಗಡಿಕಾರ, ವ್ಯಾಪಾರಿ, ಬರೆಹಗಾರ, ಸುದ್ದಿಗಾರ, ವ್ಯವಸ್ಥಾಪಕ, ಒಕ್ಕಲಿಗ, ಯಂತ್ರ ರಿಪೇರಿಯವ, ಕಮ್ಮಾರ, ಬಡಿಗ, ಗೋಡೆ ಕಟ್ಟುವವ, ಕೂಲಿಕಾರ ಮುಂತಾದವರ ಉದ್ಯೋಗಗಳಿಗೆ ಸಂಬಂಧಿಸಿದ ಕುಶಲತೆಗಳನ್ನೂ, ಅವುಗಳಿಗೆ ಅವಶ್ಯ ಬೇಳುವ ವಿಷಯ ಜ್ಞಾನವನ್ನೂ ಅಳೆಯಲಿಕ್ಕೆ ಬಗೆಬಗೆಯ ಒರೆಗಳನ್ನು ರಚಿಸಿರುವರು. ಉದ್ಯೋಗದ ಸಾಲೆಗಳಿಗೆ ಪ್ರವೇಶವನ್ನು ಬಯಸುವ ವಿದ್ಯಾರ್ಥಿಗಳಿಗೆ ಮತ್ತು ಉದ್ಯೋಗವನ್ನು ಕೈಕೊಳ್ಳಬೇಕೆಂಬುವ ಉಮೇದವಾರರಿಗೆ ಈ ಒರೆಗಳನ್ನು ಕೊಡುತ್ತಾರೆ. ೧೯೨೦ ರಿಂದ ಇತ್ತೀಚೆಗೆ ಈ ಹೊಸ ಮಾದರಿಯ ಒರೆಗಳು ಇಂಗ್ಲಂಡ ಅಮೇರಿಕೆಯ ಸಾಲೆ-ಕಾಲೇಜುಗಳಲ್ಲಿ ಬಹಳ ಬಳಿಕೆಯಲ್ಲಿ ಬಂದಿವೆ. ಒಲವು ಅಂದರೆ ಮುಂದೆ ಬೆಳೆಯಬಹುದಾದ ಒಳಗಿನ ಶಕ್ತಿಯ ಕುರುಹು. ಮಗುವಿನಲ್ಲಿ ಬೇರೆ ಬೇರೆ ಕಲೆಗಳ ಅಥವಾ ಉದ್ಯೋಗಗಳ ಒಲವುಗಳು ಇರುತ್ತವೆ. ಅವುಗಳನ್ನು ಕಂಡು ಹಿಡಿದು ಅವು ಬೆಳೆಯುವಂತೆ ಯೋಗ್ಯ ಹಾದಿಯನ್ನು ತೋರಿಸುವದು ಶಿಕ್ಷಕನ ಮತ್ತು ಉಪದೇಶಕನ ಕೆಲಸ.

**ಪ್ರಗತಿಯ ಒರೆಗಳು** (Attainment Tests)

ಸಾಲೆಯ ಅಭ್ಯಾಸ ಪತ್ರಿಕೆಯ ವಿಷಯಗಳಾದ ಭಾಷೆ, ಗಣಿತ, ಸಾಯನ್ಸ, ಸಮಾಜದ ಅಭ್ಯಾಸಗಳು ಮೊದಲಾದ ವಿಷಯಗಳಲ್ಲಿ ವಿದ್ಯಾರ್ಥಿಗಳು ಗಳಿಸಿದ ಪ್ರಗತಿಯನ್ನು ಬುದ್ಧಿಯ ಒರೆಗಳು ಅಳೆಯುವದಿಲ್ಲ. ಅದನ್ನು ಅಳೆಯಲಿಕ್ಕೆ ಸಾಮಾನ್ಯವಾಗಿ ನಿಬಂಧ ಪರಿಕ್ಷೆಗಳನ್ನೇ (Essay Examinations) ನಮ್ಮ ಸಾಲೆಗಳಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಆದರೆ ಅಭ್ಯಾಸದಲ್ಲಿಯ ಪ್ರಗತಿ ಯನ್ನು ನಿಬಂಧ ಪರೀಕ್ಷೆಗಳಿಂದ ಸರಿಯಾಗಿ ಅಳೆಯಲು ಬರುವದಿಲ್ಲವೆಂದು

ಡಾ|| ಬೆಲಾರ್ಡ್ ಮೊದಲಾದವರು ತೋರಿಸಿಕೊಟ್ಟಿದ್ದಾರೆ, ಆದ್ದರಿಂದ ಇದನ್ನು ಅಳೆಯಲಿಕ್ಕೆ **ಹೊಸ ಮಾದರಿಯ ಒರೆಗಳನ್ನು** (New Type Tests) ಕಲ್ಪಿಸಿದ್ದಾರೆ. ಇವು ಹೆಚ್ಚು ಆಧಾರವುಳ್ಳವು ( Valid ) ಮತ್ತು ನಂಬುಗೆಯುಳ್ಳವು (Reliable) ಇರುತ್ತವೆ. ನಿಬಂಧ ಪರೀಕ್ಷೆಯಲ್ಲಿ ಸಾಧ್ಯವಿರುವ ಪರೀಕ್ಷಕನ ಪಕ್ಷಪಾತದ ತೊಡಕು ಇವುಗಳಲ್ಲಿ ಇರುವದಿಲ್ಲ. ಈ ಹೊಸ ಮಾದರಿಯ ಒರೆಗಳಿಗೆ ವಸ್ತುವಾಚಕ ಒರೆಗಳು ( Objective Tests ) ಎಂಬ ಹೆಸರಿನಿಂದಲೂ ಕರೆಯುವದುಂಟು. ಈ ವಸ್ತುವಾಚಕ ಅಥವಾ ಪ್ರಗತಿಯ ಒರೆಗಳಲ್ಲಿ ಅನೇಕ ಪ್ರಕಾರಗಳು ಉಂಟು. ಅವುಗಳಲ್ಲಿ ಮುಖ್ಯವಾದ ಕೆಲವು ಒರೆಗಳನ್ನು ಸಂಕ್ಷೇಪವಾಗಿ ಇಲ್ಲಿ ವಿವರಿಸಿದೆ:—

**೧ ಹಲವು ಆಯ್ಕೆಯ ಒರೆಗಳು** (Multiple-Choice Tests)

ಈ ಮಾದರಿಯ ಒರೆಗಳಲ್ಲಿ ಒಂದೊಂದು ಪ್ರಶ್ನೆಯನ್ನು ಕೊಟ್ಟು ಪ್ರತಿಯೊಂದಕ್ಕೆ ನಾಲ್ಕು ಅಥವಾ ಐದು ಉತ್ತರಗಳನ್ನು ಕೊಟ್ಟಿರುತ್ತದೆ. ಅವುಗಳಲ್ಲಿ ಒಂದು ಮಾತ್ರ ಸರಿಯಾದ ಅಥವಾ ಉತ್ತಮವಾದ ಉತ್ತರವಿರುತ್ತದೆ. ವಿದ್ಯಾರ್ಥಿಯು ಅದನ್ನು ಆರಿಸಿ ಅದರ ಕೆಳಗೆ ಗೆರೆ ಎಳೆದು ಗುರುತಿಸಬೇಕು. ಉದಾಹರಣೆ :

i ಪಿಸ್ತೂಲು ಅಂದರೆ—ಚಾಕು, ಕತ್ತಿ, ಬಂದೂಕು, ಬಾಂಬ.

ii ಕುರುಬನು (ಕೋಳಿಗಳನ್ನು, ಕುರಿಗಳನ್ನು, ದನಗಳನ್ನು, ಎಮ್ಮೆಗಳನ್ನು) ಕಾಯುತ್ತಾನೆ.

iii 'ಹರಿಶ್ಚಂದ್ರ ಕಾವ್ಯ'ವನ್ನು ಒರೆದ ಕವಿ— ಹರಿಹರ, ಪಂಪ, ರಾಘವಾಂಕ, ಕುಮಾರವ್ಯಾಸ.

iv ನಿಗ್ರೋ ಜನರ ಮೂಲ ವಾಸಸ್ಥಳ—ಅಮೇರಿಕಾ, ಆಫ್ರಿಕಾ, ಜರ್ಮನಿ, ಆಸ್ಟ್ರೇಲಿಯಾ.

**೨ ಸರಿ–ತಪ್ಪು ಒರೆಗಳು** (True-False Tests)

ಒಂದು ಹೇಳಿಕೆಯನ್ನು ಕೊಟ್ಟು ಅದರ ಮುಂದೆ " ಸರಿ ತಪ್ಪು " ಎಂದು ಅಥವಾ " ಹೌದು ಅಲ್ಲ " ಎಂದು ಬರೆದಿರುತ್ತದೆ. ಆ ಹೇಳಿಕೆಯು

ಸರಿ ಇದ್ದರೆ "ಸರಿ" ಅಥವಾ "ಹೌದು" ಎಂಬ ಶಬ್ದದ ಕೆಳಗೆ, ತಪ್ಪು ಇದ್ದರೆ "ತಪ್ಪು" ಅಥವಾ "ಅಲ್ಲ" ಎಂಬ ಶಬ್ದದ ಕೆಳಗೆ ಗೆರೆ ಎಳೆಯಬೇಕು. ಉದಾಹರಣೆ :

i ಇದ್ದಲಿಯು ಬೆಳ್ಳಗೆ ಇರುತ್ತದೆಯೊ ?—ಹೌದು, ಅಲ್ಲ

ii ದನಗಳು ಹುಲ್ಲನ್ನು ಮೇಯುವವೋ ?—ಹೌದು, ಅಲ್ಲ

iii ಮನೋವಿಜ್ಞಾನ ಅಂದರೆ ಸಸ್ಯಗಳ ಅಭ್ಯಾಸ —ಸರಿ, ತಪ್ಪು

iv ಬೇಸಿಗೆಯಲ್ಲಿ ನೀರು ಹೆಪ್ಪುಗಟ್ಟುತ್ತದೆ.—ಸರಿ, ತಪ್ಪು

## ೩ ಜೋಡಿಸುವ ಒರೆಗಳು ( Matching Tests )

ಇದರಲ್ಲಿ ವಿಷಯಗಳ ಎರಡು ಗುಂಪುಗಳು ಅಥವಾ ಪಟ್ಟಿಗಳು ಇರುತ್ತವೆ. ಒಂದನೇ ಪಟ್ಟಿಯಲ್ಲಿಯ ವಾಕ್ಯವನ್ನು ಎರಡನೇ ಪಟ್ಟಿಯಲ್ಲಿಯ ವಾಕ್ಯಕ್ಕೆ ಅರ್ಥವಾಗುವಂತೆ ಸರಿಯಾಗಿ ಹೊಂದಿಸಬೇಕು. ಒಂದನೇ ಪಟ್ಟಿಯಲ್ಲಿ ಕೊಟ್ಟ ಸಾಲಿನ ಅಂಕಿಯನ್ನು ಎರಡನೇ ಪಟ್ಟಿಯ ಸಾಲಿನ ಎದುರಿಗೆ ತೆರವಿದ್ದ ಸ್ಥಳದಲ್ಲಿ ಬರೆಯಬೇಕು.

| | ಅ | | ಆ |
|---|---|---|---|
| i | ೧. ನೀರು ಕಾಸಿದರೆ | ( ) | ನೀರು ಆಗುತ್ತದೆ. |
| | ೨. ಉಗಿಗೆ ತಂಪು ತಗಲಿದರೆ | ( ) | ಭರ್ಫವಾಗುತ್ತದೆ. |
| | ೩. ಸರೋವರವು ಹೆಪ್ಪುಗಟ್ಟಿದರೆ | ( ) | ಉಗಿಯಾಗುತ್ತದೆ. |

| | ಅ | | ಆ |
|---|---|---|---|
| ii | ೧. ಪುಲಕೇಶಿ | ( ) | ಮರಾಠಾ ರಾಜ್ಯ ಸ್ಥಾಪಿಸಿದನು. |
| | ೨. ಶಿವಾಜಿ | ( ) | ಹರುಷವರ್ಧನನ್ನು ಸೋಲಿಸಿದನು. |
| | ೩. ಅಶೋಕ | ( ) | ಬೌದ್ಧ ಮತವನ್ನು ಪ್ರಚಾರ ಮಾಡಿದನು. |

## ೪ ಪೂರ್ತಿಯ ಒರೆಗಳು (Completion Tests)

ಈ ಬಗೆಯ ಒರೆಗಳಲ್ಲಿ ಒಂದು, ಎರಡು ಅಥವಾ ಮೂರು ಶಬ್ದಗಳನ್ನು ಬಿಟ್ಟು ವಾಕ್ಯಗಳು, ಅಥವಾ ಒಂದೆರಡು ವಾಕ್ಯಗಳನ್ನು ಬಿಟ್ಟ ಪ್ಯಾರಾ ಇರುತ್ತವೆ.

ಬಿಟ್ಟ ಈ ಶಬ್ದಗಳನ್ನು ಅಥವಾ ವಾಕ್ಯಗಳನ್ನು ಅರ್ಥಕ್ಕೆ ಸರಿಯಾಗುವಂತೆ ವಿದ್ಯಾರ್ಥಿಯು ತುಂಬಬೇಕು. ಉದಾಹರಣೆ :

೧. ಅಜಂತಾ ಗವಿಗಳು....................ಜಿಲ್ಲೆಯಲ್ಲಿ ಇರುತ್ತವೆ.

೨. ....................ನು ತಾಜಮಹಾಲನ್ನು ಕಟ್ಟಿಸಿದನು.

೩. ರನ್ನನು....................ಎಂಬ ಗ್ರಂಥವನ್ನು ಬರೆದನು.

೪. ನ್ಯೂಟನ್‌ನು....................ಎಂಬ ತತ್ವವನ್ನು ಕಂಡು ಹಿಡಿದನು.

ವಿದ್ಯಾರ್ಥಿಗೆ ಸರಿಯಾದ ವಿಷಯಜ್ಞಾನವು ಇದ್ದರೆ ಅವನು ತೆರಪಿದ್ದ ಸ್ಥಳದಲ್ಲಿ ಯೋಗ್ಯ ಶಬ್ದಗಳನ್ನು ನೆನಪು ಮಾಡಿಕೊಂಡು ಬರೆಯುತ್ತಾನೆ. ಪೂರ್ತಿ ಒರೆಯನ್ನು ವಿವಿಧ ಆಯ್ಕೆಯ ಒರೆಯಂತೆಯೂ ರಚಿಸಬಹುದು. ಆಗ ಸರಿಯಾದ ಉತ್ತರರಾಗುವ ಶಬ್ದಗಳನ್ನು ಅಥವಾ ವಾಕ್ಯಗಳನ್ನು ಬೇರೆ ೩-೪ ಶಬ್ದಗಳಲ್ಲಿ ಸೂಚಿಸಬೇಕು. ಉದಾಹರಣೆ :

ಅಜಂತಾ ಗವಿಗಳು....................ಜಿಲ್ಲೆಯಲ್ಲಿ ಇರುತ್ತವೆ. ಕಾರವಾರ, ಔರಂಗಾಬಾದ, ವಿಜಾಪೂರ, ಮೈಸೂರ.

### ೫ ಒಂದು ಶಬ್ದ ಉತ್ತರವುಳ್ಳ ಪ್ರಶ್ನೆಗಳು

ಇಲ್ಲಿ ವಾಕ್ಯದಲ್ಲಿ ಬಿಟ್ಟ ಶಬ್ದವನ್ನು ತುಂಬುವದು ಇರುವದಿಲ್ಲ. ಆದರೆ ಒಂದೇ ಶಬ್ದದಲ್ಲಿ ಅಥವಾ ಒಂದೇ ವಾಕ್ಯದಲ್ಲಿ ಉತ್ತರ ಬರುವಂಥ ಪ್ರಶ್ನೆಗಳನ್ನು ಕೇಳುವದು ಈ ಒರೆಗಳ ಮುಖ್ಯ ಲಕ್ಷಣ. ಉದಾಹರಣೆ :

| ಪ್ರಶ್ನೆ | ಉತ್ತರ |
|---|---|
| ೧. ಗ್ರಾಮಫೋನ ಹುಡುಕಿ ತೆಗೆದವರು ಯಾರು ? | .................... |
| ೨. ಜಗತ್ತಿನಲ್ಲಿ ಅತಿ ಎತ್ತರವಾದ ಪರ್ವತ ಶಿಖರವು ಯಾವುದು ? | .................... |
| ೩. ಎರಡನೆಯ ಮಹಾಯುದ್ಧದಲ್ಲಿ ಅ್ಯಟಮ್ ಬಾಂಬನ್ನು ಯಾವ ದೇಶದವರು ಯಾವ ದೇಶದವರ ಮೇಲೆ ಚೆಲ್ಲಿದರು ? | .................... |

## ೬ ಕಾಲಕ್ರಮದ ಒರೆಗಳು

ಕೆಲವು ಮಹಾ ವ್ಯಕ್ತಿಗಳ ಅಥವಾ ಸಂಗತಿಗಳ ಪಟ್ಟಿಯನ್ನು, ಕಾಲಕ್ರಮ ತಪ್ಪಿಸಿ ಮೇಲೆ ಕೆಳಗೆ ಮಾಡಿ ಕೊಡುವದು. ವಿದ್ಯಾರ್ಥಿಯು ಅವುಗಳನ್ನು ಸರಿಪಡಿಸಿ ಕಾಲಾನುಕ್ರಮವಾಗಿ ಹೊಂದಿಸಿ ಬರೆಯಬೇಕು. ಅಥವಾ ಅನುಕ್ರಮವಾಗಿ ನಂಬರು ಕೊಡಬೇಕು. ಯಾವ ಸಂಗತಿಯು ಮೊದಲು ಮತ್ತು ಯಾವ ಸಂಗತಿಯು ಹಿಂದುಗಡೆ ಸಂಭವಿಸಿತು, ಅಥವಾ ಯಾವ ವ್ಯಕ್ತಿಯು ಮೊದಲು ಯಾವ ವಕ್ತಿಯು ಆನಂತರ ಆಳಿದ ಅಥವಾ ಜೀವಿಸಿದ್ದ ಎಂಬುದನ್ನು ವಿಚಾರಿಸಿ ಅದರಂತೆ ಹೊಂದಿಸಬೇಕು. ಉದಾಹರಣೆ :

i ಕೆಳಗೆ ಕೊಟ್ಟ ವ್ಯಕ್ತಿಗಳ ಹೆಸರನ್ನು ಅವರು ಆಳಿದ ಕಾಲಾನುಕ್ರಮವಾಗಿ ಹೊಂದಿಸಿ ಬರೆಯಿರಿ—

೧. ಪುಲಕೇಶಿ, ೨. ಅಕಬರ, ೩. ಟೀಪ್ಪು, ೪. ಅಶೋಕ.

ii ಕೆಳಗೆ ಕೊಟ್ಟ ಸಂಗತಿಗಳನ್ನು ಅವು ಸಂಭವಿಸಿದ ಕಾಲದ ಅನುಕ್ರಮವಾಗಿ ಹೊಂದಿಸಿ ಬರೆಯಿರಿ. ಅಥವಾ ಕಾಲಾನುಕ್ರಮವನ್ನು ಸೂಚಿಸುವಂತೆ ಕಂಸಿನಲ್ಲಿ ಸರಿಯಾದ ಅನುಕ್ರಮ ನಂಬರು ಬರೆಯಿರಿ.

೧. ಮೊದಲನೆಯ ಮಹಾಯುದ್ಧ. ( )
೨. ಶಿವಾಜಿಯ ಪಟ್ಟಾಭಿಷೇಕ. ( )
೩. ವಿಜಯನಗರ ಸಾಮ್ರಾಜ್ಯ ಸ್ಥಾಪನೆ. ( )
೪. ಬೌದ್ಧ ಮತದ ವಿಶೇಷ ಪ್ರಸಾರ. ( )

## ಪ್ರಮಾಣ ಒರೆಗಳು (Standardized Tests)

ಮೇಲೆ ವಿವರಿಸಿದ ವಸ್ತುವಾಚಕ ಒರೆಗಳ ಬಗೆಗೆ ಒಂದೊಂದು ದೊಡ್ಡ ಪಟ್ಟಿಯನ್ನು ಮಾಡಿ ಒಪ್ಪಿತವಾದ ನಿಯಮಗಳನ್ನು ಅನುಸರಿಸಿ ಪ್ರಯೋಗ ನಡೆಸುವರು ಮೊದಲು ಈ ಒರೆಗಳನ್ನು ಹುಡುಗರ ಅಥವಾ ವಿದ್ಯಾರ್ಥಿಗಳ ಒಂದು ಸಣ್ಣ ಗುಂಪಿನ ಮೇಲೆ ಪ್ರಯೋಗ ಮಾಡಿ ಅವುಗಳ ರಚನೆಯಲ್ಲಿ

ಕಂಡುಬರುವ ತಪ್ಪುಗಳನ್ನು ಸರಿಪಡಿಸಿಕೊಳ್ಳುವರು. ಒರೆಗಳ ಸಂಖ್ಯೆಯನ್ನು ಮತ್ತು ವೇಳೆಯ ಪರಿಮಿತಿಯನ್ನು ಗೊತ್ತುಪಡಿಸುವರು. ಒಂದೊಂದು ಪಟ್ಟಿಯಲ್ಲಿ ಇರುವ ಒರೆಗಳನ್ನು ಕೊಡುವ ಬಗ್ಗೆ ಮತ್ತು ಗುಣಗಳನ್ನು ಕೊಡುವ ಬಗ್ಗೆ ಸೂಚನೆಗಳನ್ನು ನಿಶ್ಚಯಿಸುವರು. ಹೀಗೆ ಶಾಲೆಯ ಒಂದೊಂದು ವಿಷಯದ ಬಗ್ಗೆ ಪರಿಶುದ್ಧಗೊಳಿಸಿ ತಯಾರಿಸಿದ ಒರೆಗಳನ್ನು ಸಾವಿರಾರು ಹುಡುಗರಿಗೆ ಕೊಟ್ಟು ವಿಶಿಷ್ಟ ವಯದ ಅಥವಾ ವರ್ಗದ ಹುಡುಗರ ಸಾಮಾನ್ಯ ಯೋಗ್ಯತೆಯನ್ನು ಸೂಚಿಸುವ ಪ್ರಮಾಣ ಗುಣಗಳನ್ನು (Norms) ತೆಗೆಯುವರು. ಹೀಗೆ ದೊಡ್ಡ ಪ್ರಮಾಣದಲ್ಲಿ ಸಿದ್ಧಗೊಳಿಸಿದ ಒರೆಗಳ ಪಟ್ಟಿಗೆ **ಪ್ರಮಾಣ ಒರೆಗಳು** (Standardized Tests) ಎಂದು ಅನ್ನುವರು. ಅಮೇರಿಕೆಯಲ್ಲಿ ಇಂಥ ಒರೆಗಳನ್ನು ಹೇರಳವಾಗಿ ರಚಿಸಿರುವರು. ಪ್ರಾಥಮಿಕ, ಮಾಧ್ಯಮಿಕ ಹಾಗು ವಿಶ್ವವಿದ್ಯಾಲಯದ ಪ್ರತಿಯೊಂದು ತರಗತಿಯ ವಿದ್ಯಾರ್ಥಿಗಳಿಗೆ ಒಪ್ಪುವ ಪ್ರಮಾಣ ಒರೆಗಳು ಅಲ್ಲಿಯ ಶಾಲೆ ಕಾಲೇಜಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿ ಇರುವವು. ನಮ್ಮ ದೇಶದಲ್ಲಿ ಇಂಥ ಹೊಸ ಮಾದರಿಯ ಒರೆಗಳನ್ನು ಸ್ಕಾಲರಶಿಪ್ ಪರೀಕ್ಷೆಯಲ್ಲಿ ಕೆಲ ಮಟ್ಟಿಗೆ ಉಪಯೋಗಿಸುತ್ತಾರೆ. ಕನ್ನಡದಲ್ಲಿ ಕೆಲವು ಪ್ರಮಾಣ ಒರೆಗಳನ್ನು ಡಾ|| ಚಿಕ್ಕರಮನಿ, ದಿ. ಪ್ರೊ. ಚಂದಾವರಕರ ಮತ್ತು ಡಾ|| ಜವಳಿ ಅವರು ಗಣಿತ ಸಾಯನ್ಸ ಮತ್ತು ಕನ್ನಡ ಭಾಷೆಯ ಬಗ್ಗೆ ರಚಿಸಿರುವರು. ಇಂಥ ಒರೆಗಳು ಹೆಚ್ಚಾಗಿ ಬಳಕೆಯಲ್ಲಿ ಬರುವದು ಅವಶ್ಯ. ಬೇರೆ ಬೇರೆ ಸಾಮರ್ಥ್ಯಗಳನ್ನು ಅಳೆಯಲಿಕ್ಕೆ ಬೇರೆ ಬೇರೆ ಒರೆಗಳನ್ನು ರಚಿಸಬೇಕಾಗುವದು. ಓದಿನಲ್ಲಿ ಶಬ್ದದ ಅರ್ಥ, ವಾಕ್ಯದ ಅರ್ಥ, ಉಚ್ಚಾರ, ವೇಗ, ಸರಿಯಾಗಿ ಓದುವಿಕೆ ಮುಂತಾದ ಬೇರೆ ಬೇರೆ ಸಾಮರ್ಥ್ಯಗಳು ಅಡಕವಾಗಿರುತ್ತವೆ. ಅವುಗಳನ್ನು ಬೇರೆ ಬೇರೆಯಾಗಿ ಅಳೆಯುವ ಬೇರೆ ಬೇರೆ ಒರೆಗಳು ಇರುತ್ತವೆ. ಡಾ|| ಜವಳಿ ಅವರ ಎಂ. ಈಡಿ. ಮತ್ತು ಪಿ ಎಚ್. ಡಿ ಪ್ರಬಂಧಗಳಲ್ಲಿ ಈ ಒರೆಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಮತ್ತು ಉದಾಹರಣೆಗಳನ್ನು ಕೊಡಲಾಗಿದೆ.

ಶಾಲೆಯ ವಿಷಯಗಳಾದ ಕನ್ನಡ, ಇತಿಹಾಸ, ಭೂಗೋಲ, ಸಾಮಾನ್ಯವಿಜ್ಞಾನ, ಪದಾರ್ಥವಿಜ್ಞಾನ, ನಾಗರಿಕವಿಜ್ಞಾನ, ಆರೋಗ್ಯವಿಜ್ಞಾನ

ಮುಂತಾದ ಅಭ್ಯಾಸದಲ್ಲಿ ಒಬ್ಬ ವಿದ್ಯಾರ್ಥಿಯ ಅಥವಾ ಒಂದು ವರ್ಗದ ಪ್ರಗತಿಯನ್ನು ಅಥವಾ ಕುಂದುಕೊರತೆಗಳನ್ನು ತಿಳಿದುಕೊಳ್ಳಲಿಕ್ಕೆ ಪ್ರಮಾಣ ಒರೆಗಳು ಒಳ್ಳೇ ಸಾಧನಗಳು. ಮಗುವಿನ ನಿಶ್ಚಿತ ಪ್ರಗತಿಯನ್ನು ಕಂಡುಕೊಂಡ ಮೇಲೆ ಮುಂದೆ ಅವನಿಗೆ ಯಾವ ರೀತಿಯಿಂದ ಕಲಿಸಬೇಕು ಎಂಬುದು ಶಿಕ್ಷಕನಿಗೆ ಹೊಳೆಯುವದು. ಮಗುವು ಯಾವ ತಪ್ಪುಗಳನ್ನು ಮಾಡುತ್ತಾನೆ ಮತ್ತು ಆ ತಪ್ಪುಗಳನ್ನು ಅವನು ಹೇಗೆ ಸುಧಾರಿಸಿಕೊಳ್ಳಬೇಕು ಎಂಬುದು ಗೊತ್ತಾಗುವದು. ಸಾಲೆಯ ಇನ್‌ಸ್ಪೆಕ್ಟರರು ತಾವು ತಪಾಸು ಮಾಡುವ ಸಾಲೆಯ ಅಥವಾ ವರ್ಗದ ಪ್ರಗತಿಯನ್ನು ನಿಶ್ಚಿತವಾಗಿ ಅಳೆಯಲಿಕ್ಕೆ ಪ್ರಮಾಣ ಒರೆಗಳನ್ನು ಉಪಯೋಗಿಸಬಹುದು. ಅಭ್ಯಾಸ ಪತ್ರಿಕೆಯ ಎಲ್ಲ ವಿಷಯಗಳನ್ನು ಕುರಿತು ಅಮೇರಿಕೆಯಲ್ಲಿ ಪ್ರಾಥಮಿಕ ಸಾಲೆಯ ಮೊದಲನೆಯ ವರ್ಗದಿಂದ ವಿಶ್ವವಿದ್ಯಾಲಯದ ಕೊನೆಯ ವರ್ಗಗಳ ವರೆಗೆ ಪ್ರಮಾಣ ಒರೆಗಳನ್ನು ಹೇರಳವಾಗಿ ಉಪಯೋಗಿಸುವದು ರೂಢಿಯಲ್ಲಿ ಇರುತ್ತದೆ. ಅಲ್ಲದೆ ವ್ಯಕ್ತಿತ್ವವನ್ನು ಅಳೆಯಲಿಕ್ಕೆ ಅಭಿರುಚಿ, ಒಲವು ಮುಂತಾದ ವಿಷಯಗಳಿಗೆ ಸಂಬಂಧಿಸಿದ ಬಗೆಬಗೆಯ ಒರೆಗಳನ್ನು ಅಮೇರಿಕೆಯಲ್ಲಿ ಬಹಳವಾಗಿ ಉಪಯೋಗಿಸುತ್ತಾರೆ.

ಪ್ರಮಾಣ ಒರೆಗಳಲ್ಲಿ ಗುಣಗಳು ವಿಶೇಷವಾಗಿದ್ದರೂ [illegible] ಇಲ್ಲದೇ ಇಲ್ಲ. ಪ್ರಮಾಣ ಒರೆಗಳಲ್ಲಿ ಸಾಮಾನ್ಯ ಮಟ್ಟವನ್ನು [illegible] ಪ್ರಮಾಣ ಗುಣಗಳನ್ನು ( Norms ) ಕೊಟ್ಟಿರುತ್ತಾರೆ. [illegible] ಸಹಾಯದಿಂದ ಒಬ್ಬ ವಿದ್ಯಾರ್ಥಿಯ ಅಥವಾ ವರ್ಗದ ಪ್ರಗತಿಯನ್ನು ಅಳೆಯಲು ಸುಲಭವಾಗುತ್ತದೆ. ಈ ಸ್ಕೇಲು ಆಧಾರ[illegible] ನಂಬಲು ತಕ್ಕದಾದದ್ದು ಇರುತ್ತದೆ. ಪ್ರಮಾಣ ಒರೆಗಳ ಉಪಯೋಗವು ಅನೇಕ ರೀತಿಯಿಂದ ಅನುಕೂಲವಾದದ್ದು ಇರುತ್ತದೆ. [illegible] ಮಗುವಿಗೆ ಕಲಿಸಿದ ಪ್ರತಿಯೊಂದು ವಿಷಯವನ್ನು ಅಳೆಯಲು [illegible] ಒರೆಗಳು ಸಹಾಯವಾಗುವದಿಲ್ಲ. ಆದ್ದರಿಂದ ತಾನು ಕಲಿಸಿದ [illegible] ವಿಷಯದ ಬಗ್ಗೆ ಶಿಕ್ಷಕನು ಪ್ರಮಾಣ ಒರೆಗಳ ಆಧಾರದ [illegible] ಒರೆಗಳನ್ನು ರಚಿಸಿ ಉಪಯೋಗಿಸುವದು ಒಳ್ಳೆಯದು.

## ಶಿಕ್ಷಕನು ಸ್ವಂತ ರಚಿಸುವ ವಸ್ತುವಾಚಕ ಒರೆಗಳು

ಪ್ರಮಾಣ ಒರೆಗಳು ಇಂಡಿಯಾದ ಯಾವ ಭಾಷೆಯಲ್ಲಿಯೂ ಸಾಕಷ್ಟು ರಚಿತವಾಗಿಲ್ಲ. ಆದ್ದರಿಂದ ಅವುಗಳ ಪ್ರಚಾರ ಮತ್ತು ಉಪಯೋಗ ಅಲ್ಲೊಂದು ಇಲ್ಲೊಂದು ಮಾತ್ರ ಕಾಣಬರುತ್ತದೆ. ಕರ್ನಾಟಕದಲ್ಲಿ ಪ್ರಮಾಣ ಒರೆಗಳನ್ನು ಬಳಕೆಯಲ್ಲಿ ತರುವ ಪ್ರಯತ್ನಗಳು ನಡೆಯುವದು ಅವಶ್ಯ. ಆ ದಿನಗಳು ಬರುವವರೆಗೆ ಮತ್ತು ಬಂದ ಮೇಲೆಯೂ ಪ್ರತಿಯೊಬ್ಬ ಶಿಕ್ಷಕನು ತಾನು ಕಲಿಸುವ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಹೊಸ ಮಾದರಿಯ ಒರೆಗಳನ್ನು ಸ್ವಂತ ರಚಿಸಿಕೊಂಡು ಉಪಯೋಗಿಸುವದು ಒಳ್ಳೆಯದು. ಶಿಕ್ಷಣ ತತ್ತ್ವಗಳನ್ನೂ ಮತ್ತು ಪ್ರಮಾಣ ಒರೆಗಳ ನಿಯಮಗಳನ್ನೂ ಮುಂದಿಟ್ಟುಕೊಂಡೇ ಶಿಕ್ಷಕನು ತನ್ನ ಸ್ವಂತ ಒರೆಗಳನ್ನು ರಚಿಸಬೇಕು. ವಿದ್ಯಾರ್ಥಿಗಳಿಗೆ ಯಾವ ವಿಷಯವನ್ನು ತಾನು ಕಲಿಸಿದ್ದಾನೆ ಮತ್ತು ಯಾವ ವಿಷಯದಲ್ಲಿಯ ಜ್ಞಾನವನ್ನು ಪರೀಕ್ಷಿಸಬೇಕೆನ್ನುತ್ತಾನೆ ಎಂಬುದರ ಸ್ಪಷ್ಟ ಕಲ್ಪನೆಯನ್ನು ಮಾಡಿಕೊಳ್ಳಬೇಕು. ಕೇವಲ ನೆನಪಿನ ಶಕ್ತಿಯನ್ನು ಪರೀಕ್ಷಿಸುವ ಒರೆಗಳನ್ನು ರಚಿಸಬಾರದು. ಆಧಾರ ಉಳ್ಳ ( Valid ) ಮತ್ತು ನಂಬಲು ಯೋಗ್ಯವಾದ (Reliable) ಒರೆಗಳನ್ನು ರಚಿಸಬೇಕು. ಅತಿ ಸುಲಭವಾದ ಅಥವಾ ಅತಿ ಕಠಿಣವಾದ ಒರೆಗಳು ಇರಕೂಡದು. ಮುಂದುವರಿದ ಹುಡುಗರು ಎಲ್ಲ ಒರೆಗಳನ್ನು ಬಿಡಿಸುವಂಥವು ಮತ್ತು ಹಿಂದುಳಿದ ಹುಡುಗರು ಏನನ್ನೂ ಬಿಡಿಸಲು ಬಾರದಂಥವು ಇರಕೂಡದು. ವರ್ಗದ ಸರಾಸರಿ ಮಟ್ಟವನ್ನು ಅಳೆದು ತಿಳಿದುಕೊಳ್ಳಲು ಅನುಕೂಲನಾಗುವಂಥ ಒರೆಗಳು ಇರಬೇಕು. ಇದಲ್ಲದೆ ಒಬ್ಬ ವಿದ್ಯಾರ್ಥಿಯ ಕುಂದುಕೊರತೆಗಳನ್ನು ಪೂರ್ಣ ತಿಳಿದುಕೊಳ್ಳಬೇಕಾದರೆ ಅವನ ಗೆಳೆಯರ, ಇತರ ವಿದ್ಯಾರ್ಥಿಗಳ ಮತ್ತು ಇತರ ಶಿಕ್ಷಕರ ಅಭಿಪ್ರಾಯಗಳನ್ನೂ ತಿಳಿದುಕೊಂಡು ಅವರು ಸೂಚಿಸಿದ ದೋಷಗಳನ್ನು ತಿದ್ದಲು ಪ್ರಯತ್ನಿಸಬೇಕು.

## ನಿಬಂಧ ಪರೀಕ್ಷೆ (Essay Examination)

ಸಾಲೆಯ ಅಭ್ಯಾಸಕ್ರಮಕ್ಕೆ !ಸಂಬಂಧಿಸಿದ ವಿಷಯಗಳನ್ನು ಕುರಿತು ಪ್ರಶ್ನೆಗಳನ್ನು ಕೇಳಿ ಅವುಗಳಿಗೆ ನಿಬಂಧ ರೂಪದಲ್ಲಿ ಉತ್ತರಗಳನ್ನು ತಕ್ಕೊ

ಳ್ಳುವ ಪದ್ಧತಿಯು ಬಹಳ ದಿವಸಗಳಿಂದಲೂ ರೂಢಿಯಲ್ಲಿ ಬಂದಿದೆ. ಆದರೆ ನಿಬಂಧ ಪರೀಕ್ಷೆಯು ಮಕ್ಕಳ ವಿಷಯ ಜ್ಞಾನವನ್ನು ಅಥವಾ ಪ್ರಗತಿಯನ್ನು ತಿಳಿದುಕೊಳ್ಳಲಿಕ್ಕೆ ಸರಿಯಾದ ಅಳತೆಗೋಲು ಅಲ್ಲವೆಂದು ಇತ್ತೀಚೆಗೆ ಕಂಡು ಬಂದಿದೆ. ಆದ್ದರಿಂದ ಮಗುವಿಗೆ ಯಾವ ಸಂಗತಿಗಳು ಗೊತ್ತಿವೆ ಎಂಬುದನ್ನು ಪೂರ್ಣವಾಗಿ ತಿಳಿದುಕೊಳ್ಳಲಿಕ್ಕೆ 'ನಿಬಂಧ ಪರೀಕ್ಷೆಗಳಷ್ಟೇ ಸಾಕಾಗಲಾರವು. ಅಂತೆಯೇ ನಿಬಂಧದ ಬದಲು ಹೊಸ ಮಾದರಿಯ ಒರೆಗಳನ್ನು ಉಪಯೋಗಿಸ ತೊಡಗಿರುವರು. ಒಂದು ವಿಷಯಕ್ಕೆ ಸಂಬಂಧಿಸಿದ ಸಂಗತಿಗಳ ಪರಿಚಯವನ್ನು ಮತ್ತು ಪ್ರಭುತ್ವವನ್ನು ಸರಿಯಾಗಿ ಅಳೆಯಲಿಕ್ಕೆ ಹೊಸ ಮಾದರಿಯ ಒರೆಗಳೇ ಹೆಚ್ಚು ನಿಶ್ಚಯಾತ್ಮಕವಾದವುಗಳು. ಆದರೆ ಮಗುವು ತಾನು ತಿಳಿದುಕೊಂಡ ಸಂಗತಿಗಳನ್ನು ಹೇಗೆ ಉಪಯೋಗಿಸಬಲ್ಲನು ಎಂಬ ದನ್ನು ನೋಡಲಿಕ್ಕೆ, ವಿಷಯದ ಸಾರಾಂಶವನ್ನು ತೆಗೆಯುವ ಸಾಮರ್ಥ್ಯವನ್ನು ನೋಡಲಿಕ್ಕೆ, ಸಂಗತಿಗಳನ್ನು ವ್ಯವಸ್ಥಿತ ರೀತಿಯಲ್ಲಿ ಹೊಂದಿಸುವ ಸಾಮರ್ಥ್ಯವನ್ನು ತಿಳಿದುಕೊಳ್ಳಲಿಕ್ಕೆ, ಅನೇಕ ಸಂಗತಿಗಳನ್ನು ಸಂಬಂಧಿಸಿ ಸಿದ್ಧಾಂತ ಹೊರಡಿಸಲಿಕ್ಕೆ ಮತ್ತು ತರ್ಕಸಾಮರ್ಥ್ಯವನ್ನು ಅಳೆಯಲಿಕ್ಕೆ ನಿಬಂಧ ಪರೀಕ್ಷೆಗಳು ಹೆಚ್ಚು ಉಪಯೋಗಬೀಳುವವು. ಒಂದು ನಿಶ್ಚಿತ ಉದ್ದೇಶದಿಂದ ನಿಬಂಧ ಪರೀಕ್ಷೆಗಳನ್ನು ಕೊಡಬೇಕು ವಿದ್ಯಾರ್ಥಿಯ ವಿಚಾರ ಶಕ್ತಿಯನ್ನು ಅಳೆಯುವ ಉದ್ದೇಶವಿದ್ದಾಗ ವ್ಯಾಕರಣದ ತಪ್ಪುಗಳನ್ನು ಎಣಿಸುವದು ಸಮಂಜಸವಾಗದು. ನಿಬಂಧ ಪರೀಕ್ಷೆಯು ಹೆಚ್ಚು ಆಧಾರವುಳ್ಳದ್ದು ಆಗಬೇಕಾದರೆ ಉತ್ತರ ಕಾಗದದ ಮೇಲೆ ವಿದ್ಯಾರ್ಥಿಯ ಹೆಸರು ಇರಬಾರದು. ಅದರ ಬದಲು ಯಾವುದಾದರೊಂದು ಸಂಕೇತವನ್ನು ಇಟ್ಟುಕೊಳ್ಳಬಹುದು. ಮತ್ತು ಒಂದು ಪ್ರಶ್ನೆಗೆ ಎಲ್ಲ ಹುಡುಗರು ಬರೆದ ಉತ್ತರಗಳನ್ನು ಒಂದೇ ಸರತಿಗೆ ಓದಿ ಪರೀಕ್ಷಿಸಬೇಕು.

ಒಟ್ಟಿನಲ್ಲಿ ನಿಬಂಧ ಪರೀಕ್ಷೆಯನ್ನು ಸಂಪೂರ್ಣ ಬಿಟ್ಟು ಕೊಡದೆ ಹೊಸ ಮಾದರಿಯ ಒರೆಗಳ ಜೊತೆಗೆ ಅದನ್ನು ಉಪಯೋಗಿಸಬೇಕು. ಆದಾಗ್ಯೂ ವಸ್ತುವಾಚಕ ಒರೆಗಳಿಂದ ಮತ್ತು ನಿಬಂಧ ಪರೀಕ್ಷೆಯಿಂದ ಮಗುವು ತನ್ನ ಅಭ್ಯಾಸದಲ್ಲಿ ತೋರಿಸುವ ಎಲ್ಲ ಮುನ್ನಡೆಯನ್ನು ಮತ್ತು ಎಲ್ಲ ಕೊರತೆಗಳನ್ನು

ಕಂಡು ಹಿಡಿಯುವದು ಸಾಧ್ಯವಾಗುವದಿಲ್ಲ. ಆದ್ದರಿಂದ ಮಗುವಿನ ವ್ಯಕ್ತಿತ್ವದ ಎಲ್ಲ ಸಂಗತಿಗಳನ್ನು ಅಳೆಯುವದು ಅವಶ್ಯವೆನಿಸುತ್ತದೆ. ಈ ವಿಷಯದ ವಿವೇಚನೆಯನ್ನು ಮುಂದಿನ ಅಧ್ಯಾಯದಲ್ಲಿ ಕೊಡಲಾಗುವದು.

## ಶಿಕ್ಷಣದಲ್ಲಿ ಉಪಯೋಗ

ಬುದ್ಧಿ ಒರೆಗಳ ಪ್ರಯೋಗವನ್ನು ನಾನಾ ಬಗೆಯಲ್ಲಿ ಮಾಡಿ ಪಶ್ಚಿಮದ ಮನೋವಿಜ್ಞಾನಿಗಳು ಕೆಲವು ಸಿದ್ಧಾಂತಗಳಿಗೆ ಬಂದು ಮುಟ್ಟಿರುವರು. ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಕೊಟ್ಟಿದೆ. (೧) ಬುದ್ಧಿಶಕ್ತಿಯ ಪ್ರಮಾಣವು ಬೇರೆ ಬೇರೆ ವ್ಯಕ್ತಿಗಳಲ್ಲಿ ಹೆಚ್ಚು ಕಡಿಮೆ ಇರುತ್ತದೆಂಬುದು ಮೊದಲನೇ ಸಿದ್ಧಾಂತ. ಇದು ಅನುಭವದ ಮಾತೂ ಆಗಿರುತ್ತದೆ. ಆದ್ದರಿಂದ ಆ ಆ ಮಗುವಿನ ಬುದ್ಧಿಶಕ್ತಿಗೆ ಮೀರದಷ್ಟು ಅಭ್ಯಾಸವನ್ನು ಮತ್ತು ಅವರವರ ಬುದ್ಧಿಶಕ್ತಿಗೆ ತಕ್ಕಂತೆ ಕಲಿಸುವ ಪದ್ಧತಿಯನ್ನು ಅಳವಡಿಸಿಕೊಳ್ಳುವದು ಅವಶ್ಯವಾಗುತ್ತದೆ. (೨) ಬುದ್ಧಿಯ ಪ್ರಮಾಣವನ್ನು ಹೆಚ್ಚು ಕಡಿಮೆ ಮಾಡಲು ಬರುವಂತಿಲ್ಲ ಎಂಬುದು ಎರಡನೇ ಸಿದ್ಧಾಂತ. ಪ್ರತಿಯೊಬ್ಬನ ಬುದ್ಧಿ ಮಟ್ಟವು ಹುಟ್ಟಿದಾಗಿನಿಂದ ಅವನ ಜೀವಮಾನದ ವರೆಗೆ ಅಷ್ಟೇ ಉಳಿಯುತ್ತದೆ. ಬುದ್ಧಿ ಎಂಬುದು ಸಾಲೆಯಲ್ಲಿ ಕಲಿಸತಕ್ಕ ವಿಷಯವಲ್ಲ. "ಓದು ಒಕ್ಕಾಲು ಬುದ್ಧಿ ಮುಕ್ಕಾಲು" ಎಂಬ ನಾಣ್ಣುಡಿಯು ಇದನ್ನೇ ಸಾರುತ್ತದೆ. (೩) ಬುದ್ಧಿಯ ಬೆಳವಣಿಗೆಯು ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ಪರಿಸ್ಥಿತಿಯು ಅನುಕೂಲವಿದ್ದಲ್ಲಿ ಬುದ್ಧಿಯು ಪ್ರಸರಣವನ್ನು ಮತ್ತು ಪ್ರತಿಕೂಲವಿದ್ದಲ್ಲಿ ಆಕುಂಚನವನ್ನು ಹೊಂದುವದು. ಅನುಭವವು ಹೆಚ್ಚಿದ ಹಾಗೆ ಬುದ್ಧಿಯು ಹೆಚ್ಚು ಸ್ಫುಟವಾಗುತ್ತದೆ. (೪) ಹುಟ್ಟಿದಾಗಿನಿಂದ ಹದಿನಾರು ವಯಸ್ಸಿನ ವರೆಗೆ ಬುದ್ಧಿಯು ಕ್ರಮೇಣ ವಿಕಾಸಹೊಂದುತ್ತದೆ. ಬುದ್ಧಿಮಟ್ಟವು ( I. Q. ) ಅಷ್ಟೇ ಇದ್ದರೂ ವಿಷಯದಲ್ಲಿ ಪಾಂಡಿತ್ಯ ಅಥವಾ ಕಲೆಗಳಲ್ಲಿ ಕುಶಲತೆ ಬೆಳೆಯುವದಿಲ್ಲವೆಂದು ಅರ್ಥವಲ್ಲ. (೫) ಬುದ್ಧಿಯ ವಿಷಯದಲ್ಲಿ ಸ್ತ್ರೀ-ಪುರುಷರೆಂಬ ಭೇದವಿಲ್ಲ. (೬) ಬುದ್ಧಿಯ ವಿಷಯದಲ್ಲಿ ಮತ, ಸಮಾಜ, ಜನಾಂಗ ಅಥವಾ ದೇಶ ಎಂಬ ಭೇದವಿಲ್ಲ. ಅದು ವೈಯಕ್ತಿಕ ವಿಷಯ.

ಮೇಲೆ ಹೇಳಿದ ಸಿದ್ಧಾಂತಗಳ ದೃಷ್ಟಿಯಿಂದ ಬುದ್ಧಿ ಒರೆಗಳ ಉಪಯೋಗವನ್ನು ಸಾಲೆಯಲ್ಲಿ ಹೇಗೆ ಮಾಡಿಕೊಳ್ಳಬಹುದು ಎಂಬುದನ್ನು ಇಲ್ಲಿ ವಿವರಿಸಲಾಗಿದೆ.

## ಬುದ್ಧಿ ಸಾಮರ್ಥ್ಯದ ಪರಮಾವಧಿ

ಮಗುವಿನಲ್ಲಿರುವ ಶಕ್ತಿ ಸಾಮರ್ಥ್ಯಗಳ ಪರಿಮಿತಿಯನ್ನು ಅಳೆಯಲು ಬುದ್ಧಿ ಒರೆಗಳು ಸಾಹಾಯಕವಾಗುತ್ತವೆ. ತನ್ನಲ್ಲಿದ್ದ ಎಲ್ಲ ಸಾಮರ್ಥ್ಯಗಳ ಪರಮಾವಧಿ ಉಪಯೋಗವನ್ನು ಮಾಡಲು ಮಗುವಿಗೆ ಕಲಿಸುವದು ಶಿಕ್ಷಣದ ಒಂದು ಧ್ಯೇಯ. ಸಾಲೆಯ ಅಭ್ಯಾಸದಲ್ಲಿ ಮತ್ತು ಇತರ ಕಾರ್ಯಕ್ರಮದಲ್ಲಿ ಎಷ್ಟರ ಮಟ್ಟಿಗೆ ಮಗುವು ಯಶಸ್ವಿಯಾಗಬಲ್ಲನು ಎಂಬುದನ್ನು ಅಳೆಯಲಿಕ್ಕೆ ಬುದ್ಧಿ ಒರೆಗಳನ್ನು ಉಪಯೋಗಿಸಬೇಕು. ಒಟ್ಟಿನಲ್ಲಿ ಬುದ್ಧಿವಯವು ಮಗುವಿನ ಸಾಮರ್ಥ್ಯವನ್ನು ಮತ್ತು ಅಸಮರ್ಥತೆಯನ್ನು ಸೂಚಿಸುತ್ತದೆ.

## ವರ್ಗ ರಚನೆ

ಸಮಾನ ಬುದ್ಧಿಸಾಮರ್ಥ್ಯವುಳ್ಳ ವಿದ್ಯಾರ್ಥಿಗಳನ್ನು ಒಂದೆಡೆ ಸೇರಿಸಿ ವರ್ಗಗಳನ್ನು ಮಾಡಲಿಕ್ಕೆ ಬುದ್ಧಿ ಒರೆಗಳ ಉಪಯೋಗವು ವಿಶೇಷವಾಗಿ ಆಗುತ್ತದೆ. ಆದರೆ ಕೇವಲ ಆಯ್. ಕ್ಯು. ( ಬುದ್ಧಿಮಟ್ಟ ) ಹಿಡಿದು ವರ್ಗ ಮಾಡುವದರಿಂದ ಪರಿಣಾಮವು ಒಳ್ಳೆಯದಕ್ಕಿಂತ ಕೆಡಕೇ ಹೆಚ್ಚಾಗುವದು. ಏಕಂದರೆ ಅದು ಮಕ್ಕಳಲ್ಲಿ ಉಚ್ಚ-ನೀಚ ಭಾವನೆಗಳನ್ನು ಉಂಟು ಮಾಡಲು ಎಡೆಗೊಡುವದು. ಆದ್ದರಿಂದ ಹಾಗೆ ಮಾಡುವದಕ್ಕಿಂತ ಒಂದೇ ವರ್ಗದಲ್ಲಿ ವಿಷಯದ ದೃಷ್ಟಿಯಿಂದ ಮುಂದುವರೆದವರು ಮತ್ತು ಹಿಂದೆ ಉಳಿದವರು ಎಂದು ಮೂರು ನಾಲ್ಕು ಸಣ್ಣ ಸಣ್ಣ ಗುಂಪುಗಳನ್ನು ಮಾಡಿ ಕಲಿಸಬೇಕು. ಗಣಿತ, ಭಾಷೆ, ಕೈಕೆಲಸ ಮುಂತಾಗಿ ಒಂದೇ ವಿಷಯವನ್ನು ತಕ್ಕೊಂಡು ಅವರಲ್ಲಿ ಮುಂದುವರೆದ, ನಡುವಿನ ಮತ್ತು ಹಿಂದುಳಿದ ಹೀಗೆಂದು, ಅ, ಬ, ಕ ಎಂಬ ಮೂರು ಗುಂಪುಗಳನ್ನು ಮಾಡಬಹುದು. ಅದೇ ಮಗುವು ಗಣಿತದಲ್ಲಿ 'ಕ' ಗುಂಪಿನಲ್ಲಿ, ಕೈಕೆಲಸವಲ್ಲಿ 'ಅ' ಗುಂಪಿನಲ್ಲಿ ಮತ್ತು ಭಾಷಾ

ವಿಷಯದಲ್ಲಿ 'ಬ' ಗುಂಪಿನಲ್ಲಿ ಸೇರಬಹುದು. ಈ ಬಗೆಯ ಯೋಜನೆಯನ್ನು ಇಂಗ್ಲಂಡ ಮತ್ತು ಅಮೇರಿಕೆಯ ಶಾಲೆಗಳಲ್ಲಿ ಮಾಡುತ್ತಾರೆ. ಒಂದೇ ವರ್ಗದಲ್ಲಿ ಬೇರೆ ಬೇರೆ ಬುದ್ಧಿಮಟ್ಟದ ಹುಡುಗರು ಅಥವಾ ಹುಡುಗರ ಗುಂಪುಗಳು ಇರುತ್ತವೆ ಜಾಣನಾದ ಶಿಕ್ಷಕನು ಇವನ್ನು ತಿಳಿದುಕೊಂಡು ವಿದ್ಯಾರ್ಥಿಗಳ ಸಾಮರ್ಥ್ಯ ಮತ್ತು ಬೇಡಿಕೆಗಳಿಗೆ ಅನುಗುಣವಾಗುವಂತೆ ಕಲಿಸುವ ಪದ್ಧತಿಗಳನ್ನು, ಗೃಹಪಾಠಗಳನ್ನು, ಕೆಲಸದ ವೇಗ ಮತ್ತು ಪರಿಮಿತಿಯನ್ನು ಹೊಂದಿಸಿಕೊಳ್ಳಬೇಕು. ಬೇರೆ ಬೇರೆ ಗುಂಪುಗಳನ್ನು ಮಾಡುವದು ಕೇವಲ ಉಪಚಾರದ ಮಾತಾಗದೆ ವಿದ್ಯಾರ್ಥಿಗಳ ಪ್ರಗತಿಯನ್ನು ನೋಡಿ ಗುಂಪುಗಳನ್ನು ಮೇಲಿಂದ ಮೇಲೆ ಬದಲಾಯಿಸಬೇಕು. ಒಂದೇ ವರ್ಗದಲ್ಲಿ "ವಿಶೇಷ" ಗುಂಪುಗಳನ್ನು ಮಾಡುವ ತತ್ವವನ್ನು ಮನೋವಿಜ್ಞಾನಿಗಳು ಒಪ್ಪುವದಿಲ್ಲ.

## ವೈಯಕ್ತಿಕ ಪದ್ಧತಿ

ಮಕ್ಕಳಿಗೆ ವಿಷಯವನ್ನು ಕಲಿಸುವಾಗ ವೈಯಕ್ತಿಕ ಪದ್ಧತಿಯನ್ನು, ಅಥವಾ ವರ್ಗ ಪದ್ಧತಿಯನ್ನು ಅಥವಾ ಮಿಶ್ರಪದ್ಧತಿಯನ್ನು ಉಪಯೋಗಿಸಬಹುದು. ಬುದ್ಧಿ ಒರೆಗಳು ಮತ್ತು ಹೊಸ ಮಾದರಿಯ ಒರೆಗಳು ಹೆಚ್ಚು ಪ್ರಚಾರದಲ್ಲಿ ಬಂದಂದಿನಿಂದ ವೈಯಕ್ತಿಕ ಪದ್ಧತಿಗೆ ಹೆಚ್ಚು ಮಹತ್ವ ಬಂದಿರುತ್ತದೆ. ಒಂದೇ ವರ್ಗದ ಬೇರೆ ಬೇರೆ ಮಕ್ಕಳಲ್ಲಿ ಕಂಡುಬರುವ ಬುದ್ಧಿಶಕ್ತಿಯ ತಾರತಮ್ಯವನ್ನು ಲಕ್ಷಿಸದೆ ಕಲಿಸುವ ವರ್ಗಪದ್ಧತಿಯು ಪರಿಣಾಮಕಾರಕವಾಗುವದಿಲ್ಲ. 'ಒಬ್ಬನಂತೆ ಮತ್ತೊಬ್ಬನು ಇರುವದಿಲ್ಲ' ಎಂಬ ತತ್ವದ ಆಧಾರದ ಮೇಲೆಯೇ ಮಾಂಟೆಸರಿ ಪದ್ಧತಿ, ಕಿಂಡರ ಗಾರ್ಟನ್ ಪದ್ಧತಿ, ಡಾಲ್ಟನ್ ಪದ್ಧತಿ, ಮೊದಲಾದವು ರಚಿತವಾಗಿರುವವು. ಆದರೂ ವರ್ಗ ಪದ್ಧತಿಯನ್ನು ಪೂರ್ಣ ಬಿಟ್ಟು ಬಿಡುವದೂ ತಪ್ಪು. ಒಟ್ಟಿನಲ್ಲಿ ಸಣ್ಣ ಸಣ್ಣ ಗುಂಪುಗಳನ್ನು ಮಾಡಿ ಕಲಿಸುವದು ಲಾಭದಾಯಕವೆಂದು ಮೇಲೆ ವಿವರಿಸಿದೆ ಆರ್ಥಿಕ ದೃಷ್ಟಿಯಿಂದ ನೋಡಿದರೂ ವೈಯಕ್ತಿಕ ಪದ್ಧತಿಯು ಬಳಕೆಯಲ್ಲಿ ಬರುವದು ಅಸಂಭವದ ಮಾತು ಒಬ್ಬ ಮಗುವಿಗೆ ಒಬ್ಬ ಶಿಕ್ಷಕನಂತೆ ಕಲಿಸುವದು ಅಸಾಧ್ಯ. ಮನುಷ್ಯ ಸಂಘ ಜೀವಿ. ಆದರಂತೆ ಮಗುವೂ ಸಂಘ ಜೀವಿ. ಸಂಘ ಜೀವನದಲ್ಲಿ ಕಂಡುಬರುವ ಅನುಕರಣ, ಸಹಾನು

ಭೂತಿ, ಸೂಚನೆ, ಸಹಕಾರ, ಸ್ಪರ್ಧೆ, ಮುಂದಾಳುತನ ಮೊದಲಾದವುಗಳ ವ್ಯವಹಾರವು ವರ್ಗಪದ್ಧತಿಯಲ್ಲಿ ಕಂಡುಬರುತ್ತದೆ. ಮಕ್ಕಳಲ್ಲಿರುವ ಸಂಘ ಪ್ರೇರಣೆಯನ್ನು ಸಾಬೆಯ ಮತ್ತು ಜನಸಮಾಜನ ಕಲ್ಯಾಣಕ್ಕಾಗಿ ಹೇಗೆ ಉಪಯೋಗಿಸಬಹುದೆಂಬುದನ್ನು ಸಂಘ ಮನೋವಿಜ್ಞಾನದ ಅಭ್ಯಾಸದಿಂದ ಗೊತ್ತಾಗುತ್ತದೆ

## ಉದ್ಯೋಗದ ಒಲವು

ಮಕ್ಕಳಲ್ಲಿರುವ ಉದ್ಯೋಗದ ಒಲವು ಮತ್ತು ಸಾಮರ್ಥ್ಯವನ್ನು ಅಳೆಯಲಿಕ್ಕೆ ಕೇವಲ ಬುದ್ಧಿ ಒರೆಗಳಿಂದ ಆಗದು. ಏಕಂದರೆ ಅವು ಬುದ್ಧಿಯನ್ನಷ್ಟೇ ಅವಲಂಬಿಸಿರುವದಿಲ್ಲ. ಆರೋಗ್ಯ, ಶರೀರ ಸಾಮರ್ಥ್ಯ, ಸಾಮಾಜಿಕ ವರ್ತನ, ಸತತ ಪ್ರಯತ್ನ, ಅಭ್ಯಾಸ ಅಥವಾ ರೂಢಿ, ಅಭಿರುಚಿ, ಮನೋವೃತ್ತಿ ಮುಂತಾದ ವಿಶೇಷ ಗುಣಗಳು ಉದ್ಯೋಗದ ವೃತ್ತಿಗೆ ಸಂಬಂಧಪಟ್ಟಿರುತ್ತವೆ. ಇವುಗಳನ್ನು ಅಳೆಯಲಿಕ್ಕೆ ಒಲವಿನ ಒರೆಗಳು ( Aptitude Tests ) ರಚಿತವಾಗಿರುತ್ತವೆ. ಹಸ್ತ ಕೌಶಲ್ಯ, ಲಲಿತ ಕಲೆ, ಕಲಿಸುವ ಕಲೆ, ವೈದ್ಯಕೀ ವೃತ್ತಿ, ಮುಂತಾದ ಕಲಾಕುಶಲತೆಗಳಲ್ಲಿಯ ಒಲವುಗಳನ್ನು ಪರೀಕ್ಷಿಸಲಿಕ್ಕೆ ಹೊಸಮಾದರಿಯ ವೃತ್ತಿ ಒರೆಗಳನ್ನು ರಚಿಸಿದ್ದಾರೆ. ಅವುಗಳನ್ನು ನಮ್ಮ ಸಾಲೆಗಳಲ್ಲಿ ಉಪಯೋಗಿಸಿ ಮಕ್ಕಳಿಗೆ ಉದ್ಯೋಗದ ಹಾದಿ ತೋರಿಸುವದು ಅವಶ್ಯ. ಇಂಡಿಯಾದಲ್ಲಿ ಉದ್ಯೋಗದ ಬಗ್ಗೆ ಮತ್ತು ಶಾರೀರಿಕ ಶ್ರಮದ ಬಗ್ಗೆ ಜನರಲ್ಲಿ ಉಚ್ಚ-ನೀಚದ ತಪ್ಪುಕಲ್ಪನೆಗಳು ಮನೆಮಾಡಿಕೊಂಡಿವೆ. ಬಹಳ ದಿವಸಗಳಿಂದ ಆನುವಂಶಿಕವಾಗಿ ನಡೆದುಕೊಂಡು ಬಂದಿರುವ ಮನೆತನದ ಉದ್ಯೋಗವೂ ಇದಕ್ಕೆ ಕಾರಣವಾಗಿದೆ. ಇಂಥ ಮನೆತನದಲ್ಲಿ ಹುಟ್ಟಿದವನು ಇಂಥ ಉದ್ಯೋಗವನ್ನೇ ಮಾಡಬೇಕೆಂಬ ಹಳೆಯ ಮೂಢವಿಚಾರಕ್ಕೆ ವಿವೇಕದ ಆಧಾರವಿಲ್ಲ. ನಮ್ಮ ಹೊಸ ಘಟನೆಯಲ್ಲಂತೂ ಉದ್ಯೋಗ ಸ್ವಾತಂತ್ರ್ಯವೆಂಬುದು ಮೂಲಭೂತ ಹಕ್ಕುಗಳಲ್ಲಿ ( Fundamental Rights ) ಮುಖ್ಯವಾದುದೆಂದು ಸಾರಲ್ಪಟ್ಟಿದೆ. ಇಂದಿನ ಮಕ್ಕಳು ನಾಳಿನ ನಾಗರಿಕರಾದುದರಿಂದ ಮತ್ತು ಶಿಕ್ಷಣವು ಜೀವನದ ಪೂರ್ವ ತರಬೇತಿಯಾದುದರಿಂದ ಉದ್ಯೋಗದಲ್ಲಿ ಅಭಿರುಚಿ, ಗೌರವ ಮತ್ತು

ಪ್ರವೀಣತೆಯನ್ನು ಬೆಳೆಯಿಸುವ ಅನುಕೂಲತೆಯನ್ನು ಸಾಲೆ ಕಾಲೇಜು ಗಳಲ್ಲಿ ಇಟ್ಟುಕೊಳ್ಳುವದು ರಾಷ್ಟ್ರದ ಹಿತದ ದೃಷ್ಟಿಯಿಂದ ಒಳ್ಳೆಯದು. ಆದರೆ ಪ್ರಾಥಮಿಕ ಸಾಲೆಯ ಎಳೆಯ ಮಕ್ಕಳಿಗೆ ವಿಶೇಷವಾದ ವೃತ್ತಿ-ಶಿಕ್ಷಣವನ್ನು ಕೊಡುವ ಯೋಜನೆಯು ಜಗತ್ತಿನ ಯಾವ ದೇಶದಲ್ಲಿಯೂ ಇರುವದಿಲ್ಲ. ಬಾಲಕರಲ್ಲಿ ತೋರುವ ಉದ್ಯೋಗದ ಒಲವು, ಅಭಿರುಚಿ ಅಥವಾ ಅಭ್ಯಾಸವು ಅವರು ದೊಡ್ಡವರಾದ ಮೇಲೆ ಸ್ಥಿರವಾಗಿ ಉಳಿಯುವದಿಲ್ಲ. ಉದ್ಯೋಗ ವ್ಯವಸಾಯಗಳಲ್ಲಿ, ಕಲಾ ಕುಶಲತೆಗಳಲ್ಲಿ ಪ್ರವೀಣತೆಯನ್ನು ಪಡೆಯ ಬೇಕಾದರೆ ಶರೀರದ ಅವಯವಗಳ ಬೆಳವಣಿಗೆಯು ಮತ್ತು ಮನಸ್ಸಿನ ಬೆಳವಣಿಗೆಯು ಒಂದು ಎತ್ತರದ ಮಟ್ಟಕ್ಕೆ ಬರಬೇಕಾಗುತ್ತದೆ. ಚಿಕ್ಕ ಮಕ್ಕ ಳಲ್ಲಿ ಕೂಡ ರಚನಾ ಪ್ರವೃತ್ತಿ ಅಥವಾ ಸಂಪಾದನೆ ಪ್ರೇರಣೆಯು ಇರುವದು ನಿಜ. ಅದಕ್ಕಾಗಿ ಅವರಿಗೆ ಪ್ರಾಥಮಿಕ ಸಾಲೆಗಳಲ್ಲಿ ಉದ್ದೇಶಯುತ ಚಟುವಟಿ ಕೆಗಳನ್ನು ಕೊಡಬೇಕು. ಆದರೆ ಪ್ರಾಥಮಿಕ ಸಾಲೆಯಲ್ಲಿ ಸಾಮಾನ್ಯ ಶಿಕ್ಷಣಕ್ಕೆ ಸಂಪೂರ್ಣ ಪ್ರಾಧಾನ್ಯವನ್ನು ಇಟ್ಟು, ಹಾಯಸ್ಕೂಲಿನಲ್ಲಿ ಮಕ್ಕಳು ಐಚ್ಛಿಕವಾಗಿ ಆರಿಸಿಕೊಂಡ ಮೂರು ನಾಲ್ಕು ಉದ್ಯೋಗಗಳ ಪರಿಚಯವನ್ನು ಮಾಡಿಕೊಡುವದು ಒಳ್ಳೆಯದು. ರಾಷ್ಟ್ರದ ಉನ್ನತಿಗೂ ಉದ್ಯೋಗ ಸ್ವಾತಂತ್ರ್ಯವು ಅವಶ್ಯ. ವಂಶಪರಂಪರೆಯ ಉದ್ಯೋಗವನ್ನು ಎಳೆಯ ಮಕ್ಕಳ ಮೇಲೆ ಹೇರಿದರೆ ರಾಷ್ಟ್ರದ ಮುಗ್ಗಟ್ಟು ಮತ್ತು ಆರ್ಥಿಕ ಅಸಮಾನತೆ ಬೆಳೆಯುವವು. ಯಾವ ದೇಶವೇ ಇರಲಿ ಮನೋವಿಜ್ಞಾನದ ತತ್ವಗಳಿಗೆ ಮತ್ತು ರಾಷ್ಟ್ರದ ಪ್ರಗತಿಗೆ ಅನುಗುಣವಾದ ಶಿಕ್ಷಣ ಯೋಜನೆಯನ್ನು ಕೈಕೊಳ್ಳುವದು ವಿಹಿತವಾದುದು.

## ಸ್ಪೆಶಲ್ ಸ್ಕೂಲು

ಕೆಲವು ಮಕ್ಕಳಿಗೆ ಸ್ಪೆಶಲ್ ಸ್ಕೂಲುಗಳನ್ನು ಅಥವಾ ವಿಶಿಷ್ಟ ಸಾಲೆ ಗಳನ್ನು ಸ್ಥಾಪಿಸುವದು ಅವಶ್ಯವೆಂಬುದು ಬುದ್ಧಿ ಒರೆಗಳ ಪ್ರಯೋಗದಿಂದ ಗೊತ್ತಾಗುತ್ತದೆ. ಅಂಗಹೀನರಿಗೂ ಬುದ್ಧಿಹೀನರಿಗೂ ಅವರವರ ಸಾಮರ್ಥ್ಯಕ್ಕೆ ಸರಿಯಾಗುವಂತೆ ಸಾಮಾನ್ಯ ಶಿಕ್ಷಣವನ್ನು ಮತ್ತು ಉದ್ಯೋ ಗದ ಶಿಕ್ಷಣವನ್ನು ಒದಗಿಸುವದು ರಾಷ್ಟ್ರದ ಮತ್ತು ಸುಸಂಸ್ಕೃತ ಸಮಾಜದ

ಕರ್ತ್ರವ್ಯ. ವಿಶೇಷ ಕುಂದುಕೊರತೆಯುಳ್ಳ ಮತ್ತು ಅನಾಥರಾದ ಮಕ್ಕಳ ಬಗ್ಗೆ ವಿಶಿಷ್ಟ ಸಂಸ್ಥೆಗಳನ್ನು ಏರ್ಪಡಿಸಿ ಅವರಿಗೆ ಯೋಗ್ಯವಾದ ಶಿಕ್ಷಣದ ವ್ಯವಸ್ಥೆಯನ್ನು ಮಾಡುವದು ಅವಶ್ಯ.

ಮಗುವಿಗೆ ಮಾರ್ಗದರ್ಶನ ಮಾಡುವದು ಶಿಕ್ಷಣದ ಮುಖ್ಯ ಧ್ಯೇಯ. ಪ್ರತಿಯೊಬ್ಬ ವಿದ್ಯಾರ್ಥಿಯ ವ್ಯಕ್ತಿತ್ವದ ಬಗ್ಗೆ ಶಿಕ್ಷಕನು ಮತ್ತು ಮಾರ್ಗದರ್ಶಕನು (Counsellor) ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳುವದು ಅವಶ್ಯ ಅಂದರೇನೇ ಅವನು ಮಗುವಿಗೆ ನಿಜವಾದ ಹಾದಿಯನ್ನು ತೋರಿಸಬಲ್ಲನು. ಪ್ರತಿಯೊಬ್ಬ ವಿದ್ಯಾರ್ಥಿಯ ಬಗ್ಗೆ ಎಲ್ಲ ಸಂಗತಿಗಳನ್ನು ಸಂಗ್ರಹಿಸಿ ಹೇಳುವ ಕಾರ್ಡ್ (Cumulative Card) ಅಥವಾ ಪ್ರಗತಿ ಪುಸ್ತಕ (Progress Book) ವನ್ನು ಬರೆದಿಡುವ ಪರಿಪಾಠವನ್ನು ಪ್ರತಿಯೊಂದು ಸಾಲೆಯಲ್ಲಿ ಜಾರಿಯಲ್ಲಿ ತರುವದು ಅವಶ್ಯ. ಒಬ್ಬ ಮಗುವಿನ ಪೂರ್ಣ ವ್ಯಕ್ತಿತ್ವದ ಕಲ್ಪನೆ ಬರಬೇಕಾದರೆ ಅವನಿಗೆ ಬುದ್ಧಿ ಒರೆಗಳನ್ನು, ಒಲವಿನ ಒರೆಗಳನ್ನು, ಪ್ರಗತಿ ಒರೆಗಳನ್ನು ಮತ್ತು ವ್ಯಕ್ತಿತ್ವದ ಒರೆಗಳನ್ನು ಕೊಟ್ಟು ಅವನ ಎಲ್ಲ ವಿಶಿಷ್ಟ ಗುಣಗಳನ್ನು ತಿಳಿದುಕೊಂಡು ಅವನ ಪ್ರಗತಿ ಪುಸ್ತಕದಲ್ಲಿ ಕಾಣಿಸಬೇಕು. ಅಲ್ಲದೆ ಅವನ ಆರೋಗ್ಯ, ಮನೆತನದ ಸಾಮಾಜಿಕ ಮತ್ತು ಆರ್ಥಿಕ ಪರಿಸ್ಥಿತಿ, ಅನುಕೂಲ ಅಥವಾ ಪ್ರತಿಕೂಲ ಆವರಣ, ಸತತ ಪ್ರಯತ್ನ, ಗೆಳೆಯರ ವರ್ಚಸ್ಸು, ಅಭಿರುಚಿ, ಮನೋಬಲ, ಮನೋಭಾವ, ಮನಃಸಂಯಮ, ಜನರೊಡನೆ ಕೂಡಿಕೊಂಡು ಕೆಲಸ ಮಾಡುವ ಸಾಮರ್ಥ್ಯ, ಗುರು ಹಿರಿಯರ ಅಭಿಪ್ರಾಯ ಮುಂತಾದ ಸಂಗತಿಗಳನ್ನೂ ಅರಿತುಕೊಳ್ಳಬೇಕು. ಮಗುವಿನ ಬಗ್ಗೆ ಹೆಚ್ಚು ವಿಷಯಗಳು ಗೊತ್ತಿದ್ದ ಹಾಗೆ ಶಿಕ್ಷಕನು ಅವನಿಗೆ ಹೆಚ್ಚು ಸರಿಯಾದ ಮಾರ್ಗದರ್ಶನವನ್ನು (Guidance) ಮಾಡಬಲ್ಲನು. ಮಗುವಿನ ಮನಸ್ಸಿನ ಆರೋಗ್ಯ ಮತ್ತು ವ್ಯಕ್ತಿತ್ವದ ಬೆಳವಣಿಗೆಯನ್ನು ಕುರಿತು ಮುಂದಿನ ಅಧ್ಯಾಯದಲ್ಲಿ ವಿವೇಚಿಸಲಾಗುವದು.

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಬುದ್ಧಿಯ ಸ್ವರೂಪದ ಬಗೆಗೆ ಕೆಳಗೆ ಕೊಟ್ಟ ವ್ಯಾಖ್ಯೆಗಳನ್ನು ವಿಮರ್ಶಿಸಿರಿ:—(i) "ಹೊಸ ಬೇಡಿಕೆಗಳಿಗೆ ಮತ್ತು ಸನ್ನಿವೇಶಗಳಿಗೆ, ತನ್ನ ವಿಚಾರಗಳನ್ನು ಹೊಂದಿಸುವ ಸಾಮರ್ಥ್ಯ"—ಸ್ಟರ್ನ್
(ii) "ಸೂಕ್ಷ್ಮ ವಿಷಯಗಳನ್ನು ವಿಚಾರಿಸುವ ಸಾಮರ್ಥ್ಯ"—ಟರ್ಮನ್

(iii) "ಚನ್ನಾಗಿ ವಿಚಾರಿಸುವದು, ಚನ್ನಾಗಿ ತಿಳಿದುಕೊಳ್ಳುವದು ಮತ್ತು ಚೆನ್ನಾಗಿ ನಿರ್ಣಯಿಸುವದು" — ಬಿನೇ

೨ ಆವರಣದ ಮತ್ತು ಆನುವಂಶೀಯತೆಯ ಪರಿಣಾಮಗಳ ದೃಷ್ಟಿಯಿಂದ ಕೆಳಗೆ ಕೊಟ್ಟ ಮಾತನ್ನು ವಿವೇಚಿಸಿರಿ—
"ಶ್ರೀಮಂತರ ಮಕ್ಕಳು ಜಾಣರು ಮತ್ತು ಬಡವರ ಮಕ್ಕಳು ಢಡ್ಡರು."

೩ ಪರಿಸ್ಥಿತಿ ಮತ್ತು ಪರಂಪರೆಯ ಬಗ್ಗೆ ಈ ಪುಸ್ತಕದಲ್ಲಿ ತಳೆದ ಧೋರಣೆಯನ್ನು ಸಾರರೂಪವಾಗಿ ಹೇಳಿರಿ.

೪ ಶಿಕ್ಷಣದ ಮತ್ತು ಆವರಣದ ಪರಿಣಾಮವು ಮಗುವಿನ ಯಾವ ವಯಸ್ಸಿನಲ್ಲಿ ಹೆಚ್ಚಾಗಿ ಆಗುತ್ತದೆ? ಮತ್ತು ಏಕೆ?

೫ ಬುದ್ಧಿ ಒರೆಗಳಿಂದ ಸಾವಿರಾರು ಹುಡುಗರನ್ನು ಪರೀಕ್ಷಿಸಿದಲ್ಲಿ ಜಾಣರ ಮತ್ತು ಢಡ್ಡರ ಪ್ರಮಾಣವನ್ನು ಸೂಚಿಸುವ ಒಂದು ಗ್ರಾಫನ್ನು (ಡೊಂಕು ಗೆರೆಯನ್ನು) ತೆಗೆಯಿರಿ.

೬ ಕೆಳಗೆ ಕೊಟ್ಟ ಪರಿಪಾಠಗಳು ಸರಿಯೋ ಅಥವಾ ತಪ್ಪೋ ಎಂಬುದನ್ನು ಕಾರಣ ಸಹಿತ ಹೇಳಿರಿ:—

(i) ಒಂದು ಪಾಠವನ್ನು ಗಟ್ಟಿ ಮಾಡಲಿಕ್ಕೆ ಅಥವಾ ಕೆಲವು ಲೆಕ್ಕಗಳನ್ನು ಬಿಡಿಸಲಿಕ್ಕೆ ಎಲ್ಲ ವಿದ್ಯಾರ್ಥಿಗಳಿಗೆ ಸಮನಾಗಿ ಅಷ್ಟೇ ವೇಳೆಯನ್ನು ಕೊಡುವದು.

(ii) ಅಭ್ಯಾಸ ಪತ್ರಿಕೆಯು ಬೇರೆ ಬೇರೆ ವಿಷಯಗಳಲ್ಲಿ ಇರುವ ಬೇರೆ ಬೇರೆ ವಿದ್ಯಾರ್ಥಿಗಳ ಸಾಮರ್ಥ್ಯವನ್ನು ನೋಡಿ ಒಂದು ವರ್ಗದಲ್ಲಿ ೩–೪ ಗುಂಪುಗಳನ್ನು ಮಾಡುವದು.

(iii) ಮಂದ ಹುಡುಗರಿಗಿಂತ ಜಾಣ ಹುಡುಗರಿಗೆ ಹೆಚ್ಚು (ಅಥವಾ ಕಡಿಮೆ) ಅಭ್ಯಾಸವನ್ನು ಕೊಡುವದು.

(iv) ಮೇಲಿನ ವರ್ಗದ ಅಭ್ಯಾಸ ಪತ್ರಿಕೆಯಲ್ಲಿ ಕೆಲವು ಕಡ್ಡಾಯದ ವಿಷಯಗಳನ್ನು ಮತ್ತೆ ಕೆಲವು ವಿಷಯಗಳನ್ನು ಇಚ್ಛೆಯ ವಿಷಯಗಳನ್ನು ಇಡುವದು.

(v) ಸಾಲೆಗೆ ಹೆಸರು ಹಚ್ಚದೆ ನೇರವಾಗಿ ಪರೀಕ್ಷೆಗೆ ಕೂತು ಪಾಸಾಗುವದು.

೭ ಜಾಣ ಹುಡುಗರಿಗೆ ಕಲಿಸುವ ಪದ್ಧತಿಯಲ್ಲಿ ಮತ್ತು ಧಡ್ಡ ಹುಡುಗರಿಗೆ ಕಲಿಸುವ ಪದ್ಧತಿಯಲ್ಲಿ ಇರುವ ಮುಖ್ಯ ವ್ಯತ್ಯಾಸ ವೇನು ? ಯಾವ ವಿಷಯಗಳಲ್ಲಿ ಧಡ್ಡ ಹುಡುಗರು ಹೆಚ್ಚು ಅಭಿರುಚಿಯನ್ನು ತೋರಿಸುತ್ತಾರೆ ?

೮ ಚುರುಕು ಬುದ್ಧಿಯ ಹುಡುಗರನ್ನು ಅವರ ವಯಸ್ಸಿನ ಇತರ ಹುಡುಗರ ಜೊತೆಗೆ ಕಲಿಯಲಿಕ್ಕೆ ಹಚ್ಚಿದರೆ ಅವರು ಕಿಡಿಗೇಡಿಗಳಾಗಬಹುದು ಅಥವಾ ಬೇಸರಗೊಳ್ಳಬಹುದು. ಇದನ್ನು ಸ್ಪಷ್ಟೀಕರಿಸಿರಿ.

೯ ಸಾಲೆಯಲ್ಲಿ ಧಡ್ಡನೆನಿಸಿಕೊಂಡ ಹುಡುಗನು ನಾಳೆ ದೊಡ್ಡವನಾದ ಮೇಲೆ ಸಮಾಜದ ಮುಂದಾಳು ಆಗಬಹುದು. ಇಂಥ ಕೆಲವು ಉದಾಹರಣೆಗಳ್ನು ಕೊಟ್ಟು ಮುಂದಾಳು ಆಗಲಿಕ್ಕೆ ಅವಶ್ಯವಾಗಿ ಬೇಕಾದ ಗುಣಗಳನ್ನು ವಿವರಿಸಿರಿ. ಮತ್ತು ಸಮಾಜದ ಎಲ್ಲ ಮುಂದಾಳುಗಳು ವಿದ್ಯಾರ್ಥಿಗಳಿದ್ದಾಗ ಅಭ್ಯಾಸದಲ್ಲಿ ಹಿಂದುಳಿದವರೇ ಇರುತ್ತಾರೆಂದು ಇದರಿಂದ ಸಿದ್ಧವಾಗುತ್ತದೆಯೋ ?

೧೦ ಮಗುವಿಗೆ ಆವನು ಕೈಕೊಳ್ಳಬೇಕಾದ ಉದ್ಯೋಗದ ಬಗ್ಗೆ ಮಾರ್ಗದರ್ಶನ (Vocational Guidance) ಮಾಡುವಲ್ಲಿ ಬುದ್ಧಿಯ ಒರೆಗಳು ಎಷ್ಟರ ಮಟ್ಟಿಗೆ ಸಹಾಯವಾಗುವವು?

೧೧ ಕೆಳಗೆ ಕಾಣಿಸಿದ ಉದ್ಯೋಗಗಳನ್ನು ಕೈಕೊಳ್ಳಬೇಕಾದರೆ ಮಗುವಿನಲ್ಲಿ ಯಾವ ವಿಶೇಷ ಸಾಮರ್ಥ್ಯಗಳು ಅಥವಾ ಒಲವುಗಳು ಇರಬೇಕಾಗುತ್ತದೆ? (i) ಇನ್ಸುರನ್ಸ ಕಂಪನಿಯ ಏಜಂಟ. (ii) ಸಾಯಕಲ್ ಅಥವಾ ಮೋಟಾರ ರಿಪೇರಿಯ ಅಂಗಡಿ. (iii) ಇಲೆಕ್ಟ್ರಿಕಲ್ ಎಂಜಿನಿಯರ. (iv) ಜವಳಿಯ ವ್ಯಾಪಾರಿ (v) ಕಾರಕೂನ ಅಥವಾ (vi) ಶಿಕ್ಷಕ.

೧೨ "ಸಾಲೆಯ ಅಭ್ಯಾಸದಲ್ಲಿ ಮಗುವಿನ ಸಾಮರ್ಥ್ಯವನ್ನು ಅಳೆಯುಲಿಕ್ಕೆ ಬುದ್ಧಿ ಒರೆಗಳು ಒಂದು ಉತ್ತಮವಾದ ಸಾಮಾನ್ಯ ಅಳತೆಗೋಲು" ಎಂಬುದರ ಅರ್ಥವೇನು? ಸಾಲೆಯ ಬೇರೆ ಬೇರೆ ವಿಷಯಗಳನ್ನು ಕಲಿಯುವ ಸಾಮರ್ಥ್ಯವನ್ನು ಬುದ್ಧಿ ಒರೆಗಳು ಸಮನಾಗಿ ಅಳೆಯಬಲ್ಲವು ಎಂದು ಇದರಿಂದ ಅರ್ಥವಾಗುವದೋ?

೧೩ ಒಂದೊಂದು ವಿಷಯದಲ್ಲಿ ಸಮಾನ ಸಾಮರ್ಥ್ಯವುಳ್ಳ ವಿದ್ಯಾರ್ಥಿಗಳ ವಿವಿಧ ಗುಂಪುಗಳನ್ನು ಮಾಡುವುದರ ಗುಣದೋಷಗಳನ್ನು ಚರ್ಚಿಸಿರಿ.

೧೪ ತಾನು ಕಲಿಸುವ ವರ್ಗದಲ್ಲಿಯ ಹುಡುಗರ ಬುದ್ಧಿವಯಗಳ ಹೆಚ್ಚು ಕಡಿಮೆಯನ್ನು ತಿಳಿದುಕೊಳ್ಳುವುದರಿಂದ ಶಿಕ್ಷಕನಿಗೆ ಆಗುವ ಲಾಭವೇನು?

೧೫ ಬುದ್ಧಿಯ ಮತ್ತು ಒಲವಿನ ಒರೆಗಳ ಉಪಯೋಗವನ್ನು ಶಿಕ್ಷಣದಲ್ಲಿ ಹೇಗೆ ಮಾಡಿಕೊಳ್ಳಬಹುದು?

೧೬ ಗಣಿತ, ಇತಿಹಾಸ ಮತ್ತು ವಾಚನಗಳ ಬಗ್ಗೆ ಐದೈದು ಹೊಸ ಮಾದರಿಯ ಒರೆಗಳನ್ನು ರಚಿಸಿರಿ.

೧೭ ಅಭ್ಯಾಸ ಪತ್ರಿಕೆಯ ಬೇರೆ ಬೇರೆ ವಿಷಯಗಳನ್ನು ತಕ್ಕೊಂಡು ಪ್ರತಿಯೊಂದರ ಬಗ್ಗೆ ಐದೈದು ಹೊಸ ಮಾದರಿಯ ಒರೆಗಳನ್ನು ರಚಿಸಿರಿ.

೧೮ ಶಾಲೆಯಲ್ಲಿ ಅಭ್ಯಾಸದ ಪ್ರಗತಿಯನ್ನು ಅಳೆಯಲಿಕ್ಕೆ ಶಿಕ್ಷಕನು ರಚಿಸಿದ ಒರೆಗಳಲ್ಲಿ ಮತ್ತು ಪ್ರಮಾಣ ಒರೆಗಳಲ್ಲಿ ಇರುವ ವ್ಯತ್ಯಾಸವೇನು ? ಉದಾಹರಣೆ ಕೊಟ್ಟು ವಿವರಿಸಿರಿ.

೧೯. ಶಾಲೆಯಲ್ಲಿ ಈಗ ನಡೆಯುತ್ತಿರುವ ಪರೀಕ್ಷೆಯ ಪದ್ಧತಿಯ ಗುಣದೋಷಗಳನ್ನು ಉದಾಹರಣೆ ಕೊಟ್ಟು ವಿವರಿಸಿರಿ. ಮತ್ತು ನೀವು ಯಾವ ಸುಧಾರಣೆಗಳನ್ನು ಸೂಚಿಸುವಿರಿ ?

೨೦. ಒಂದು ವರ್ಷದಲ್ಲಿ ಒಂದು ವರ್ಗದ ಪರೀಕ್ಷೆಯನ್ನು ಎಷ್ಟು ಬಾರಿ ತಕ್ಕೊಳ್ಳಬೇಕು ? ಏಕೆ ? ಮತ್ತು ಪರೀಕ್ಷೆಯ ಪರಿಣಾಮಗಳನ್ನು ಯಾವ ರೀತಿಯಿಂದ ಉಪಯೋಗಿಸಬೇಕು ?

೨೧. ನಿಬಂಧ ಪರೀಕ್ಷೆಯಲ್ಲಿ ನಿಶ್ಚಿತ ಗುಣಗಳನ್ನು ಕೊಡಲು ಬರುವದಿಲ್ಲ ಎಂಬುದನ್ನು ನಿಮ್ಮ ಅನುಭವದ ಉದಾಹರಣೆಗಳನ್ನು ಕೊಟ್ಟು ಸಿದ್ಧ ಮಾಡಿರಿ ಅದೇ ನಿಬಂಧದ ಬಗ್ಗೆ ಬೇರೆ ಬೇರೆ ಪರೀಕ್ಷಕರ ನಿರ್ಣಯಗಳು ಬದಲಾಗಲಿಕ್ಕೆ ಕಾರಣಗಳು ಯಾವವು? ನೀವು ಯಾವ ಸುಧಾರಣೆಗಳನ್ನು ಸೂಚಿಸುವಿರಿ ?

೨೨. ಹುಡುಗರ ಒಲವುಗಳನ್ನು ತಿಳಿದುಕೊಳ್ಳಲಿಕ್ಕೆ ಸಂದರ್ಶನ (Interview) ದಲ್ಲಿ ಯಾವ ಯಾವ ವಿಷಯಗಳನ್ನು ಕುರಿತು ಪ್ರಶ್ನೆ ಕೇಳಬೇಕಾಗುವದು ?

೨೩. ಬೇರೆ ಬೇರೆ ವರ್ಗದ ವಿದ್ಯಾರ್ಥಿಗಳಿಗೆ ಕೆಳಗೆ ಕೊಟ್ಟ ಪ್ರಶ್ನೆಗಳನ್ನು ಕೇಳಿ ಉತ್ತರಗಳನ್ನು ಕಲೆಹಾಕಿರಿ:—

(i) ನನ್ನ ಮೂರು ದೊಡ್ಡ ಬಯಕೆಗಳು: (೧)........(೨) ........(೩)........ (ii) ಶಾಲೆಯ ಕಾರ್ಯಕ್ರಮದಲ್ಲಿ ನನಗೆ ಬಹಳ ಸೇರುವ ವಿಷಯ............ (iii) ಶಾಲೆಯ ಹೊರಗೆ

ನನಗೆ ಬಹಳ ಸೇರುವ ಪತ್ರ್ಯೇತರ ವಿಷಯ............ ಈ ಸಂಗ ತಿಗಳ ಉತ್ತರಗಳನ್ನು ನೀವು ಹೇಗೆ ವರ್ಗೀಕರಿಸುವಿರಿ ? ಮತ್ತು ಅವುಗಳ ಫಲಿತಾಂಶಗಳನ್ನು ನೋಡಿ ಶಿಕ್ಷಕನು ವಿದ್ಯಾರ್ಥಿಗ ಳಿಗೆ ಹೇಗೆ ನೆರವಾಗಬಲ್ಲನು ?

೨೪. ಹೊಸ ಮಾದರಿಯ ಒರೆಗಳು ಏನನ್ನು ಅಳೆಯುತ್ತವೆ ? ಮತ್ತು ಅವುಗಳ ಫಲಿತಾಂಶಗಳನ್ನು ನೋಡಿ ಶಿಕ್ಷಕನು ವಿದ್ಯಾರ್ಥಿಗಳಿಗೆ ಹೇಗೆ ನೆರವಾಗಬಲ್ಲನು ?

೨೫. ಶಿಕ್ಷಕನು ಹೊಸ ಮಾದರಿಯ ಎಂಥ ಒರೆಗಳನ್ನು ತಯಾರಿಸ ಬಲ್ಲನು ? ಮತ್ತು ಯಾವ ತತ್ವಗಳ ಮೇಲೆ ಅವುಗಳನ್ನು ತಯಾ ರಿಸಬೇಕು ? ಉದಾಹರಣೆ ಕೊಟ್ಟು ವಿವರಿಸಿರಿ.

೨೬. ಶಿಕ್ಷಕನು ರಚಿಸಿದ ಒರೆಗಳು ಒಳ್ಳೆಯವು ಇರುವವೋ ಇಲ್ಲವೋ ? ಎಂಬುದನ್ನು ಹೇಗೆ ಪರೀಕ್ಷಿಸಬಹುದು ?

೨೭. ಸಾಲೆಯನ್ನು ಕಲಿಯದಿದ್ದರೂ ಜಾಣರಿದ್ದ ಮತ್ತು ಸಾಲೆಯನ್ನು ಕಲಿತರೂ ಧಡ್ಡರಿದ್ದ ಕೆಲವು ಜನರ ಉದಾಹರಣೆಗಳನ್ನು ಕೊಟ್ಟು ಇದಕ್ಕೆ ಆಧಾರವಾದ ಮನೋವಿಜ್ಞಾನದ ತತ್ವ ಗಳನ್ನು ವಿವರಿಸಿರಿ.

೨೮. ಬುದ್ಧಿ ಪರೀಕ್ಷೆಯ ಸಾಮಾನ್ಯ ಸಿದ್ಧಾಂತಗಳು ಯಾವವು ? ನಿಮ್ಮ ಅನುಭವದಲ್ಲಿ ಬಂದ ಉದಾಹರಣೆಗಳನ್ನು ಕೊಟ್ಟು ವಿವರಿಸಿರಿ.

೨೯. ವಿಜ್ಞಾನಿಯು ಕವಿ ಆಗಬಲ್ಲನೇ ? ಕವಿಯು ವಿಜ್ಞಾನಿ ಆಗ ಬಲ್ಲನೇ ? ಮನೋವಿಜ್ಞಾನದ ತತ್ವಗಳ ಆಧಾರ ಕೊಟ್ಟು ವಿವೇಚಿಸಿರಿ.

೩೦. ಬುದ್ಧಿಯನ್ನು ಅಳೆಯುವದು ಅಂದರೇನು ? ಬುದ್ಧಿ ಒರೆಗಳ ಉಪಯೋಗವನ್ನು ಹೇಗೆ ಮಾಡುವಿರಿ ? ಮತ್ತು ಅವುಗಳ ಪರಿಮಿತಿ ಯಾವದು ?

೩೧. ಕಾಲವಯ, ಬುದ್ಧಿವಯ ಮತ್ತು ಬುದ್ಧಿಮಟ್ಟ ಇವುಗಳ ಅರ್ಥವನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೩೨. ಪ್ರಮಾಣ ಒರೆಗಳ (Standardized Tests) ಮುಖ್ಯ ಲಕ್ಷಣಗಳು ಯಾವವು ? ಉದಾಹರಣೆ ಕೊಟ್ಟು ವಿವರಿಸಿರಿ.

೩೩. ನಿಬಂಧ ಪರೀಕ್ಷೆ ಮತ್ತು ಹೊಸ ಮಾದರಿಯ ಒರೆಗಳ ಗುಣ ದೋಷಗಳನ್ನು ಚರ್ಚಿಸಿರಿ.

೩೪. ಸಾಲೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಕುರಿತು ಪ್ರಗತಿ ಪುಸ್ತಕ ಅಥವಾ ರೆಕಾರ್ಡು ಇಡುವ ಅವಶ್ಯಕತೆ ಏನು ? ಅದರಲ್ಲಿ ಯಾವ ಸಂಗತಿಗಳನ್ನು ತುಂಬಬೇಕು ? ಮತ್ತು ಶಿಕ್ಷಕನು ಅದರ ಉಪಯೋಗವನ್ನು ಹೇಗೆ ಮಾಡಿಕೊಳ್ಳಬೇಕು ?

೩೫. ಮಗುವಿಗೆ ಸರಿಯಾದ ಮಾರ್ಗದರ್ಶನ ಮಾಡಲಿಕ್ಕೆ ಶಿಕ್ಷಕನು ಅವನ ಬಗ್ಗೆ ಯಾವ ಸಂಗತಿಗಳನ್ನು ಅಭ್ಯಾಸಿಸಬೇಕು ? ಮತ್ತು ಹೇಗೆ ?



# ಅಧ್ಯಾಯ ೧೧

## ಮನಸ್ಸಿನ ಆರೋಗ್ಯ

ಈ ಅಧ್ಯಾಯದಲ್ಲಿ ಶಿಕ್ಷಣದ ನಿಜವಾದ ಧ್ಯೇಯವನ್ನು ಸಾಧಿಸಲಿಕ್ಕೆ ಶಿಕ್ಷಕನು ಮಗುವಿಗೆ ಹೇಗೆ ನೆರವಾಗಬಲ್ಲನು ಎಂಬುದನ್ನು ವಿವರಿಸಲಾಗುವದು. ಓದು, ಬರೆಹ, ಲೆಕ್ಕ ( ಓ. ಬ. ಲೆ ) ಕಲಿಸುವದಷ್ಟೇ ಶಿಕ್ಷಣದ ಧ್ಯೇಯವಲ್ಲ. ಮಗುವು ದೊಡ್ಡವನಾದ ಮೇಲೆ ಹೇಗೆ ಒಳ್ಳೇ ನಾಗರಿಕನಾಗಿ ಬಾಳಬಲ್ಲನು ಎಂಬುದನ್ನು ಶಿಕ್ಷಕನು ವಿಚಾರಿಸಬೇಕು. **ಮಗುವಿಗೆ ಜೀವನ ಕಲೆಯನ್ನು ಕಲಿಸುವದೇ ಶಿಕ್ಷಣದ ನಿಜವಾದ ಧ್ಯೇಯ.** ಎಲ್ಲರಿಗೂ ಜೀವನದಲ್ಲಿ ಉಪಯುಕ್ತ ಬೀಳುವ ವಿಷಯಗಳನ್ನು ಕಲಿಸುವದರ ಜೊತೆಗೆ ಪ್ರತಿಯೊಬ್ಬ ಮಗುವಿನ ವಿಶೇಷ ಸಾಮರ್ಥ್ಯಗಳನ್ನು ತಿಳಿಯುವದು, ಅಳೆಯುವದು ಮತ್ತು ಬೆಳೆಸುವದು ಶಿಕ್ಷಕನ ಕರ್ತವ್ಯವಾಗಿದೆ. ಮಗುವಿನ ನಾನಾ ಶಕ್ತಿಗಳು ಹುದುಗಿಕೊಂಡಿರುತ್ತವೆ. ಅವುಗಳನ್ನು ಕಂಡುಹಿಡಿದು ಅವು ಅರಳುವಂತೆ ಪ್ರಯತ್ನಿಸುವದು ಶಿಕ್ಷಕನ ಕೆಲಸ. ಪ್ರತಿಯೊಬ್ಬ ಮಗುವಿನ ಒಲವು ಅಭಿರುಚಿಗಳನು ಕಂಡುಹಿಡಿಯಬೇಕು. ಮತ್ತು ಅವನು ಯಾವ ಕಲೆಗಳಲ್ಲಿ, ಅಥವಾ ಉದ್ಯೋಗ ವ್ಯಯಸಾಯಗಳಲ್ಲಿ ಮುಂದುವರೆಯಬಲ್ಲನೊ ಅವುಗಳನ್ನು ಪ್ರೋತ್ಸಾಹಿಸಬೇಕು. ಅಲ್ಲದೆ ಅವನಿಗೆ ಜನರೊಡನೆ ಕೂಡಿಕೊಂಡು ಹೋಗುವ ಸಾಮಾಜಿಕ ನಡತೆಯ ರೀತಿ ನೀತಿಗಳನ್ನು ಕಲಿಸುವದೂ ಅವಶ್ಯ ಸಾಲೆಯ ಕೋಣೆಯಲ್ಲಿ ಕೂತು ಅಭ್ಯಾಸ ಪತ್ರಿಕೆಯಲ್ಲಿಯ ವಿಷಯಗಳನ್ನು ಕಲಿಸಿ ಮುಗಿಸುವದು ಮತ್ತು ವಾರ್ಷಿಕ ಪರೀಕ್ಷೆಗೆ ಮಗುವನ್ನು ತಯಾರ ಮಾಡುವದು ಮಾತ್ರ ಶಿಕ್ಷಕನ ಕೆಲಸವೆಂದು ತಿಳಿದಿದ್ದರೆ ಅದು ಸಂಕುಚಿತ ದೃಷ್ಟಿ. ಒಟ್ಟಿನಲ್ಲಿ ತನ್ನ ಬದುಕು ಬಾಳುವೆಯನ್ನು ಹಸನಾಗಿ ಸಾಗಿಸುವಂತೆ, ಜೀವನವು ನಿರರ್ಥಕವಾಗದೆ ಪರಿಣಾಮಕಾರಕವಾಗುವಂತೆ ಮಗುವಿಗೆ ಮಾರ್ಗದರ್ಶನ ಮಾಡುವದೇ ಶಿಕ್ಷಕನ ಪರಮ ಕರ್ತವ್ಯ. ಆದರೆ ಇದು ಶಿಕ್ಷಕನ ಮೇಲೆ ಹೇರಿದ ಹೆಚ್ಚಿನ ಹೊಣೆ ಎಂದು ಅವನು ತಿಳಿದುಕೊಳ್ಳಬಾರದು.

## ಮನಸ್ಸಿನ ಆರೋಗ್ಯ

ಮನಸ್ಸಿನ ಆರೋಗ್ಯವೆಂದರೆ ಜೀವನವನ್ನು ಸುಖವಾಗಿ ಮತ್ತು ಪರಿಣಾಮಕಾರಕವಾಗಿ ಸಾಗಿಸುವದು. "ಮನಸ್ಸಿನ ಆರೋಗ್ಯ" (Mental Health) ಎಂಬ ವಿಷಯುವನ್ನು ಈಗೀಗ ಶಿಕ್ಷಕರ ಟ್ರೇನಿಂಗ ಕಾಲೇಜದ ಅಭ್ಯಾಸ ಕ್ರಮದಲ್ಲಿ ಸೇರಿಸತೊಡಗಿದ್ದಾರೆ. ಇದು ಮಹತ್ವದ ವಿಷಯುವೆಂದು ಇತ್ತೀಚಿಗೆ ಗೊತ್ತಾಗಿದೆ. ಶರೀರದ ಆರೋಗ್ಯಕ್ಕಿಂತಲೂ ಮನಸ್ಸಿನ ಆರೋಗ್ಯವನ್ನು ಕಾಪಾಡುವದು ಹೆಚ್ಚು ಅವಶ್ಯವಾದದ್ದು. ಮನಸ್ಸಿನ ಆರೋಗ್ಯಕ್ಕೆ ಸಂಬಂಧಿಸಿದ ಸಂಗತಿಗಳನ್ನು ತಿಳಿದುಕೊಂಡರೆ ತಂದೆ ತಾಯಿ ಗಳು ಮತ್ತು ಶಿಕ್ಷಕರು ಮಗುವಿನ ನಿಜವಾದ ಮಾರ್ಗದರ್ಶಕರಾಗಬಲ್ಲರು.

## ಮಕ್ಕಳ ಬೇಡಿಕೆಗಳು

'ವರ್ತನಕ್ಕೆ ಕಾರಣ ಉಂಟು, ಕಾರಣವಿಲ್ಲದೆ ವರ್ತನವಿಲ್ಲ' ಎಂಬುದು ಮನೋವಿಜ್ಞಾನದ ಒಂದು ಮೂಲ ಸಿದ್ಧಾಂತ. ವರ್ತನದ ಮೂಲ ಕಾರಣ ಗಳನ್ನು (Motives), ಪ್ರಚೋದನೆ (Drive), ಪ್ರವೃತ್ತಿ (Instinct), ಬೇಡಿಕೆ, ಬಯಕೆ, ಮುಂತಾಗಿ ಬೇರೆ ಬೇರೆ ಹೆಸರಿನಿಂದ ಕರೆಯುತ್ತಾರೆ. ಈ ಪ್ರೇರಣೆಗಳು ಕೆಲವು ವಿಷಯಗಳ ಕಡೆಗೆ ಅಥವಾ ವಸ್ತುಗಳ ಕಡೆಗೆ ಹರಿಯುತ್ತವೆ. ಅವುಗಳಿಗೆ ಬೇಡಿಕೆಗಳು ಎಂದು ಅನ್ನುತ್ತಾರೆ. ಈ ಬೇಡಿಕೆ ಗಳ ಸ್ವರೂಪವನ್ನು ಕುರಿತು ಹಿಂದೆ ಎರಡನೇ, ಐದನೇ, ಮತ್ತು ಆರನೇ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ. ಮನುಷ್ಯನ ಪ್ರೇರಣೆಗಳ ಅಥವಾ ಬೇಡಿಕೆ ಗಳ ತೃಪ್ತಿಯು ಮನಸ್ಸಿನ ಆರೋಗ್ಯಕ್ಕೆ ಹೇಗೆ ಸಂಬಂಧ ಪಟ್ಟಿದೆ ಎಂಬುದನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವದು.

ಮನಸ್ಸಿನ ಆರೋಗ್ಯದ ಸಮಸ್ಯೆಯು ಬೇಡಿಕೆಗಳ ಸಮಸ್ಯೆಯೇ ಆಗಿರುತ್ತದೆ. ಬೇಡಿಕೆಗಳು ಎಷ್ಟರ ಮಟ್ಟಿಗೆ ತೃಪ್ತಿ ಹೊಂದಿರುತ್ತವೆಯೋ ಅಷ್ಟರ ಮಟ್ಟಿಗೆ ಮನಸ್ಸು ಆರೋಗ್ಯ ಸ್ಥಿತಿಯಲ್ಲಿ ಇರುತ್ತದೆ. ಅಲ್ಲದೆ ಒಂದು ಬೇಡಿಕೆಯು ತೃಪ್ತಿಹೊಂದಿದಲ್ಲಿ ಮನಸ್ಸಿಗೆ ಸಮಾಧಾನ ಉಂಟಾದರೆ ಮತ್ತೊಂದು ಬೇಡಿಕೆಯು ತೃಪ್ತಿಹೊಂದದೆ ಇದ್ದಲ್ಲಿ ಅಸಮಾಧಾನ ಉಂಟಾಗ

ಬಹುದು. ಈ ಸ್ಥಿತಿಯು ಒದಗಿದಾಗ ಮನಸ್ಸಿನ ತಿಕ್ಕಾಟ ಅಥವಾ ಹೋರಾಟ ( Mental Conflict ) ಉಂಟಾಗುತ್ತದೆ. ಮನಸ್ಸಿನಲ್ಲಿ ಹೋರಾಟ ಉಂಟಾದಲ್ಲಿ ಅಥವಾ ಬೇಡಿಕೆಗಳು ಅತೃಪ್ತಿ ಹೊಂದಿದಲ್ಲಿ ಅದು ಮನಸ್ಸಿನ ಅನಾರೋಗ್ಯಕ್ಕೆ ಕಾರಣವಾಗುತ್ತವೆ. ಒಬ್ಬ ಹಸಿದ ಮನುಷ್ಯನು ದಾರಿ ಹಿಡಿದು ಹೋಗುವಾಗ ಎರಡನೆಯವರ ತೋಟದಲ್ಲಿದ್ದ ಮಾವಿನಹಣ್ಣು ಗಳು ಅವನ ಕಣ್ಣಿಗೆ ಬೀಳುತ್ತವೆ. ಆ ಹಣ್ಣುಗಳನ್ನು ಹರಿದುಕೊಂಡು ತಿನ್ನು ವುದರಿಂದ ಅವನ ಶಾರೀರಿಕ ಬೇಡಿಕೆಯಾದ ಹಸಿವು ಹಿಂಗಬಹುದು. ಆದರೆ ಆ ಹಣ್ಣುಗಳನ್ನು ದೊರೆಕಿಸುವದರಲ್ಲಿ ತೊಂದರೆಗಳು ಇರಬಹುದು. ಅಥವಾ ತೊಂದರೆಗಳು ಇರದಿದ್ದರೂ ತೋಟದ ಒಡೆಯನ ಒಪ್ಪಿಗೆ ಇಲ್ಲದೆ ಮಾವಿನ ಹಣ್ಣನ್ನು ಹರಿದು ತಿನ್ನುವದು ಆತ್ಮಗೌರವಕ್ಕೆ ಹೊರತಾಗಬಹುದು. ಅಂಥ ಪ್ರಸಂಗದಲ್ಲಿ ಇತ್ತ ಹಸಿವು ಅತ್ತ ಆತ್ಮಗೌರವ ಎಂಬ ಎರಡು ಪ್ರೇರಣೆಗಳ ನಡುವೆ ಮನಸ್ಸಿನಲ್ಲಿ ಹೋರಾಟ ಉಂಟಾಗುವದು. ಇಂಥ ಪ್ರಸಂಗಗಳಲ್ಲಿ ಮನಸ್ಸು ಶಾಂತ ಇರಬೇಕಾದರೆ ಎದುರಿಸಿದ ಸಮಸ್ಯೆಯ ಬಗೆಗೆ ಒಂದು ನಿರ್ಣಯಕ್ಕೆ ಬಂದು ಹೋರಾಟವನ್ನು ನಿಲ್ಲಿಸಬೇಕಾಗುತ್ತದೆ. ಇದೇ ರೀತಿಯಾಗಿ ಅತಿ ಪ್ರೇಮದಿಂದ ಜೋಪಾನ ಮಾಡಿದ ಮಗುವನ್ನು ಅವನು ಮಾಡಿದ ಅಪರಾಧ ಕ್ಕಾಗಿ ದಂಡಿಸುವ ಪ್ರಸಂಗವು ಒದಗಿದಾಗ ಪ್ರೇಮ ಮತ್ತು ಕ್ರೋಧ ಎಂಬ ಪ್ರೇರಣೆಗಳ ತಿಕ್ಕಾಟವು ಉಂಟಾಗುತ್ತದೆ. ಹೀಗೆ ಅನೇಕ ಪ್ರಸಂಗಗಳಲ್ಲಿ ಬೇರೆ ಬೇರೆ ಬೇಡಿಕೆಗಳು, ಅಥವಾ ಧ್ಯೇಯಗಳು ಮನಸ್ಸಿನಲ್ಲಿ ಹೋರಾಟ ಹೂಡು ವವು ಎಂಬುದು ಎಲ್ಲರ ಅನುಭವಕ್ಕೆ ಬಂದ ಮಾತು. ಪ್ರೇಮವೊ ಮರ್ಯಾದೆಯೊ? ಪ್ರಣಯವೊ ಸಮಾಜವೊ ? ಬಂಧುಪ್ರೇಮವೊ ಕರ್ತವ್ಯವೊ ? ಸ್ವಾರ್ಥವೊ ಪ್ರಾಮಾಣಿಕತನವೊ? ದೇವರೊ ದುಡ್ಡೋ ? ಲಾಭವೊ ಆತ್ಮಗೌರವವೊ ? ಮನೆಯೊ ದೇಶವೊ ? ಇವೇ ಮೊದಲಾದ ಸಮಸ್ಯೆಗಳು ಅನೇಕ ಪ್ರಸಂಗ ಗಳಲ್ಲಿ ಮನುಷ್ಯನನ್ನು ಎದುರಿಸುತ್ತವೆ. ಮನಸ್ಸಿನಲ್ಲಿ ಈ ಬಗೆಯ ಹೋರಾಟವು ನಡೆದಾಗ ವ್ಯಕ್ತಿತ್ವದಲ್ಲಿ ಒಡಕು ಹುಟ್ಟುತ್ತದೆ. ವ್ಯಕ್ತಿತ್ವದ ಬೆಳವಣಿಗೆಯು ಸರಿಯಾದ ಮಾರ್ಗದಲ್ಲಿ ಸಾಗಿದರೆ ಬೇಡಿಕೆಗಳಲ್ಲಿ ಹೋರಾಟದ ಪ್ರಸಂಗಗಳು ಬಂದರೂ ಅವುಗಳನ್ನು ಬಗೆ ಹರಿಸಿ ಮನಸ್ಸು ಪ್ರಶಾಂತ ರೀತಿ ಯಲ್ಲಿ ವರ್ತಿಸುತ್ತದೆ.

ಸಾಮಾನ್ಯವಾಗಿ ಮನುಷ್ಯರ ಬೇಡಿಕೆಗಳಂತೆಯೇ ಮಕ್ಕಳ ಬೇಡಿಕೆಗಳು. ಈ ಬೇಡಿಕೆಗಳಲ್ಲಿ ಮುಖ್ಯವಾಗಿ ಮೂರು ಭಾಗಗಳನ್ನು ಮಾಡಲಾಗುತ್ತದೆ— (೧) **ಶರೀರದ ಬೇಡಿಕೆಗಳು** ( Organic Needs ), (೨) **ಮನದ ಬೇಡಿಕೆಗಳು** (Psychological Needs) ಮತ್ತು, (೩) **ಸಮಾಜದ ಬೇಡಿಕೆಗಳು** (Social Needs). ಇವುಗಳ ಜೊತೆಗೆ ಆಧ್ಯಾತ್ಮದ ಬೇಡಿಕೆಗಳನ್ನೂ ( Spiritual Needs ) ಸೇರಿಸಬಹುದು. ಆದರೆ ಈ ವಿಷಯದಲ್ಲಿ ವಿಶಿಷ್ಟ ಮತಗಳ ಅಥವಾ ಪಂಥಗಳ ಪ್ರಚಾರ ದೃಷ್ಟಿ ಇರದೆ ಜಗತ್ತಿನ ಬೇರೆ ಬೇರೆ ಮಹಾವಿಭೂತಿಗಳ ವಚನಗಳನ್ನು ಮತ್ತು ಜೀವನ ಚರಿತ್ರೆಗಳನ್ನು ತಿಳಿಸುವದರಿಂದ ಆಧ್ಯಾತ್ಮದ ಬಯಕೆಗಳು ತೃಪ್ತಿಹೊಂದುವವು. ಪ್ರಾಣಿಯು ಬದುಕಬೇಕಾದರೆ ಅದಕ್ಕೆ ಅವಶ್ಯವಾಗಿ ಅನ್ನ, ನೀರು, ಹವೆ, ವಿಶ್ರಾಂತಿ, ನಿದ್ರೆ ಮುಂತಾದ ಶರೀರದ ಬೇಡಿಕೆಗಳು ತೃಪ್ತಿಹೊಂದಬೇಕಾಗುತ್ತವೆ. ಇವು ಇಲ್ಲದಾದಲ್ಲಿ ಪ್ರಾಣಿಯು ಮರಣಕ್ಕೆ ಗುರಿಯಾಗುತ್ತದೆ. ಶರೀರದ ಆರೋಗ್ಯವನ್ನು ಕಾಯ್ದುಕೊಳ್ಳಲಿಕ್ಕೆ ಅವಶ್ಯವಾದ ನಿಯಮಗಳನ್ನು ಕಲಿಸುವದು ಮತ್ತು ಪಾಲಿಸುವದು ಶಿಕ್ಷಕರ ಮತ್ತು ತಂದೆ ತಾಯಿಗಳ ಕರ್ತವ್ಯವಾಗಿದೆ. “ ಶರೀರವು ಆರೋಗ್ಯವಾಗಿದ್ದಲ್ಲಿ ಮನಸ್ಸೂ ಆರೋಗ್ಯವಾಗಿರುತ್ತದೆ ” ಎಂಬ ಇಂಗ್ಲೀಷ ಗಾದೆಯು ಮಾತಿನಲ್ಲಿ ಬಹಳ ಸತ್ಯಾಂಶವಿರುತ್ತದೆ ಭದ್ರತೆ, ಕುತೂಹಲ, ನಾನು ನನ್ನದು ಎಂಬ ಅಭಿಮಾನ, ಸ್ವಾತಂತ್ರ್ಯದ ಇಚ್ಛೆ ಮುಂತಾದವು ಮಾನಸಿಕ ಬೇಡಿಕೆಗಳಲ್ಲಿ ಬರುತ್ತವೆ. ತಂದೆತಾಯಿಗಳು ಅಥವಾ ದೊಡ್ಡವರು ಮಕ್ಕಳನ್ನು ಪ್ರೀತಿಸುತ್ತಿದ್ದರೆ, ಅವರ ಕಷ್ಟಗಳನ್ನು ದೂರುಮಾಡುತ್ತಿದ್ದರೆ, ಅವರಲ್ಲಿ ಭದ್ರತೆಯ ಭಾವನೆಯು ಉಂಟಾಗುತ್ತದೆ. ಇವು ಕೊರತೆಯಾದಲ್ಲಿ ಮನಸ್ಸಿನ ಅನಾರೋಗ್ಯತೆಯು ಕುರುಹುಗಳು ಕಾಣತೊಡಗುವವು. ಆಗ ಮಕ್ಕಳಲ್ಲಿ ಅಂಜುಬುರಕತನ, ಸುಳ್ಳು ಹೇಳುವದು, ಕಳವು ಮಾಡುವದು ಅಥವಾ ದಿಟ್ಟತನ, ಉದ್ಧಟತನ, ಜಗಳಗಂಟತನ ಮುಂತಾದ ವರ್ತನಗಳು ಕಂಡುಬರುತ್ತವೆ. ಕುತೂಹಲವು ಸಂಶೋಧನ ವೃತ್ತಿಯನ್ನು ತೃಪ್ತಿಗೊಳಿಸುತ್ತದೆ. ಅಭ್ಯಾಸ ಕ್ರಮದ ವಿಷಯಗಳ ಬಗ್ಗೆ ಜ್ಞಾನವನ್ನು ಬೆಳಯಿಸಬೇಕಾದರೆ ಕುತೂಹಲ ಪ್ರೇರಣೆಯು ಸಹಾಯಕವಾಗುತ್ತದೆ. ಕುತೂಹಲ, ಸ್ವಾಭಿಮಾನ ಮತ್ತು ಸ್ವಾತಂತ್ರ್ಯದ ಬೇಡಿಕೆಗಳು ತೃಪ್ತಿಹೊಂದದೇ ಇದ್ದರೆ ಮಕ್ಕಳಲ್ಲಿ

ಮನಸ್ಸಿನ ದುರ್ಬಲತೆ, ನಿರುತ್ಸಾಹ, ಸೋಮಾರಿತನ ಮತ್ತು ಪರಾವಲಂಬನಗಳು ತಲೆದೋರುತ್ತವೆ ಇವು ಮನೋರೋಗದ ಲಕ್ಷಣಗಳ . ಪ್ರೇಮ, ಮೆಚ್ಚುಗೆ ಮತ್ತು ಬಂಧುತ್ವ ಇವು ಸಾಮಾಜಿಕ ಬೇಡಿಕೆಗಳು ಸರಿಕರು ಮತ್ತು ದೊಡ್ಡವರು ತಮ್ಮನ್ನು ಪ್ರೀತಿಸಬೇಕು, ತಮ್ಮನ್ನು ಹೊಗಳಬೇಕು. ತಮ್ಮವರೆಂದು ಹಚ್ಚಿಕೊಳ್ಳಬೇಕು ಎಂದು ಮಕ್ಕಳು ಬಯಸುತ್ತಾರೆ. ಇವುಗಳ ಕೊರತೆಯಾದಲ್ಲಿ ಸಾಲೆ ಬಿಟ್ಟು ಅಲೆದಾಡುವದು, ಅಭ್ಯಾಸವನ್ನು ಬಿಟ್ಟುಬಿಡುವದು, ಅಸಹಕಾರ, ತಿರಸ್ಕಾರ, ನಾಚಿಕೆ ಮುಂತಾದ ಅಸಾಮಾಜಿಕ ವರ್ತನಗಳು ಮಕ್ಕಳಲ್ಲಿ ಕಂಡು ಬರುತ್ತವೆ.

ಮಕ್ಕಳ ಬೇಡಿಕೆಗಳು ತಾವಾಗಿಯೇ ತೃಪ್ತಿ ಹೊಂದುವದಿಲ್ಲ. ಅದಕ್ಕಾಗಿ ಅವರು ಪ್ರಯತ್ನ ಪಡಬೇಕಾಗುತ್ತದೆ. ಆದರೆ ಮಿತವ್ಯಯದ ದೃಷ್ಟಿಯಿಂದ ಮತ್ತು ಸರಿಯಾದ ರೀತಿಯಿಂದ ಸ್ವಾಭಾವಿಕವಾದ ಬೇಡಿಕೆಗಳು ಹೇಗೆ ತೃಪ್ತಿಯನ್ನು ಹೊಂದಬೇಕು ಎಂಬುದನ್ನು ಕಲಿಸುವದು ಸಾಲೆಯ ಕೆಲಸ.

### ಮಕ್ಕಳ ತಪ್ಪು ನಡೆಗಳು

ಮಕ್ಕಳ ತಪ್ಪು ನಡೆಗಳಿಗೆ ಅವರ ಮನಸ್ಸಿನ ಅನಾರೋಗ್ಯತೆಯೇ ಕಾರಣವೆಂದು ಮೇಲಿನ ವಿವರಣೆಯಿಂದ ಗೊತ್ತಾಗುತ್ತವೆ. ತಪ್ಪು ನಡತೆಗಳು ಅಥವಾ ಅಕ್ರಮ ವರ್ತನಗಳು ಸಮಾಜದ ದೃಷ್ಟಿಯಿಂದ ಅಪರಾಧಗಳೆಂದು ತಿಳಿಯುತ್ತಾರೆ. ಒಬ್ಬ ವ್ಯಕ್ತಿಯ ಬೇಡಿಕೆಗಳಲ್ಲಿ ಕಟ್ಟುನಿಟ್ಟು ಇದ್ದರೆ, ಅಲ್ಲದೆ ವ್ಯಕ್ತಿ ಮತ್ತು ಆವರಣದ ಸಂಬಂಧದಲ್ಲಿ ತಾಳಮೇಳವಿದ್ದರೆ ಅದು **ಸುಸಂಬದ್ಧ ವ್ಯಕ್ತಿತ್ವದ** ( Integrated Personality ) ಲಕ್ಷಣ. ಆದರೆ ಅವುಗಳಲ್ಲಿಯ ಕಟ್ಟುನಿಟ್ಟು ಒಡೆದರೆ ಅಥವಾ ತಾಳಮೇಳ ತಪ್ಪಿದರೆ ಅದು ಹೊಂದಿಕೆಯಾಗದ ( Maladjusted ) ವ್ಯಕ್ತಿತ್ವದ ಲಕ್ಷಣ. ವ್ಯಕ್ತಿ ಮತ್ತು ಆವರಣಗಳಲ್ಲಿ ಹೊಂದಿಕೆಯಾಗದೆ ಮನಸ್ಸಿನಲ್ಲಿ ತಿಕ್ಕಾಟವು ( Mental Conflict ) ಉಂಟಾದಾಗ ಯಾವುದಾದರೊಂದರಲ್ಲ ಬದಲಾವಣೆಯು ಅವಶ್ಯವೆನಿಸುತ್ತದೆ. ವ್ಯಕ್ತಿಯು ತನ್ನ ಮನೋದೃಷ್ಟಿಯನ್ನು ಬದಲಾಯಿಸಿ ಸಮಾಜದ ಕಟ್ಟಳೆಗಳಿಗೆ ಒಳಪಟ್ಟು ಆದರ ವಿಧಿನಿಷೇಧಗಳನ್ನು, ರೀತಿನೀತಿಗಳನ್ನು ಪಾಲಿಸಬೇಕಾಗುತ್ತದೆ. ಅಥವಾ ಸಮಾಜದ ಕಟ್ಟನ್ನು ಸಡಿಲಿಸಿ

ವ್ಯಕ್ತಿಯ ಮನೋವೃತ್ತಿಗೆ ಹೊಂದಿಕೆಯಾಗುವಂತೆ ಆವರಣವನ್ನು ಬದಲಾಯಿಸಬೇಕಾಗುತ್ತದೆ. ಆದರೆ ಆವರಣವನ್ನು ಬದಲಾಯಿಸುವದು ಅನೇಕ ಪ್ರಸಂಗಗಳಲ್ಲಿ ಕಠಿಣ ಸಮಸ್ಯೆಯಾದುದರಿಂದ ಎಷ್ಟೋ ಜನರು ಅದನ್ನು ಎದುರಿಸದೆ ಅಸಂತುಷ್ಟರು ಮತ್ತು ಅಸಮರ್ಥರು ಆಗುವರು. ಆಗ ಅವರ ಮನಸ್ಸಿನ ಆರೋಗ್ಯವು ಕೆಡುತ್ತದೆ. ಕಠಿಣ ಪ್ರಸಂಗದಲ್ಲಿ ಎದೆಗುಂದದೆ ಮನಸ್ಸನ್ನು ಹತೋಟಿಯಲ್ಲಿ ಇಟ್ಟುಕೊಳ್ಳದವರು ಮತ್ತು ಸನ್ನಿವೇಶವನ್ನು ಎದುರಿಸದವರು ಅಡ್ಡದಾರಿಯನ್ನು ಹಿಡಿಯುತ್ತಾರೆ.

ಮಕ್ಕಳ ಬಯಕೆಗಳು ಮತ್ತು ಬೇಡಿಕೆಗಳು ತೃಪ್ತಿಹೊಂದದೆ ಇರುವದೇ ಅವರ ತಪ್ಪು ನಡತೆಗಳ ಮೂಲ ಕಾರಣ. ಮಕ್ಕಳ ವರ್ತನವನ್ನು ಸುಧಾರಿಸಲು ಪ್ರಯತ್ನ ಪಡುವವರು ಅವರ ಅಕ್ರಮ ವರ್ತನದ ಮೂಲ ಕಾರಣಗಳನ್ನು ಮೊದಲು ಕಂಡುಹಿಡಿಯಬೇಕು. ಸಾಮಾನ್ಯವಾಗಿ ಮಕ್ಕಳ ತಪ್ಪು ನಡತೆಗಳು ಯಾವವು ಮತ್ತು ಅವುಗಳ ಹಿನ್ನೆಲೆಗಳು ಯಾವವು ಎಂಬುದನ್ನು ಕುರಿತು ಈಗ ವಿವೇಚಿಸುವ. ಮಕ್ಕಳು ತಮ್ಮ ಬೇಡಿಕೆಗಳನ್ನು ಪೂರೈಸಲು, ತಮ್ಮ ಗುರಿಯನ್ನು ಮುಟ್ಟಲು, ಅಥವಾ ತಮ್ಮ ಧ್ಯೇಯವನ್ನು ಸಾಧಿಸಲು ಪ್ರಯತ್ನಿಸುವಾಗ ಅವರಿಗೆ ಅನೇಕ ಅಡೆತಡೆಗಳು ಅಡ್ಡ ಬರುತ್ತವೆ. ತಾವು ಬಯಸಿದ್ದು ಕೈಗೂಡದಿದ್ದರೆ ಅವರಿಗೆ ನಿರಾಶೆ ( Frustration ) ಉಂಟಾಗುತ್ತದೆ. ಈ ನಿರಾಶೆಯ ಕಾರಣವು ವ್ಯಕ್ತಿಗೆ ಸಂಬಂಧಪಟ್ಟಿರಬಹುದು ಅಥವಾ ಆವರಣಕ್ಕೆ ಸಂಬಂಧಪಟ್ಟಿರಬಹುದು. ಅಂತು ಹೀಗೆ ನಿರಾಶೆ ಹೊಂದಿದ ಮಕ್ಕಳ ವರ್ತನಗಳು ಅನೇಕ ರೂಪದಲ್ಲಿ ವ್ಯಕ್ತವಾಗುತ್ತವೆ ಅವುಗಳಿಗೆ ಅಕ್ರಮ ವರ್ತನಗಳೆಂದು, ಅಪರಾಧಗಳೆಂದು ಅಥವಾ ತಪ್ಪು ನಡತೆಗಳೆಂದು ಅನ್ನುತ್ತಾರೆ ಅವುಗಳಲ್ಲಿ ಮುಖ್ಯವಾದವುಗಳನ್ನು ಇಲ್ಲಿ ಕೊಟ್ಟಿದೆ.

**ಹಿಂಜರಿಯುವದು** ( Withdrawl )

ಕಠಿಣ ಪ್ರಸಂಗಗಳು ಬಂದಾಗ ಮಕ್ಕಳು ಹಿಂಜರಿಯುತ್ತಾರೆ. ಕಣ್ಣು ತಪ್ಪಿಸಿ ಹೋಗುವದು, ಓರಿಗೆಯ ಜನರ ಗೆಳೆತನವನ್ನು ಮಾಡದೆ ಮನೆಯಲ್ಲಿ ಸುಮ್ಮನೆ ಕೂಡ್ರುವದು, ನೆವ ಹೇಳಿ ಹಾಸಿಗೆ ಹಿಡಿಯುವದು, ಹಗಲುಗನಸು ಕಾಣುವದು, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸದೆ ಹಿಂದೆ ಉಳಿಯುವದು ಮೊದಲಾದವು ನಿರಾಶೆ ಹೊಂದಿದ ಮಕ್ಕಳ ಅಕ್ರಮ ವರ್ತನಗಳು.

## ಪರಾವಲಂಬನ

ಅನೇಕ ಬಾರೆ ನಿರಾಶೆ ಹೊಂದಿ ಅಂಜಿದ ವ್ಯಕ್ತಿಗಳು ತಮ್ಮಲ್ಲಿ ಆತ್ಮ ವಿಶ್ವಾಸವನ್ನು ಕಳೆದುಕೊಳ್ಳುತ್ತಾರೆ. ಆಗ ತಮಗಿಂತ ಹೆಚ್ಚು ಗಟ್ಟಿಗರು, ಎದೆಗಾರರು, ಸಿರಿವಂತರು ಅಥವಾ ಬುದ್ಧಿವಂತರು ಎಂದು ತಿಳಿದುಕೊಂಡ ವರನ್ನು ಅವರು ಅವಲಂಬಿಸುತ್ತಾರೆ. ಅವರಿಗೆ ವಿಧೇಯರಾಗಿ ನಡೆದು ಕೊಳ್ಳುತ್ತಾರೆ,

## ಕುತರ್ಕ ( Rationalization )

ಮಕ್ಕಳು ಕೆಲವು ಸಂದರ್ಭಗಳಲ್ಲಿ ತಮ್ಮ ವರ್ತನದ ನಿಜವಾದ ಕಾರಣ ವನ್ನು ಕೊಡಲು ಅಸಮರ್ಥರಾಗಿ ಯಾವುದಾದರೊಂದು ತೋರಿಕೆಯ ಸುಳ್ಳು ಕಾರಣವನ್ನು ಕೊಡುತ್ತಾರೆ. ಇದಕ್ಕೆ ಕುತರ್ಕ ಅಥವಾ ಕುಂಟ ನೆವ ಎನ್ನಬಹುದು. ಕಥೆಯಲ್ಲಿಯ ನರಿಯು ಎಷ್ಟು ಪ್ರಯತ್ನ ಪಟ್ಟರೂ ಅದಕ್ಕೆ ದ್ರಾಕ್ಷೆಯ ಹಣ್ಣು ಸಿಲುಕದ್ದರಿಂದ ಆ ಗಿಡದ ಹಣ್ಣುಗಳು ಹುಳಿ ಇರುತ್ತವೆ ಎಂದು ಅದು ಸಮಾಧಾನ ಹಚ್ಚಿಕೊಂಡಿತು. ಮನುಷ್ಯನು ತನ್ನ ಸ್ವಾಭಿ ಮಾನಕ್ಕೆ ಭಂಗ ಬಂದಾಗ ತಾನು ಆಡಿದ ಮಾತುಗಳಿಗೆ ಮತ್ತು ತಾನು ಮಾಡಿದ ಕೆಲಸಗಳಿಗೆ ಸುಳ್ಳು ಕಾರಣಗಳನ್ನು ಕೊಟ್ಟು ತನ್ನ ಸಮರ್ಥನೆಯನ್ನು ಮಾಡಿಕೊಳ್ಳುತ್ತಾನೆ. ತನ್ನ ಗುರಿಯು ಸಾಧಿಸದೆ ಇದ್ದಾಗ ಅವನಲ್ಲಿ ಹೀಗೆ ಕುತರ್ಕ ಹುಟ್ಟುತ್ತದೆ.

## ಹತ್ತಿಕ್ಕುವದು (Repression)

ಸಾಮಾನ್ಯವಾಗಿ ಎರಡು ಬೇಡಿಕೆಗಳ ಹೋರಾಟದಲ್ಲಿ ಅಯೋಗ್ಯವೆಂದು ಅನಿಸಿದ ಬೇಡಿಕೆಯು ಒಳಗೆ ಹತ್ತಿಕ್ಕಲ್ಪಡುತ್ತದೆ. ನೀತಿ ತತ್ವಕ್ಕೆ ಒಂದು ಬೇಡಿಕೆಯು ಹೊರತಾಗಿದ್ದರೆ ಮನುಷ್ಯನು ಆ ಬೇಡಿಕೆಯನ್ನು ತನ್ನೊಳಗೆ ನುಂಗಿಕೊಳ್ಳುತ್ತಾನೆ ಅಥವಾ ಬಚ್ಚಿಡುತ್ತಾನೆ. ಹೀಗೆ ಹತ್ತಿಕ್ಕಲ್ಪಟ್ಟ ಅಥವಾ ಮನಸ್ಸಿನೊಳಗೆ ಅದುಮಲ್ಪಟ್ಟ ಬಯಕೆಗಳು ಎಷ್ಟೋ ಬಾರೆ ವ್ಯಕ್ತಿಗೆ ಗೊತ್ತಾಗದೆ ಅವನ ಅಜಾಗ್ರತಾವಸ್ಥೆಯಲ್ಲಿ ಇರುತ್ತವೆ. ತನ್ನಲ್ಲಿದ್ದ ಕುಂದು ಕೊರತೆಗಳನ್ನು ಎರಡನೆಯವರಲ್ಲಿ ಎತ್ತಿ ತೋರಿಸುವದು. (Projection

ಪರಕ್ಷೇಪಣ) ಅಥವಾ ತನ್ನ ಬಯಕೆಗೆ ವಿರೋಧವಾದ ವೃತ್ತಿಯನ್ನು ಹೊರಗೆ ತೋರ್ಪಡಿಸುವದು ಒಂದು ಬಗೆಯ ಬಚ್ಚಿಟ್ಟ ಬಯಕೆಗಳ ಕುರುಹುಗಳು. ತನಗೆ ಕುಣಿಯಲಿಕ್ಕೆ ಬಾರದಿದ್ದರೆ ನೆಲ ಡೊಂಕು ಎನ್ನುವದು, ತಾನು ಪರೀಕ್ಷೆಯಲ್ಲಿ ನಪಾಸು ಆದರೆ ಶಿಕ್ಷಕರ ಮೇಲೆ ದೋಷ ಹೊರಿಸುವದು, ಅತಿ ಪ್ರಾಮಾಣಿಕತನ, ಅತಿ ವಿನಯ ತೋರಿಸುವದು ಮೊದಲಾದವು ಬಚ್ಚಿಟ್ಟ ಬಯಕೆಯ ಉದಾಹರಣೆಗಳು.

## ಪ್ರಾಯಶ್ಚಿತ್ತ (Atonement)

ಹಿಂದೆ ಮಾಡಿದ ತಪ್ಪು ನಡತೆಗಳನ್ನು ಕೆಲವು ಬಾರೆ ನಮಗೆ ಮರೆಯು ಲಿಕ್ಕೆ ಆಗುವದಿಲ್ಲ. ತರ್ಕವಿತ್ಕರದಿಂದಲಾದರೂ ಅವುಗಳನ್ನು ಮನಸ್ಸಿನೊಳ ಗಿಂದ ತೆಗೆದು ಹಾಕುವದು ಕಠಿಣವಾಗುತ್ತದೆ. ಅಂಥ ಕೃತಿಗಳನ್ನು ಸಮಾ ಜವು ಸಮ್ಮತಿಸುವದಿಲ್ಲ ಎಂಬುದು ನಮಗೆ ಅನಿಸುತ್ತದೆ. ಅಂಥ ಪ್ರಸಂಗದಲ್ಲಿ ಮನಸ್ಸಿನ ವೇದನೆಯನ್ನು ಕಳೆವ ಕೊಳ್ಳಲಿಕ್ಕೆ "ಪಾಪವನ್ನು" ತೊಳೆದುಕೊಳ್ಳ ಲಿಕ್ಕೆ ಮನುಷ್ಯನು ಪ್ರಾಯಶ್ಚಿತ್ತವನ್ನು ಕೈಕೊಳ್ಳುವನು. ಉಪವಾಸ ಮಾಡು ವದು, ವಿಶೇಷ ಮಡಿ ಹುಡಿ ಮಾಡುವದು, ದೇವರು ದಿಂಡರು ಮಾಡುವದು ಗುಡಿಗುಂಡಾರಕ್ಕೆ ಹೋಗುವದು, ದಾನಮಾಡುವದು ಮೊದಲಾದವು ಬಗೆ ಬಗೆಯ ಪ್ರಾಯಶ್ಚಿತ್ತಗಳು.

## ಉದಾತ್ತೀಕರಣ (Sublimation)

ಮೂಲ ಪ್ರೇರಣೆಗಳ ಉದಾತ್ತೀಕರಣದ ವಿಚಾರವು ಫ್ರಾಯ್ಡನಿಂದ ಹುಟ್ಟಿತು. ಸ್ವಾಭಾವಿಕವಾಗಿ ತೃಪ್ತಿಹೊಂದದೇ ಇದ್ದ ಕಾಮ ಅಥವಾ ಪ್ರೇಮದ ಪ್ರವೃತ್ತಿಯನ್ನು ಸಮಾಜ ಸೇವೆಯ ಚಟುವಟಿಕೆಗಳಲ್ಲಿ ಉಪಯೋಗಿಸುವುದ ರಿಂದ ಅದು ಉದಾತ್ತಗೊಳ್ಳುವದೆಂದು ಹೇಳಲಾಗುತ್ತದೆ. ನರ್ಸಿಂಗ, ಮಕ್ಕಳ ಜೋಪಾನ, ಸಮಾಜಸೇವೆ, ಶಿಕ್ಷಕ ವೃತ್ತಿ, ಮೊದಲಾದವು ಪ್ರೇಮ ಪ್ರವೃ ತ್ತಿಯು ಉದಾತ್ತಗೊಂಡ ಚಟುವಟಿಕೆಗಳು ಮಕ್ಕಳ ಕುತೂಹಲ ಮತ್ತು ಸಂಪಾದನೆ ಬೇಡಿಕೆಗಳನ್ನು ಅವರ ಜ್ಞಾನವನ್ನು ಬೆಳೆಸುವುದರಲ್ಲಿ, ಸ್ವಾಭಿ ಮಾನವನ್ನು ಮುಂದಾಳುತನದಲ್ಲಿ ಮತ್ತು ಸಮಾಜಸೇವೆಯಲ್ಲಿ ಉದಾತ್ತ

ಗೊಳಿಸಬಹುದ. ಇಲ್ಲವಾದರೆ ಈ ಬೇಡಿಕೆಗಳು ಮಕ್ಕಳನ್ನು ಸುಳ್ಳು ಹೇಳಲಿಕ್ಕೆ, ಚಾಡಿ ಹೇಳಲಿಕ್ಕೆ ಕಳವು ಮಾಡಲಿಕ್ಕೆ, ಅಥವಾ ದಂಗೆ ಹಾಕ ಲಿಕ್ಕೆ ಹಚ್ಚಬಹುದು.

## ಭರತಿ (Compensation)

ಒಂದು ಕೆಲಸವನ್ನು ಮಾಡಲಿಕ್ಕೆ ಅಸಮರ್ಥನಾದವನಲ್ಲಿ ತಾನು ಕೀಳು ಎಂಬ ಭಾವನೆಯು ಒಡಮೂಡುವದು. ಆ ಭಾವನೆಯನ್ನು ನಿವಾರಿಸ ಲಿಕ್ಕೆ ತನಗೆ ನೀಗುವ ಕೆಲಸವನ್ನು ಮಾಡಿ ಕೊರತೆಯಾದ ಸ್ವಾಭಿಮಾನವನ್ನು ತುಂಬಿಕೊಳ್ಳುತ್ತಾನೆ. ಶಾಲೆಯ ಅಭ್ಯಾಸದಲ್ಲಿ ಮುಂದುವರಿಯದ ಹುಡುಗನು ಶಾರೀರಿಕ ಕಸರತ್ತುಗಳಲ್ಲಿ ಅಥವಾ ಇತರ ಚಟುವಟಿಕೆಗಳಲ್ಲಿ ತನ್ನ ಕುಶಲತೆ ಯನ್ನು ತೋರಿಸಲು ಪ್ರಯತ್ನಿಸುತ್ತಾನೆ. ಕಲಾ ಕೌಶಲ್ಯಗಳಲ್ಲಿ ಪ್ರಾವೀಣ್ಯತೆ ಯನ್ನು ಪಡೆಯಲಾರದವನು ಅಭ್ಯಾಸದಲ್ಲಿ ಮುಂದುವರಿಯಲು ಪ್ರಯತ್ನಿಸು ತ್ತಾನೆ. ಜಂಬ ಕೊಚ್ಚುವದು ಅಥವಾ ಶ್ರೇಷ್ಠನೆಂದು ನಟಿಸುವದು ಮತ್ತು ಹಿರೇತನವನ್ನು ನಡೆಸುವದು ಇವು ಕೂಡ ಕುಂದು ಕೊರತೆಗಳನ್ನು ಮುಚ್ಚಿ ಕೊಳ್ಳುವಬೇರೆ ಉಪಾಯಗಳು.

## ಅತಿಕ್ರಮಣ (Aggression)

ತನ್ನ ಬೇಡಿಕೆಯನ್ನು ವಿಫಲಗೊಳಿಸಿದ ಅಥವಾ ಯಾವುದಾದರೊಂದು ರೀತಿಯಲ್ಲಿ ತನ್ನನ್ನು ಅವಹೇಳನ ಗೊಳಿಸಿದ ವ್ಯಕ್ತಿಗೆ ಅಪಾಯವನ್ನು ಮಾಡು ವುದಕ್ಕೆ ಅತಿಕ್ರಮಣ ವರ್ತನ ಅಥವಾ ಹರಿಹಾಯುವದು ಎನ್ನುತ್ತಾರೆ ಒಬ್ಬ ಮಗುವಿನ ಕೈಯಲ್ಲಿ ಗೊಂಬೆ ಇರುತ್ತದೆ ಮತ್ತೊಬ್ಬ ಮಗುವು ಅದನ್ನು ಕಸಿದು ಕೊಳ್ಳಲು ಹೋಗಿ ನಿರಾಶೆ ಹೊಂದುತ್ತಾನೆ ಆಗ ಅವನು ತನಗೆ ಗೊಂಬೆ ಯನ್ನು ಕೊಡದ ಮಗುವನ್ನು ಹೊಡೆಯುತ್ತಾನೆ. ಮತ್ತೊಬ್ಬ ಮಗುವು ಆಡ ಲಿಕ್ಕೆ ಹೊರಗೆ ಹೋಗಬೇಕೆನ್ನುತ್ತಾನೆ. ಆದರೆ ಅವನ ತಾಯಿಯು ಬೇಡವೆನ್ನು ತ್ತಾಳೆ. ಆಗ ಆ ಮಗುವು ತಾಯಿಯನ್ನು ಹೊಡೆಯುತ್ತಾನೆ. ಇಂಥ ಅತಿ ಕ್ರಮಣ ವರ್ತನವು ದೊಡ್ಡವರಲ್ಲಿ ಅಪ್ರತ್ಯಕ್ಷ ರೀತಿಯಿಂದ ವ್ಯಕ್ತವಾಗುತ್ತದೆ. ಹಂಗಿಸುವದು, ಚಾಡಿ ಹೇಳುವದು, ಟೀಕಿಸುವದು, ಗೊತ್ತಾಗದ ರೀತಿಯಲ್ಲಿ

ಹಾನಿಯನ್ನು ಉಂಟುಮಾಡುವದು ಇವು ಅಪ್ರತ್ಯಕ್ಷ ಉಪಾಯಗಳು. ಬೇಡಿಕೆಗಳ ಹೋರಾಟದಿಂದ ಉಂಟಾದ ಬಿಕ್ಕಟ್ಟನ್ನು ( Tension ) ಕಡಿಮೆ ಮಾಡಲಿಕ್ಕೆ ಅಥವಾ ಬಗೆಹರಿಸಲಿಕ್ಕೆ ಮನುಷ್ಯನು ಕೆಲವು ಪ್ರತ್ಯಕ್ಷ ಉಪಾಯಗಳನ್ನು ಕೈಕೊಳ್ಳುತ್ತಾನೆ. ಗುರಿಯನ್ನು ಮುಟ್ಟಲು ಒಮ್ಮೆ ಪ್ರಯತ್ನವು ವಿಫಲವಾದರೆ ಮತ್ತೊಮ್ಮೆ ಪ್ರಯತ್ನಿಸುತ್ತಾನೆ. ಅಥವಾ ಅದಕ್ಕೂ ಕಡಿಮೆ ಗುರಿ ಇಲ್ಲವೆ ಸುಲಭ ಸಾಧ್ಯವಾದ ಧ್ಯೇಯಗಳ ಕಡೆಗೆ ಹೊರಳುತ್ತಾನೆ ಅಡ್ಡ ಬಂದ ತೊಡರುಗಳನ್ನು ತೆಗೆದು ಹಾಕುತ್ತಾನೆ, ಪ್ರತಿಯೊಂದು ಧ್ಯೇಯದ ಲಾಭಹಾನಿಗಳನ್ನು ತರ್ಕಿಸಿ ಒಂದು ನಿರ್ಣಯಕ್ಕೆ ಬಂದು ಅದರಂತೆ ವರ್ತಿಸುತ್ತಾನೆ. ಅಥವಾ ಹಿತೈಷಿಗಳ ಅಭಿಪ್ರಾಯವನ್ನು ಕೇಳಿ ಅದರಂತೆ ವರ್ತಿಸುತ್ತಾನೆ.

ಮೇಲೆ ವಿವರಿಸಿದ ಅಪ್ರತ್ಯಕ್ಷ ಉಪಾಯಗಳಷ್ಟೇ ಮಗುವಿನ ತಪ್ಪು ನಡತೆಗಳೆಂದು ತಿಳಿಯಬಾರದು. ನಿರಾಶೆ ಹೊಂದಿದ ಮಗುವು ಇನ್ನೂ ಅನೇಕ ಸಣ್ಣಪುಟ್ಟ ರೀತಿಯಲ್ಲಿ ತನ್ನ ಅಸಂತೋಷವನ್ನು ಪ್ರಕಟಿಸುತ್ತಾನೆ. ಉಗುರು ಕಡಿಯುವ ಚಟ, ಬಟ್ಟು ಸೀಪುವ ಚಟ, ಅವಚಿಕೊಂಡು ಕೂಡ್ರುವ ಚಟ, ದಂಗೆ ಹಾಕುವ ಚಟ, ಮಡಿ ಮೈಲಿಗೆಯ ಚಟ, ಮುಂತಾದವು ಕೂಡ ಮನಸ್ಸಿನ ಹೋರಾಟದ ಗುರುತುಗಳು. ಇವುಗಳ ಕಾರಣಗಳನ್ನು ಶಿಕ್ಷಕನು ಕಂಡು ಕೊಳ್ಳುವದು ಒಳ್ಳೆಯದು. ಒಟ್ಟಿನಲ್ಲಿ ಮಗುವನ್ನು ತಿಳಿದುಕೊಳ್ಳುವದು ಶಿಕ್ಷಕನ ಒಂದು ಮಹತ್ವದ ಕೆಲಸ. ಅಂದರೇನೇ ಅವನು ಮಗುವಿಗೆ ಸರಿಯಾದ ಹಾದಿಯನ್ನು ತೋರಿಸಬಲ್ಲನು. ಮಗುವನ್ನು ತಿಳಿದುಕೊಳ್ಳುವದು ಅಂದರೆ ಮಗುವಿನ ತಪ್ಪುನಡತೆಗಳ ಮೂಲಕಾರಣಗಳನ್ನು ತಿಳಿದುಕೊಳ್ಳುವದು. ಅವುಗಳಲ್ಲಿ ಮುಖ್ಯವಾದವು ಆವವೆಂದರೆ—ಭದ್ರತೆ ಇಲ್ಲವೆಂದು ಮಗುವಿಗೆ ಅನಿಸುವಿಕೆ, ತಾನು ಕಡಿಮೆಯವನೆಂಬ ಕಲ್ಪನೆ ಮತ್ತು ವೈರ ಭಾವ. ಪಾಪದ ಕಲ್ಪನೆ, ಧ್ಯೇಯಗಳ ಅಥವಾ ಬೇಡಿಕೆಗಳ ಹೋರಾಟ, ಎರಡನೆಯವರಿಂದ ತಿರಸ್ಕಾರ, ಸಂಪಾದನೆಗೆ ಅಡೆತಡೆ, ಸ್ವಾಭಿಮಾನಕ್ಕೆ ಧಕ್ಕೆ ಸ್ವಾತಂತ್ರ್ಯಕ್ಕೆ ಪ್ರತಿಬಂಧ, ಕಠೋರವಾದ ಶಿಸ್ತು, ಮುಂತಾದವು ಅಂತು ಎಲ್ಲ ಅಕ್ರಮ ವರ್ತನಗಳ ಉಗಮಸ್ಥಾನ ಪ್ರತಿಕೂಲ ಪರಿಸ್ಥಿತಿ ಅಥವಾ ಮಗುವಿನಲ್ಲಿ ಬಾಹ್ಯ ಜೀವನದ ಬಗ್ಗೆ ವಕ್ರ ದೃಷ್ಟಿ. ಆದ್ದರಿಂದ ಶಿಕ್ಷಕನು ಪ್ರತಿಯೊಬ್ಬ ಮಗುವಿನ ಸಮಸ್ಯೆಗಳನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡುವದು ಅವಶ್ಯ.

## ಮನೆಯ ಆವರಣ

ಪರಿಸ್ಥಿತಿಯ ವರ್ಚಸ್ಸು ಮಗುವಿನ ವ್ಯಕ್ತಿತ್ವದ ಮೇಲೆ ಆಗುವದೆಂದು ಹಿಂದೆ ಆರನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ. ಇಲ್ಲಿ ಮನಸ್ಸಿನ ಆರೋಗ್ಯದ ದೃಷ್ಟಿಯಿಂದ ಎಂಥ ಆವರಣವು ಅಥವಾ ಸನ್ನಿವೇಶವು ಮಗುವಿನ ತಪ್ಪು ನಡತೆಗಳಿಗೆ ಕಾರಣವಾಗಿರುತ್ತದೆ ಎಂಬುದನ್ನು ವಿವೇಚಿಸುವ. ಮನಸ್ಸಿನ ಆರೋಗ್ಯತೆ ಅಥವಾ ಅನಾರೋಗ್ಯತೆಯು ಹೆಚ್ಚಾಗಿ ಆವರಣವನ್ನೇ ಅವಲಂಬಿಸಿರುತ್ತದೆ ಎಂಬುದನ್ನು ಹಿಂದೆಯೇ ತೋರಿಸಿಕೊಟ್ಟಿದೆ. ಹುಟ್ಟಿದಂದಿನಿಂದ ಮಗುವಿನ ವ್ಯಕ್ತಿತ್ವದ ಬೆಳವಣಿಗೆಯು ಸಂಯಾದ ಹಾದಿಯಲ್ಲಿ ಸಾಗಿದ್ದರೆ ಮನಸ್ಸಿನ ಆರೋಗ್ಯ, ಇಲ್ಲವಾದರೆ ಅನಾರೋಗ್ಯ ಉಂಟಾಗುತ್ತದೆ. ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಮನೆ, ಸಾಲೆ ಮತ್ತು ಸಮಾಜದ ವರ್ಚಸ್ಸು ಬೀಳುತ್ತದೆ. ಈ ವರ್ಚಸ್ಸುಗಳ ಪರಿಣಾಮವು ಒಳ್ಳೆಯದು ಅಥವಾ ಕೆಟ್ಟದ್ದು ಆಗಬಹುದು.

ಮಗುವು ಆರು ವರುಷದವನಾಗಿ ಸಾಲೆಗೆ ಬರುವವರೆಗೆ ಮನೆಯಲ್ಲಿಯೇ ಜೋಪಾನಹೊಂದುತ್ತಾನೆ. ಆ ಮೃದುವಾದ ಎಳೆಯ ವಯಸ್ಸಿನಲ್ಲಿ ಮನೆಯ ವರ್ಚಸ್ಸಿನ ಪರಿಣಾಮವಾಗಿ ಅವನ ವ್ಯಕ್ತಿತ್ವದ ರೂಪ ರೇಷೆಗಳು ಒಡಮೂಡುತ್ತವೆ. ಬರಬರುತ್ತ ಸಾಲೆ ಮತ್ತು ಸಮಾಜದ ವರ್ಚಸ್ಸು ಅವನ ವ್ಯಕ್ತಿತ್ವವನ್ನು ಮಾರ್ಪಡಿಸುತ್ತವೆ. ಆದರೆ ಸಾಮಾನ್ಯವಾಗಿ ತಂದೆತಾಯಿಗಳ ಮತ್ತು ಮನೆಯ ವರ್ಚಸ್ಸು ಬಹಳ ಮಹತ್ವದ್ದು. ಇಂಡಿಯಾದ ಅಸಂಖ್ಯಾತ ಹುಡುಗರಿಗೆ ಮನೆಯಲ್ಲಿಯ ಅತಿ ದೊಡ್ಡ ಪ್ರತಿಕೂಲ ಪರಿಸ್ಥಿತಿ ಎಂದರೆ ಬಡತನ. ತಂದೆ ತಾಯಿಗಳ ಬಡತನದಿಂದ ಮಕ್ಕಳು ಅನೇಕ ಕಷ್ಟಗಳನ್ನು ಸೋಸಬೇಕಾಗುತ್ತದೆ. ಹೊಟ್ಟೆತುಂಬ ಅನ್ನ ಮೈತುಂಬ ಬಟ್ಟೆ ಇಲ್ಲದೆ ಎಷ್ಟೋ ಹುಡುಗರು ಅಲೆದಾಡುವದನ್ನು ನಾವು ಪ್ರತಿನಿತ್ಯ ಕಣ್ಣಾರೆ ಕಾಣುತ್ತೇವೆ. ಬಡತನದ ಮೂಲಕ ಮಕ್ಕಳಿಗೆ ಸಮತೋಲನಾದ ಆಹಾರ ಸಿಕ್ಕುವದಿಲ್ಲ, ಮನೆಯಲ್ಲಿ ಅಭ್ಯಾಸ ಮಾಡಲಿಕ್ಕೆ ಸ್ವತಂತ್ರ ಕೋಣೆ ಇರುವದಿಲ್ಲ, ಸರಿಯಾಗಿ ಪಾಟಿ ಪುಸ್ತಕಗಳು ಇರುವದಿಲ್ಲ. ಶ್ರೀಮಂತರ ಮನೆಯ ಓರಿಗೆಯ ಗೆಳೆಯರಿಗೆ ಇವೆಲ್ಲ ಅನುಕೂಲತೆಗಳು ಇರುವದನ್ನು ನೋಡಿ ಬಡವರ ಮನೆಯ ಮಕ್ಕಳಲ್ಲಿ ತಾವು ಕಡಿಮೆಯವರೆಂಬ

ಭಾವನೆಯು ಉಂಟಾಗುತ್ತದೆ. ಇದು ಮನಸ್ಸಿನ ಅನಾರೋಗ್ಯದ ಲಕ್ಷಣವು. ಬಡತನಕ್ಕಿಂತ ಹೆಚ್ಚು ಮಹತ್ವದ ಸಂಗತಿ ಎಂದರೆ ತಂದೆ ತಾಯಿಗಳು ಮತ್ತು ಮಕ್ಕಳಲ್ಲಿ ಇರುವ ಸಂಬಂಧ.

ತಂದೆ ತಾಯಿಗಳು ಮಕ್ಕಳನ್ನು ಅಂಗೀಕರಿಸಬಹುದು ಅಥವಾ ನಿರಾಕರಿಸಬಹುದು. ಮನೆಯಲ್ಲಿ ಮಕ್ಕಳನ್ನು ಕಠೋರ ರೀತಿಯಿಂದ ನಡೆಯಿಸಿಕೊಳ್ಳುತ್ತಿದ್ದರೆ, ಹೀಯಾಳಿಸುತ್ತಿದ್ದರೆ, ಅಲಕ್ಷಿಸುತ್ತಿದ್ದರೆ, ಅವರಿಗೆ ಮಮತೆಯನ್ನು ತೋರಿಸದಿದ್ದರೆ, ಪ್ರಶಂಸೆ ಮಾಡದಿದ್ದರೆ ಅವರಲ್ಲಿ ಅಕ್ರಮ ವರ್ತನಗಳು ಕಂಡುಬರುತ್ತವೆ. ತಂದೆ ತಾಯಿಗಳಿಂದ ನಿರಾಕರಿಸಲ್ಪಟ್ಟ ಹುಡುಗರು ಇತರರ ಪ್ರೇಮವನ್ನು ಗಳಿಸಲು ಪ್ರಯತ್ನಿಸಬಹುದು, ಸೇಡು ತೀರಿಸಿಕೊಳ್ಳಲು ಪ್ರಯತ್ನಿಸಬಹುದು, ಚಿಂತೆಯಲ್ಲಿ ಕಾಲ ಕಳೆಯಬಹುದು, ತಾವು ಕಡಿಮೆಯವರೆಂದು ಭಾವಿಸಬಹುದು, ಭಯದಿಂದ ಅಡಗಿಕೊಂಡು ಕೂಡ್ರಬಹುದು, ಬೇರೆ ಹುಡುಗರ ಮೇಲೆ ದರ್ಪ ನಡೆಯಿಸಬಹುದು, ಜಗಳ ಗಂಟರಾಗಬಹುದು. ಅಥವಾ ಸುಳ್ಳು ಹೇಳುವ ಚಟವನ್ನು ಕಲಿಯಬಹುದು. ಇತ್ತ ಮಕ್ಕಳಿಗೆ ಅತಿಯಾಗಿ ಅಚ್ಚುಚ್ಚಿ ಮಾಡುವದೂ ತಪ್ಪು. ಅವರು ತಾವಾಗಿಯೇ ಅಂಗಿ ತೊಟ್ಟುಕೊಳ್ಳಲು, ಊಟ ಮಾಡಲು ಸಮರ್ಥರಿದ್ದರೂ ಪಾಲಕರು ಅವರಿಗೆ ಉಣಿಸುವದನ್ನು ತೊಡಿಸುವದನ್ನು ಮಾಡುವದರಿಂದ, ಅವರ ಆರೋಗ್ಯದ ಬಗ್ಗೆ ಬಹಳ ಕಾಳಜಿ ಮಾಡುವುದರಿಂದ ಕೆಡಕು ಪರಿಣಾಮವು ಉಂಟಾಗುತ್ತವೆ. ಏಕೆಂದರೆ ಅದರಿಂದ ಮಕ್ಕಳಲ್ಲಿ ಪರಾವಲಂಬನ ವೃತ್ತಿಯು ಬೆಳೆಯುತ್ತದೆ, ಸ್ವಾವಲಂಬನ ವೃತ್ತಿಯು ನಿರ್ಬಲ ವಾಗುತ್ತದೆ. ಅವರು ಕಷ್ಟಕ್ಕೆ ಅಂಜುತ್ತಾರೆ, ಯಾವಾಗಲೂ ಐಷಾರಾಮ ವನ್ನು ಬಯಸುತ್ತಾರೆ, ಸ್ವಾರ್ಥಿಗಳಾಗುತ್ತಾರೆ ಅಥವಾ ಅನ್ಯರ ಮೇಲೆ ಹರಿ ಹಾಯುತ್ತಾರೆ. ಮನೆಯಲ್ಲಿ ಅನೇಕ ಹುಡುಗರು ಇದ್ದಾಗ ಪಕ್ಷಪಾತ ಮಾಡುವುದರಿಂದ ಮಕ್ಕಳ ವ್ಯಕ್ತಿತ್ವದ ಮೇಲೆ ಕೆಡಕು ಪರಿಣಾಮ ಉಂಟಾ ಗುವದು. ಇದರಿಂದ ಒಬ್ಬನಲ್ಲಿ ದುರಭಿಮಾನ ಮತ್ತೊಬ್ಬನಲ್ಲಿ ಭಯ ಉಂಟಾಗುತ್ತವೆ. ಹಟಮಾರಿತನ, ಜಗಳಾಟ ಬೆಳೆಯುತ್ತವೆ. ನೀತಿಯ ಬಗ್ಗೆ ತಂದೆತಾಯಿಗಳಲ್ಲಿ ವಿಪರೀತ ಕಲ್ಪನೆ ಇದ್ದರೆ ಅಥವಾ ಅವರು ಅನೀತಿ

ವಂತರು ಇದ್ದರೆ ಮಕ್ಕಳ ವ್ಯಕ್ತಿತ್ವದ ಮೇಲೆ ಕೆಡಕು ಪರಿಣಾಮ ಉಂಟಾಗುತ್ತದೆ. ಮಕ್ಕಳ ಸಣ್ಣಪುಟ್ಟ ಅಪರಾಧಗಳೆಲ್ಲ ಪಾಪದ ಕೆಲಸಗಳೆಂದು ಬಗೆಯಬಾರದು. ಒಟ್ಟಿನಲ್ಲಿ ಮನೆಯ ಆವರಣವು ಒಳ್ಳೆಯದಾಗಿದ್ದರೆ ಮಕ್ಕಳು ಸಮಾಜಕ್ಕೆ ಹೊಂದಿಕೊಂಡು ಹೋಗುವ ಉತ್ತಮ ನಾಗರಿಕರಾಗಿ ಬೆಳೆಯುವರು. ಆದರೆ ಆ ಆವರಣವು ದೋಷಯುಕ್ತವಾಗಿದ್ದರೆ ಮಕ್ಕಳು ಮನೋಜಾಡ್ಯದಿಂದ ಪೀಡಿತರಾದ ವ್ಯಕ್ತಿಗಳಾಗಿ ಬೆಳೆಯುವರು.

## ಸಮಾಜದ ಆವರಣ

ಸಮಾಜದ ಪರಿಸ್ಥಿತಿ ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಅನೇಕ ಬಗೆಯಾಗಿ ಆಗುತ್ತದೆ. ಬೆಳೆಯುತ್ತಿರುವ ಮಕ್ಕಳ ಮನಸ್ಸಿನ ಆರೋಗ್ಯಕ್ಕೆ ಅಥವಾ ಅನಾರೋಗ್ಯಕ್ಕೆ ಸಮಾಜದ ಪರಿಸ್ಥಿತಿಯೂ ಕಾರಣವಾಗಿರುತ್ತದೆ. ಇದರಲ್ಲಿ ಸಮಾಜದ ವ್ಯವಸ್ಥೆ ಒಂದು ಮುಖ್ಯ ಸಂಗತಿ. ಆರ್ಥಿಕ ವಿಷಮತೆ, ಜಾತಿ, ಮತ, ಪಂಥ, ಭಾಷೆ, ಜನಾಂಗಗಳ ದ್ವೇಷ, ಶಿಕ್ಷಣದ ಅನುಕೂಲತೆಗಳ ತಾರತಮ್ಯ, ಹುಡುಗರಿಗೆ ಇರುವ ನಿರ್ಬಂಧ ಇವು ಸಾಮಾಜಿಕ ಆವರಣಗಳು. ಮಕ್ಕಳು ಸಮಾಜದಿಂದ ಅಪೇಕ್ಷಿಸುವದು ಮುಖ್ಯವಾಗಿ ಮೂರು ಸಂಗತಿಗಳು: ಭದ್ರತೆ, ಗೌರವ, ಮತ್ತು ಸಮತೆಯ ಸಂಘಜೀವನ (೧) ಮಕ್ಕಳ ಭದ್ರತೆಗೆ ಅಡ್ಡಿಬರುವ ಸಾಮಾಜಿಕ ಸಂಗತಿಗಳು : ಪರಭಾಷೆ ಪರಸಂಸ್ಕೃತಿಗಳ ದ್ವೇಷ, ವರ್ಗಕಲಹ, ನಿರುದ್ಯೋಗತನ, ಸಾಮಾಜಿಕ ಬಹಿಷ್ಕಾರ, ಕ್ರೂರ ಶಾಸನ, ದುಷ್ಟರ ಸಹವಾಸ, ಮಾನ ಹಾನಿ, ಮೇಲು ಕೀಳೆಂಬ ಕಲ್ಪನೆ, ಬಡತನ, ಆರ್ಥಿಕ ಮತ್ತು ಶೈಕ್ಷಣಿಕ ವಿಷಮತೆ, ಮನೆಜಗಳ, ಅನ್ಯಾಯ ಮುಂತಾದವು. (೨) ಮಕ್ಕಳ ಸ್ವಾಭಿಮಾನಕ್ಕೆ ಹಾನಿಕಾರಕವಾದ ಸಂಗತಿಗಳು: ತಂದೆತಾಯಿಗಳಲ್ಲಿ ಸರ್ವಾಧಿಕಾರವುಳ್ಳ ಮನೆಯ ವ್ಯವಸ್ಥೆ, ಶಿಕ್ಷಣದಲ್ಲಿ ಸರ್ವಾಧಿಕಾರವುಳ್ಳ ಸಾಲೆಯ ವ್ಯವಸ್ಥೆ, ವಿಶಿಷ್ಟ ಜನರು ಮಾತ್ರ ಅಧಿಕಾರಕ್ಕೆ ಬರುವ ಸಾಮಾಜಿಕ ವ್ಯವಸ್ಥೆ, ಸ್ವಾತಂತ್ರ್ಯವನ್ನು ನಿರಾಕರಿಸುವದು, ಪಕ್ಷಪಾತ, ಭಿನ್ನಭಾವ, ಅನ್ಯಾಯ, ಅವಮಾನಕರವಾದ ಹೋಲಿಕೆ, ಪಾಪದ ಕಲ್ಪನೆ, ನಿಲುಕಲಾರದ ಧ್ಯೇಯ, ಅಪಯಶಸ್ಸು, ಶಾರೀರಿಕ ನ್ಯೂನತೆ, ಮುಂತಾದವು. (೩) ಲೋಕಸತ್ತೆಯ ಸಂಘ ಜೀವನಕ್ಕೆ ಹಾನಿ ತರುವ

ಸಂಗತಿಗಳು: ಕುರುಡು ನಂಬುಗೆ, ಜಾತಿಭೇದ, ಅಸ್ಪೃಶ್ಯತೆ, ವರ್ಣದ್ವೇಷ, ಮೇಲು ಕೀಳಿನ ಭಾವ, ವಂಶಪರಂಪರೆಯ ಉದ್ಯೋಗ, ಶೈಕ್ಷಣಿಕ ವಿಷಮತೆ, ಬಡತನ, ಅಜ್ಞಾನ, ಸಮಾಜದ ಅನೈಕ್ಯತೆ ಮುಂತಾದವು. ಸಮಾಜ ರಚನೆಯು ಲೋಕಸತ್ತೆಯ ತತ್ವಗಳಿಗೆ ಹೊರತಾಗಿದ್ದರೆ ಅಂಥ ಸಮಾಜಕ್ಕೆ ಹೊಂದಿಕೆಯಾಗುವಂತೆ ಮಕ್ಕಳ ಶಿಕ್ಷಣವನ್ನು ಯೋಚಿಸಬೇಕೆಂದು ತಿಳಿಯ ಬಾರದು. ಮಕ್ಕಳಲ್ಲಿ ವಿವೇಕದೃಷ್ಟಿಯನ್ನು ಬೆಳೆಯಿಸುವುದು ಮಾತ್ರ ಶಿಕ್ಷಕನ ಕೆಲಸ. ಅವರು ಬೆಳೆದು ದೊಡ್ಡವರಾದ ಮೇಲೆ ಸಮಾಜ ಸುಧಾರಕರಾಗ ಬಹುದು. ಒಟ್ಟಿನಲ್ಲಿ ನಮ್ಮ ದೇಶದ ಹೊಸ ಘಟನೆಯಲ್ಲಿ ಹೇಳಿದ ಮೂಲ ಭೂತ ಹಕ್ಕುಗಳ ಸಂಪ್ರದಾಯಗಳು ನೆಲಸುವವರೆಗೆ, ಹೊಸ ಸಮಾಜ ರಚನೆಯು ಆಗುವವರೆಗೆ ಅಶಿಕ್ಷಿತರ ಮತ್ತು ಬಡವರ ಮಕ್ಕಳು ಅನೇಕ ತೊಂದರೆಗಳಿಗೆ ಈಡಾಗುವರು. ಇದರಿಂದ ಅವರು ತಮ್ಮ ಮನಸ್ಸಿನ ಆರೋಗ್ಯತೆಯನ್ನು ಕಳೆದುಕೊಳ್ಳುವರು.

## ಶಾಲೆಯ ಆವರಣ

ಸಾಲೆಯ ಅಭ್ಯಾಸ ಪತ್ರಿಕೆಯು ಮಕ್ಕಳ ಬೆಳವಣಿಗೆಗೆ ಅನುಗುಣವಾಗಿರದಿದ್ದರೆ, ಸ್ಪರ್ಧೆಗಳಿಗೆ ಹೆಚ್ಚು ಮಹತ್ವ ಕೊಡುತ್ತಿದ್ದರೆ, ವರ್ಗವ್ಯವಸ್ಥೆಯಲ್ಲಿ ನಿರ್ಬಂಧಗಳು ಹೆಚ್ಚಾಗಿದ್ದರೆ, ಕಲಿಸುವ ಪದ್ಧತಿಗಳು ಸರಿಯಾಗಿ ಇರದಿದ್ದರೆ, ಅಥವಾ ಶಿಕ್ಷಕನ ವ್ಯಕ್ತಿತ್ವದಲ್ಲಿ ಕುಂದು ಕೊರತೆಗಳು ಇದ್ದರೆ ಇವುಗಳ ಪರಿಣಾಮವು ಮಕ್ಕಳ ಮನಸ್ಸಿನ ಅನಾರೋಗ್ಯತೆಗೆ ಕಾರಣವಾಗುತ್ತದೆ. ಸಾಲೆಯನ್ನು ಅಥವಾ ಶಿಕ್ಷಕನನ್ನು ಮಕ್ಕಳು ಸೇರದಿದ್ದರೆ ಸಾಲೆಯ ಪರಿಸ್ಥಿತಿಯಲ್ಲಿ ಅಥವಾ ಶಿಕ್ಷಕನ ವ್ಯಕ್ತಿತ್ವದಲ್ಲಿ ದೋಷವಿರುತ್ತದೆಂದು ತಿಳಿಯಬೇಕು. ಪರೀಕ್ಷೆಗಳಿಗೆ ಮತ್ತು ಸ್ಪರ್ಧೆಗಳಿಗೆ ಹೆಚ್ಚು ಮಹತ್ವ ಕೊಡುವುದರಿಂದ ಪರಹಿತಕ್ಕಿಂತ ಸ್ವಾರ್ಥಕ್ಕೆ ಪ್ರೋತ್ಸಾಹ ಕೊಟ್ಟಂತೆ ಆಗುವದು. ಅಭ್ಯಾಸ ಪತ್ರಿಕೆಯಲ್ಲಿ ವಿವಿಧತೆ ಮತ್ತು ತರಗತಿ ಇರದಿದ್ದರೆ ಮಂದಗತಿಯ ಮಕ್ಕಳು ನಿರುತ್ಸಾಹ ಹೊಂದುವರು, ಮತ್ತು ತೀವ್ರಗತಿಯ ಹುಡುಗರು ಸಾಲೆಯ ಬಗ್ಗೆ ಜಿಗುಪ್ಸೆ ಪಡುವರು. ಆಟ ವಿಶ್ರಾಂತಿಗಳಿಗೆ ಸಾಕಷ್ಟು ವೇಳೆ ಸಿಗದಿದ್ದರೆ, ಚಟುವಟಿಕೆಗಳಲ್ಲಿ ವಿವಿಧತೆ ಇರದಿದ್ದರೆ ಮಕ್ಕಳು ಉದಾಸೀನರಾಗುವದು.

ಶಾಲೆಯ ಪರಿಸ್ಥಿತಿಗಿಂತ ಶಿಕ್ಷಕನ ವ್ಯಕ್ತಿತ್ವವು ಬಹಳ ಮಹತ್ವದ್ದು. ಹೇಗೆ ಶಿಕ್ಷಕನೋ ಹಾಗೆ ವಿದ್ಯಾರ್ಥಿ. ಶಿಕ್ಷಕನು ವಿದ್ಯಾರ್ಥಿಗಳ ಮೇಲೆ ಮಮತೆಯುಳ್ಳವ, ಸಹಾನುಭೂತಿಯುಳ್ಳವ, ನಿಷ್ಪಕ್ಷಪಾತಿ ಶಾಂತ ಸ್ವಭಾವದವ, ಮತ್ತು ನಗೆ ಮುಖದವ ಇದ್ದರೆ ಮಕ್ಕಳು ಅಂಥವನನ್ನು ಸೇರುವರು. ಮತ್ತು ಅದೇ ಬಗೆಯ ವ್ಯಕ್ತಿತ್ವವು ಅವರಲ್ಲಿ ಬೆಳೆಯಲು ಅನುಕೂಲವಾಗುವದು. ಶಿಕ್ಷಕನು ನಿರುತ್ಸಾಹಿ, ಪಕ್ಷಪಾತಿ, ಗಂಟು ಮೋರೆಯವ, ನಿರ್ದಯ, ಅಥವಾ ಅಸಹಕಾರಿ ಇದ್ದರೆ ಮಕ್ಕಳು ಅವನನ್ನು ಸೇರುವದಿಲ್ಲ ಶಿಕ್ಷಕನ ವ್ಯಕ್ತಿತ್ವದಿಂದ ವರ್ಗದ ವಾತಾವರಣವು ಹರುಷದಾಯಕವಿದ್ದರೆ ಮಗುವಿನ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಒಳ್ಳೇ ಪ್ರಭಾವವು ಬೀಳುತ್ತದೆ. ಆದರೆ ಶಿಕ್ಷಕನ ವ್ಯಕ್ತಿತ್ವದಿಂದ ವರ್ಗದ ಅಥವಾ ಶಾಲೆಯ ವಾತಾವರಣವು ನಿರುತ್ಸಾಹಕರವಾಗಿದ್ದರೆ ಕೆಡಕು ಪರಿಣಾಮವಾಗುತ್ತದೆ. ಆದ್ದರಿಂದ 'ಗುರುವಿನಂತೆ ಶಿಷ್ಯ' ಎಂಬ ಗಾದೆಯ ಮಾತು ಉಂಟಾಗಿದೆ. ಅಂದರೆ ಗುರುವಿನ ಸ್ವಭಾವದಂತೆ ಶಿಷ್ಯನ ಸ್ವಭಾವ ಆಗುವದು.

ಸಾಮಾನ್ಯವಾಗಿ ಶಾಲೆಯಲ್ಲಿ ಮತ್ತು ವರ್ಗದ ಕೋಣೆಯಲ್ಲಿ ಕಂಡು ಬರುವ ಮಕ್ಕಳ ಅಕ್ರಮ ವರ್ತನಗಳನ್ನು ಈ ರೀತಿಯಾಗಿ ವಿಭಾಗಿಸಬಹುದು:—
(೧) ವರ್ಗದ ಕೋಣೆಯ ಶಿಸ್ತನ್ನು ಉಲ್ಲಂಘಿಸುವದು. ಅಂದರೆ ಬೇರೆಯವರನ್ನು ಕೆಣಕುವದು, ಗದ್ದಲ ಮಾಡುವದು, ಜನರ ಲಕ್ಷ್ಯವನ್ನು ಎಳೆಯುವ ಕೃತಿಯನ್ನು ಮಾಡುವದು, ನಿಷ್ಕಾರಣವಾಗಿ ಮಾತಾಡುವದು. (೨) ಶಾಲೆಯ ನಿಯಮಗಳನ್ನು ಮುರಿಯುವದು. ಅಂದರೆ ಆಜ್ಞಾಭಂಗ ಮಾಡುವದು, ಮೇಲಕಾಡಿಸುವದು, ಪರೀಕ್ಷೆಯಲ್ಲಿ ಕಾಪಿ ಮಾಡುವದು, ಬಿರುಸು ಮಾತಾಡುವದು. (೩) ಕೆಲಸದಲ್ಲಿ ಬೇಸರಿಕೆ. ಅಂದರೆ ಲಕ್ಷ್ಯ ಕೊಡದೇ ಇರುವದು, ಅಚ್ಚುಕಟ್ಟುತನ ಇಲ್ಲದೇ ಇರುವದು ಪೂರ್ತತಯಾರಿ ಮಾಡದೇ ಇರುವದು. (೪) ಬೇರೆ ಹುಡುಗರ ಮೇಲೆ ಏರಿ ಹೋಗುವದು. (೫) ಅನೀತಿ ಮತ್ತು (೬) ಗುಂಪಿನಲ್ಲಿ ಕೂಡದೇ ಇರುವದು.

ವರ್ಗದ ಕೋಣೆಯಲ್ಲಿಯ ಈ ಅಕ್ರಮ ವರ್ತನಗಳನ್ನು ತಿದ್ದಲಿಕ್ಕೆ ಶಿಕ್ಷಕರು ಸಾಮಾನ್ಯವಾಗಿ ಅನಿಶ್ಚಿತ ಫಲವನ್ನು ಕೊಡುವ ಉಪಾಯಗಳನ್ನು

ಕೈಕೊಳ್ಳುವರು. ಆದರೆ ಜಾಣನಾದ ಶಿಕ್ಷಕನು ವರ್ಗದಲ್ಲಿಯ ಸಂದರ್ಭಗಳನ್ನು ಬದಲಾಯಿಸಲು ಅಪ್ರತ್ಯಕ್ಷ ರೀತಿಯಿಂದ ಪ್ರಯತ್ನಿಸುತ್ತಾನೆ. ಮೊದಲು ಶಿಸ್ತು ಭಂಗದ ಮೂಲ ಪ್ರಚೋದಕರಾದ ಹುಡುಗರನ್ನು ಕಂಡು ಹಿಡಿಯುತ್ತಾನೆ. ಆ ಮೇಲೆ ಅವರ ಅಕ್ರಮ ವರ್ತನದ ಹಿನ್ನೆಲೆಯನ್ನು ಸಹಾನುಭೂತಿಯಿಂದ ಪರೀಕ್ಷಿಸುತ್ತಾನೆ ಕೊನೆಗೆ ತಂದೆತಾಯಿಗಳ ಸಹಕಾರದಿಂದ ಸೂಕ್ತ ಉಪಾಯಗಳನ್ನು ಕೈಕೊಳ್ಳುತ್ತಾನೆ. ಆದರೆ ಚತುರನಲ್ಲದ ಶಿಕ್ಷಕನು ಪ್ರತ್ಯಕ್ಷವಾದ ದಂಡೋಪಾಯದಲ್ಲಿ ವಿಶ್ವಾಸವನ್ನು ಇಡುತ್ತಾನೆ. ನಿಂದಿಸುವದು, ಸಿಟ್ಟುಮಾಡುವದು, ಬೆದರಿಸುವದು, ತಿರಸ್ಕರಿಸುವದು, ಹೆಚ್ಚಿಗೆ ಕೆಲಸ ಮಾಡಲಿಕ್ಕೆ ಹೇಳುವದು, ಹೊಡೆಯುವದು, ಬಡೆಯುವದು, ವರ್ಗ ಬಿಟ್ಟು ಹೊರಗೆ ಹಾಕುವದು, ಬೇರೆ ಸ್ಥಳದಲ್ಲಿ ಕೂಡ್ರಲಿಕ್ಕೆ ಹೇಳುವದು, ಉದಾಸೀನ ಮಾಡುವದು, ಬುದ್ಧಿ ಹೇಳುವದು, ವಿಚಾರಿಸಿರೆಂದು ಹೇಳುವದು, ಬಹುಮಾನ ಕೊಡುವದು, ಮೆಚ್ಚುಗೆ ಕೊಡುವದು, ಸಹಾಯ ನೀಡುವದು, ಸೂಚನೆ ಕೊಡುವದು ಮೊದಲಾದ ಪ್ರತ್ಯಕ್ಷ ಉಪಾಯಗಳನ್ನು ಸಾಮಾನ್ಯ ಶಿಕ್ಷಕರು ಕೈಕೊಳ್ಳುವರು ಆದರೆ ಮನೋವಿಜ್ಞಾನದ ದೃಷ್ಟಿಯಿಂದ ಮಕ್ಕಳ ಡೊಂಕನ್ನು ತಿದ್ದುವ ಬಗೆಗೆ ಉಪಯೋಗಿಸಬಹುದಾದ ಸುಧಾರಿಸಿದ ಉಪಾಯಗಳನ್ನು ಮುಂದೆ ಬರೆಯುವ.

## ಮಗುವಿನ ವ್ಯಕ್ತಿತ್ವದ ಅಭ್ಯಾಸ

ಪ್ರತಿಯೊಬ್ಬ ಮಗುವನ್ನು ಉತ್ತಮ ನಾಗರಿಕನನ್ನಾಗಿ ಮಾಡುವದೇ ಶಿಕ್ಷಣದ ಹೆಗ್ಗುರಿ. ಉತ್ತಮ ನಾಗರಿಕನಲ್ಲಿ ಸುಸಂಬದ್ಧ ವ್ಯಕ್ತಿತ್ವವು ಬೆಳೆದಿರುವುದರಿಂದ ಅವನು ತನ್ನ ಮನಸ್ಸಿನ ಆರೋಗ್ಯವನ್ನು ಯಾವಾಗಲೂ ಜಪ್ಪಿಸಿಕೊಳ್ಳುವನು. ಶಿಕ್ಷಣದ ಈ ಉದಾತ್ತ ಧ್ಯೇಯವನ್ನು ಸಾಧಿಸಲಿಕ್ಕೆ ಶಿಕ್ಷಕನು ಮಗುವಿಗೆ ಹೇಗೆ ಮಾರ್ಗದರ್ಶಕನಾಗಬಲ್ಲನು ಎಂಬುದನ್ನು ಈ ಅಧ್ಯಾಯದಲ್ಲಿ ಸಂಕ್ಷೇಪವಾಗಿ ವಿವರಿಸಲಾಗಿದೆ. ಮಗುವಿನ ವ್ಯಕ್ತಿತ್ವವನ್ನು ಹೇಗೆ ತಿಳಿದುಕೊಳ್ಳಬಹುದು, ಮಗುವಿಗೆ ಸರಿಯಾದ ಹಾದಿಯನ್ನು ಹೇಗೆ

ಸೂಚಿಸಬಹುದು ಮತ್ತು ಶಿಕ್ಷಕನು ತನ್ನ ಮನಸ್ಸಿನ ಆರೋಗ್ಯವನ್ನು ಹೇಗೆ ಸಾಧಿಸಬಹುದು ಎಂಬುದನ್ನು ಕುರಿತು ಇಲ್ಲಿ ವಿವೇಚಿಸಲಾಗಿದೆ. ವ್ಯಕ್ತಿತ್ವ ವೆಂದರೆ ವ್ಯಕ್ತಿಗೆ ಸಂಬಂಧಪಟ್ಟ ಎಲ್ಲ ಸಂಗತಿಗಳು. ವ್ಯಕ್ತಿಯ ನಡೆ, ನುಡಿ, ಬುದ್ಧಿಮಟ್ಟ, ಕಾರ್ಯಸಾಮರ್ಥ್ಯ, ಅಭಿರುಚಿ, ಒಲವು, ಆಚಾರ ವಿಚಾರ, ಉಡಿಗೆ, ತೊಡಿಗೆ, ಧೈರ್ಯ, ಧೋರಣೆ, ಬಯಕೆ, ಬೇಡಿಕೆ, ಶೀಲ ಸ್ವಭಾವ, ನಂಬುಗೆ ವರ್ತನೆಗಳೆಲ್ಲವೂ ಅವನ ವ್ಯಕ್ತಿತ್ವದ ಅಂಗಗಳು. ಪ್ರತಿಯೊಬ್ಬ ಮಗುವಿನ ಸಂಪೂರ್ಣ ವ್ಯಕ್ತಿತ್ವವನ್ನು ತಿಳಿದುಕೊಳ್ಳುವದು ಅಸಾಧ್ಯವಾದ ಮಾತು. ಆದರೂ ಅವನ ವ್ಯಕ್ತಿತ್ವದ ಮುಖ್ಯ ಲಕ್ಷಣಗಳನ್ನು ತಿಳಿದುಕೊಳ್ಳುವ ಕೆಲವು ವಿಧಾನಗಳನ್ನು ಇಲ್ಲಿ ವಿವರಿಸಿದೆ.

## ನಿರೀಕ್ಷಣೆ (Observation)

ಸಾಮಾನ್ಯವಾಗಿ ಎಲ್ಲ ಶಿಕ್ಷಕರು ತಾವು ಕಲಿಸುತ್ತಿರುವ ವಿದ್ಯಾರ್ಥಿಗಳ ಸ್ವಭಾವ ನಿರೀಕ್ಷಣೆಯನ್ನು ಮಾಡಿಯೇ ಮಾಡುತ್ತಾರೆ. ಆದರೆ ಅವನ್ನೇ ವೈಜ್ಞಾನಿಕ ದೃಷ್ಟಿಯಿಂದ ಮಾಡುವದು ಒಳ್ಳೆಯದು. ಮಗುವಿಗೆ ಗೊತ್ತಾಗ ದಂತೆ ಸ್ವಾಭಾವಿಕ ಸಂದರ್ಭಗಳಲ್ಲಿ ಅವನ ವರ್ತನವ ನಿರೀಕ್ಷಣೆಯನ್ನು ಮಾಡಬೇಕು. ಮಗುವಿನ ಆಶೆ ಆಕಾಂಕ್ಷೆಗಳು, ಬೇನೆ ಬೇಸರಿಕೆಗಳು, ತೊಂದರೆಗಳು, ಸಮಸ್ಯೆಗಳು, ಯಾವವೆಂಬುದನ್ನು ತಿಳಿದುಕೊಳ್ಳಬೇಕು. ಹಿರಿಯರೊಡನೆ ಕಿರಿಯರೊಡನೆ ಮತ್ತು ಸರಿಕರವರೊಡನೆ ಅವನು ಹೇಗೆ ವರ್ತಿಸುತ್ತಾನೆ ಎಂಬುದನ್ನು ನಿರೀಕ್ಷಿಸಬೇಕು. ಮಗುವು ಮಾತಾಡುವಾಗ, ಉತ್ತರ ಕೊಡುವಾಗ ಅಥವಾ ಕೆಲಸ ಮಾಡುವಾಗ ಅವನ ಸ್ವಭಾವವು ಗೊತ್ತಾ ಗುತ್ತದೆ. ಶಿಕ್ಷಕನು ನಿಷ್ಪಕ್ಷಪಾತ ದೃಷ್ಟಿಯಿಂದ ಮತ್ತು ಸಹಾನುಭೂತಿಯಿಂದ ಮಗುವಿನ ಸ್ವಭಾವವನ್ನು ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಹಾಗೆ ಮಾಡ ಬೇಡ, ಹೀಗೆ ಮಾಡು ಎಂದು ಮಗುವಿಗೆ ಸುಮ್ಮನೆ ಉಪದೇಶ ಮಾಡುವದ ರಿಂದ ಅಷ್ಟೊಂದು ಪರಿಣಾಮವು ಆಗುವದಿಲ್ಲ. ಮಗುವಿನ ಬಗ್ಗೆ ಅವನ ತಂದೆ ತಾಯಿಗಳ, ಇತರ ಶಿಕ್ಷಕರ, ಮತ್ತು ಗೆಳೆಯರ ಅಭಿಪ್ರಾಯಗಳನ್ನು ತಕ್ಕೊಳ್ಳ ಬೇಕು. ಹೀಗೆ ನಿರೀಕ್ಷಣೆಯಿಂದ ಗೊತ್ತಾದ ಸಂಗತಿಗಳನ್ನು ಬರೆದಿಡಬೇಕು.

**ಸಂದರ್ಶನ** ( Interview )

ಮಗುವಿನ ಸಮಸ್ಯೆಗಳನ್ನು ತಿಳಿದುಕೊಳ್ಳಲಿಕ್ಕೆ ಕೆಲವು ಬಾರೆ ಅವನ ಸಂದರ್ಶನವನ್ನು ತಕ್ಕೊಳ್ಳಬೇಕು. ಆಗ ಮಗುವು ಬಿಚ್ಚು ಮನಸ್ಸಿನಿಂದ ಸಹಕರಿಸಿದರೇನೇ ಅದರಿಂದ ಪ್ರಯೋಜನವಾಗುವದು. ಅವನು ಶಿಕ್ಷಕನನ್ನು ಗೌರವದೃಷ್ಟಿಯಿಂದ ಕಾಣುತ್ತಿದ್ದರೆ, ಶಿಕ್ಷಕನಲ್ಲಿ ವಿಶ್ವಾಸವನ್ನು ಇಟ್ಟಿದ್ದರೆ ಮಾತ್ರ ಇದು ಸಾಧ್ಯ. ಇದನ್ನು ಅರಿತು ಶಿಕ್ಷಕನು ಜಾಗರೂಕತೆಯಿಂದ ವರ್ತಿಸಬೇಕು. ಮಗುವು ಅನುಮಾನಿಸದೆ ಎಲ್ಲವನ್ನೂ ಹೇಳುವಂತೆ ನೋಡಿ ಕೊಳ್ಳಬೇಕು. ಸಂದರ್ಶನದಲ್ಲಿ ಪ್ರೇಮದ ವಾತಾವರಣವಿರಬೇಕು. ಶಿಕ್ಷಕನು ಸಹಾನುಭೂತಿಯಿಂದ ಮಗುವಿನ ವರ್ತನದ ಅಥವಾ ತೊಂದರೆಗಳ ಕೇವಲ ವಸ್ತುಸ್ಥಿತಿಯನ್ನು ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸಬೇಕು.

**ಒಲವುಗಳು** ( Aptitudes )

ಮಗುವಿನ ವ್ಯಕ್ತಿತ್ವವು ಯಾವ ರೀತಿಯಲ್ಲಿ ಬೆಳೆಯಬಹುದು ಎಂಬುದು ಅವನ ಮನಸ್ಸಿನ ಒಲವುಗಳಿಂದಲೂ ಗೊತ್ತಾಗುತ್ತದೆ. ಸಮಾಜದಲ್ಲಿರುವ ಬೇರೆ ಬೇರೆ ಗುಂಪುಗಳ ಬಗ್ಗೆ, ಮತ ಪಂಥಗಳ ಬಗ್ಗೆ, ಉದ್ಯೋಗ ವ್ಯವಸಾಯ ಗಳ ಬಗ್ಗೆ ಮಗುವಿನ ಅಭಿಪ್ರಾಯಗಳು ಅಥವಾ ವಿಚಾರಗಳು ಏನೆಂಬುದನ್ನು ಶಿಕ್ಷಕನು ತಿಳಿದುಕೊಳ್ಳಬೇಕು. ಮಗುವು ಯಾವುದನ್ನು ಮೆಚ್ಚುತ್ತಾನೆ ಯಾವುದನ್ನು ಮೆಚ್ಚುವದಿಲ್ಲ ಎಂಬುದನ್ನು ತಿಳಿದುಕೊಳ್ಳಬೇಕು. ಇದರಂತೆ ಸಾಲೆಯಲ್ಲಿಯ ಕಾರ್ಯಕ್ರಮಗಳ ಬಗ್ಗೆ, ಅಭ್ಯಾಸ ಪತ್ರಿಕೆಯಲ್ಲಿಯ ವಿಷಯಗಳ ಬಗ್ಗೆ, ಶಿಕ್ಷಕರ ಬಗ್ಗೆ, ಸಾಲೆಯ ನಿಯಮಗಳ ಬಗ್ಗೆ ಮಗುವಿನ ಅಭಿಪ್ರಾಯ ಗಳನ್ನು ಪರೀಕ್ಷಿಸಬೇಕು. ಕೆಲವು ವಿಷಯಗಳನ್ನು ಕೊಟ್ಟು ಮೆಚ್ಚುವ ಅನುಕ್ರಮದ ಪ್ರಕಾರ ಅವುಗಳಲ್ಲಿ (i) "ಇವು ನನಗೆ ಹೆಚ್ಚು ಸೇರುತ್ತವೆ" (ii) "ಇವು ನನಗೆ ಸ್ವಲ್ಪ ಸೇರುತ್ತವೆ" (iii) "ಇವು ನನಗೆ ಸೇರುವದಿಲ್ಲ"— ಎಂದು ಮೂರು ಗುಂಪುಗಳನ್ನು ಮಾಡಲು ಹೇಳಬಹುದು. ಅದೇ ರೀತಿಯಾಗಿ ವ್ಯಕ್ತಿಗಳ ಬಗ್ಗೆ ಪ್ರಶ್ನೆ ಕೇಳಬಹುದು. ಅಥವಾ "ನೀವು ಯಾರಂತೆ ಆಗ ಬೇಕೆನ್ನುತ್ತೀರಿ"? ಎಂದು ಪ್ರಶ್ನೆ ಕೇಳಬಹುದು. ಆ ವಿಷಯಗಳ ಬಗ್ಗೆ ಅಥವಾ ವ್ಯಕ್ತಿಗಳ ಬಗ್ಗೆ ಪ್ರಬಂಧಗಳನ್ನು ಅಥವಾ ಪತ್ರಗಳನ್ನು ಬರೆಯಲು

ವೇಳೆ ಅವುಗಳ ಮುಖಾಂತರವೂ ಮಗುವಿನ ಒಲವುಗಳನ್ನು ತಿಳಿದುಕೊಳ್ಳಬಹುದು.

## ಅಭಿರುಚಿಗಳು ( Interests )

ಮಗುವಿನ ಅಭಿರುಚಿಗಳು ಕಾರ್ಯರೂಪದಲ್ಲಿ ವ್ಯಕ್ತವಾಗುತ್ತವೆ. ಇವುಗಳಿಂದ ಅವನ ವ್ಯಕ್ತಿತ್ವವೂ ಪ್ರಕಟವಾಗುತ್ತದೆ. ಒಂದು ನಿರ್ದಿಷ್ಟ ವಾರದಲ್ಲಿ ಅಥವಾ ಸೂಟಿಯಲ್ಲಿ ತಾನು ಏನೇನು ಮಾಡಿದನು ಎಂಬುದನ್ನು ವಿವರಿಸಲು ಮಗುವಿಗೆ ಹೇಳಬಹುದು. ಅಥವಾ ಕೆಲವು ಕೆಲಸಗಳ ಯಾದಿಯನ್ನು ಕೊಟ್ಟು ತನಗೆ ರುಚಿಸಿದಂತೆ ಅವುಗಳಲ್ಲಿ ಮೂರು ಗುಂಪುಗಳನ್ನು ಮಾಡಲು ಹೇಳಬಹುದು— "ಸೇರಿದ ವೇಳೆ" "ಕೆಲವು ವೇಳೆ" "ಎಂದೂ ಇಲ್ಲ" ಮುಂತಾಗಿ. ಆತ್ಮ ಚರಿತ್ರೆ, ಮತ್ತು ನಿಬಂಧಗಳ ಪರಿಶೀಲನೆಗಳಿಂದಲೂ ವ್ಯಕ್ತಿಯ ಅಭಿರುಚಿಗಳನ್ನು ತಿಳಿದುಕೊಳ್ಳಬಹುದು.

## ಪರಕ್ಷೇಪಣ ( Projection )

ನಿರಾಶೆ ಹೊಂದಿದ ಮಗುವು ತನ್ನ ಮನೋಗತವನ್ನು ಅಪ್ರತ್ಯಕ್ಷ ರೀತಿಯಿಂದ ಬೇರೆ ಸಂದರ್ಭಗಳಲ್ಲಿ ವ್ಯಕ್ತಮಾಡುತ್ತಾನೆ. ಆಟ, ಕತೆ, ಚಿತ್ರ, ನಾಟಕ, ಕನಸು ಮುಂತಾದ ಸನ್ನಿವೇಶಗಳಲ್ಲಿ ಮಗುವು ತನ್ನ ಭಾವವಿರೇಚನೆಯನ್ನು ಮಾಡುತ್ತಾನೆ. ತನ್ನ ತಂಗಿಯಮೇಲೆ ಹೊಟ್ಟೆಕಿಚ್ಚು ಮಾಡುತ್ತಿದ್ದ ಹುಡುಗಿಯು ಗೊಂಬೆಯ ಆಟದಲ್ಲಿ ತಂಗಿಯನ್ನು ಪ್ರತಿನಿಧಿಸುವ ಗೊಂಬೆಯನ್ನು ದೂರದಲ್ಲಿ ಇಟ್ಟು, ತಂದೆ ತಾಯಿಗಳನ್ನು ಪ್ರತಿನಿಧಿಸುವ ದೊಡ್ಡ ಗೊಂಬೆಗಳ ನಡುವೆ ಅಥವಾ ಸಮೀಪಕ್ಕೆ ತನ್ನನ್ನು ಪ್ರತಿನಿಧಿಸುವ ಗೊಂಬೆಯನ್ನು ಇಡುವಳು. ಪರೀಕ್ಷಕನು ಕೊಟ್ಟ ಕತೆಯನ್ನು ಪೂರ್ಣ ಮಾಡುವಾಗ ದಿಟ್ಟಹುಡುಗನು ತಾನು ಶೂರನೆಂಬ ಭಾವವನ್ನು ಕತೆಯಲ್ಲಿಯ ಚಿಕ್ಕ ನಾಯಕನ ಸಾಹಸದ ಕೃತಿಗಳಲ್ಲಿ ಹೆಣೆಯುವನು. ಕತೆಯಲ್ಲಿಯ ಹುಡುಗನು ರೈಲು ಗಾಡಿಯು ಹೋಗುವಾಗ ಅದರ ಎದುರು ಓಡುತ್ತ ಹಳಿಯನ್ನು ದಾಟುವನು, ಇಲ್ಲವೆ ಎತ್ತರ ಸ್ಥಳದಿಂದ ಏನೂ ಅಪಾಯವಾಗದೆ ಕೆಳಗೆ ಜಿಗಿಯುವನು. ಇದರಂತೆ ಚಿತ್ರಗಳಿಗೆ ಅರ್ಥವನ್ನು ಹೇಳುವಾಗ ಅಥವಾ ತಾನೇ ಚಿತ್ರಗಳನ್ನು ತೆಗೆಯುವಾಗ ಮಗುವು ತನ್ನಲ್ಲಿ ಬಚ್ಚಿಟ್ಟ ಭಾವಗಳನ್ನು

ಮತ್ತು ಪೀಡಿಕೆಗಳನ್ನು ಹೊರಹೊಮ್ಮಿಸುವನು. ಹೀಗೆ ತನ್ನಲ್ಲಿಯ ವ್ಯಕ್ತಿತ್ವವನ್ನು ಇತರರಲ್ಲಿ ಆರೋಪಿಸುವ ವಿಧಾನಕ್ಕೆ "ಪರಕ್ಷೇಪಣ" (Projection) ಎನ್ನುತ್ತಾರೆ.

## ಸಾಮಾಜಿಕ ಬಂಧುತ್ವ (Social Relationship)

ಈಗಿನ ಕಾಲದಲ್ಲಿ ಮನುಷ್ಯ ಬಂಧುತ್ವವು ಅತಿ ಮಹತ್ವದ ಸಮಸ್ಯೆಯಾಗಿದೆ. ವ್ಯಕ್ತಿಗಳಲ್ಲಿ ಸ್ಪರ್ಧೆ, ಗುಂಪುಗಳಲ್ಲಿ ತಿಕ್ಕಾಟ, ಜನಾಂಗ ದ್ವೇಷ, ಜಾಗತಿಕ ಯುದ್ಧ ಮೊದಲಾದ ಸಾಮಾಜಿಕ ಹೋರಾಟಗಳು ಮನುಷ್ಯ ಮನುಷ್ಯರಲ್ಲಿಯ ಸಂಬಂಧವು ತಾಳ ಮೇಳ ತಪ್ಪಿದೆ ಎಂದು ಸೂಚಿಸುತ್ತವೆ. ಈ ಅನಾಹುತಗಳು ಕಡಿಮೆಯಾಗಬೇಕಾದರೆ ನಾವೆಲ್ಲರು ಅಣ್ಣತಮ್ಮಂದಿರೆಂಬ ಭಾವವು ಚಿಕ್ಕ ಮಕ್ಕಳಲ್ಲಿ ಬಲಗೊಳ್ಳಬೇಕಾಗುತ್ತದೆ. ವಿದ್ಯಾರ್ಥಿಗಳಲ್ಲಿ ಈ ವಿಶ್ವ ಕುಟುಂಬದ ಭಾವವು ಎಷ್ಟರ ಮಟ್ಟಿಗೆ ಬೆಳೆದಿದೆ ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಕೆಲವು ವಿಧಾನಗಳುಂಟು. ಮಗುವು ಒಂದು ವರ್ಗದಲ್ಲಿಯು ಅಥವಾ ಗುಂಪಿನಲ್ಲಿಯು ಹುಡುಗರೊಳಗೆ ಯಾರನ್ನು ಹೆಚ್ಚು ಮೆಚ್ಚುತ್ತಾನೆ, ಯಾರನ್ನು ಅಲ್ಲಗಳೆಯುತ್ತಾನೆ, ಯಾರ ಸಂಗಡ ಕೂಡ್ರಲು, ಅಭ್ಯಾಸ ಮಾಡಲು, ತಿನ್ನಲು, ಆಡ್ಡಾಡಲು ಬಯಸುತ್ತಾನೆ. ಅಥವಾ ಯಾರಿಂದ ಎಲ್ಲ ಪ್ರಸಂಗಗಳಲ್ಲಿ ದೂರ ಇರಲು ಬಯಸುತ್ತಾನೆ, ಮುಂತಾದ ಸಂಗತಿಗಳನ್ನು ಸಾಮಾಜಿಕ ಸಂಬಂಧದ ಅಳೆಯುವ ಹೊಸವಿಧಾನ (Sociometric Techniques) ಗಳಿಂದ ತಿಳಿದುಕೊಳ್ಳುವದು ಅವಶ್ಯ. ಇದರಿಂದ ಶಿಕ್ಷಕನು ಹುಡುಗರಲ್ಲಿರುವ ಗುಪ್ತ ಸಂಘಗಳನ್ನು, ಪರಸ್ಪರ ಪ್ರೇಮ ದ್ವೇಷಗಳನ್ನು, ಜಾತಿಯ ಮೂಢ ಕಲ್ಪನೆಗಳನ್ನು, ಪಕ್ಷಪಾತಗಳನ್ನು ತಿಳಿದುಕೊಳ್ಳಬಹದು.

## ವೃತ್ತಾಂತ ಸಂಗ್ರಹ ( Cumulative Record )

ಸಾಲೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಕುರಿತು ದಾಖಲೆ ಇಡುವ ಪದ್ಧತಿಯು ಪಾಶ್ಚಾತ್ಯ ದೇಶಗಳಲ್ಲಿ ರೂಢವಾಗಿರುತ್ತದೆ. ಮಗುವು ಅಭ್ಯಾಸದಲ್ಲಿ ಸಂಪಾದಿಸಿದ ಪ್ರಗತಿ, ಪರೀಕ್ಷೆಗಳಲ್ಲಿ ಪಡೆದ ಗುಣಗಳು, ಅವನ ಕುಂದು ಕೊರತೆಗಳು, ಅವನು ಭಾಗ ವಹಿಸಿದ ಚಟುವಟಿಕೆಗಳು; ಅವನು ಪಡೆದ

ಮೆಚ್ಚುಗೆ, ದಂಡ; ಇತರರೊಡನೆ ಅವನು ತೋರಿಸಿದ ಸಾಮಾಜಿಕ ವರ್ತನೆ, ಅವನ ಬಗ್ಗೆ ಶಿಕ್ಷಕರ ಅಭಿಪ್ರಾಯ ಮುಂತಾದ ಸಂಗತಿಗಳನ್ನು ಬರೆದಿಡುವದು ಮಹತ್ವದ್ದು. ತಂದೆ ತಾಯಿಗಳಿಗೆ ಅವರ ಮಗುವಿನ ಸ್ವಭಾವ ಮತ್ತು ಸಾಮರ್ಥ್ಯದ ಬಗ್ಗೆ ವರದಿಯನ್ನು ಕಳಿಸಲು ಇದು ಸಹಾಯಕವಾಗುವದಲ್ಲದೆ ಎಲ್ಲ ದೃಷ್ಟಿಯಿಂದಲೂ ಮಗುವಿನ ಮಾರ್ಗದರ್ಶನ ಮಾಡಲು ಶಿಕ್ಷಕನಿಗೆ ಸಹಾಯವಾಗುತ್ತದೆ.

## ವ್ಯಕ್ತಿ ಚಿಕಿತ್ಸೆ (Case Study)

ಸಮಸ್ಯೆಯಾಗಿದ್ದ ಮಗುವಿನ ಬಗ್ಗೆ ಸಂಪೂರ್ಣ ಅಭ್ಯಾಸ ಮಾಡುವ ಪದ್ಧತಿಯು ಅಮೇರಿಕೆ ಇಂಗ್ಲಂಡ ಮೊದಲಾದ ಪಾಶ್ಚಾತ್ಯ ದೇಶಗಳಲ್ಲಿ ವಿಶೇಷವಾಗಿ ಉಂಟು. ಇಲ್ಲಿ ಹದಿನೇಳು ಮೀರಿದ ಮನೋಜಾಡ್ಯದ ಮಕ್ಕಳ ಆರೈಕೆಯ ಬಗ್ಗೆ ಪ್ರತ್ಯೇಕ ಸಂಸ್ಥೆಗಳು ಇರುತ್ತವೆ. ಇಂಡಿಯಾದಲ್ಲಿ ಆ ತರಹದ ವ್ಯವಸ್ಥೆ ಮಾಡುವದು ಒಳ್ಳೆಯದು. ವ್ಯಕ್ತಿಚಿಕಿತ್ಸೆಯಲ್ಲಿ ಮಗುವಿನ ಹಿಂದಿನ ಚರಿತ್ರೆ ಇಂದಿನ ವೃತ್ತಾಂತ, ಮುಂದಿನ ವರ್ತನದ ತರ್ಕ ಇವೆಲ್ಲವನ್ನೂ ಕಲೆಹಾಕಿ ಅವನ ಕುಂದು ಕೊರತೆಗಳನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಮಗುವಿನ ಶಾರೀರಿಕ ಆರೋಗ್ಯ ಬೆಳವಣಿಗೆ, ಬುದ್ಧಿಮಟ್ಟ ವಿದ್ಯಾಭ್ಯಾಸ, ಸಾಮಾಜಿಕ ಸಂಬಂಧ, ಮನೆಯ ಹಿನ್ನೆಲೆ, ಉದ್ಯೋಗದ ಒಲವು, ವಿಶಿಷ್ಟ ವರ್ತನಗಳು, ಹೀಗೆ ಎಲ್ಲ ಸಂಗತಿಗಳನ್ನು ಬರೆದಿಡಬೇಕು. ನಮ್ಮ ಶಿಕ್ಷಕರು ಕರ್ತವ್ಯದ ದೃಷ್ಟಿಯಿಂದ ಮಗುವಿನ ಸೌಮ್ಯ ರೀತಿಯ ಅಕ್ರಮ ವರ್ತನವನ್ನು ತಿದ್ದಲು ನೆರವಾಗಬಲ್ಲರು. ಮನೆಯಲ್ಲಿ ಅಥವಾ ಸಮಾಜದಲ್ಲಿ ಅಂಜದ ಮಗುವು ಸಾಲೆಯಲ್ಲಿ ಮಾತ್ರ ಅಂಜುತ್ತಿದ್ದರೆ ಅದರ ನಿವಾರಣ ಉಪಾಯವನ್ನು ಶಿಕ್ಷಕನು ಮಾಡಬಲ್ಲನು. ಸಾಲೆ ಅಂದರೆ ಜರಕೊಳ್ಳುತ್ತಿದ್ದರೆ, ಸಾಲೆ ಕಲಿಯುವದರಲ್ಲಿ ಅಭಿರುಚಿ ತೋರಿಸದೆ ಇದ್ದರೆ, ಗಣಿತ, ವಾಚನ, ಮೊದಲಾದ ವಿಷಯಗಳಲ್ಲಿ ಬಹಳ ಹಿಂದೆ ಉಳಿಯುತ್ತಿದ್ದರೆ, ಸಾಲೆಯಲ್ಲಿ ತುಂಟತನ, ಹುಡುಗತನ ಮೊದಲಾದ ಅಕ್ರಮ ವರ್ತನಗಳು ಕಂಡು ಬರುತ್ತಿದ್ದರೆ ಶಿಕ್ಷಕನು ಅವುಗಳ ಕಾರಣಗಳನ್ನು ಗೊತ್ತು ಹಚ್ಚಿ ಯೋಗ್ಯವಾದ ಪ್ರತಿಬಂಧಕ ಮತ್ತು ನಿವಾರಣ ಉಪಾಯಗಳನ್ನು ಕೈಕೊಳ್ಳಬೇಕು.

ಮೇಲೆ ವಿವರಿಸಿದವೆಲ್ಲವೂ ವ್ಯಕ್ತಿತ್ವದ ಒರೆಗಳು ( Personality Tests ). ಆದರೆ ಅವು ವಿಶೇಷವಾಗಿ ಹೊಂದಿಕೆಯಾಗದ ವ್ಯಕ್ತಿತ್ವವನ್ನು ಅಳೆಯುವ ಒರೆಗಳು. ಅವುಗಳ ಹೊರತಾಗಿ ಇನ್ನೂ ಅನೇಕ ಬಗೆಯ ಒರೆಗಳು ಇರುತ್ತವೆ. ಶಿಕ್ಷಕನು ಪ್ರತಿಯೊಬ್ಬ ವಿದ್ಯಾರ್ಥಿಯ ವ್ಯಕ್ತಿತ್ವದ ಅಭ್ಯಾಸವನ್ನು ಕೂಲಂಕಷವಾಗಿ ಮಾಡುವದು ಅವಶ್ಯವಿಲ್ಲ. ಇಂಥ ಅಭ್ಯಾಸವು ಅವಕ್ಕಾಗಿಯೇ ತರಬೇತಿ ಹೊಂದಿದ ಮನೋವಿಜ್ಞಾನಿಯ ಕೆಲಸ. ಆದರೆ ಶಿಕ್ಷಕನಿಗೆ ಉಪಯುಕ್ತ ಬೀಳುವ ಸಂಗತಿಗಳನ್ನು ತಿಳಿದುಕೊಳ್ಳುವದು ಲೇಸು. ಮಗುವಿನ ಮನೋವೃತ್ತಿಯು ಪ್ರಬಲವಿರುವದೊ ಅಥವಾ ದುರ್ಬಲವಿರುವದೊ, ಅವನು ವಿನಯ ಉಳ್ಳವನೊ ಅಥವಾ ಸಿಟ್ಟುಸೆಡುವಿನವನೊ, ಒಳಮುಖನೊ ಅಥವಾ ಹೊರಮುಖನೊ, ಅಂಜುಬುರುಕನೊ ಅಥವಾ ದಿಟ್ಟನೊ ಮುಂತಾದ ಸ್ವಭಾವ ವೈಚಿತ್ರ್ಯಗಳನ್ನು ತಿಳಿದುಕೊಳ್ಳುವದರಿಂದ ಮಾರ್ಗದರ್ಶನ ಮಾಡಲು ಅನುಕೂಲವಾಗುವದು. ಸಾಮಾಜಿಕ ಹೊಣೆಗಾರಿಕೆ, ಸಹಕಾರ, ಆತ್ಮಸಂಯಮನ, ಮುಂದಾಳುತನ ಮುಂತಾದ ಗುಣಗಳು ಮಗುವಿನಲ್ಲಿ ಎಷ್ಟರಮಟ್ಟಿಗೆ ಬೆಳೆದಿವೆ ಎಂಬುದನ್ನು ತಿಳಿದುಕೊಳ್ಳುವದೂ ಅವಶ್ಯ. ಹೀಗೆ ಮಗುವಿನ ವ್ಯಕ್ತಿತ್ವವನ್ನು ಅಭ್ಯಾಸಿಸಲಿಕ್ಕೆ ಹೊಸ ಮಾದರಿಯ ಒರೆಗಳನ್ನು ಶಿಕ್ಷಕನು ಉಪಯೋಗಿಸಬೇಕು.

## ಕೆಲವು ಮಾರ್ಗದರ್ಶಕ ಸೂಚನೆಗಳು

ತಾನು ಕಲಿಸುತ್ತಿರುವ ಪ್ರತಿಯೊಬ್ಬ ಮಗುವನ್ನು ತಿಳಿದುಕೊಳ್ಳುವದು ಶಿಕ್ಷಕನ ಶ್ರೇಷ್ಠವಾದ ಕರ್ತವ್ಯ. ಪ್ರತಿಯೊಬ್ಬ ವಿದ್ಯಾರ್ಥಿಯ ಪ್ರತ್ಯೇಕ ಅಭ್ಯಾಸವನ್ನು ಮಾಡದ ಹೊರತು ಜೀವನದಲ್ಲಿ ಯಶಸ್ವಿಯಾಗಿ ಬಾಳುವ ಹಾದಿಯನ್ನು ಶಿಕ್ಷಕನು ಅವನಿಗೆ ತೋರಿಸಲಾರನು. ಆದ್ದರಿಂದ ಜಾಣನಾದ ಶಿಕ್ಷಕನು ಮಗುವನ್ನು ಅಭ್ಯಾಸಿಸುವ ಹೊಸ ಪದ್ಧತಿಗಳ ಪರಿಚಯವನ್ನು ಮಾಡಿಕೊಳ್ಳುವದು ಅವಶ್ಯ. ಮಗುವಿನ ಬೇಡಿಕೆಗಳನ್ನು ಪೂರೈಸುವ ದೃಷ್ಟಿಯನ್ನೇ ಶಿಕ್ಷಕನು ಯಾವಾಗಲೂ ಇಟ್ಟುಕೊಂಡಿರಬೇಕು. " ಮನೆಯಲ್ಲಿ ಮತ್ತು ಸಾಲೆಯಲ್ಲಿ ನನಗೆ ಬೇಕಾದದ್ದು ದೊರೆಯುವದಿಲ್ಲ! " ಎಂದು ಯಾವ ಮಗುವಿಗೆ ಅನಿಸುವದೋ ಅವನು ಅಕ್ರಮ ವರ್ತನಗಳಲ್ಲಿ ತೊಡಗುವನು. ಮಗುವಿಗೆ ಮುಖ್ಯವಾಗಿ ಬೇಕಾದದ್ದು ಒಳ್ಳೇ ಆಹಾರ, ಸಾಕಷ್ಟು

ವಿಶ್ರಾಂತಿ, ನಿದ್ರೆ, ಆಟ, ವ್ಯಾಯಾಮ, ಪ್ರೇಮ, ಆದರ, ಆಶ್ರಯ, ಮೆಚ್ಚುಗೆ ಮತ್ತು ಸ್ವಾತಂತ್ರ್ಯ. ಇವುಗಳನ್ನು ಪೂರೈಸುವದು ತಂದೆತಾಯಿಗಳ, ಸಮಾಜದ ಮತ್ತು ಶಿಕ್ಷಕರ ಕರ್ತವ್ಯ. ಮಗುವಿನಲ್ಲಿ ಮನಸ್ಸಿನ ಆರೋಗ್ಯವು ಅಥವಾ ಸುಸಂಬದ್ಧ ವ್ಯಕ್ತಿತ್ವವು ಬೆಳೆಯಬೇಕಾದರೆ ಕೆಳಗೆ ಕೊಟ್ಟ ಕೆಲವು ನಿಯಮ ಗಳನ್ನು ಶಿಕ್ಷಕನು ಲಕ್ಷ್ಯದಲ್ಲಿ ಇಡುವದು ಅವಶ್ಯ.

(೧) ಮಗುವನ್ನು ಪ್ರೇಮದಿಂದ ಕಾಣಬೇಕು. ಶಿಕ್ಷಕನಾಗಲಿ ಅಥವಾ ವಿದ್ಯಾರ್ಥಿಯಾಗಲಿ "ನಾನು" ಎಂಬ ಸೊಲ್ಲನ್ನು ಬಿಟ್ಟು "ನಾವು" ಎಂಬ ಪದವನ್ನು ಬಳಸಬೇಕು.

(೨) ಮಗುವನ್ನು ಪ್ರೋತ್ಸಾಹಿಸಬೇಕು. ಅವನನ್ನು ಹೀಯಾಳಿಸ ಬಾರದು, ನಿರುತ್ಸಾಹಗೊಳಿಸಬಾರದು. ಆಗಾಗ ಮೆಚ್ಚುಗೆಯನ್ನು ಕೊಡುತ್ತ ಅವನ ಸ್ವಾಭಿಮಾನವನ್ನು ಪೋಷಿಸಬೇಕು. ತಾನೂ ಉಪಯೋಗವಾಗುವ ವ್ಯಕ್ತಿ ಎಂದು ಮಗುವಿಗೆ ಅನಿಸಬೇಕು.

(೩) ವ್ಯವಹಾರಿಕ ಜಗತ್ತಿನಲ್ಲಿ ಯಾವುದರ ಬೆಲೆ ಎಷ್ಟು ಎಂಬುದನ್ನು ಮಗುವಿಗೆ ಕಲಿಸಬೇಕು. ಆದರೆ ಶಿಕ್ಷಕನು ತಾನೊಬ್ಬ ಸುಧಾರಕ ಅಥವಾ ಸಾಧು ಎಂಬುದನ್ನು ಪ್ರದರ್ಶಿಸಕೂಡದು.

(೪) ಮಗುವಿನಲ್ಲಿ ವಿಧೇಯತೆಗಿಂತ ಸ್ವಾತಂತ್ರ್ಯವೃತ್ತಿಯನ್ನು ಮತ್ತು ಹೊಣೆಗಾರಿಕೆಯನ್ನು ಪ್ರೋತ್ಸಾಹಿಸಬೇಕು.

(೫) ಮಗುವಿನಲ್ಲಿ ನ್ಯಾಯ ಮತ್ತು ಸಮಾನತೆಯ ದೃಷ್ಟಿಯನ್ನು ಬೆಳೆಯಿಸಬೇಕು.

(೬) ಮಗುವಿನ ಒಲವಿಗೆ ತಕ್ಕಂತೆ ಉದ್ಯೋಗ ವ್ಯವಸಾಯಗಳನ್ನು ಕಲಿಸಬೇಕು. ಇದು ಅವನ ಆರ್ಥಿಕ ಭದ್ರತೆಗೆ ಮಾರ್ಗವಾಗುವದು.

(೭) ಮಗುವಿನ ಒಲವಿಗೆ ತಕ್ಕಂತೆ ಕಲಾಕೌಶಲ್ಯಗಳನ್ನು ಕಲಿಸ ಬೇಕು. ವಿರಾಮಕಾಲದ ಸದುಪಯೋಗ ಮಾಡಲು ಇದು ಅವನಿಗೆ ಸಹಾಯಕವಾಗುವದು.

(೮) ಮಗುವಿಗೆ ವ್ಯಾವಹಾರಿಕ ಚತುರತನವನ್ನು ಕಲಿಸಬೇಕು.

(೯) ಮಗುವಿನಲ್ಲಿ ವಿವೇಕ ದೃಷ್ಟಿಯನ್ನು ಬೆಳೆಯಿಸಬೇಕು.

(೧೦) ಎಲ್ಲರೂ ಅಣ್ಣತಮ್ಮಂದಿರೆಂಬ ಸಮತಾಭಾವನೆಯನ್ನು ಮಗುವಿನಲ್ಲಿ ಬಲಪಡಿಸಬೇಕು. ಅವನಿಗೆ ವ್ಯಕ್ತಿಗೌರವವನ್ನು ಕಲಿಸಬೇಕು.

ಮೇಲೆ ಕೊಟ್ಟ ಸೂಚನೆಗಳು ಶಿಕ್ಷಕನಿಗೆ ಉಪಯೋಗವಾಗುವ ಕೆಲವು ಸಾಮಾನ್ಯ ನಿಯಮಗಳು. ಆದರೆ ಪ್ರತಿಯೊಬ್ಬ ಮಗುವಿನ ವೈಶಿಷ್ಟ್ಯವನ್ನು ತಿಳಿದುಕೊಂಡು ಅದಕ್ಕೆ ಸರಿಯಾಗಿ ಉಪಾಯಗಳನ್ನು ಯೋಚಿಸುವದು ಬಹಳ ಮಹತ್ವದ್ದು. ಆದ್ದರಿಂದ ವಿಶಿಷ್ಟ ಕುಂದುಕೊರತೆಗಳುಳ್ಳ ಮಗುವಿಗೆ ಶಿಕ್ಷಕನು ಹೇಗೆ ಸಹಾಯ ನೀಡಬಲ್ಲನು ಎಂಬುದನ್ನು ಇಲ್ಲಿ ಸೂಚಿಸಲಾಗಿದೆ.

## ಶಾರೀರಕ ನ್ಯೂನತೆ ಇದ್ದ ಮಗು

ಜ್ಞಾನೇಂದ್ರಿಯ ಅಥವಾ ಕರ್ಮೇಂದ್ರಿಯದ ದೋಷವಿದ್ದ ಮಗುವಿಗೆ ತನ್ನ ಸ್ವಾಭಾವಿಕ ನಿರ್ಬಲತೆಯಿಂದ ತಾನು ಕಡಿಮೆ ಎಂಬ ಭಾವವು ಉಂಟಾಗುತ್ತದೆ. ಕುರುಡ, ಕುಂಟ, ಹೆಳವ ಮುಂತಾದ ಅಂಗವಿಲ್ಲದ ಮಗುವು ಆಟಗಳಲ್ಲಿ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ತೊಂದರೆಯಾಗುವುದರಿಂದ ನಿರಾಶೆ ಹೊಂದುತ್ತಾನೆ. ಅಂಥ ಚಟುವಟಿಕೆಗಳಲ್ಲಿ ಭಾಗವಹಿಸಲು ಒಲ್ಲೆನೆನ್ನುತ್ತಾನೆ, ಅಂಜುತ್ತಾನೆ. ಅದರಂತೆ ಕಣ್ಣಿನ ದೋಷವಿದ್ದ ಹುಡುಗನು ಮುಂದೆ ಕೊಡ್ರಲಿಕ್ಕೆ, ಓದಲಿಕ್ಕೆ ನಾಚುತ್ತಾನೆ. ಕಾಯಿಲೆ ಇದ್ದ ಮಗುವು ಬೇಗ ದಣಿಯುತ್ತಾನೆ, ಸೀಟಕ ಸ್ವಭಾವದವನಾಗುತ್ತಾನೆ ಅಥವಾ ಸಾಲೆ ತಪ್ಪಿಸುತ್ತಾನೆ. ಇಂಥ ಅಂಗದೋಷವಿದ್ದ ಮಗುವಿಗೆ ಸಾಲೆಯಲ್ಲಿ ವಿಶೇಷ ಅನುಕೂಲತೆಗಳನ್ನು ಒದಗಿಸಿ ಕೊಡಬೇಕು. ಡಾಕ್ಟರರ ಮತ್ತು ತಂದೆ ತಾಯಿಗಳ ಸಹಕಾರವನ್ನು ಪಡೆಯಬೇಕು. ಡಾಕ್ಟರರ ಸೂಚನೆಯ ಪ್ರಕಾರ ಆಹಾರ, ವಿಶ್ರಾಂತಿ ಮೊದಲಾದವುಗಳನ್ನು ಪೂರೈಸಬೇಕು. ಮಂದ ದೃಷ್ಟಿಯುವರಿಗೆ ಮತ್ತು ಕಿವಿಯ ದೋಷವಿದ್ದವರಿಗೆ ವರ್ಗದ ಮುಂದೆ ಕೊಡ್ರುವ ವ್ಯವಸ್ಥೆಯನ್ನು ಮಾಡಬೇಕು. ಶಿಕ್ಷಕನು ಇವರಿಗೋಸುಗ ಗಟ್ಟಿಯಾಗಿ ಮತ್ತು ಸ್ಪಷ್ಟವಾಗಿ ಮಾತಾಡಬೇಕು. ಇಂಥ ಮಗುವಿನ ಇತರ ಸಾಮರ್ಥ್ಯಗಳನ್ನು ಮನ್ನಿಸಬೇಕು.

## ಅತಿ ಜಾಣ ಮಗು

ಸಾಲೆಯ ಅಭ್ಯಾಸ ಪತ್ರಿಕೆಯು ಬಹಳ ಸುಲಭವಾಗಿದ್ದರೆ ಇವನು ನಿರಾಶೆ ಹೊಂದುತ್ತಾನೆ. ಶಿಕ್ಷಕನು ಇವನ ಜಾಣತನವನ್ನು ಮನ್ನಿಸದೆ ಇದ್ದರೆ ಸಾಲೆಯ ಬಗ್ಗೆ ಮತ್ತು ಶಿಕ್ಷಕನ ಬಗ್ಗೆ ಇವನಲ್ಲಿ ವಿರೋಧವೃತ್ತಿಯು ಬೆಳೆಯುತ್ತದೆ. ತಂದೆ ತಾಯಿಗಳು ಮತ್ತು ಸರಿಕದವರು ಇವನ ಜಾಣತನವನ್ನು ಮೆಚ್ಚದಿದ್ದರೆ ಇವನಲ್ಲಿ ನಿರುತ್ಸಾಹ ಮತ್ತು ಹೀನಭಾವ ಉಂಟಾಗುತ್ತದೆ. ಆದರೆ ಇವನನ್ನು ಬಹಳವಾಗಿ ಹೊಗಳಹತ್ತಿದರೆ ಇವನಲ್ಲಿ ದುರಭಿಮಾನ ಮತ್ತು ಪ್ರತ್ಯೇಕತೆಯ ಭಾವ ಬೆಳೆಯುತ್ತದೆ. ಇಂಥ ಅತಿ ಜಾಣ ಮಗುವಿಗೆ ಪ್ರತ್ಯೇಕ ಸಾಲೆಗಳ ಏರ್ಪಾಡು ಕೆಲವು ದೇಶಗಳಲ್ಲಿ ಉಂಟು. ಆದರೆ ಈ ವ್ಯವಸ್ಥೆಯಿಂದಲೂ ಮಗುವಿನಲ್ಲಿ ದುರಭಿಮಾನ ಹುಟ್ಟುವದು. ಅದ್ದರಿಂದ ಸಾರ್ವಜನಿಕ ಸಾಲೆಯ ಅಭ್ಯಾಸಪತ್ರಿಕೆಯಲ್ಲಿ ಜಾಣ ಹುಡುಗನಿಗೆ ಹೆಚ್ಚು ವಿಷಯವನ್ನು ಕಲಿಸುವ ಅನುಕೂಲತೆಯನ್ನು ಇಡುವದು ಲೇಸು. ಇವನ ವಿಶೇಷ ಅಭಿರುಚಿಗೆ ತಕ್ಕಂತೆ ಹೆಚ್ಚು ವಿಷಯವನ್ನು ಕಲಿಸುವದರಿಂದ ಇವನ ಸ್ವಾಭಿಮಾನವು ತೃಪ್ತಿಹೊಂದುವದು.

## ಮಂದಬುದ್ಧಿಯ ಮಗು

ಒಬ್ಬ ಮಗುವು ಅಭ್ಯಾಸದಲ್ಲಿ ಹಿಂದುಳಿಯುತ್ತಿದ್ದರೆ ಅದು ಕೇವಲ ಅವನ ಮಂದಬುದ್ಧಿಯ ಲಕ್ಷಣವೆಂದು ತಿಳಿಯಬಾರದು. ಅಭ್ಯಾಸ ಮಾಡಲು ಸಾಕಷ್ಟು ಅನುಕೂಲತೆಗಳು ಇಲ್ಲದ ಮೂಲಕ ಜಾಣ ಹುಡುಗನೂ ಹಿಂದುಳಿಯುವ ಸಂಭವವುಂಟು. ಆದರೆ ಪರಿಸ್ಥಿತಿಯು ಅನುಕೂಲವಿದ್ದರೂ ಅಭ್ಯಾಸದಲ್ಲಿ ಹಿಂದುಳಿಯುತ್ತಿದ್ದರೆ ಅದಕ್ಕೆ ಮಂದಬುದ್ಧಿಯೇ ಕಾರಣವೆಂದು ಹೇಳಬಹುದು. ಮಗುವಿನ ಬುದ್ಧಿಮಟ್ಟವು ೭೫ ರಿಂದ ೯೫ ರ ವರೆಗೆ ಇದ್ದರೆ ಅದು ಮಂದಬುದ್ಧಿಯ ಲಕ್ಷಣ. ವರ್ಗವು ದೊಡ್ಡದಿದ್ದರೆ ಶಿಕ್ಷಕನು ಇವನನ್ನು ಮರೆಯಬಹುದು. ಇವನಿಗೆ ಅಭ್ಯಾಸವು ಕಠಿಣವಾಗುತ್ತದೆ. ಇತರ ವಿದ್ಯಾರ್ಥಿಗಳ ಜೊತೆಗೆ ವೇಗದಿಂದ ಕೆಲಸ ಮಾಡಲು ಇವನು ಅಸಮರ್ಥನಿರುತ್ತಾನೆ. ಪರೀಕ್ಷೆಯಲ್ಲಿ ನಪಾಸು ಆಗುವದರಿಂದ ಇವನು ನಿರಾಶೆ ಹೊಂದುತ್ತಾನೆ. ಇತರರು ಇವನನ್ನು ಹೀಯಾಳಿಸುತ್ತಾರೆ. ತಾಪ, ಕಡಿಮೆ

ಎಂಬ ಭಾವವು ಉಂಟಾಗಿ ಇವನು ಇತರರೊಡನೆ ಜಗಳಾಡುವಸಂಭವವುಂಟು. ಇಂಥ ಬುದ್ಧಿಮಟ್ಟ ೭೦–೭೫ ಕ್ಕೆ ಕಡಿಮೆ ಇದ್ದ ಮಗುವನ್ನು ಸ್ಪೇಶಲ್ ಸ್ಕೂಲುಗಳಿಗೆ ಕಳಿಸಬೇಕಾಗುವದು. ಆದರೆ ಥಡ್ಡ ಮಗುವಿಗೆ ಸಾಮಾನ್ಯ ಮಗುವಿಗಿಂತ ಕಡಿಮೆ ವಿಷಯವನ್ನು ಕಲಿಸಬೇಕು. ಒಂದು ವಿಷಯದಲ್ಲಿ ಮಗುವು ಥಡ್ಡನಿದ್ದರೆ ಇವನು ಎಲ್ಲ ವಿಷಯಗಳಲ್ಲಿಯೂ ಥಡ್ಡನಿರುತ್ತಾನೆಂದು ತಿಳಿಯಬಾರದು. ಮಗುವು ಯಾವ ವಿಷಯದಲ್ಲಿ, ಉದ್ಯೋಗದಲ್ಲಿ ಅಥವಾ ಕಲೆಯಲ್ಲಿ ಮುಂದುವರೆಯಬಲ್ಲನೊ ಅದನ್ನೇ ಅವನಿಗೆ ಕಲಿಸಬೇಕು. ಆದರಲ್ಲಿ ಇವನ ಪ್ರಗತಿಯನ್ನು ಮನ್ನಿಸಬೇಕು. ಮತ್ತು ಇವನ ಕುಂದು ಕೊರತೆಗಳ ಬಗ್ಗೆ ವಿಶೇಷ ಲಕ್ಷ್ಯವನ್ನು ಪೂರೈಸಬೇಕು.

## ಕೀಳು ಭಾವನೆಯ ಮಗು

ತಾವು ಕೀಳು, ಕಡಿಮೆ ಸಾಮರ್ಥ್ಯ ಉಳ್ಳವರು ಎಂಬ ಭಾವನೆಯಿಂದ ಪೀಡಿತರಾದ ಹುಡುಗರು ಸಾಲೆಯಲ್ಲಿ ಅನೇಕರಿರುತ್ತಾರೆ. ಇದಕ್ಕೆ ಮುಖ್ಯ ಕಾರಣವೆಂದರೆ ನಿಲುಕಲಾರದ ಧ್ಯೇಯ ಅಥವಾ ಮಂದ ಪ್ರಗತಿ. ಇದಕ್ಕೆ ಹಿನ್ನೆಲೆ ಅಂದರೆ ಶಾರೀರಿಕ ನ್ಯೂನತೆ, ಅನಾರೋಗ್ಯ, ಮಂದಬುದ್ಧಿ, ನಪಾಸು, ಜಾತಿಕಲ್ಪನೆ, ಬಡತನ ಮುಂತಾದವು. ಇಂಥ ಮಗು ಎರಡನೆಯವರ ಮೇಲೆ. ಹರಿಹಾಯುತ್ತಾನೆ, ಬೆದರಿಸುತ್ತಾನೆ, ದರ್ಪ ತೋರಿಸುತ್ತಾನೆ. ಅವರ ಲಕ್ಷ್ಯ ವನ್ನು ಎಳೆಯಲಿಕ್ಕೆ ಗದ್ದಲ ಹಾಕುತ್ತಾನೆ; ಇಲ್ಲವೆ ಏಕಾಕಿಯಾಗಿ ಸುಮ್ಮನೆ ಕೊಡ್ರುತ್ತಾನೆ, ತನ್ನನ್ನು ತಾನೇ ಹಳಿಯುತ್ತಾನೆ, ಹಿಂಜರಿಯುತ್ತಾನೆ, ಅಂಜ ಬುರಕನಾಗುತ್ತಾನೆ, ಜಡ್ಡು ಆಗಿದೆ ಎಂದು ನೆವ ತೆಗೆಯುತ್ತಾನೆ, ಹಗಲು ಗನಸು ಕಾಣುತ್ತಾನೆ, ಅಥವಾ ಅಸಡ್ಡಾಳುತನದಿಂದ ವರ್ತಿಸುತ್ತಾನೆ. ಇಂಥ ಮಗುವಿಗೆ ಮುಂದಾಳುತನದ ಕೆಲಸವನ್ನು ಇಲ್ಲವೆ ಸಾಮಾಜಿಕ ಚಟುವಟಿಕೆ ಗಳನ್ನು ಒದಗಿಸಿ ಕೊಡಬೇಕು. ಆದರೆ ಅವನ ಒಪ್ಪಿಗೆ ಇಲ್ಲದೆ ಹಾಗೆ ಭಾಗ ವಹಿಸಲು ಒತ್ತಾಯ ಪಡಿಸಬಾರದು. ಕ್ರಮೇಣ ಅದನ್ನು ಸಾಧಿಸಬೇಕು. ಇಂಥವನ ಒಲವುಗಳನ್ನು ಮತ್ತು ಅಭಿರುಚಿಗಳನ್ನು ನೋಡಿ ಅವುಗಳನ್ನೇ ಮುಂದುವರಿಸಬೇಕು. ಅವುಗಳಲ್ಲಿಯ ಅವನ ಪ್ರಗತಿಯನ್ನು ಪ್ರಶಂಸಿಸಬೇಕು.

**ಕಿಡಿಗೇಡಿ ಮಗು.**

ಕಿಡಿಗೇಡಿ ಹುಡುಗನ ಬುದ್ಧಿಮಟ್ಟ ಸುಮಾರು ೮೦-೯೦ ಇರುತ್ತದೆ. ಇವನ ಮನೆಯ ಪರಿಸ್ಥಿತಿ ಪ್ರತಿಕೂಲವಿರುತ್ತದೆ. ಮತ್ತು ಸಾಲೆಯ ಅಭ್ಯಾಸದಲ್ಲಿ ಹಿಂದೆ ಉಳಿದಿರುತ್ತಾನೆ. ಇವನು ಸಾಲೆಯ ನಿಯಮಗಳನ್ನು ಮುರಿಯುವನು, ಗದ್ದಲ ಹಾಕುವನು, ಹುಡುಗರ ಠೋಳಿ ಕಟ್ಟಿಕೊಂಡು ಅಲೆದಾಡುವನು, ಮತ್ತು ಶಿಕ್ಷಕರೊಡನೆ ಅಸಭ್ಯ ರೀತಿಯಿಂದ ವರ್ತಿಸುವನು. ಇಂಥ ಮಗುವನ್ನು ಹತೋಟಿಯಲ್ಲಿ ತರಲಿಕ್ಕೆ ಶಿಕ್ಷಕನು ಸಾಮಾನ್ಯವಾಗಿ ಕೈಕೊಳ್ಳುವ ಉಪಾಯಗಳು ಯಾವವೆಂದರೆ—ಸಿಟ್ಟು ಮಾಡುವದು, ಬೆದರಿಸುವದು, ಹೀಯಾಳಿಸುವದು, ಅಪಮಾನ ಮಾಡುವದು, ಕ್ಷಮೆ ಬೇಡಲು ಒತ್ತಾಯ ಪಡಿಸುವದು, ದಂಡ ಕಟ್ಟುವದು, ಸಾಲೆ ಬಿಟ್ಟ ಮೇಲೆ ಹೆಚ್ಚು ವೇಳೆ ಕೂಡ್ರಿಸುವದು, ಹೆಚ್ಚು ಕೆಲಸ ಕೊಡುವದು, ಪರೀಕ್ಷೆಯಲ್ಲಿ ಕಡಿಮೆ ಗುಣಗಳನ್ನು ಹಾಕುವದು, ನಪಾಸು ಮಾಡುವದು, ಹಿಂಬಡತಿ ಮಾಡುವದು, ಬಡಿಯುವದು, ಮುಂತಾದವು. ಆದರೆ ಇವೆಲ್ಲ ಉಪಾಯಗಳು ನಿಷ್ಪ್ರಯೋಜಕವಾದವು. ಕಾರಣ ಶಿಕ್ಷಕನು ಈ ಅಧ್ಯಾಯದಲ್ಲಿ ಸೂಚಿಸಿದ ಸುಧಾರಿಸಿದ ಉಪಾಯಗಳನ್ನು ಕೈಕೊಳ್ಳಬೇಕು. ಮೊದಲು ಕಿಡಿಗೇಡಿ ವರ್ತನಗಳ ಹಿನ್ನೆಲೆಯನ್ನು ಕಂಡು ಹಿಡಿಯಬೇಕು. ಇದಕ್ಕಾಗಿ ಮಗುವಿನ ತಂದೆ ತಾಯಿಗಳ, ಶಿಕ್ಷಕರ, ಸಾಮಾಜಿಕ ಸೇವಾ ಸಂಸ್ಥೆಗಳ ಮತ್ತು ಗೆಳೆಯರ ಸಹಾಯವನ್ನು ಪಡೆಯಬೇಕು. ಇಂಥ ಮಗುವಿನ ಅಭ್ಯಾಸವನ್ನು ವರ್ಗದ ಶಿಕ್ಷಕನು ಮಾಡಬಹುದು. ಇಲ್ಲವೆ ಬೇರೆ ಶಿಕ್ಷಕನ ಕೆಳಗೆ ಆ ಮಗುವನ್ನು ಇಡಬಹುದು.

**ಕಠೋರ ತಂದೆತಾಯಿಗಳಿದ್ದ ಮಗು**

ಮಗುವನ್ನು ನಿರಾಕರಿಸಲಿಕ್ಕೆ ತಂದೆ ತಾಯಿಗಳ ವ್ಯಕ್ತಿತ್ವವೇ ಕಾರಣ. ನಿಷ್ಕರುಣಿಗಳಾದ ಅಥವಾ ಅತಿನೀತಿವಂತರಾದ ತಂದೆ ತಾಯಿಗಳು ತಮ್ಮ ಮಕ್ಕಳನ್ನು ಕಠೋರ ರೀತಿಯಿಂದ ನಡೆಯಿಸಿಕೊಳ್ಳುತ್ತಾರೆ. ಇಂಥ ತಂದೆ ತಾಯಿಗಳಿಗೆ ಉಪದೇಶ ಹೇಳುವದು ಶಿಕ್ಷಕನ ಕೆಲಸವಲ್ಲ. ಹೇಳಿದರೂ ಅದು ನಾಟದೇ ಇರಬಹುದು. ಇಂಥವರ ಮಗು ಅಪೇಕ್ಷಿಸುವದು ಆಶ್ರಯ ಮತ್ತು

ಪ್ರೇಮ. ಶಿಕ್ಷಕರು ತಂದೆತಾಯಿಗಳ ಮುಯ್ಯಾಳು. ಆದುದರಿಂದ ಮಗುವಿನೊಡನೆ ವಿಶೇಷ ಮಮತೆಯಿಂದ ವರ್ತಿಸಬೇಕು. ಅವನ ಚಟುವಟಿಕೆಗಳಿಗೆ ಹೆಚ್ಚು ಸ್ವಾತಂತ್ರ್ಯವನ್ನು ಕೊಡಬೇಕು. ಅವನ ಉತ್ತಮ ಕೃತಿಗಳನ್ನು ಮನ್ನಿಸಬೇಕು.

## ಬಡವರ ಮಗು

ಬಡತನ ಮತ್ತು ಅಜ್ಞಾನ ಇವು ಇಂಡಿಯಾದಲ್ಲಿ ಎಷ್ಟೋ ದಿವಸಗಳಿಂದ ಮನೆಮಾಡಿಕೊಂಡಿರುತ್ತವೆ. ಬಡವರಾದ ಮತ್ತು ಅಜ್ಞಾನಿಗಳಾದ ತಂದೆತಾಯಿಗಳು ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಸರಿಯಾದ ಲಕ್ಷ್ಯ ಪೂರೈಸುವದಿಲ್ಲ. ಬಡವರ ಮಕ್ಕಳು ಧಡ್ಡರು ಮತ್ತು ಶ್ರೀಮಂತರ ಮಕ್ಕಳು ಜಾಣರು ಎಂಬ ಕಲ್ಪನೆ ತಪ್ಪು. ಬಡವರ ಮಗುವಿಗೆ ಮನೆಯಲ್ಲಿ ಅನುಕೂಲ ಆವರಣ ಇರುವದಿಲ್ಲ. ಇವನಿಗೆ ಸರಿಯಾಗಿ ಪಾಟಿ ಪುಸ್ತಕಗಳು ಇರುವದಿಲ್ಲ. ಇವನು ರೋಗಿಯಾಗಿರುತ್ತಾನೆ. ಸರಿಯಾದ ಆಹಾರ ಇಲ್ಲದ ಮಗುವು ನಿರುತ್ಸಾಹಿಯಾಗಿರುತ್ತಾನೆ, ಮತ್ತು ನಿಷ್ಕಾರಣವಾಗಿ ಸಿಟ್ಟಿಗೇಳುತ್ತಾನೆ. ಇವನ ಮೈಮೇಲೆ ಹೊಲಸಾದ, ಹರಿದ ಅಥವಾ ಹಾಳತಾಗದ ಬಟ್ಟೆ ಇರುತ್ತವೆ. ಕಾರಣ ಹಸನಾದ ಬಟ್ಟೆ ಹಾಕಿಕೊಂಡ ಮಕ್ಕಳೊಡನೆ ಕೂಡಲು ಹಿಂಜರಿಯುತ್ತಾನೆ.

ಇಂಥ ಮಗುವಿನ ಪರೀಕ್ಷೆಯನ್ನು ಡಾಕ್ಟರರಿಂದ ಮಾಡಿಸಿ ಇವನಿಗೆ ತಕ್ಕ ಆಹಾರವನ್ನು ಕೊಡುವ ವ್ಯವಸ್ಥೆ ಮಾಡಬೇಕು. ಬಡ ಮಕ್ಕಳಿಗೆ ಸತ್ವವುಳ್ಳ ತಿನಸು ಮತ್ತು ಹಾಲು ಕೊಡುವ ಏರ್ಪಾಡು ಮುಂದುವರಿದ ದೇಶಗಳಾದ ಇಂಗ್ಲಂಡ ಮತ್ತು ಅಮೇರಿಕೆಯ ಸಾಲೆಗಳಲ್ಲಿ ಉಂಟು. ನಮ್ಮ ಶಿಕ್ಷಣ ಖಾತೆಯವರು ಅಥವಾ ರಾಷ್ಟ್ರವು ಈ ಬಗೆಯ ವ್ಯವಸ್ಥೆಯನ್ನು ಮಾಡುವವರೆಗೆ ಶಿಕ್ಷಕರು ಊರಲ್ಲಿಯ ಶ್ರೀಮಂತರ ಸಹಾಯ ಪಡೆದು ಬಡ ಹುಡುಗರಿಗೆ ಪಾಟಿ ಪುಸ್ತಕ, ಆಹಾರ ಮತ್ತು ಅರಿವೆ ಪೂರೈಸುವ ಯೋಜನೆಯನ್ನು ಮಾಡಿದರೆ ಯಶಸ್ವಿಯಾಗುವ ಸಂಭವವುಂಟು. ಶಿಕ್ಷಕನಾದರೂ ಬಡ ಮಗುವನ್ನು ಸಹಾನುಭೂತಿಯಿಂದ ಕಾಣಬೇಕು.

**ಹೊಸದಾಗಿ ಶಾಲೆಗೆ ಬಂದ ಮಗು**

ಐದು ಆರು ವರ್ಷ ತುಂಬುತ್ತಲೆ ಮಗುವನ್ನು ಶಾಲೆಗೆ ಕರೆದುಕೊಂಡು ಬಂದು ಅವನ ಹೆಸರು ಹಚ್ಚುತ್ತಾರೆ. ಮಗುವಿಗೆ ಅದೊಂದು ಹೊಸ ಅನುಭವವಾಗುತ್ತದೆ. ಶಾಲೆಯು ಅಪರಿಚಿತವಾದ ಆವರಣದಲ್ಲಿ ಅವನನ್ನು ತಂದು ಸೇರಿಸುವುದರಿಂದ ಅವನು ಏಕಾಕಿಯಾಗಿ ಸುಮ್ಮನೆ ಕೂಡುತ್ತಾನೆ, ಬೇರೆ ಮಕ್ಕಳೊಡನೆ ಅಥವಾ ಶಿಕ್ಷಕರೊಡನೆ ಕ್ವಚಿತ್ತಾಗಿ ಮಾತಾಡುತ್ತಾನೆ. ಆಟ ಪಾಟಗಳಲ್ಲಿ ಭಾಗವಹಿಸಲು ಹಿಂಜರಿಯುತ್ತಾನೆ, ಅಥವಾ ಅವಚಿ ಕೊಂಡು ಕೂಡುತ್ತಾನೆ. ಮೊದಲನೇ ದಿವಸದ ಅವನ ಅನುಭವವು ಬಹಳ ಮಹತ್ವದ್ದು. ಅದು ಕಹಿಯಾಗಿದ್ದರೆ ಮತ್ತೊಮ್ಮೆ ಶಾಲೆಗೆ ಹೋಗಲು ಅವನು ಒಲ್ಲೆನೆನ್ನುತ್ತಾನೆ. ಅಥವಾ ಶಾಲೆ ಅಂದರೆ ಜರಕೊಳ್ಳುತ್ತಾನೆ. ಇದರಂತೆ ಬೇರೆ ಊರಿಂದ ವರ್ಗವಾಗಿ ಬಂದ ಮಗುವೂ ಮೊದಲು ಗೆಳೆಯರಿಲ್ಲದೆ ಅಸಂತುಷ್ಟನಾಗಿರುತ್ತಾನೆ. ಆದುದರಿಂದ ಮೊದಲನೆ ಇಯತ್ತೆಯ ಶಿಕ್ಷಕರೂ ವರ್ಗದ ಶಿಕ್ಷಕರೂ ಮತ್ತು ಹೆಡ್‌ಮಾಸ್ತರರೂ ಹೊಸದಾಗಿ ಬಂದ ಮಗುವನ್ನು ಬಹಳ ಆದರದಿಂದ ಬರಮಾಡಿಕೊಳ್ಳಬೇಕು, ಪ್ರೇಮದಿಂದಲೂ ನಗೆ ಮುಖ ದಿಂದಲೂ ಅವನೊಡನೆ ಮತ್ತು ಅವನ ತಂದೆ ತಾಯಿಗಳೊಡನೆ ಮಾತಾಡ ಬೇಕು. ಅವನ ಓಣಿಯ ಇತರ ಹುಡುಗರ, ವರ್ಗದ ಹಿರೇಮಣಿಯ, ಮತ್ತು ವರ್ಗದ ಶಿಕ್ಷಕನ ಪರಿಚಯವನ್ನು ಮಾಡಿಕೊಡಬೇಕು. ಶಾಲೆಯ ಸುತ್ತಲೂ ಅವನನ್ನು ಕರೆದುಕೊಂಡು ಹೋಗಿ ಎಲ್ಲೆಲ್ಲಿ ಏನೇನು ಇರುತ್ತದೆ, ಅದನ್ನು ಅವನು ಹೇಗೆ ಉಪಯೋಗ ಮಾಡಬೇಕು ಎಂಬುದನ್ನು ತೋರಿಸಬೇಕು. ನೀರು, ತಿನಸು, ಮೂತ್ರಾಶಯ, ಪಾಯಖಾನೆ, ಆಟದ ಬೈಲು, ಓದುವ ಕೋಣೆ ಮೊದಲಾದವುಗಳ ಸ್ಥಳಗಳನ್ನು ತೋರಿಸಿ ಅವುಗಳ ಉಪಯೋಗವನ್ನು ಅವನು ಹೇಗೆ ಮಾಡಿಕೊಳ್ಳಬೇಕೆಂಬುದನ್ನು ತಿಳಿಸಬೇಕು. ಶಾಲೆಯ ಪರಿಸ್ಥಿತಿಗೆ ಮಗುವು ಈಲು ಆಗುವವರೆಗೆ ಹೆಡ್‌ಮಾಸ್ತರರು ಅವನ ವಿಶೇಷ ಪರಾಮರಿಕೆಯನ್ನು ತಕ್ಕೊಳ್ಳಬೇಕು.

ಒಟ್ಟಿನಲ್ಲಿ ಶಾಲೆಯ ವಾತಾವರಣವು ಪ್ರೇಮ ಮತ್ತು ಪ್ರೋತ್ಸಾಹ ದಿಂದ ಕೂಡಿದ್ದು ಇರಬೇಕು. ಶಿಕ್ಷಕರು ಸಹಾನುಭೂತಿ ಉಳ್ಳವರೂ

ಮಗುವಿಗೆ ಯಾವಾಗಲೂ ಸಹಾಯ ಮತ್ತು ಸಹಕಾರವನ್ನು ನೀಡುವಂಥ ವರೂ ಇರಬೇಕು. ಇದರಿಂದ ಮಕ್ಕಳಲ್ಲಿ ಒಳ್ಳೇ ವ್ಯಕ್ತಿತ್ವವೂ ಮನಸ್ಸಿನ ಆರೋಗ್ಯವೂ ಬೆಳೆಯುವವು.

## ಶಿಕ್ಷಕನ ಮನಸ್ಸಿನ ಆರೋಗ್ಯ

ಸಾಲೆಯ ವಾತಾವರಣದಲ್ಲಿ ಶಿಕ್ಷಕನ ವ್ಯಕ್ತಿತ್ವವು ಬಹಳ ಮಹತ್ವದ್ದು. "ಗುರುವಿನಂತೆ ಶಿಷ್ಯ" ಎಂಬ ನಾಣ್ಣುಡಿಯುಂಟು. ಹೇಗೆ ಶಿಕ್ಷಕನೋ ಹಾಗೆ ವಿದ್ಯಾರ್ಥಿ. ಶಿಕ್ಷಕನ ವ್ಯಕ್ತಿತ್ವವು ಮಗುವಿನ ಮೇಲೆ ಹೆಚ್ಚು ಪರಿಣಾಮ ವನ್ನು ಮಾಡುವದು. ಸಾಲೆಗೆ ಭವ್ಯವಾದ ಕಟ್ಟಡ, ಆಧುನಿಕ ಅಭ್ಯಾಸ ಪತ್ರಿಕೆ, ಕಲಿಸುವ ಉಪಕರಣಗಳು, ಹೊಸ ಮಾದರಿಯ ಎಲ್ಲ ಸಾಹಿತ್ಯಗಳು ಇದ್ದರೂ ಅವು ಗುರುವಿಗೆ ಸಮನಾಗಲಾರವು. ಮಗುವಿಗೆ ಶಿಕ್ಷಕರೇ ಆದರ್ಶ ಪುರುಷರು. ಶಿಕ್ಷಣದ ಪರಿಣಾಮವು ಶಿಕ್ಷಕನನ್ನೇ ಅವಲಂಬಿಸಿರುತ್ತವೆ. ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ರೀತಿಯಿಂದ ಶಿಕ್ಷಕನ ವರ್ಚಸ್ಸು ಮಗುವಿನ ಮೇಲೆ ಬೀಳುವದುಂಟು. ಎರಡನೆಯವರ ಡೊಂಕು ತಿದ್ದುವವರು ಮೊದಲು ತಮ್ಮ ಡೊಂಕು ತಿದ್ದಿಕೊಳ್ಳುವದು ಅವಶ್ಯ. ಮಗುವಿನ ಮನಸ್ಸಿನ ಆರೋಗ್ಯದ ಸಮಸ್ಯೆಗಳನ್ನು ಬಿಡಿಸುವ ಶಿಕ್ಷಕನು ತನ್ನ ಮನಸ್ಸಿನ ಆರೋಗ್ಯವನ್ನು ಕಾಯ್ದುಕೊಳ್ಳುವದು ಬಹಳ ಮಹತ್ವದ್ದು.

ಶಿಕ್ಷಕನ ಮನಸ್ಸಿನ ಅನಾರೋಗ್ಯತೆಗೆ ಅವನು ಸ್ವಂತ ನಿರ್ಮಿಸಿಕೊಂಡ ಜೀವನದ ದೃಷ್ಟಿ ಮತ್ತು ಶಿಕ್ಷಣ ವ್ಯವಸಾಯದ ಕೆಲವು ಸಂಗತಿಗಳು ಕಾರಣ ವಾಗಿರುತ್ತವೆ. ಕಡಿಮೆ ಸಂಬಳ, ಹೆಚ್ಚು ಕೆಲಸ, ನೌಕರಿ ಕಳಕೊಳ್ಳುವ ಭೀತಿ, ಶಿಕ್ಷಕರ ಬಗ್ಗೆ ಜನರಲ್ಲಿ ಇರುವ ಅಭಿಪ್ರಾಯ, ಮೇಲಾಧಿಕಾರಿಗಳ ನಿರುತ್ಸಾಹಕ ಶಿಂತ, ಸಾಮಾಜಿಕ ನಿರ್ಬಂಧ, ಕಲಿಸುವ ಸಾಹಿತ್ಯಗಳ ಕೊರತೆ ಮೊದಲಾದವು ಶಿಕ್ಷಕನನ್ನು ಅಸಂತೋಷಗೊಳಿಸುವ ಸಂಗತಿಗಳು. ಆದರೆ ಶಿಕ್ಷಣ ವ್ಯವಸಾಯದಲ್ಲಿ ಮನಸ್ಸಿನ ಆರೋಗ್ಯಕ್ಕೆ ಅನುಕೂಲವಾದ ಅಂಶಗಳೂ ಉಂಟು—ಮಕ್ಕಳಿಗೆ ಕಲಿಸುವದು ಹಿರಿಗಿಲಾದ ಸಮಾಜಸೇವೆ, ಗುರುಗಳ ಬಗ್ಗೆ ಜನರು ತೋರಿಸುವ ಆದರ, ಶಿಕ್ಷಕನು ಸುಸಂಸ್ಕೃತ ವ್ಯಕ್ತಿ ಎಂಬ

ಭಾವನೆ, ಮತ್ತು ನಾಳಿನ ನಾಗರಿಕರನ್ನು ತಯಾರು ಮಾಡುವನೆಂಬ ಸದಭಿಮಾನ. ಇದಲ್ಲದೆ ಇತ್ತೀಚೆಗೆ ಶಿಕ್ಷಕರ ಪರಿಸ್ಥಿತಿಯನ್ನು ಸುಧಾರಿಸಲು ಕೈಕೊಳ್ಳುತ್ತಿರುವ ಸರಕಾರದ ಪ್ರಯತ್ನಗಳೂ ಉತ್ತೇಜನಕರವಾಗಿವೆ. ಶಿಕ್ಷಕನು ತನ್ನ ಮನಸ್ಸಿನ ಆರೋಗ್ಯವನ್ನು ಸುಧಾರಿಸಲಿಕ್ಕೆ ಕೆಳಗೆ ಕೊಟ್ಟ ಸೂಚನೆಗಳನ್ನು ಅನುಸರಿಸುವದು ಒಳ್ಳೆಯದು:—

(೧) ಶಿಕ್ಷಣ ವ್ಯವಸಾಯವು ಗೌರವಪೂರ್ಣವಿದ್ದೆಂದು ದೃಢವಾಗಿ ನಂಬಬೇಕು

(೨) ಮಕ್ಕಳ ವ್ಯಕ್ತಿತ್ವವನ್ನು ಮನ್ನಿಸಬೇಕು. ಎಲ್ಲ ಮಕ್ಕಳನ್ನು ಮಮತೆಯಿಂದ ಕಾಣಬೇಕು.

(೩) ಕಲಿಸುವ ಕಲೆಯಲ್ಲಿ ನಿಪುಣನಾಗಿರಬೇಕು. ತನ್ನ ವ್ಯವಸಾಯದಲ್ಲಿ ಪ್ರಾಮಾಣಿಕನಾಗಿರಬೇಕು. ಶಿಕ್ಷಣ ಕ್ಷೇತ್ರದಲ್ಲಿ ಹೊಸದಾಗಿ ಕಂಡು ಹಿಡಿದ ಸಿದ್ಧಾಂತಗಳ ಪರಿಚಯವನ್ನು ಮಾಡಿಕೊಳ್ಳುತ್ತಿರಬೇಕು.

(೪) ಇತರ ಶಿಕ್ಷಕರೊಡನೆ ಮತ್ತು ಸಮಾಜದವರೊಡನೆ ಸಹಕರಿಸಬೇಕು. ಪರಿಣಾಮಕಾರಕ ನಾಗರಿಕನಾಗಿರಬೇಕು.

(೫) ಎಲ್ಲರೂ ಶಿಕ್ಷಣ ಹೊಂದಿದರೆ ಮಾತ್ರ ಲೋಕಸತ್ತೆಗೆ ಭದ್ರವಾದ ತಳಹದಿ ಆಗುವದೆಂದು ತಿಳಿಯಬೇಕು. ಸಾರ್ವತ್ರಿಕ ಶಿಕ್ಷಣ ಪ್ರಸಾರದಲ್ಲಿ ನೆರವಾಗಬೇಕು.

(೬) ಯಾವ ಮಗುವನ್ನೂ ಭೇದಭಾವದಿಂದ ಎಣಿಸಬಾರದು. ನ್ಯಾಯ ಮತ್ತು ಸಮಾನತೆಯ ದೃಷ್ಟಿಯನ್ನು ಇಟ್ಟುಕೊಳ್ಳಬೇಕು.

(೭) ಹೊಸ ಘಟನೆಯಲ್ಲಿ ಕಾಣಿಸಿದ ಲೋಕಸತ್ತೆಯ ತತ್ವಗಳು ಪ್ರತಿಯೊಬ್ಬ ಮಗುವಿನಲ್ಲಿ ಬೇರೂರುವಂತೆ ಪ್ರಯತ್ನಿಸಬೇಕು.

(೮) ಸರಕಾರದಿಂದ ಮನ್ನಣೆ ಪಡೆದ ಶಿಕ್ಷಕರ ಸಂಘ ಅಥವಾ ಇತರ ಸಂಸ್ಥೆಗಳ ಸದಸ್ಯನಾಗಿರಬೇಕು.

(೯) ಸಣ್ಣಪುಟ್ಟ ತೊಂದರೆಗಳಿಗೆ ವಿಶೇಷ ಚಿಂತೆ ಮಾಡದೆ ಧೈರ್ಯದಿಂದ ಸಮಸ್ಯೆಗಳನ್ನು ಬಿಡಿಸುತ್ತ ಮುಂದುವರಿಯಬೇಕು

(೧೦) ತನ್ನ ಉದ್ವೇಗಗಳನ್ನು ಮತ್ತು ಪ್ರೇರಣೆಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳಬೇಕು.

(೧೧) ಆಗಾಗ ಆತ್ಮನಿರೀಕ್ಷಣೆಯನ್ನು ಮಾಡಿಕೊಳ್ಳಬೇಕು. ತನ್ನ ತಪ್ಪುಗಳನ್ನು ತಿದ್ದಿಕೊಳ್ಳಲಿಕ್ಕೆ ಮತ್ತು ಕಠಿಣ ಪ್ರಸಂಗಗಳನ್ನು ಯಶಸ್ವಿಯಾಗಿ ದಾಟಲಿಕ್ಕೆ ಇದು ಬೆಳಕನ್ನು ಕೊಡುವದು.

(೧೨) ತನ್ನ ಹಿತೈಷಿಗಳೆಂದು ಆರಿಸಿದ ನಂಬುಗೆಯುಳ್ಳ ಕೆಲವೇ ವ್ಯಕ್ತಿಗಳೊಡನೆ ತನ್ನ ತೊಂದರೆಗಳ ಬಗ್ಗೆ ಗುಪ್ತವಾಗಿ ಆಲೋಚಿಸಬೇಕು.

(೧೩) ಗಂಭೀರವಾಗಿ ವಿಚಾರಿಸುತ್ತಿದ್ದರೂ ನಗೆಮುಖದವನಾಗಿರಬೇಕು.

(೧೪) ತಾನು ಅಸಮರ್ಥನೆಂದು ನಿರಾಶೆ ಹೊಂದದೆ ತನ್ನ ಕೈಲಾದ ಮಟ್ಟಿಗೆ ಕೆಲಸವನ್ನು ಮನವಿಟ್ಟು ಮಾಡಬೇಕು.

(೧೫) ಆಧ್ಯಾತ್ಮಿಕ ಸಾಧನದಿಂದ ತನ್ನ ಮನಸ್ಸನ್ನು ಮತ್ತು ಹೃದಯವನ್ನು ಪ್ರಸನ್ನಗೊಳಿಸಬೇಕು.

ಮಕ್ಕಳ ಗೌರವ ಮತ್ತು ವಿಶ್ವಾಸವನ್ನು ಸಂಪಾದಿಸಿ ಅವರಲ್ಲಿ ಸುಸಂಬದ್ಧ ವ್ಯಕ್ತಿತ್ವವನ್ನು ಒಡಮೂಡಿಸುವದೇ ಶಿಕ್ಷಕನ ಪರಮ ಕರ್ತವ್ಯ. ಶಾಲೆಯ ಶಿಕ್ಷಣವನ್ನು ಮುಗಿಸಿಕೊಂಡು ವ್ಯವಹಾರಿಕ ಜೀವನದಲ್ಲಿ ಕಾಲಿಟ್ಟ ಮಕ್ಕಳು ಲೋಕಸತ್ತೆಯ ತತ್ವಗಳನ್ನು ಅಳವಡಿಸಿಕೊಂಡು ತಮ್ಮ ಬದುಕು ಬಾಳುವೆಯನ್ನು ಪರಿಣಾಮಕಾರಕವಾಗಿ ಸಾಗಿಸಲು ಸಮರ್ಥರಾದರೆ ಅದೇ ಅವರು ಗುರುವಿಗೆ ಸಲ್ಲಿಸುವ ಕಾಣಿಕೆ. ಅದೇ ಶಿಕ್ಷಕನ ಆನಂದ! ಅದೇ ಶಿಕ್ಷಕನ ಹೆಮ್ಮೆ!

ವ್ಯಕ್ತಿತ್ವದ ಬೆಳವಣಿಗೆಯನ್ನು ಕುರಿತು ಮನೋವಿಜ್ಞಾನಿಗಳು ಇನ್ನೂ ಕೆಲವು ಸಿದ್ಧಾಂತಗಳನ್ನು ಕಂಡು ಹಿಡಿದಿದ್ದಾರೆ. ಶಿಕ್ಷಕನು ಇವುಗಳ ಪರಿಚಯವನ್ನು ಮಾಡಿಕೊಳ್ಳುವದು ಅವಶ್ಯ. ಈ ವಿಷಯವನ್ನು ಕುರಿತು ಕೊನೆಯದಾದ ಮುಂದಿನ ಅಧ್ಯಾಯದಲ್ಲಿ ಹೆಚ್ಚು ವಿವರಗಳನ್ನು ಕೊಡಲಾಗಿದೆ

## ಪ್ರಶ್ನೆಗಳು ಮತ್ತು ಅಭ್ಯಾಸಗಳು

೧ ಮಗುವಿನ ಮುಖ್ಯ ಬೇಡಿಕೆಗಳು ಯಾವವು? ಅವು ಅವನ ಮನಸ್ಸಿನ ಆರೋಗ್ಯಕ್ಕೆ ಇಲ್ಲವೆ ಅನಾರೋಗ್ಯಕ್ಕೆ ಹೇಗೆ ಕಾರಣಗಳಾಗಿರುತ್ತವೆ?

೨ ಮಕ್ಕಳ ಸುರಕ್ಷಿತತೆಯ (Security) ಮತ್ತು ಸ್ವಾತಂತ್ರ್ಯದ ಬೇಡಿಕೆಗಳನ್ನು ಪೂರೈಸಲಿಕ್ಕೆ ಸಾಲೆಯ ಕೆಲವು ಯೋಗ್ಯವಾದ ಕಾರ್ಯಕ್ರಮಗಳನ್ನು ವಿವರಿಸಿರಿ.

೩ ಪ್ರೇಮ ಮತ್ತು ಕಾರ್ಯಸಾಧನೆಯ ಬೇಡಿಕೆಗಳು ತೃಪ್ತಿ ಹೊಂದದೇ ಇದ್ದರೆ ಮಕ್ಕಳಲ್ಲಿ ಕಂಡುಬರುವ ಅಕ್ರಮ ವರ್ತನಗಳು ಯಾವವು?

೪ ಸಾಲೆಯಲ್ಲಿ ಕಂಡುಬರುವ ಮಕ್ಕಳ ತಪ್ಪು ನಡತೆಗಳ ಬಗ್ಗೆ ಹೊಸ ಶಿಕ್ಷಕರು ಮತ್ತು ಅನುಭವಿಕ ಶಿಕ್ಷಕರು ಕೈಕೊಳ್ಳುವ ಉಪಾಯಗಳಲ್ಲಿ ಇರುವ ಅಂತರವನ್ನು ವಿವರಿಸಿರಿ.

೫ ತಾನು ಕಡಿಮೆಯವನೆಂಬ ಭಾವನೆಯು ಮಗುವಿನಲ್ಲಿ ಉಂಟಾಗಲಿಕ್ಕೆ ಕಾರಣಗಳು ಯಾವವು? ಆ ಭಾವನೆಯನ್ನು ತೊಲಗಿಸಲಿಕ್ಕೆ ಶಿಕ್ಷಕನು ಯಾವ ಉಪಾಯಗಳನ್ನು ಕೈಕೊಳ್ಳಬೇಕು?

೬ ಮಕ್ಕಳು ಸಾಲೆ ತಪ್ಪಿಸಿ ಅಲೆದಾಡಲಿಕ್ಕೆ ಕಾರಣಗಳು ಯಾವವು? ಅವರನ್ನು ತಿದ್ದುವ ಹೊಸ ಉಪಾಯಗಳನ್ನು ಚರ್ಚಿಸಿರಿ.

೭ ನಿಮ್ಮ ಸಾಲೆಗೆ ಬರುವ ವಿದ್ಯಾರ್ಥಿಗಳಲ್ಲಿ ಬಡವರ ಮಕ್ಕಳು ಎಷ್ಟು ಜನರು ಇರುತ್ತಾರೆ? ಅವರ ಪ್ರಮಾಣವು ಒಟ್ಟು ಹುಡುಗರಲ್ಲಿ ನೂರಕ್ಕೆ ಎಷ್ಟರಂತೆ ಇರುತ್ತದೆ? ಈ ಮಕ್ಕಳಲ್ಲಿ ಕಂಡುಬರುವ ಅಕ್ರಮ ನಡೆನುಡಿಗಳು ಯಾವವು? ಅವುಗಳನ್ನು ಹೇಗೆ ತಿದ್ದುವಿರಿ?

೮ ತಂದೆತಾಯಿಗಳಿಂದ ನಿರಾಕರಿಸಲ್ಪಟ್ಟ ಮಕ್ಕಳ ಅಕ್ರಮ ವರ್ತನ ಗಳನ್ನು ವಿವರಿಸಿರಿ. ಶಿಕ್ಷಕನು ಅದನ್ನು ಸುಧಾರಿಸಲಿಕ್ಕೆ ಯಾವ ವಿಧಾನಗಳನ್ನು ಕೈಕೊಳ್ಳಬೇಕು ?

೯ ಮನೆಯಲ್ಲಿ ಅತಿ ಪರಾಮರಿಕೆಯಿಂದ ಜೋಪಾನ ಮಾಡಲ್ಪಟ್ಟ ಮಗುವಿನ ಮೇಲೆ ಆಗುವ ಕೆಡಕು ಪರಿಣಾಮಗಳು ಯಾವವು? ತಂದೆತಾಯಿಗಳು ಹೀಗೆ ಮಾಡಲಿಕ್ಕೆ ಯಾವ ಕಾರಣಗಳುಂಟು? ಅವುಗಳನ್ನು ನಿವಾರಿಸುವ ಉಪಾಯಗಳು ಯಾವವು ?

೧೦ ಮನೆಯ ಆವರಣವು ಮಗುವಿನ ವ್ಯಕ್ತಿತ್ವದ ಮೇಲೆ ಪರಿಣಾಮ ವನ್ನು ಉಂಟು ಮಾಡುವದು ಎಂಬ ಸಿದ್ಧಾಂತವನ್ನು ಪರಿಸ್ಥಿತಿವಾದಿಗಳು ಮತ್ತು ಪರಂಪರೆವಾದಿಗಳು ಹೇಗೆ ಪ್ರತಿಪಾದಿಸುವರು ?

೧೧ ಶ್ರೇಷ್ಠ ಬುದ್ಧಿಯ ಮಗುವಿನಲ್ಲಿ ಕೂಡ ಅಕ್ರಮ ವರ್ತನಗಳು ಕಂಡು ಬರಲಿಕ್ಕೆ ಕಾರಣಗಳು ಯಾವವು ? ಶಿಕ್ಷಕನು ಅವು ಗಳನ್ನು ಹೇಗೆ ಸರಿಪಡಿಸಬಲ್ಲನು ?

೧೨ ಮಗುವು ಹಿಂಜರಿಯಲಿಕ್ಕೆ ಮತ್ತು ಏಕಾಕಿಯಾಗಿರಲಿಕ್ಕೆ ಕಾರಣಗಳು ಯಾವವು ? ಮತ್ತು ಅವನನ್ನು ತಿದ್ದುವ ವಿಧಾನ ಗಳು ಯಾವವು ?

೧೩ ಮಗುವಿನ ಸ್ವಭಾವವನ್ನು ತಿಳಿದುಕೊಳ್ಳಲು ಯೋಜಿಸಿದ ಹೊಸ ಮಾದರಿಯ ಕೆಲವು ವಿಧಾನಗಳನ್ನು ವಿವರಿಸಿರಿ.

೧೪ ಮಗುವಿನ ತಪ್ಪು ನಡೆಗಳನ್ನು ತಿದ್ದುವುದಕ್ಕೋಸುಗ ಅವನ ತಂದೆತಾಯಿಗಳಿಂದ ಯಾವ ಸಹಾಯವನ್ನು ಶಿಕ್ಷಕನು ಪಡೆಯ ಬೇಕು ? ಮತ್ತು ಆಗ ಅವನು ಯಾವ ಎಚ್ಚರಿಕೆಯನ್ನು ತಾಳಬೇಕು ?

೧೫ ಸಾಲೆಯಲ್ಲಿ ಪ್ರತಿಯೊಬ್ಬ ಮಗುವಿನ ಬಗ್ಗೆ ವೃತ್ತಾಂತವನ್ನು ಸಂಗ್ರಹಿಸಿ ( Cumulative Record ) ಇಡುವುದರ ಆವಶ್ಯಕತೆಯನ್ನು ಚರ್ಚಿಸಿರಿ.

೧೬ ಸಮಸ್ಯೆ ಮಗುವಿನ ( Problem Child ) ವ್ಯಕ್ತಿ ಚಿಕಿತ್ಸೆಯನ್ನು ( Case Study ) ಮಾಡುವುದರ ಉಪಯುಕ್ತತೆ ಮತ್ತು ಅದರಲ್ಲಿರುವ ಅಡಚಣೆಗಳನ್ನು ವಿವರಿಸಿರಿ.

೧೭ ನೀವು ಕಲಿಸುವ ವರ್ಗದಲ್ಲಿ ತಪ್ಪು ನಡತೆಗಳುಳ್ಳ ಕೆಲವು ಹುಡುಗರ ಉದಾಹರಣೆಗಳನ್ನು ಕೊಡಿರಿ. ಮತ್ತು ಅವುಗಳನ್ನು ತಿದ್ದುವ ಉಪಾಯಗಳನ್ನು ಸೂಚಿಸಿರಿ.

೧೮ ಕಿಡಿಗೇಡಿ ಮಗುವಿನ ಲಕ್ಷಣಗಳನ್ನು ಮತ್ತು ಅವನನ್ನು ತಿದ್ದುವ ಉಪಾಯಗಳನ್ನು ವಿವರಿಸಿರಿ.

೧೯ ಹಿಂಜರಿಯುವ ಮಗುವಿನ ಸಲುವಾಗಿ ಶಾಲೆಯಲ್ಲಿ ಯಾವ ಬಗೆಯ ಸಾಮಾಜಿಕ ಸಂಪರ್ಕದ ಕಾರ್ಯಕ್ರಮಗಳನ್ನು ರಚಿಸಬೇಕು ?

೨೦ ಇಂಡಿಯಾದ ಹೊಸ ಘಟನೆಯಲ್ಲಿ ಸಾರಿದ ಲೋಕಸತ್ತೆಯ ತತ್ವಗಳು ಯಾವವು ? ಅವುಗಳನ್ನು ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಆಚರಿಸುವ ವಿಧಾನಗಳನ್ನು ಮತ್ತು ಬರುವ ಅಡೆತಡೆಗಳನ್ನು ವಿವರಿಸಿರಿ.

೨೧ ಲೋಕಸತ್ತೆಯ ತತ್ವಗಳಿಗೆ ಅನುಗುಣವಾದ ಶಾಲೆಯ ಒಂದು ಆಡಳಿತೆಯ ಯೋಜನೆಯನ್ನು ತಯಾರಿಸಿರಿ.

೨೨ ಇಂಡಿಯಾದಲ್ಲಿ ವಿಶೇಷವಾಗಿ ಕಂಡುಬರುವ ಜಾತಿ ಮತಗಳ ಕಲ್ಪನೆಗಳನ್ನು ಮತ್ತು ಅವುಗಳಿಂದಾಗುವ ಹಾನಿಗಳನ್ನು ಐತಿಹಾಸಿಕ ಕಾರಣಗಳೊಡನೆ ವಿವರಿಸಿರಿ. ಮತ್ತು ಲೋಕಸತ್ತೆಯ ತತ್ವಗಳ ದೃಷ್ಟಿಯಿಂದ ಅದನ್ನು ಹೋಗಲಾಡಿಸುವ ಉಪಾಯಗಳನ್ನು ಸೂಚಿಸಿರಿ.

೨೩ ಮಕ್ಕಳಲ್ಲಿ ಲೋಕಸತ್ತೆಯ ಧ್ಯೇಯಗಳನ್ನು ಒಡಮೂಡಿಸಲಿಕ್ಕೆ ಶಿಕ್ಷಕನು ಕೈಕೊಳ್ಳಬೇಕಾದ ಕೆಲವು ವಿಧಾನಗಳನ್ನು ವಿವರಿಸಿರಿ.

೨೪ ಪ್ರತಿಯೊಂದು ಊರಲ್ಲಿ ಶಿಕ್ಷಕರ ಮತ್ತು ಪಾಲಕರ ಸಂಘಗಳನ್ನು ಸ್ಥಾಪಿಸುವ ಕುರಿತು ನಿಮ್ಮ ಅಭಿಪ್ರಾಯಗಳನ್ನು ಮುಂಡಿಸಿರಿ. ಅವುಗಳಿಂದ ಆಗುವ ಲಾಭ ಹಾನಿಗಳು ಯಾವವು ?

೨೫ ಮಕ್ಕಳ ತಪ್ಪು ನಡತೆಗಳನ್ನು ತಿದ್ದಲಿಕ್ಕೆ ಸಾಮಾನ್ಯವಾಗಿ ಶಿಕ್ಷಕರು ಉಪಯೋಗಿಸುವ ಅಪಾಯಕಾರಕ ಯುಕ್ತಿಗಳನ್ನು ಮನಸ್ಸಿನ ಆರೋಗ್ಯದ ದೃಷ್ಟಿಯಿಂದ ವಿವೇಚಿಸಿರಿ.

೨೬ ಶಿಕ್ಷಕನು ಮಗುವಿನ ವರ್ತನದ ಕಾರಣಗಳನ್ನು ತಿಳಿದುಕೊಳ್ಳುವದು ಮಹತ್ವವಾದುದು ಎಂಬುದನ್ನು ಉದಾಹರಣೆ ಕೊಟ್ಟು ವಿವರಿಸಿರಿ.

೨೭ ಶಿಕ್ಷಕನು ತನ್ನ ವ್ಯವಸಾಯದ ಬಗ್ಗೆ ಮತ್ತು ಜೀವನದ ಬಗ್ಗೆ ಯಾವ ತತ್ವಜ್ಞಾನವನ್ನು ಅಂಗೀಕರಿಸಬೇಕೆಂಬುದನ್ನು ವಿವರಿಸಿರಿ.

೨೮ ಶಿಕ್ಷಕನು ತನ್ನ ಮನಸ್ಸಿನ ಆರೋಗ್ಯವನ್ನು ಸುಧಾರಿಸುವದಕ್ಕೆ ಪಾಲಿಸಬೇಕಾದ ಕೆಲವು ಮುಖ್ಯ ನಿಯಮಗಳನ್ನು ಸೂಚಿಸಿರಿ.

ಅಧ್ಯಾಯ ೧೨

# ವ್ಯಕ್ತಿತ್ವದ ಬೆಳವಣಿಗೆ

ಮಗುವಿನ ವ್ಯಕ್ತಿತ್ವವನ್ನು ಒಳ್ಳೇ ರೀತಿಯಲ್ಲಿ ಹದಗೊಳಿಸುವದೇ ವ್ಯಕ್ತಿತ್ವದ ಬೆಳವಣಿಗೆ. ಉದಾತ್ತ ಧ್ಯೇಯಗಳು ಮತ್ತು ವಿಚಾರಗಳು ನೈತಿಕ ಅನುರಾಗಗಳಾಗಿ ಬೆಳೆದು ಒಳ್ಳೆಯ ವರ್ತನದಲ್ಲಿ ಕಾಣಿಸಿಕೊಳ್ಳುತ್ತಿದ್ದರೆ. ಅದು ಸರಿಯಾದ ವ್ಯಕ್ತಿತ್ವದ ಬೆಳವಣಿಗೆ. ಎಂಥ ಕಠಿಣ ಪ್ರಸಂಗಗಳು ಒದಗಿದರೂ ಹರಿಶ್ಚಂದ್ರನಂತೆ ದೃಢನಿಶ್ಚಯ ಉಳ್ಳವನಾಗಿ ತಾನು ಇಟ್ಟುಕೊಂಡ ತತ್ವಗಳಂತೆ ನಡೆಯುವವನಲ್ಲಿ ಉತ್ತಮ ವ್ಯಕ್ತಿತ್ವವು ರೂಪುಗೊಂಡಿರುತ್ತದೆ. ಆದರೆ ಅದೆಷ್ಟೋ ಜನರಲ್ಲಿ ಈ ರೀತಿಯ ವ್ಯಕ್ತಿತ್ವದ ಬೆಳವಣಿಗೆಯು ಸುಸೂತ್ರವಾಗಿ ಸಾಗುವದಿಲ್ಲ. ಬೆಳೆಯುತ್ತಿರುವ ಮಗುವಿಗೆ ಅನೇಕ ಬಾರೆ ಬೇನೆ ಬೇಸರಿಕೆಗಳು, ಎಡರು ತೊಡರುಗಳು, ಅನುವು ಆಪತ್ತುಗಳು ಬಂದು ಒದಗುತ್ತವೆ. ಇದರಿಂದ ಆವನ ಬೆಳವಣಿಗೆಯು ಕುಂಠಿತವಾಗುತ್ತದೆ. ಪ್ರತಿಕೂಲ ಪರಿಸ್ಥಿತಿಯ ಸೆಳವಿಗೆ ಸಿಕ್ಕ ಎಷ್ಟೋ ಜನರು ವಂಚಕರು, ದುರ್ಗುಣಿಗಳು ಅಥವಾ ಅವ್ಯವಹಾರಿಗಳು ಆಗುತ್ತಾರೆ. ವ್ಯಂಗವುಳ್ಳ ವ್ಯಕ್ತಿತ್ವದ ಕಾರಣಗಳನ್ನು ಮನೋವಿಶ್ಲೇಷಣದಿಂದ ಕಂಡು ಹಿಡಿದಿದ್ದಾರೆ. ಈ ವಿಷಯವನ್ನು ಇಲ್ಲಿ ಸ್ವಲ್ಪ ವಿವೇಚಿಸುವ.

## ಮನಸ್ಸಿನ ಹೋರಾಟ
## ( Mental Conflict )

ಸಿಗ್ಮಂಡ್ ಫ್ರಾಯ್ಡ್ ಎಂಬವನು ಮನಸ್ಸಿನಲ್ಲಿ ಜಾಗ್ರತ ( The Conscious ) ಮತ್ತು ಅಜಾಗ್ರತ ( The Un-conscious ) ಎಂಬ ಎರಡು ಮುಖ್ಯ ಭಾಗಗಳನ್ನು ಮಾಡುತ್ತಾನೆ. ಮನಸ್ಸು ಜಾಗ್ರತ ಅವಸ್ಥೆಯಲ್ಲಿ ಇದ್ದಾಗ ಮನಸ್ಸಿನಲ್ಲಿ ನಡೆಯುವ ವ್ಯಾಪಾರಗಳ ಅರಿವು ಮನುಷ್ಯನಿಗೆ ಇರುತ್ತದೆ. ಆದರೆ ಅಜಾಗ್ರತ ಮನಸ್ಸಿನಲ್ಲಿ ಏನೇನು ನಡೆದಿರುತ್ತದೆ ಎಂಬುದರ ಅರಿವು ಸಹಜವಾಗಿ ಆಗುವದಿಲ್ಲ. ಆದರೆ ಕನಸುಗಳಲ್ಲಿ, ಹಗಲುಗನಸುಗಳಲ್ಲಿ,

ಎಚ್ಚರ ತಪ್ಪಿದ ಸ್ಥಿತಿಯಲ್ಲಿ, ಮತ್ತು ಹುಚ್ಚಿನ ಸ್ಥಿತಿಯಲ್ಲಿ ಇದ್ದಾಗ ಅಜಾಗ್ರತ ಮನೋವಿಕಾರಗಳು ವಿಕೃತ ರೂಪವನ್ನು ತಾಳಿ ಹೊರಗೆ ಕಾಣಿಸಿಕೊಳ್ಳುತ್ತವೆ. ಅಜಾಗ್ರತೆಯಲ್ಲಿಯ ಬಯಕೆಗಳು ಮತ್ತು ವಿಚಾರಗಳು ವ್ಯಕ್ತಿಗೌರವಕ್ಕೆ ಹಾನಿ ತರುವಂಥವು ಇರುವುದರಿಂದ ಅವುಗಳನ್ನು ವಿವೇಕ ಬುದ್ಧಿಯು ಹೊರಹೊಮ್ಮ ದಂತೆ ತಡೆಗಟ್ಟುತ್ತದೆ. ಹೀಗೆ ತಡೆಯಲ್ಪಟ್ಟ ವಿಚಾರಗಳು ಮತ್ತು ಭಾವ ಗಳು ಹೊರಗೆ ಬರುವ ಉದ್ವೇಶದಿಂದ ವಿವೇಕದ ಕೂಡ ಅಂದರೆ ಆತ್ಮಗೌರವ ಅಥವಾ ಪ್ರಧಾನ ಅನುರಾಗದ ಕೂಡ ಯುದ್ಧ ಹೂಡುತ್ತವೆ. ಇದಕ್ಕೆ **ಮನಸ್ಸಿನ ಹೋರಾಟ** ( Mental Conflict ) ಎಂದು ಅನ್ನುವರು. ಅಸ್ವಾಭಾವಿಕವಾದ ಮತ್ತು ಅಸಾಮಾಜಿಕವಾದ ವರ್ತನದ ಮೂಲ ಕಾರಣವು ಮನಸ್ಸಿನ ಈ ಹೋರಾಟವೇ ಎಂದು ಮನೋವಿಶ್ಲೇಷಣಜ್ಞರ ಅಭಿಪ್ರಾಯ.

ನಮ್ಮ ಮನಸ್ಸಿನಲ್ಲಿ ಇರುವ ಎಷ್ಟೋ ಆಶೆ ಆಕಾಂಕ್ಷೆಗಳನ್ನು ರಾಗ ದ್ವೇಷಗಳನ್ನು ಮತ್ತು ಕಾಮ ಕ್ರೋಧಗಳನ್ನು ನಾವು ಹೊರಗೆ ತೋರಿಸದೆ ಮುಚ್ಚಿಕೊಳ್ಳುತ್ತೇವೆ. ಸಮಾಜದ, ಮೇಲಾಧಿಕಾರಿಗಳ, ಸರಕಾರದ ಅಥವಾ ನೀತಿಯ ಭಯದಿಂದ ಅವುಗಳನ್ನು ಮನಸ್ಸಿನಲ್ಲಿಯೇ ನುಂಗಿಕೊಳ್ಳುತ್ತೇವೆ. ಹೀಗೆ ಮನದೊಳಗೆ ಬಚ್ಚಿಟ್ಟ ಬಯಕೆಗಳು ಅಜಾಗ್ರತ ಮನಸ್ಸಿನಲ್ಲಿ ಸೇರಿ ಸಮಯವರಿತು ಹೊರಗೆ ಬರಲು ಹವಣಿಸುತ್ತವೆ. ಜಾಗ್ರತ ಅವಸ್ಥೆಯ ಪ್ರಧಾನ ಅನುರಾಗವು ಅಜಾಗ್ರತ ಅವಸ್ಥೆಯ ಹೀನ ವೃತ್ತಿಗಳೊಡನೆ ತಿಕ್ಕಾಟ ವನ್ನು ನಡೆಯಿಸಿದಾಗ ಯಾವುದನ್ನು ಮಾಡಬೇಕು ಮತ್ತು ಯಾವುದನ್ನು ಬಿಡಬೇಕು ಎಂಬುದನ್ನು ನಿರ್ಣಯಿಸುವದು ಮಗುವಿಗೆ ಕೆಲವು ಸಲ ಬಿಗಿ ಯಾಗುತ್ತದೆ. ಪ್ರತಿಯೊಬ್ಬನ ಮನಸ್ಸಿನಲ್ಲಿ ಈ ಜಗಳವು ಯಾವಾಗಲೂ ಇದ್ದೇ ಇರುತ್ತದೆ. ವ್ಯಕ್ತಿತ್ವದ ಬೆಳವಣಿಗೆಯು ಸರಿಯಾದ ಮಾರ್ಗದಲ್ಲಿ ಸಾಗಬೇಕಾದರೆ ಈ ಹೋರಾಟವು ಕಡಿಮೆಯಾಗುವಂತೆ ಅಥವಾ ಇಲ್ಲದಾಗುವಂತೆ ಉಪಾಯಗಳನ್ನು ಕೈಕೊಳ್ಳಬೇಕಾಗುತ್ತದೆ. ಬೇರೆ ಬೇರೆ ಪ್ರೇರಣೆಗಳು ( Drives ) ಮತ್ತು ಬೇರೆ ಬೇರೆ ಅನುರಾಗಗಳು (Sentiments) ತಮ್ಮ ತಮ್ಮ ಗುರಿಗಳ ಕಡೆಗೆ ಮನಸ್ಸನ್ನು ಎಳೆಯುತ್ತವೆ. ಈ ಎಳೆದಾಟದಲ್ಲಿ ಮನುಷ್ಯನು ಯಶಸ್ವಿಯಾಗಬೇಕಾದರೆ ಅವನಲ್ಲಿ ಆತ್ಮ ಗೌರ ವವು ಪ್ರಧಾನ ಅನುರಾಗವಾಗಿ ( Master Sentiment ) ಬೆಳೆಯ

ಬೇಕಾಗುತ್ತದೆ. ಪ್ರೇರಣೆಗಳನ್ನು ತಮ್ಮ ಹಿಡಿತದಲ್ಲಿ ಇಟ್ಟುಕೊಂಡ ಜನರು ಬಹಳ ವಿರಳ. ಕೆಲವು ಪ್ರಸಂಗಗಳಲ್ಲಿ ಕ್ರೋಧವು ಪ್ರೇಮದೊಡನೆ, ಕಾಮವು ಹಲವು ಭಯದೊಡನೆ ಹೋರಾಡುವದು ನಮ್ಮೆಲ್ಲರ ಅನುಭವಕ್ಕೆ ಬಂದಿರಲು ಸಾಕು. ಪ್ರೀತಿಯ ಮಗನಾಗಲಿ ಅಥವಾ ವಿದ್ಯಾರ್ಥಿಯಾಗಲಿ ಅಪರಾಧ ಗಳನ್ನು ಮಾಡಿದಾಗ ಅವನನ್ನು ದಂಡಿಸಬೇಕೊ ಅಥವಾ ದಂಡಿಸಬಾರದೊ ಎಂಬುದನ್ನು ವಿಚಾರಿಸುವಾಗ ಮನಸ್ಸಿನಲ್ಲಿ ಹೊಯ್ದಾಟವು ಉಂಟಾಗುತ್ತದೆ. ರಾಮನು ಸೀತೆಯನ್ನು ಅಡವಿಗೆ ಕಳಿಸಲು ನಿಶ್ಚಯಿಸಿದಾಗ ಅವನ ಆತ್ಮ ಗೌರವವು ಪತ್ನಿಪ್ರೇಮದೊಡನೆ ಹೋರಾಟ ನಡೆಯಿಸಿತು. ಕುರುಕ್ಷೇತ್ರದಲ್ಲಿ ಅಣ್ಣತಮ್ಮಂದಿರೊಡನೆ ಯುದ್ಧವನ್ನು ಮಾಡಬೇಕೊ ಅಥವಾ ಬೇಡವೊ ಎಂಬ ವಿಚಾರವು ಅರ್ಜುನನ ಮನಸ್ಸಿನಲ್ಲಿ ಬಂದಾಗ ಕರ್ತವ್ಯನಿಷ್ಠೆಯು ಬಂಧು ಪ್ರೇಮದೊಡನೆ ಹೋರಾಟ ಹೂಡಿತ್ತು. ಹರಿಶ್ಚಂದ್ರನು ಹೆಂಡತಿಯನ್ನು ಮತ್ತು ಮಕ್ಕಳನ್ನು ಬಿಟ್ಟು ಅಗಲುವಾಗ ಸತ್ಯವೆಂಬ ಅನುರಾಗವು ಬಂಧು ಪ್ರೇಮದೊಡನೆ ಹೋರಾಟ ನಡೆಸಿತ್ತು. ಮನಸ್ಸಿನಲ್ಲಿ ನಡೆಯುತ್ತಿರುವ ಇಂಥ ಹೋರಾಟವನ್ನು ನಾವು ಜಾಗ್ರತ ಅವಸ್ಥೆಯಲ್ಲಿಯೂ ಅನುಭವಿಸುತ್ತೇವೆ. ಆದರೆ ಮನಸ್ಸಿನ ಹೋರಾಟವು ಗುಪ್ತವಾಗಿ ಅಜಾಗ್ರತ ಅವಸ್ಥೆಯಲ್ಲಿಯೂ ನಡೆಯುತ್ತದೆ ಎಂಬ ಸಿದ್ಧಾಂತವನ್ನು ಮನೋವಿಶ್ಲೇಷಣಜ್ಞರು ಕಂಡು ಹಿಡಿದಿದ್ದಾರೆ.

ಮನಸ್ಸಿನಲ್ಲಿ ಹೋರಾಟವು ನಡೆದಾಗ ವ್ಯಕ್ತಿತ್ವದಲ್ಲಿ ಒಡಕು ಹುಟ್ಟು ತ್ತದೆ; ಮನಸ್ಸು ಇಬ್ಭಾಗವಾಗುತ್ತದೆ. ಪರಸ್ಪರ ವಿರೋಧವಾದ ಧ್ಯೇಯಗಳು ನಮ್ಮನ್ನು ಎಳೆಯುವುದರಿಂದ ಯಾವುದನ್ನು ನಾವು ಸಾಧಿಸಬೇಕು ಎಂಬ ಸಮಸ್ಯೆಯು ಉಂಟಾಗುತ್ತದೆ. ಪ್ರೇಮವೊ, ಮರ್ಯಾದೆಯೊ? ಪ್ರಾಣವೊ, ಸಮಾಜವೊ? ದೇವರೊ, ದುಡ್ಡೊ? ಲಾಭವೊ, ಆತ್ಮಗೌರವವೊ? ಮನೆಯೊ, ದೇಶವೊ?—ಇವೇ ಮೊದಲಾದ ಸಮಸ್ಯೆಗಳು ನಮ್ಮನ್ನು ಎದುರಿ ಸುತ್ತವೆ. ಸಣ್ಣ ಪುಟ್ಟ ಸನ್ನಿವೇಶಗಳಲ್ಲಿ ಸಹ ಕಾಮ, ಭಯ, ಲೋಭ,ದ್ವೇಷ, ಪ್ರತೀಕಾರ, ದುರಭಿಮಾನ ಮೊದಲಾದ ವೃತ್ತಿಗಳು ನೈತಿಕ ವಿಚಾರಗಳೊಡನೆ ಹೋರಾಟ ಹೂಡುತ್ತವೆ. ಮನಸ್ಸಿನಲ್ಲಿಯ ಈ ಹೋರಾಟವನ್ನು ನಿಲ್ಲಿಸಲಿಕ್ಕೆ ವಿವೇಕವು ಕೆಲವು ಉಪಾಯಗಳನ್ನು ಹುಡುಕುತ್ತದೆ. ಅವುಗಳಲ್ಲಿ ಮುಖ್ಯ

ಪಾದವು ಮೂರು — ಐಕ್ಯತೆ (Integration), ವಿಯೋಜನೆ (Dissociation) ಮತ್ತು ಪ್ರತಿಬಂಧ (Repression) ಹೋರಾಡುತ್ತಿರುವ ಪ್ರೇರಣೆಗಳಲ್ಲಿ ಮತ್ತು ಅನುರಾಗಗಳಲ್ಲಿ ಅವುಗಳ ಸ್ಥಾನಮಾನಗಳನ್ನು ಕಲ್ಪಿಸಿಕೊಂಡು ಒಪ್ಪಂದಕ್ಕೆ ಬರುವದು ಐಕ್ಯತೆ ಎನಿಸಿಕೊಳ್ಳುತ್ತದೆ. ಇದು ಸುಸಂಬದ್ಧವಾದ ವ್ಯಕ್ತಿತ್ವದ ಕುರುಹು. ಪ್ರತಿಯೊಂದು ವಿರೋಧವೃತ್ತಿಯು ಅಷ್ಟೇ ಪ್ರಬಲವಿದ್ದಾಗ ಐಕ್ಯತೆಯು ಸಾಧ್ಯವಾಗುವದಿಲ್ಲ. ಆಗ ವ್ಯಕ್ತಿಯಲ್ಲಿ ಪ್ರಸಂಗಾನುಸಾರ ವಿರೋಧ ವರ್ತನಗಳು ಕಂಡು ಬರುತ್ತವೆ. ಆಗ ಮನುಷ್ಯನಲ್ಲಿ ಇಬ್ಬಗೆಯ ವ್ಯಕ್ತಿತ್ವ ( Double Personality ) ಅಥವಾ ಹಲವು ಬಗೆಯ ವ್ಯಕ್ತಿತ್ವ (Multiple Personality) ಕಂಡು ಬರುತ್ತದೆ. ಇದು ವ್ಯಕ್ತಿತ್ವದ ವಿಯೋಜನ ಅಥವಾ ವಿಭಜನೆ. ಆಂಗ್ಲ ಸಾಹಿತ್ಯದಲ್ಲಿಯ ಡಾಕ್ಟರ ಜಕಿಲ್ ಮತ್ತು ಹಾಯ್ಡ್ ಎಂಬ ಉದಾಹರಣೆಯನ್ನು ಇಲ್ಲಿ ಕೊಡಬಹುದು. ಒಂದು ಪ್ರಧಾನ ಅನುರಾಗವು ಬಹಳ ಪ್ರಬಲವಾಗಿದ್ದಲ್ಲಿ ಅದು ವಿರೋಧ ವೃತ್ತಿಗಳನ್ನು ಪ್ರತಿಬಂಧಿಸಿ ತನ್ನ ಹತೋಟಿಯಲ್ಲಿ ಇಟ್ಟುಕೊಳ್ಳುತ್ತದೆ ಹೀಗೆ ಪ್ರತಿಬಂಧಿಸಲ್ಪಟ್ಟ ವೃತ್ತಿಯು ಒಮ್ಮೊಮ್ಮೆ ಅಪ್ರತ್ಯಕ್ಷ ರೀತಿಯಿಂದ ಪ್ರಕಟವಾಗುತ್ತದೆ. ಲೇಡಿ ಮ್ಯಾಕ್‌ಬೆಥಳು ಅಪರಾಧ ಮಾಡಿದ ತನ್ನ ಕೈಗಳನ್ನು ಪದೇ ಪದೇ ತೊಳೆದುಕೊಳ್ಳುತ್ತಾಳೆ. ಸಾಲೆಯ ಹುಡುಗನು ತನ್ನ 'ಎಕ್ಸರಸಾಯಿಜ' ಪುಸ್ತಕದಲ್ಲಿ ಮೇಲಿಂದ ಮೇಲೆ ತಪ್ಪುಗಳನ್ನು ಮಾಡಿ ಕಾಟು ಹಾಕುತ್ತಿದ್ದರೆ ಅದು ಶಿಕ್ಷಕನ ಅಥವಾ ತಂದೆಯ ನಿರಂಕುಶ ಪ್ರಭುತ್ವದ ಉಲ್ಲಂಘನೆಯ ಸೂಚನೆಯಾಗಿರಬಹುದು. ಕೊಟ್ಟ ಪಾಠಗಳನ್ನು ಮಾಡಲಿಕ್ಕೆ ಮೇಲಿಂದ ಮೇಲೆ ಮರೆಯುವದು ಅಭ್ಯಾಸದ ಬಗ್ಗೆ ಇರುವ ಅವನ ತಿರಸ್ಕಾರದ ಸೂಚನೆಯಾಗಿರಬಹುದು. ಉಗ್ಗುವದು, ಉಗುರು ಕಡಿಯುವದು ಮುಂತಾದ ಚಾಳಿಗಳು ಪ್ರತಿಬಂಧಿಸಲ್ಪಟ್ಟ ವೃತ್ತಿಗಳ ಚಿಹ್ನಗಳು ಅತಿ ವಿನಯ, ಅತಿ ಸ್ವಚ್ಛತೆ, ಅತಿ ಉತ್ಸಾಹಗಳು ಮುಚ್ಚಿ ಇಟ್ಟುಕೊಂಡಿರುವ ಕಾಮುಕತೆಯ, ಅಸಮರ್ಥತೆಯ ಅಥವಾ ಬೇರೆ ಯಾವುದಾದರೊಂದು ಅಪರಾಧದ ಸೂಚನೆಯಾಗಿರಬಹುದು. ತನಗೆ ನೀಗದ ಕೆಲಸ ಕೈಕೊಳ್ಳುವ ಒಣ ಹೆಮ್ಮೆಯು ಹೀನಭಾವ ( Inferiority Complex ) ವಾಗಿರಬಹುದು. ಎರಡನೆಯವರಲ್ಲಿಯ ವಿಶಿಷ್ಟ ದೋಷಗಳನ್ನು ಎಣಿಸುವದು

ತನ್ನಲ್ಲಿಯೇ ಇದ್ದ ಅಂಥ ದೋಷಗಳನ್ನು ಮರೆಮಾಚುವ ಪ್ರಯತ್ನವಾಗಿರುತ್ತದೆ.

ಮಕ್ಕಳು ಅನೇಕ ಅಪರಾಧಗಳನ್ನು ಅರಿಯದೆ ಮಾಡುತ್ತಾರೆ. ಸುಳ್ಳು ಹೇಳುವದು, ಕಳವು ಮಾಡುವದು, ಶಾಲೆ ಮನೆ ಬಿಟ್ಟು ತಿರುಗಾಡುವದು, ದಂಗೆ ಮಾಡುವದು, ಅಂತರ್ಮುಖಿಯಾಗುವದು ( Introvert ) ಮೊದಲಾದ ಅಪರಾಧಗಳಿಗೆ ಪ್ರತಿಬಂಧಿಸಲ್ಪಟ್ಟ ಮನೋವೃತ್ತಿಗಳೇ ಕಾರಣಗಳಾಗಿರುತ್ತವೆ. ಬೆಳೆಯುತ್ತಿರುವ ಮಗುವು ತನ್ನ ಸುತ್ತಲಿನ ಸಾಮಾಜಿಕ ಜೀವನಕ್ಕೆ ಹೊಂದಿಕೊಂಡು ಹೋಗಲು ಅನೇಕ ಪ್ರಸಂಗಗಳಲ್ಲಿ ಅಸಮರ್ಥನಾಗುತ್ತಾನೆ. ಆಗ ಅವನ ನಡತೆಗಳು ದೊಡ್ಡವರಿಗೆ ಅಪರಾಧಗಳಂತೆ ಕಾಣುತ್ತವೆ. ಆದರೆ ಆ ನಡತೆಗಳ ಮೂಲಕಾರಣವನ್ನು ಮನೋವಿಜ್ಞಾನದ ದೃಷ್ಟಿಯಿಂದ ಕಂಡು ಹಿಡಿದು ಅವುಗಳ ನಿವಾರಣೋಪಾಯಗಳನ್ನು ಯೋಜಿಸಬೇಕು. ಶಿಕ್ಷಕರಾಗಲಿ ಪಾಲಕರಾಗಲಿ ಮಕ್ಕಳ ಅಪರಾಧಗಳನ್ನು ಪರಿಶೀಲಿಸುವಾಗ ಸಹಾನುಭೂತಿ ಮತ್ತು ತಿಳುವಳಿಕೆಯಿಂದ ನಡೆಯಬೇಕು. ಮಕ್ಕಳ ಪ್ರೇರಣೆಗಳನ್ನು ಉದಾತ್ತಗೊಳಿಸುವದು ಉತ್ತಮ ಉಪಾಯ. ಉದಾತ್ತ ಧ್ಯೇಯಗಳ ಕಡೆಗೆ ಪ್ರೇರಣೆಗಳು ಹರಿಯುವಂತೆ ಮಾಡಿದರೆ ಮಕ್ಕಳಲ್ಲಿ ಸುಸಂಬದ್ಧ ವ್ಯಕ್ತಿತ್ವವು ( Integrated Personality ) ರೂಪುಗೊಳ್ಳುತ್ತದೆ. ಅವರ ತಪ್ಪಿಗಾಗಿ ಅವರನ್ನು ಹೊಡೆದು ಬಡಿದು ಮಾಡುವದೇ ಉಪಾಯವೆಂದು ತಿಳಿಯುವದು ತಪ್ಪು. ದಂಡಿಸುವುದರಿಂದ ಸುಧಾರಣೆ ಆಗುವುದರ ಬದಲು ಕೆಟ್ಟ ಪರಿಣಾಮ ಆಗುವ ಸಂಭವವೇ ಹೆಚ್ಚು. ಸ್ವಾತಂತ್ರ್ಯಪ್ರಿಯರಾದ ತರುಣರನ್ನು ತಡೆಗಟ್ಟುವುದರಿಂದ ಅವರ ವಿರೋಧ ವೃತ್ತಿಯು ಮತ್ತಿಷ್ಟು ಪುಟಗೊಳ್ಳುವದು.

ಮನಸ್ಸಿನ ಹೋರಾಟವು ಮನಸ್ಸಿನ ಅನಾರೋಗ್ಯದ ಒಂದು ಲಕ್ಷಣವು. ಮನಸ್ಸಿನಲ್ಲಿ ಆರೋಗ್ಯವು ಉಂಟಾಗಬೇಕಾದರೆ, ಸುವ್ಯವಸ್ಥಿತ ವ್ಯಕ್ತಿತ್ವವು ರೂಪಗೊಳ್ಳಬೇಕಾದರೆ ಮನಸ್ಸಿನ ಪರಿಶೋಧನೆಯನ್ನು ಮತ್ತು ಮನಸ್ಸಿನ ಪುನರ್‌ವ್ಯವಸ್ಥೆಯನ್ನು ಕೈಕೊಳ್ಳಬೇಕು. ಅತೃಪ್ತಿ ಹೊಂದಿದ ಬಯಕೆಗಳು ಮತ್ತು ಬೇಡಿಕೆಗಳು ಮನಸ್ಸಿನಲ್ಲಿ ಹುದುಗಿಕೊಂಡು ಅದರ ಆರೋಗ್ಯವನ್ನು ಕೆಡಿಸುತ್ತವೆ. ಸಹಾನುಭೂತಿಪರ ಸಂಭಾಷಣೆಯಿಂದ, ಸ್ವಪ್ನಗಳ ವಿಶ್ಲೇಷಣೆ

ಯಿಂದ ಮತ್ತು ಇತರ ಉಪಾಯಗಳಿಂದ ಅವುಗಳನ್ನು ಕಂಡು ಹಿಡಿಯಬಹುದು. ಇದು ಮನೋರೋಗವನ್ನು ನಿವಾರಿಸಲು ಕೈಕೊಳ್ಳಬೇಕಾದ ಮೊದಲನೆಯ ಹೆಜ್ಜೆ. ಮಕ್ಕಳಲ್ಲಿ ಒಂದು ಪ್ರಧಾನ ಅನುರಾಗವನ್ನು ಬೆಳೆಯಿಸುವದು ಎರಡನೆಯ ಹೆಜ್ಜೆ. ಇದರಿಂದ ಶೀಲದಲ್ಲಿ ಏಕರೂಪತೆ ಉಂಟಾಗುತ್ತದೆ. ಜೀವನದಲ್ಲಿ ಒಂದು ಉದಾತ್ತ ಧ್ಯೇಯವನ್ನು ಅಥವಾ ಗುರಿಯನ್ನು ಇಟ್ಟುಕೊಳ್ಳುವುದರಿಂದ ವ್ಯಕ್ತಿಯ ಎಲ್ಲ ಚಟುವಟಿಕೆಗಳಲ್ಲಿ ಐಕ್ಯತೆ ಉಂಟಾಗುತ್ತದೆ. ಜೀವನದಲ್ಲಿ ಒಂದು ತತ್ವ ದೃಷ್ಟಿಯನ್ನು ಇಟ್ಟುಕೊಳ್ಳುವದು ಮೂರನೆಯ ಹೆಜ್ಜೆ. ಮನುಷ್ಯನಲ್ಲಿ ತತ್ವ ದೃಷ್ಟಿಯು ಬೆಳೆದ ಹಾಗೆ ಯಾವ ನಡತೆಯ ಬೆಲೆ ಎಷ್ಟು ಎಂಬುದು ಗೊತ್ತಾಗುತ್ತದೆ. ಐಶ್ವರ್ಯಕ್ಕಿಂತ ಸದ್ಗುಣಗಳೆ ಶ್ರೇಷ್ಠವೆಂದೂ, ಲಾಭಕ್ಕಿಂತ ಪ್ರಾಮಾಣಿಕತನವೇ ಮಿಗಿಲೆಂದೂ, ಸ್ವಾರ್ಥಕ್ಕಿಂತ ಪರೋಪಕಾರವೇ ಹೆಚ್ಚಿನದೆಂದೂ, ಇಹಲೋಕದ ಸುಖಕ್ಕಿಂತ ಪರಲೋಕದ ಸಾಧನೆಯೇ ಶ್ರೇಷ್ಠವೆಂದೂ ತತ್ವಜ್ಞಾನಿಯು ನಿರ್ಧರಿಸಿ ಅದರಂತೆ ಆಚರಿಸುತ್ತಾನೆ ಮಕ್ಕಳಲ್ಲಿ ಈ ರೀತಿಯ ಸುಸಂಘಟಿತ ವ್ಯಕ್ತಿತ್ವವು ನೆಲೆಗೊಳ್ಳುವಂತೆ ಶಿಕ್ಷಕರೂ ತಂದೆತಾಯಿಗಳೂ ನೆರವಾಗಬೇಕು. ಕೇವಲ ಜ್ಞಾನ ಗಳಿಸುವದು ಶಿಕ್ಷಣದ ಗುರಿಯಾಗಿರದೆ ಶೀಲ ಬೆಳೆಸುವದು ಶಿಕ್ಷಣದ ಮುಖ್ಯ ಗುರಿಯಾಗಿರುತ್ತದೆ.

ಬೇರೊಂದು ರೀತಿಯಿಂದ ನೋಡಿದರೆ ಮನಸ್ಸಿನ ಹೋರಾಟವು ಮನಸ್ಸಿನ ಅನಾರೋಗ್ಯತೆಯ ಲಕ್ಷಣವು. ವ್ಯಕ್ತಿತ್ವದಲ್ಲಿ ಒಡಕು ಹುಟ್ಟಿದಾಗ ಒಂದು ಭಾಗವು ಮತ್ತೊಂದು ಭಾಗದೊಡನೆ, ಒಂದು ಪ್ರೇರಣೆಯು ಮತ್ತೊಂದು ಪ್ರೇರಣೆಯೊಡನೆ, ಒಂದು ಅನುರಾಗವು ಮತ್ತೊಂದು ಅನುರಾಗದೊಡನೆ ಹೋರಾಟವನ್ನು ಹೂಡುತ್ತದೆ. ಆಗ ವ್ಯಕ್ತಿತ್ವದಲ್ಲಿ ಹೊಂದಿಕೆ (Adjustment) ತಪ್ಪುತ್ತದೆ. ವ್ಯಕ್ತಿಯು ಒಂದು ಸನ್ನಿವೇಶವನ್ನು ಎದುರಿಸುವಾಗ ವಿಚಾರ, ಉದ್ವೇಗ ಮತ್ತು ಶಾರೀರಿಕ ಕ್ರಿಯೆಗಳು ಒಂದಕ್ಕೊಂದು ಕೂಡಿಕೊಂಡು ಕೆಲಸ ನಡೆಯಿಸುತ್ತವೆ. ವ್ಯಕ್ತಿತ್ವವು ಸಮತೋಲವಾಗಿದ್ದರೆ ವಿಚಾರಶಕ್ತಿಯು ಪ್ರಾಧಾನ್ಯವಾಗಿದ್ದು ಉದ್ವೇಗವು ಅದಕ್ಕೆ ಅಧೀನವಾಗಿರುತ್ತದೆ. ಆಗ ಸರಿಯಾದ ಕ್ರಿಯೆಯು ನಡೆಯುತ್ತದೆ. ಆದರೆ ಉದ್ವೇಗವು ಪ್ರಬಲವಾ

ಗಿದ್ದು ವಿವೇಕವನ್ನು ಲೆಕ್ಕಿಸದೆ ಇದ್ದರೆ ತಪ್ಪು ಕ್ರಿಯೆಗಳು ಉಂಟಾಗುತ್ತವೆ. ಉದ್ವೇಗದ ತಪ್ಪು ಹೊಂದಿಕೆಯ ( Maladjustment ) ಕೆಲವು ಸಾಮಾನ್ಯ ಉದಾಹರಣೆಗಳನ್ನು ಇಲ್ಲಿ ಕೊಡಬಹುದು. (೧) ಭದ್ರತೆಯ ಅಭಾವ ಅಥವಾ **ನಿರಾಶ್ರಯತೆ** ( Insecurity ) (೨) **ಕೀಳೆಂಬ ಭಾವ** ( Inferiority Complex ) (೩) **ಅವಧಾನ ಪ್ರಯತ್ನ** ( Attention-Seeking ) ಮತ್ತು (೪) ವಿಮುಖತೆ ಅಥವಾ **ಹಿಂಜರಿಯುವದು** ( Withdrawl )—ಈ ನಾಲ್ಕು ಲಕ್ಷಣಗಳು ಸಾಮಾನ್ಯವಾಗಿ ಎಲ್ಲ ಹುಡುಗರಲ್ಲಿ ಕಂಡು ಬರುತ್ತವೆ. ಮನೆಯಲ್ಲಿ ತಂದೆ ತಾಯಿಗಳು ಅಥವಾ ಹಿರಿಯ ಹುಡುಗರು ಮಕ್ಕಳಿಗೆ ಪ್ರೇಮವನ್ನು ತೋರಿಸ ದಿದ್ದರೆ, ಅವರ ಬಗ್ಗೆ ಯೋಗ್ಯ ಕಾಳಜಿಯನ್ನು ತಕ್ಕೊಳ್ಳದಿದ್ದರೆ ಅಥವಾ ಅವ ರನ್ನು ಸಂರಕ್ಷಿಸದಿದ್ದರೆ ಮಕ್ಕಳಲ್ಲಿ ನಿರಾಶ್ರಯದ ಭಾವವು ಉಂಟಾಗುತ್ತದೆ. ಜೀವನದ ಸಮಸ್ಯೆಗಳನ್ನು ಎದುರಿಸಲಿಕ್ಕೆ ಅವರಿಗೆ ಭದ್ರವಾದ ತಳಹದಿಯು ಇರುವದಿಲ್ಲ. ಶಾಲೆಯಲ್ಲಿ ಶಿಕ್ಷಕನ ಪ್ರೇಮವು ಕಡಿಮೆ ಇದ್ದರೆ ಮಗುವು ಸಾಮಾ ಜಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಹಿಂದು ಮುಂದು ನೋಡುತ್ತಾನೆ. ತಾನು ಮಾಡುತ್ತಿರುವ ಕೆಲಸಗಳಲ್ಲಿ ಮೇಲಿಂದ ಮೇಲೆ ಸೋಲು ಬರಹತ್ತಿದರೆ, ಪ್ರಯತ್ನಗಳು ನಿಷ್ಫಲವಾಗಹತ್ತಿದರೆ ಮಗುವಿನಲ್ಲಿ ತಾನು ಕೈಲಾಗದವನೆಂಬ ಕೀಳು ಭಾವವು ಉಂಟಾಗುತ್ತದೆ ಈ ಕೀಳು ಭಾವನೆಗೆ ಜಾತಿಯ ಮೂಢ ನಂಬುಗೆಗಳೂ ಕಾರಣವಾಗಿರಬಹುದು. ಈ ತಪ್ಪು ಭಾವನೆಯನ್ನು ಇಟ್ಟು ಕೊಂಡ ಮಗುವು ಜನರೊಡನೆ ಸಾಮಾನ್ಯವಾಗಿ ಬೆರೆತು ಕೆಲಸ ಮಾಡುವದಿಲ್ಲ. ಮತ್ತು ತಾನು ಯಶಸ್ವಿಯಾಗಬಹುದಾದರೂ ತನ್ನ ಪ್ರಯತ್ನಗಳು ನಿಷ್ಫಲ ವಾಗುವವೆಂಬ ತಪ್ಪು ತಿಳುವಳಿಕೆಯಿಂದ ಆತ್ಮವಿಶ್ವಾಸವನ್ನು ಕಳೆದುಕೊಳ್ಳು ತ್ತಾನೆ. ಶಾಲೆಯಲ್ಲಿ ಆಗಲಿ ಮನೆಯಲ್ಲಿ ಆಗಲಿ ತನ್ನ ಬಯಕೆಗಳು ಈಡೇರ ದಿದ್ದರೆ ಮಗುವು ಅಸಮಾಧಾನ ಹೊಂದಿ ತನ್ನ ಕಡೆಗೆ ಅನ್ಯರ ಅವಧಾನವನ್ನು ಎಳೆದುಕೊಳ್ಳಲಿಕ್ಕೆ ಹೊಂಚು ಹಾಕುತ್ತಾನೆ ಮನೆಯಲ್ಲಿ ಹೊಸದಾಗಿ ಒಂದು ಮಗುವು ಹುಟ್ಟಿದಾಗ ಅದಕ್ಕೂ ಮೊದಲು ಹುಟ್ಟಿದ ಮಗುವು ಮನೆಯವರ ಅವಧಾನವನ್ನು ದೊರಕಿಸಲಿಕ್ಕೆ ಅಳುವದನ್ನು, ಚೀರಾಡುವದನ್ನು, ಸಾಮಾನು ಗಳನ್ನು ಚಲ್ಲುವದನ್ನು, ಗದ್ದಲ ಮಾಡುವದನ್ನು ನಡೆಸುತ್ತಾನೆ. ಮಕ್ಕಳನ್ನು

ಹೆಚ್ಚು ಅಚ್ಚಚ್ಚಿ ಮಾಡುವದರಿಂದ, ಅತಿಯಾಗಿ ಪ್ರೀತಿಸುವುದರಿಂದ, ಅಥವಾ ಅತಿಯಾಗಿ ಕಾಳಜಿ ತಕ್ಕೊಳ್ಳುವುದರಿಂದ ಅವರಲ್ಲಿ ಈ ಮನೋವೃತ್ತಿಯು ಬೆಳೆಯುತ್ತದೆ. ಇನ್ನು ಗುಂಪಿನ ಜೀವನದಲ್ಲಿ ಸಾಮಾನ್ಯವಾಗಿ ಸೇರದೆ ಕೂಡು ಕೊಳ್ಳುವ ವ್ಯವಹಾರವನ್ನು ಬಿಟ್ಟು ಏಕಾಕಿಯಾಗಿ ಇರಲು ಎಷ್ಟೋ ಹುಡು ಗರು ಬಯಸುತ್ತಾರೆ. ಆದರೆ ಇದು " ಒಳ್ಳೇತನ " ದ ಲಕ್ಷಣವೆಂದು ತಿಳಿಯು ವದು ತಪ್ಪು. ಯಾವಾಗಲೂ ಸುಮ್ಮನೆ ಇರುವದು, ಅಂಜಿಕೊಂಡು ಕೂಡ್ರು ವದು, ಅಥವಾ ನಾಚುವದು, ಮನೋರೋಗದ ಲಕ್ಷಣವಾಗಿರಬಹುದು. ಮಕ್ಕಳಲ್ಲಿರುವ ಈ " ಪಾರಾಗುವ " ಮನೋವೃತ್ತಿಯ ಕಾರಣಗಳನ್ನು ಕಂಡು ಹಿಡಿದು ಪಾಲಕರು ಮತ್ತು ಶಿಕ್ಷಕರು ಅವರಿಗೆ ಸಹಾಯ ಮಾಡಬೇಕು. ವಿವೇಕ ವೆಂಬ ಕಡಿವಾಣದಿಂದ ಉದ್ವೇಗಗಳನ್ನು ಹತೋಟಿಯಲ್ಲಿ ಇಟ್ಟುಕೊಳ್ಳದವರು ಸಮಾಜದಲ್ಲಿ ಹೊಂದಿಕೊಂಡು ಹೋಗಲು ಅಸಮರ್ಥರಾಗುತ್ತಾರೆ. ಉದ್ವೇಗಗ ಳನ್ನು "ಪಚನ" ಮಾಡಿ ತನ್ನೊಳಗೆ ಅರಗಿಸಿಕೊಂಡರೆ ಸಮತೋಲವಾದ ವ್ಯಕ್ತಿ ತ್ವವು ಉಂಟಾಗುತ್ತದೆ. ಉದ್ವೇಗಗಳ ಪ್ರತಿಕ್ರಿಯೆಗಳನ್ನು ಮೂರು ತೆರನಾಗಿ ಕಾಣಬಹುದು. ಗಾಯನ ಕಲೆಯಲ್ಲಿ ನಿಪುಣಳಾದ ಒಬ್ಬ ಹುಡುಗಿಯು ಒಂದು ಪ್ರಸಂಗದಲ್ಲಿ ಕಠಿಣವಾದ ರಾಗವನ್ನು ಕಲಿಯಲಿಕ್ಕೆ ಹವಣಿಸಿ ಅಯಶಸ್ವಿಯಾಗು ತ್ತಾಳೆ. ಆದರೆ ಮುಂದೆ ಮತ್ತೊಂದು ಪ್ರಸಂಗದಲ್ಲಿ ಜಾಣತದದಿಂದ ಯೋಜನೆ ಹಾಕಿ ಯಶಸ್ವಿಯಾಗುತ್ತಾಳೆ. ಇದು ವ್ಯಕ್ತಿತ್ವಕ್ಕೆ ನೋವು ಆಗದ ಉದಾಹ ರಣೆ. ಅದೇ ರೀತಿಯಾಗಿ ಮತ್ತೊಂದು ಹುಡುಗಿಯು ಕಠಿಣ ರಾಗವನ್ನು ಹೇಳಲು ಅಸಮರ್ಥಳಾಗುತ್ತಾಳೆ. ಆದರೆ ಅವಳು ತನಗಿಂತ ಜಾಣರಾದವ ರನ್ನು ವಿಚಾರಿಸಿ ತನ್ನ ಸಾಮರ್ಥ್ಯಕ್ಕೆ ಅನುಗುಣವಾದ ಬೇರೆ ವಿಧಾನಗಳನ್ನು ತಿಳಿದುಕೊಂಡು ಯಶಸ್ವಿಯಾಗುತ್ತಾಳೆ. ಇದು ಹದಗೊಳಿಸಲ್ಪಟ್ಟ ( Disciplined ) ವ್ಯಕ್ತಿತ್ವದ ಉದಾಹರಣೆ. ಮೂರನೆಯ ಹುಡುಗಿಯು ಒಂದು ಕಠಿಣ ರಾಗವನ್ನು ಕಲಿಯಲು ಅನೇಕ ಬಾರೆ ಪ್ರಯತ್ನಿಸಿದರೂ ಅಯ ಶಸ್ವಿಯಾಗುತ್ತಾಳೆ. ಅವಳಿಗೆ ಸರಿಯಾದ ವಿಧಾನಗಳು ಗೊತ್ತಾಗದ್ದರಿಂದ ನಿರು ತ್ಸಾಹಳಾಗುತ್ತಾಳೆ. ಅವಳು ಮುಂದೆ ಪ್ರಯತ್ನ ಮಾಡುವದನ್ನೇ ಬಿಟ್ಟು ಬಿಡು ತ್ತಾಳೆ. ಇದು ಹೊಂದಿಕೆ ತಪ್ಪಿದ ವ್ಯಕ್ತಿತ್ವದ ಉದಾಹರಣೆ ಇದೇ ರೀತಿ ಯಾಗಿ ಲಲಿತಕಲೆ, ಚಿತ್ರಕಲೆ, ಕೈಗಾರಿಕೆ, ಆಟ, ನೃತ್ಯ ಮೊದಲಾದ ಚಟುವಟಿಕೆ

ಗಳಲ್ಲಿ ಮೇಲ್ಮೆ ಪಡೆಯಲು ಯತ್ನಿಸಿ ಸೋತ ವ್ಯಕ್ತಿಗಳು ಮೇಲೆ ಕಾಣಿಸಿದ ಯಾವುದಾದರೊಂದು ಬಗೆಯಲ್ಲಿ ವರ್ತಿಸುವರು.

ಹೊಂದಿಕೆ ತಪ್ಪುವದನ್ನು ಹೇಗೆ ತಡೆಯಬೇಕು ಮತ್ತು ಹೊಂದಿಕೆ ತಪ್ಪಿದ್ದನ್ನು ಹೇಗೆ ತಿದ್ದಬೇಕು ಎಂಬುದನ್ನು ಯೋಚಿಸುವದು ಶಿಕ್ಷಣದ ಹೊಣೆಯಾಗಿದೆ. ಸುಸಂಬದ್ಧ ಅಥವಾ ಒಳ್ಳೆಯ ಹೊಂದಿಕೆಯಾದ ವ್ಯಕ್ತಿತ್ವವನ್ನು ಕಟ್ಟುವದು ಒಂದು ಸಮಸ್ಯೆ; ಮತ್ತು ಚಿಕ್ಕಪುಟ್ಟ ತಪ್ಪುಗಳನ್ನು ತಿದ್ದುವದು ಎರಡನೆಯ ಸಮಸ್ಯೆ. ಆದರೆ ದೊಡ್ಡ ಪ್ರಮಾಣದ ಮನಸ್ಸಿನ ಬೇನೆಗಳಿಂದ ನರಳುವವರನ್ನು ಮನೋವೈದ್ಯರಿಗೆ ಬಿಟ್ಟು ಕೊಡಬೇಕು. ಮನುಷ್ಯನಲ್ಲಿ ಹಸಿವೆ, ನೀರಡಿಕೆ, ಚಟುವಟಿಕೆ, ಭದ್ರತೆ, ಮಾನ್ಯತೆ ಮೊದಲಾದ ಸ್ವಾಭಾವಿಕ ಒತ್ತಡಗಳು (Urges) ಇರುತ್ತವೆ. ಈ ಅಂತಃಪ್ರೇರಣೆಗಳಿಗೆ ಸರಿಯಾದ ರೀತಿಯಲ್ಲಿ ಪ್ರಕಟವಾಗಲು ಮತ್ತು ತೃಪ್ತಿಹೊಂದಲು ಅವಕಾಶವನ್ನು ಒದಗಿಸಿ ಕೊಟ್ಟರೆ ಒಳ್ಳೇ ಹೊಂದಿಕೆಯುಳ್ಳ ವ್ಯಕ್ತಿತ್ವವು ರೂಪುಗೊಳ್ಳುತ್ತದೆ. ಇಲ್ಲವಾದರೆ ಹೊಂದಿಕೆ ತಪ್ಪುತ್ತದೆ. ಈ ಸಂಗತಿಯನ್ನು ಶಿಕ್ಷಕರು ತಂದೆ ತಾಯಿಗಳು ಮತ್ತು ಗುಂಪಿನ ನಾಯಕರು ತಿಳಿದಿರಬೇಕು. ಮಕ್ಕಳಿಗೆ ಸಾಕಷ್ಟು ಚಟುವಟಿಕೆಗಳನ್ನು ಒದಗಿಸಿ ಕೊಡಬೇಕು, ಅವರ ಕೃತಿಗಳನ್ನು ಮನ್ನಿಸಬೇಕು, ಅವರಲ್ಲಿಯ ಅಂಜಿಕೆ ಹೋಗಿ ಧೈರ್ಯ ಬರುವಂತೆ ಬೆಂಬಲಿಗರಾಗಬೇಕು, ಮೇಲಿಂದ ಮೇಲೆ ಗೆಲುವಿನ ಅನುಭವವು ಅವರಿಗೆ ಬರುವಂತೆ ಮನವರಿಕೆ ಮಾಡಿಕೊಡಬೇಕು ಮತ್ತು ಅವರ ತಪ್ಪು ತಡೆಗಳನ್ನು ಸಮಾನುಭೂತಿಯಿಂದ ನೋಡಬೇಕು. ಅಲ್ಲದೆ ಶಿಕ್ಷಕನು ಸ್ವತಃ ತನ್ನಲ್ಲಿರುವ ಉದ್ವೇಗದ ಕುಂದು ಕೊರತೆಗಳನ್ನು ತಿದ್ದಿಕೊಳ್ಳಬೇಕು. ತನ್ನ ತಾನು ಸುಧಾರಿಸದವನು ಅನ್ಯರನ್ನು ಹೇಗೆ ಸುಧಾರಿಸಬಹುದು ! ತನ್ನಲ್ಲಿ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳದವನು ಬೇರೆಯವರ ವ್ಯಕ್ತಿತ್ವವನ್ನು ಕಟ್ಟಲು ಹೇಗೆ ನೆರವಾಗಬಲ್ಲನು ?

ಇನ್ನು ಕೊನೆಯದಾಗಿ ಮನುಷ್ಯನಲ್ಲಿ ಸುಸಂಘಟಿತ ವ್ಯಕ್ತಿತ್ವವು (Integrated Personality) ಮತ್ತು ಶೀಲವು ಹೇಗೆ ಬೆಳೆದು ಒಂದು ಸ್ಥಿರತೆಗೆ ಬಂದು ಮುಟ್ಟುತ್ತದೆ ಎಂಬುದನ್ನು ಮನೋವಿಜ್ಞಾನದ ದೃಷ್ಟಿ

ಯಿಂದ ಸ್ವಲ್ಪ ವಿವೇಚಿಸುವ. ಮನುಷ್ಯನ ವರ್ತನದ ಮೂಲ ಕಾರಣಗಳು ಪ್ರೇರಣೆಗಳು (Drives), ಸಂಪಾದಿಸಿದ ಮನೋಗ್ರಂಥಿಗಳು (Complexes), ಅನುರಾಗಗಳು (Sentiments). ಇವೆಲ್ಲವುಗಳನ್ನು ಸರಿಯಾದ ಹಾದಿಯಲ್ಲಿ ಪರಿವರ್ತಿಸುವದು ಶಿಕ್ಷಣದ ಮುಖ್ಯ ಗುರಿ

**ಚಟಿಗಳು** (Habits):–ಮನುಷ್ಯನ ಎಲ್ಲ ವರ್ತನಗಳಿಗೆ ಅವನ ರೂಢಿಗಳೇ ಅಥವಾ ಚಟಗಳೇ ಕಾರಣವೆಂದು ಹಳೆಯ ಮನೋವಿಜ್ಞಾನವು ಪ್ರತಿಪಾದಿಸುತ್ತಿತ್ತು. ಒಂದು ಕ್ರಿಯೆಯನ್ನು ಮೇಲಿಂದ ಮೇಲೆ ಮಾಡುವುದರಿಂದ ಅದು ಚಟವಾಗಿ ಪರಿಣಮಿಸುತ್ತದೆ. ಈಸುವದನ್ನು ಬರೆಯುವದನ್ನು ಟಾಯಿಪ ಮಾಡುವದನ್ನು ಮೊದಲಾದ ಶಾರೀರಿಕ ಕ್ರಿಯೆಗಳನ್ನು ಕಲಿತ ಮೇಲೆ ಅವು ವಿಶಿಷ್ಟ ಚಟಗಳಾಗುತ್ತವೆ. ಇದೇ ರೀತಿಯಾಗಿ ಮನುಷ್ಯನ ಪ್ರತಿನಿತ್ಯದ ಕೆಲಸಗಳು ಚಟಗಳಾಗಿ ಪರಿಣಮಿಸುತ್ತವೆ. ಶಾರೀರಿಕ ಚಟಗಳಂತೆ ಮಾನಸಿಕ ಚಟಗಳೂ ಕಲಿಯಲ್ಪಡುತ್ತವೆ. ಚಟಗಳೆಲ್ಲ ಸೋಪಾಧಿಕ ಪ್ರತಿಕ್ರಿಯೆಗಳೆಂದು (Conditioned Reflexes) ವರ್ತನವಾದಿಗಳು ಹೇಳುತ್ತಾರೆ ಪ್ಯಾವ್ಲೋವನು ಒಂದು ನಾಯಿಯ ಮೇಲೆ ಪ್ರಯೋಗವನ್ನು ನಡೆಯಿಸಿ ಈ ಸಿದ್ಧಾಂತಕ್ಕೆ ಬಂದಿರುವನು. ಆಹಾರದ ತಾಟನ್ನು ನಾಯಿಯ ಮುಂದ ಇಡುವಾಗ ಗಂಟೆಯ ಸಪ್ಪಳವನ್ನು ಅವನು ಮಾಡುತ್ತಿದ್ದನು. ಆಗ ನಾಯಿಯ ಬಾಯಲ್ಲಿ ಜೊಲ್ಲು ಬರುತ್ತಿತ್ತು. ಈ ಪ್ರಯೋಗವನ್ನು ಅನೇಕ ಬಾರೆ ಮಾಡಿದ ಮೇಲೆ ಆಹಾರ–ಗಂಟೆಯ ಸಪ್ಪಳ- ಜೊಲ್ಲು ಇವು ಮೂರು ಒಂದೇಕಾಲಕ್ಕೆ ನಡೆಯುತ್ತಿದ್ದವು. ಈ ರೂಢಿಯು ನೆಲಸಿದ ಮೇಲೆ ಮುಂದೆ ಆ ನಾಯಿಯು ಕೇವಲ ಗಂಟೆಯ ಸಪ್ಪಳವನ್ನು ಕೇಳಿದಾಗ ಆಹಾರವಿರದಿದ್ದರೂ ಜೊಲ್ಲು ಸುರಿಯುತ್ತಿತ್ತು. ಇದು ಸೋಪಾಧಿಕ ಪ್ರತಿಕ್ರಿಯೆ. ಆದರೆ ಪ್ರಾಣಿಯಲ್ಲಿ ಅಥವಾ ಮನುಷ್ಯನಲ್ಲಿ ಈ ಬಗೆಯ ಚಟಗಳುಉಂಟಾಗಬೇಕಾದರೆ ಕೇವಲ ತಾಂತ್ರಿಕ ಪುನರಾವರ್ತನೆಯು ಕಾರಣವಾಗಿರದೆ ಮೂಲ ಪ್ರೇರಣೆಗಳ ತೃಪ್ತಿಯೇ ಕಾರಣವಾಗಿರುತ್ತದೆಂದು ಈಗಿನ ಮನೋವಿಜ್ಞಾನವು ಹೇಳುತ್ತದೆ. ಈ ದೃಷ್ಟಿಯಿಂದ ನೋಡಿದರೆ ಹಸಿವೆಂಬ ಮೂಲ ಪ್ರೇರಣೆಯನ್ನು ತೃಪ್ತಿಗೊಳಿಸುವ ಪ್ರಯತ್ನದಲ್ಲಿ ಸಪ್ಪಳದ ಜೊತೆಗೆ ಜೊಲ್ಲು ಸುರಿಸುವ ರೂಢಿಯು ಉಂಟಾಯಿತು. ಇಂಥ ಉದ್ದೇಶವಿಲದ ಯಾಂತ್ರಿಕ

ಪುನರಾವರ್ತನೆಯಿಂದ ಚಟಗಳು ಹುಟ್ಟುವದಿಲ್ಲ. ಪ್ರೇರಣೆಗಳ ನೇವೆಯಲ್ಲಿಯೇ ಚಟಗಳು ಉಂಟಾಗುತ್ತವೆ. ಹೆಚ್ಚಿಗೆ ಸಂಬಳ ದೊರಕುವದು ಇಲ್ಲವೆ ಮುಂಬಡತಿ ಆಗುವದು. ಎಂಬ ಉದ್ದೇಶದಿಂದ ಪ್ರೇರಿತವಾಗಿದ್ದರೆ ಮಾತ್ರ ಟಾಯಿಪಿಂಗ ಕಲಿಯುವವನು ಅದರ ಕೌಶಲ್ಯದಲ್ಲಿ ಪ್ರಗತಿಯನ್ನು ಗಳಿಸುವನು. ಇದೇ ಮಾತು ಎಲ್ಲ ಚಟಗಳಿಗೆ ಅಥವಾ ಪ್ರಗತಿಗೆ ಹತ್ತುತ್ತದೆ. ಸರ್ಕಸ್ಸಿನ ಪ್ರಾಣಿಗಳಿಗೆ ಬೇರೆ ಬೇರೆ ಚಮತ್ಕಾರಿಕ ಕ್ರಿಯೆಗಳನ್ನು ರೂಢಿ ಮಾಡಿಸುವಾಗ ಆಹಾರ ಪ್ರೇರಣೆಯ ಸಹಾಯವನ್ನೇ ಕೋರುತ್ತಾರೆ.

**ಮನೋಗ್ರಂಥಿಗಳು (Complexes)**— ಪ್ರಾಣಿಯು ಒಂದು ಸನ್ನಿವೇಶವನ್ನು ಎದುರಿಸಿದಾಗ ಮೂಲ ಪ್ರೇರಣೆಯು ಪ್ರಚೋದನೆಗೊಂಡು ಕೂಡಲೇ ಪ್ರತಿಕ್ರಿಯೆ ನಡೆಯುತ್ತದೆ. ಆ ಸನ್ನಿವೇಶವು ಬದಲಾದ ಮೇಲೆ ಆ ಪ್ರಾಣಿಯು ತನ್ನ ಮೊದಲಿನ ಅನುಭವವನ್ನು ಮರೆತು ಬಿಡಬಹುದು. ಆದರೆ ಆಗಿನ ಅನುಭವವು ಸಾಕಷ್ಟು ಮಹತ್ವವುಳ್ಳದ್ದು ಅಥವಾ ಅರ್ಥವುಳ್ಳದ್ದು ಇದ್ದರೆ ಅದರ ಅಂಶಗಳು ಮನಸ್ಸಿನ ಹಿನ್ನಲೆಯಲ್ಲಿ ಬೀಡು ಬಿಡುತ್ತದೆ. ಇವಕ್ಕೆ ಮನೋಗ್ರಂಥಿ (Complex) ಎನ್ನುತ್ತಾರೆ. ಅಂಥ ಪ್ರಸಂಗವು ಪುತ್ತೆ ಒದಗಿದಾಗ ಮೊದಲಿನ ಅನುಭವಗಳೆಲ್ಲ ಎಚ್ಚರಗೊಳ್ಳುತ್ತವೆ. ಒಮ್ಮೆ ಕಲ್ಲಿನ ಪೆಟ್ಟು ತಿಂದ ನಾಯಿ ಮತ್ತೊಂದು ಸಮಯದಲ್ಲಿ ಯಾವನಾದರೊಬ್ಬನು ಬೇರೆ ಉದ್ದೇಶದಿಂದ ನೆಲಕ್ಕೆ ಬಾಗಿದುದನ್ನು ಕಂಡರೆ ಬಾಲ ಮುದುಡಿಕೊಂಡು ಓಡಿಹೋಗುತ್ತದೆ. ಮೇಲೆ ಉದಾಹರಿಸಿದ ಪಾವ್ಲೋವನ ನಾಯಿಯಲ್ಲಿ ಒಮ್ಮೆ ಮನೋಗ್ರಂಥಿಯು ಉಂಟಾದುದರಿಂದ ಗಂಟೆಯ ಸಪ್ಪಳ ಕೇಳಿದ ಕೂಡಲೇ ಅದರ ಜೊತೆಗೆ ಅನುಭವಿಸುತ್ತಿದ್ದ ಜೊಲ್ಲಿನ ಪ್ರತಿಕ್ರಿಯೆಯೂ ನಡೆಯುತ್ತಿತ್ತು. ಶಾಲೆಯ ಹುಡುಗರಲ್ಲಿ ತಾವು ಮಾಡಿದ ಪ್ರವಾಸದ ಬಗೆಗೆ ಬಾಯಿಪಾಠ ಮಾಡಿದ ಹಾಡಿನ ಬಗೆಗೆ ಭಾವಗ್ರಂಥಿಗಳು ಉಂಟಾಗಿರುತ್ತವೆ ಮನುಷ್ಯನಲ್ಲಿ ಒಂದು ವ್ಯಕ್ತಿ, ವಿಷಯ, ಸಂಘ, ಅಥವಾ ಸಮಾಜದ ಬಗೆಗೆ ಬೇರೆ ಬೇರೆ ಮನೋಗ್ರಂಥಿಗಳು ಉಂಟಾಗಿರುತ್ತವೆ. ಮೂಲ ಪ್ರೇರಣೆಗಳು ಸಂಘಟನೆ ಹೊಂದಿ ಮನೋಗ್ರಂಥಿಗಳು ಆಗುತ್ತವೆ. ಅವು ಹೆಚ್ಚು ಕಾಲದ ವರೆಗೆ ಮನಸ್ಸಿನ ಹಿನ್ನೆಲೆಯಲ್ಲಿ ಉಳಿಯುತ್ತವೆ. ವ್ಯಕ್ತಿತ್ವದ ಬೆಳವಣಿಗೆ

ಯಲ್ಲಿ ಇದು ಮೊದಲನೆಯ ಮೆಟ್ಟು. ಈ ಸಂಘಟನೆಯೇ ಮನುಷ್ಯನ ಚಟಗಳಿಗೆ ಕಾರಣವಾಗಿರುತ್ತದೆ.

**ಅನುರಾಗಗಳು** (Sentiments)—ಪ್ರೇರಣೆಗಳು ಬೆಳೆದು ಮನೋಗ್ರಂಥಿಗಳು ಆಗುವಂತೆ ಮನೋಗ್ರಂಥಿಗಳು ಬೆಳೆದು ಅನುರಾಗಗಳು ಆಗುತ್ತವೆ. ಅನುರಾಗಗಳಿಗೆ ಭಾವನೆಗಳು, ಉದ್ವೇಗಗಳು ಅಥವಾ ಸ್ಥಿರವೃತ್ತಿಗಳು ಎಂದೂ ಕರೆಯಬಹುದು. ಒಂದು ವಸ್ತುವಿಗೆ ಸಂಬಂಧಿಸಿದ ಮನೋಗ್ರಂಥಿಗಳು ಸಂಘಟನೆಯನ್ನು ಹೊಂದಿ ಮನಸ್ಸಿನ ವ್ಯೂಹದಲ್ಲಿ ಸ್ಥಿರವಾಗಿ ಉಳಿದರೆ ಅದಕ್ಕೆನಾವು ಅನುರಾಗ (Sentiments)ಎಂದು ಕರೆಯುತ್ತೇವೆ ಅನುರಾಗಗಳು ಮನುಷ್ಯನ ವ್ಯಕ್ತಿತ್ವದ ಸ್ಥಿರವಾದ ಘಟಕಗಳು. ಅವು ಸಂಪಾದಿತ ಸಂಘಟನೆಯ ಎರಡನೆಯ ಮೆಟ್ಟು. ಒಂದು ವಸ್ತು, ವಿಷಯ ಅಥವಾ ವ್ಯಕ್ತಿಯ ಬಗೆಗೆ ನಮ್ಮಲ್ಲಿ ದೃಢಗೊಂಡ ಮನೋವೃತ್ತಿಯೇ ಅನುರಾಗ. ಅದರಲ್ಲಿ ಒಂದು ಇಲ್ಲವೆ ಅನೇಕ ಪ್ರವೃತ್ತಿಗಳು ಕೂಡಿಕೊಂಡಿರುತ್ತವೆ. ಅನುರಾಗಗಳಲ್ಲಿ ಮುಖ್ಯವಾದ ಎರಡು ಗುಂಪುಗಳನ್ನು ಮಾಡಬಹುದು. ಒಂದನೆಯದು ಪ್ರೇಮದ ಅನುರಾಗಗಳು ಮತ್ತು ಎರಡನೆಯದು ದ್ವೇಷದ ಅನುರಾಗಗಳು. ಬೀಡಿ ಸೇದುವುದರ ಬಗೆಗೆ ಒಬ್ಬನಲ್ಲಿ ಪ್ರೇಮದ ಅನುರಾಗವು ಉಂಟಾದರೆ ಮತ್ತೊಬ್ಬನಲ್ಲಿ ದ್ವೇಷದ ಅನುರಾಗವು ಉಂಟಾಗಬಹುದು. ಅಭ್ಯಾಸದ ಬಲದಿಂದ ಅನುರಾಗಗಳು ಹೆಚ್ಚು ಹೆಚ್ಚು ಗಟ್ಟಿಯಾಗುತ್ತವೆ. ಅಭ್ಯಾಸ ತಪ್ಪಿದರೆ ಅವು ಬಲಗುಂದುತ್ತವೆ. ಅನುರಾಗಗಳು ಬೆಳೆದ ಹಾಗೆ ಜೀವನದ ವ್ಯವಹಾರಗಳಲ್ಲಿ ಒಂದು ಬಗೆಯ ಸ್ಥಿರತೆಯೂ ಕ್ರಮವೂ ಪ್ರಾಪ್ತವಾಗುತ್ತದೆ; ನಡತೆಯಲ್ಲಿ ನಿಶ್ಚಲತೆಯುಂಟಾಗುತ್ತದೆ. ನಮ್ಮ ಅನೇಕ ಶಾರೀರಿಕ ಮತ್ತು ಮಾನಸಿಕ ಚಟಗಳ ಹಿಂದೆ, ಉದ್ವೇಗಗಳ ಮತ್ತು ಕೃತಿಗಳ ಹಿಂದೆ ಅನುರಾಗಗಳು ಹಿನ್ನೆಲೆಯಾಗಿ ವ್ಯವಹರಿಸುತ್ತವೆ. ಈ ಚಟಗಳು ಅನುರಾಗಗಳ ಮತ್ತು ಪ್ರೇರಣೆಗಳ ಸೇವೆಯಲ್ಲಿ ರೂಪುಗೊಳ್ಳುತ್ತವೆ. ಒಬ್ಬ ಮನುಷ್ಯನ ವರ್ತನದ ಅಭ್ಯಾಸದಿಂದ ಅವನ ಅನುರಾಗಗಳನ್ನು ಮತ್ತು ಅವನ ಅನುರಾಗಗಳ ಅಭ್ಯಾಸದಿಂದ ಅವನ ಭವಿಷ್ಯವನ್ನು ಹೇಳಬಹುದು. ಒಂದು ವರ್ತಮಾನ ಪತ್ರವನ್ನು ಮೂರು ಮಂದಿ ಓದುತ್ತಿರು

ವಾಗ ಒಬ್ಬನು ರಾಜಕಾರಣದ ಸುದ್ದಿಗಳ ಕಡೆಗೆ, ಮತ್ತೊಬ್ಬನು ಆಟದ ಮತ್ತು ಮೂರನೆಯವನು ವ್ಯಾಪಾರದ ಸುದ್ದಿಗಳ ಕಡೆಗೆ ಹೊರಳಿದರೆ ಪ್ರತಿಯೊಬ್ಬನಲ್ಲಿ ಅವನ ಅಭಿರುಚಿಯ ಪ್ರಕಾರ ಬೇರೆ ಬೇರೆ ಅನುರಾಗಗಳು ಇರುವವೆಂದು ಊಹಿಸಬಹುದು. ಮನುಷ್ಯನ ಬಾಳುವೆಯಲ್ಲಿ ಅನುರಾಗಗಳು ಪ್ರಮುಖ ಪಾತ್ರವನ್ನು ವಹಿಸುತ್ತವೆ. ನಮ್ಮ ಎಲ್ಲ ಉದ್ದೇಶಗಳಿಗೂ ಮತ್ತು ಸಾಹಸಗಳಿಗೂ ಅನುರಾಗಗಳೇ ಮೂಲ ಸೂತ್ರಗಳು. ದೇಶಾಭಿಮಾನವು ಒಂದು ಅನುರಾಗ. ಅದರಿಂದ ಪ್ರೇರಿತನಾದವನು ತನ್ನ ನಾಡಿಗಾಗಿ ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧನಾಗುತ್ತಾನೆ. ಮ್ಯಾಕ್‌ಡೂಗಲ್ಲನು ಅನುರಾಗಗಳ ವಿಷಯವಾಗಿ ಹೇಳುವದೇನಂದರೆ ಪ್ರೇರಣೆಗಳಿಂದ ನೇರವಾಗಿ ಹುಟ್ಟುವ ಕ್ರಿಯೆಗಳು ದೊಡ್ಡವನಾದವನಲ್ಲಿ ಬಹಳ ಕಡಿಮೆ. ಅವನು ಒಮ್ಮೊಮ್ಮೆ ಕೂಡಲೇ ಭಯಗೊಳ್ಳಬಹುದು ಅಥವಾ ಸಿಟ್ಟಿಗೇಳಬಹುದು. ಆದರೆ ಅವನ ಅಸಂಖ್ಯಾತ ಚಟುವಟಿಕೆಗಳಿಗೆ ಅನುರಾಗಗಳೇ ಉಗಮ ಸ್ಥಾನಗಳು.

ಸಂಸಕ್ತಿ ತತ್ವದ ಮೇಲೆ ಅನುರಾಗಗಳು ರೂಪುಗೊಳ್ಳುತ್ತವೆ. ಪ್ರತಿಯೊಬ್ಬನಲ್ಲಿ ಅನೇಕ ಅನುರಾಗಗಳು ಇದ್ದು ಕೆಲವು ಹೆಚ್ಚು ಪ್ರಬಲ ಇರುತ್ತವೆ ಎಲ್ಲಕ್ಕೂ ಹೆಚ್ಚು ಪ್ರಬಲವಿದ್ದ ಅನುರಾಗಕ್ಕೆ ಪ್ರಧಾನ ಅನುರಾಗ ( Master Sentiment ) ಎನ್ನುತ್ತಾರೆ. ಇವರಲ್ಲಿ ಆತ್ಮಗೌರವವು ಅಡಕವಾಗಿರುತ್ತದೆ. ‘ ನಾನು, ನನ್ನದು, ನನ್ನ ಅನುಭವ ’ ಎಂಬುದೆ ಆತ್ಮಭಾವ ಅಥವಾ ತನ್ನತನ. ಮಗುವು ಹುಟ್ಟಿದಾಗಿನಿಂದಲೆ ಈ ಆತ್ಮ ಭಾವನೆಯು ಬೆಳೆಯುತ್ತ ಹೋಗುತ್ತದೆ. ತಾನು ಆಡುವ ಭಾಷೆಯಿಂದ ಮತ್ತು ಸಾಮಾಜಿಕ ಆವರಣದಿಂದ ಆತ್ಮದ ಕಲ್ಪನೆಯು ಹೆಚ್ಚು ಸ್ಪಷ್ಟವಾಗುತ್ತದೆ. ತನ್ನ ಬಗೆಗೆ ಬೇರೆಯವರು ಆಡುವ ಅಭಿಪ್ರಾಯಗಳನ್ನು ಮಗುವು ನಂಬುತ್ತಾನೆ ಎಂಬುದನ್ನು ಶಿಕ್ಷಕರು ತಿಳಿದಿರಬೇಕು. ಒಬ್ಬ ಮಗುವನ್ನು ಮೇಲಿಂದ ಮೇಲೆ ‘ ಕುಂಟ, ತುಡುಗ, ಧಡ್ಡ, ವೈಗಳ್ಳ ’ ಮುಂತಾಗಿ ತೆಗಳಹತ್ತಿದರೆ ಅವನು ಹಾಗೇ ಆಗುವ ಸಂಭವವೇ ಹೆಚ್ಚು. ಯಾವ ಅನುರಾಗದಲ್ಲಿ ಆತ್ಮಭಾವನೆಯು ಸಂಪೂರ್ಣವಾಗಿ ಬೆರೆತು ಹೋಗಿರುತ್ತದೆಯೋ ಅದು ಪ್ರಧಾನ ಅನುರಾಗವಾಗುತ್ತದೆ.

**ಶೀಲ ಮತ್ತು ವ್ಯಕ್ತಿತ್ವ:—** ಶಿಕ್ಷಣದ ಮುಖ್ಯ ಗುರಿ ಶೀಲ. ಸುಸಂಘಟಿತವಾದ ಆತ್ಮಭಾವನೆಯೇ ಶೀಲ. ಮನುಷ್ಯನಲ್ಲಿಯ ಬೇರೆ ಬೇರೆ ಪ್ರೇರಣೆಗಳು ಮತ್ತು ಅನುರಾಗಗಳು ಕ್ರಮ ಹಿಡಿದು ಪ್ರಧಾನ ಅನುರಾಗದಲ್ಲಿ ಸುಸಂಘಟಿತವಾಗಿದ್ದರೆ ಅದುವೇ ಸುಸಂಬದ್ಧ ಶೀಲ. ಅಥವಾ ಅನುರಾಗಗಳ ಸಂಘಟನೆಯೇ ಶೀಲವೆಂದು ಹೇಳಬಹುದು. ಅನುರಾಗಗಳಲ್ಲಿ ಮೇಲು ಮಟ್ಟದ ಸಂಘಟನೆಯು ಉಂಟಾಗದೆ ಒಂದಕ್ಕೊಂದು ವಿರೋಧವೂ ತಿಕ್ಕಾಟವೂ ಕಂಡು ಬಂದರೆ ಅದು ನಿರ್ಬಲವಾದ ಶೀಲ. ಆಗ ವ್ಯಕ್ತಿತ್ವದಲ್ಲಿ ಒಡಕು ಹುಟ್ಟುತ್ತದೆ; ಕಾರ್ಯ ಸಾಮರ್ಥ್ಯವು ಬಲಗುಂದುತ್ತದೆ. ಉದ್ದೇಶಗಳು ಅನಿಶ್ಚಿತವಾಗುತ್ತವೆ. ಶೀಲವೆಂಬುದು ಒಂದು ರಚನೆ; ಪ್ರವೃತ್ತಿಗಳು ಅದರ ಮೂಲ ಘಟಕಗಳು. ಶೀಲ ರಚನೆಯ ಕ್ರಮದಲ್ಲಿ ಎರಡು ಮೆಟ್ಟಲುಗಳು ಇವೆ ಅನೇಕ ಉದ್ದೇಶಗಳ ಕಡೆಗೆ ಹರಿಯುವ ಪ್ರವೃತ್ತಿಗಳನ್ನು ಕ್ರಮಗೊಳಿಸಿ ಅನುರಾಗಗಳನ್ನು ಬೆಳೆಯಿಸುವದು ಮೊದಲನೆಯ ಮೆಟ್ಟು. ಮುಂದೆ ಅನೇಕ ಗುರಿಗಳ ಕಡೆಗೆ ಹರಿಯುವ ಅನುರಾಗಗಳನ್ನು ಒಂದಕ್ಕೊಂದು ಪೋಷಕವಾಗುವಂತೆ ಮಾಡಿ ಒಂದು ಪ್ರಧಾನ ಅನುರಾಗದಲ್ಲಿ, ಅಂದರೆ ಆತ್ಮಗೌರವದಲ್ಲಿ ಒಟ್ಟುಗೂಡಿಸುವದು ಎರಡನೆಯ ಮೆಟ್ಟು. ಅನುರಾಗಗಳ ಸಂಘಟನೆಯೇ ಶೀಲ. ಅನುರಾಗಗಳಲ್ಲಿ ಹೆಚ್ಚು ಹೆಚ್ಚು ಹೊಂದಿಕೆಯು ಉಂಟಾದಂತೆ ಉತ್ತಮ ಶೀಲವು ರೂಪುಗೊಳ್ಳುತ್ತದೆ. ಶೀಲವನ್ನು ಹಾಗೆ ರೂಪುಗೊಳಿಸುವದೇ ಶಿಕ್ಷಣದ ಮುಖ್ಯ ಕೆಲಸ.

ಶೀಲವು ಒಳ್ಳೆಯದೂ ಆಗಿರಬಹುದು, ಕೆಟ್ಟದೂ ಆಗಿರಬಹುದು. ಒಂದು ವ್ಯಕ್ತಿಯಲ್ಲಿ ಬೆಳೆದ ಪ್ರಧಾನ ಅನುರಾಗವು ಅವನಲ್ಲಿರುವ ಸದಸದ್ವಿವೇಕವನ್ನು ಬದಿಗೊತ್ತಿ ಅವನನ್ನು ಅನೀತಿ ಕಾರ್ಯಕ್ಕೆ ತೊಡಗಿಸಬಹುದು. ದೇಶಾಭಿಮಾನ, ಮಹತ್ವಾಕಾಂಕ್ಷೆ, ಪುತ್ರಪ್ರೇಮ, ಮೊದಲಾದ ಪ್ರಧಾನ ಅನುರಾಗವುಳ್ಳವ್ಯಕ್ತಿಯು ಕೆಲವೊಂದು ಪ್ರಸಂಗಗಳಲ್ಲಿ ದೊಡ್ಡ ಅಪರಾಧಗಳನ್ನು ಮಾಡಬಹುದು. ಇತಿಹಾಸದಲ್ಲಿ ಇಂಥ ಉದಾಹರಣೆಗಳು ಹೇರಳವಾಗಿ ಸಿಕ್ಕುತ್ತವೆ. ಆದರೆ ಉತ್ತಮ ಶೀಲದಲ್ಲಿ ನೈತಿಕ ಅನುರಾಗಗಳು ( Moral Sentimetns ) ಪ್ರಧಾನವಾಗಿರುತ್ತವೆ. ನ್ಯಾಯ, ಸತ್ಯ, ಪ್ರಾಮಾಣಿಕತನ

ದಯೆ, ಅಹಿಂಸೆ, ಸಹಾನುಭೂತಿ ಮೊದಲಾದ ಒಳ್ಳೇ ಗುಣಗಳ ಪ್ರೇಮವು ನೈತಿಕ ಅನುರಾಗಗಳಲ್ಲಿ ಪರಿಣಮಿಸುತ್ತದೆ. ಸಾಮಾಜಿಕ ಜೀವನದ ಫಲವಾಗಿ ಮಕ್ಕಳಲ್ಲಿ ನೈತಿಕ ಅನುರಾಗಗಳು ಬೆಳೆಯುತ್ತವೆ. ಅದಕ್ಕಾಗಿಯೇ 'ಜತೆಯಂತೆ ಮತಿ' ಎಂಬ ನಾಣ್ಣುಡಿಯು ಉಂಟಾಗಿದೆ. ಮಗುವು ಯಾವ ಸಾಮಾಜಿಕ ಆವರಣದಲ್ಲಿ ಬೆಳೆಯುತ್ತಾನೆಯೋ ಅದರ ಅನುರಾಗಗಳನ್ನು ಕಲಿಯುತ್ತಾನೆ. ಆದುದರಿಂದ ಮಕ್ಕಳನ್ನು ಉತ್ತಮ ಆವರಣದಲ್ಲಿ ಬೆಳೆಯಿಸುವದು ಪಾಲಕರ ಮತ್ತು ಶಿಕ್ಷಕರ ಮುಖ್ಯ ಕೆಲಸ. ಕೇವಲ ಉಪದೇಶದಿಂದ ಮಕ್ಕಳಲ್ಲಿ ನೈತಿಕ ಅನುರಾಗಗಳು ಬೆಳೆಯುತ್ತವೆ ಎಂದು ತಿಳಿಯುವದು ತಪ್ಪು. ಗಣಿತ ಅಥವಾ ವ್ಯಾಕರಣ ಕಲಿಸುವಂತೆ ಶೀಲವನ್ನು ಕಲಿಸಲು ಬರುವಂತಿಲ್ಲ. ಪ್ರತ್ಯಕ್ಷ ಕೃತಿಯ ಮುಖಾಂತರ ಶೀಲದ ಬೆಳವಣಿಗೆಯು ಸಾಗುತ್ತದೆ. ಸಣ್ಣಪುಟ್ಟ ಕೆಲಸಗಳಲ್ಲಿ ಪ್ರಾಮಾಣಿಕನಿದ್ದವನು ದೊಡ್ಡ ಕಾರ್ಯಗಳಲ್ಲಿಯೂ ಪ್ರಾಮಾಣಿಕನಾಗಿರುತ್ತಾನೆ. ಆಟಗಳನ್ನು ಪ್ರಾಮಾಣಿಕತನದಿಂದ ಆಡುವುದರಿಂದ ಮಕ್ಕಳಲ್ಲಿ ಶೀಲವು ರೂಪುಗೊಳ್ಳುತ್ತದೆ. ಮಕ್ಕಳಿಗೆ ನೀತಿ ಶಿಕ್ಷಣವನ್ನು ಕೊಡುವುದಕ್ಕೆ ಕೇವಲ ಭಾಷಣ, ಪ್ರವಚನ, ಕೀರ್ತನ ಅಥವಾ ಉಪದೇಶಗಳು ಅಷ್ಟೊಂದು ಫಲದಾಯಕವಾದ ಸಾಧನಗಳಲ್ಲ. ಸಾಲೆಯಲ್ಲಿಯ ಒಳ್ಳೆಯ ಸಂಪ್ರದಾಯ, ಸಂಘಜೀವನ, ಆಟ, ಸಾಂಸ್ಕೃತಿಯ ಚಟುವಟಿಕೆ, ಆದರ್ಶ ಜೀವನ, ಸ್ವಂತ ವ್ಯಕ್ತಿತ್ವ ಮೊದಲಾದ ಸಾಧನಗಳಿಂದ ಮಕ್ಕಳ ನೈತಿಕ ಅನುರಾಗಗಳನ್ನು ಪೋಷಿಸಬೇಕು.

ಇನ್ನು ಶೀಲದ ಬೆಳವಣಿಗೆಯೇ ವ್ಯಕ್ತಿತ್ವದ ಬೆಳವಣಿಗೆ. ಮ್ಯಾಕ್‌ಡೂಗಲ್ಲನು ಹೇಳುವಂತೆ ಪ್ರತಿಯೊಬ್ಬ ಮಗುವಿನಲ್ಲಿರುವ ಮೂಲ ಪ್ರೇರಣೆಗಳನ್ನು ಸುಸಂಬದ್ಧಗೊಳಿಸಿ ಅನುರಾಗಗಳನ್ನು ಉಂಟು ಮಾಡುವದು, ಮತ್ತು ಆ ಅನುರಾಗಗಳನ್ನು ಆತ್ಮಗೌರವವೆಂಬ ಪ್ರಧಾನ ಅನುರಾಗದ ಮತ್ತು ಉದಾತ್ತ ಶೀಲದ ಒಡೆತನದಲ್ಲಿ ಒಂದುಗೂಡಿಸುವದೇ ವ್ಯಕ್ತಿತ್ವ ವಿಕಾಸ. ಶೀಲವು ವ್ಯಕ್ತಿತ್ವದ ತಿರುಳು. ಮತ್ತು ಶೀಲವುಳ್ಳ ವ್ಯಕ್ತಿಗಳನ್ನು ತಯಾರಿಸುವದೇ ಶಿಕ್ಷಣದ ತಿರುಳು; ಶಿಕ್ಷಕನ ಕರ್ತವ್ಯ.

# ಪ್ರಶ್ನೆಗಳು ಮತ್ತು ಅಭ್ಯಾಸಗಳು

೧. ಮಕ್ಕಳ ಒಲವುಗಳನ್ನು ಅಥವಾ ವ್ಯಕ್ತಿತ್ವವನ್ನು ತಿಳಿದುಕೊಳ್ಳಲಿಕ್ಕೆ ಕೆಳಗೆ ಕೊಟ್ಟ ಸಂಗತಿಗಳ ಬಗೆಗೆ ಸಮಾಚಾರ ತೆಗೆದುಕೊಳ್ಳುವದು.

ನನ್ನ ಮೂರು ಬಯಕೆಗಳು

ಸಾಲೆಯಲ್ಲಿ ನನಗೆ ಯಾವದು ಹೆಚ್ಚಾಗಿ ಸೇರುತ್ತದೆ.

ಸಾಲೆಯಲ್ಲಿ ನನಗೆ ಯಾವದು ಎಳ್ಳಷ್ಟೂ ಸೇರುವದಿಲ್ಲ.

ಸಾಲೆಯ ಹೊರಗೆ ಯಾವದು ನನಗೆ ಹೆಚ್ಚಾಗಿ ಸೇರುತ್ತದೆ.

ಸಾಲೆಯ ಹೊರಗೆ ಯಾವುದನ್ನು ನಾನು ಬಹಳ ತಿರಸ್ಕರಿಸುತ್ತೇನೆ.

ಇವುಗಳ ಉತ್ತರಗಳನ್ನು ಮಕ್ಕಳ ಬುದ್ಧಿಮಟ್ಟ, ಆರ್ಥಿಕ-ಸಾಮಾಜಿಕ ಮಟ್ಟ, ವಯ, ಮತ್ತು ಗಂಡು ಹೆಣ್ಣುಗಳಿಗೆ ಸಂಬಂಧಿಸಿ ಪರೀಕ್ಷಿಸಬೇಕು.

೨. ಕೆಳಗೆಕೊಟ್ಟ ವಿಷಯುಗಳಬಗೆಗೆ ಸಂದರ್ಶನ ರಿಪೋರ್ಟು ಇಲ್ಲವೆ ಸ್ವಂತ ಬರೆದು ಕೊಟ್ಟ ಉತ್ತರಗಳ ಮುಖಾಂತರ ವಿದ್ಯಾರ್ಥಿಗಳ ಅಭಿರುಚಿಗಳನ್ನು ಮತ್ತು ಒಲವುಗಳನ್ನು ತಿಳಿದುಕೊಳ್ಳುವದು.

ಪ್ರಚಲಿತ ಸುದ್ದಿಗಳು, ಆಟಗಳು, ರೇಡಿಯೋ ಕಾರ್ಯಕ್ರಮಗಳು, ರಾಜಕೀಯ ಪಕ್ಷಗಳು, ಸಾಮಾಜಿಕ ಬದಲಾವಣೆಗಳು, ಕಾಯದೆ ಕಾನೂನುಗಳು, ಬೇರ ಬೇರೆ ಸಮಾಜಗಳ ಸಂಪ್ರದಾಯುಗಳು, ಬೇಲೆ ಬೇರೆ ಭಾಷೆಗಳು, ಬೇರೆ ಬೇರೆ ಜನಾಂಗಗಳು, ಬೇರೆ ಬೇರೆ ದೇಶಗಳು, ಮುಂತಾದವು.

೩. ಮಕ್ಕಳ ವ್ಯಕ್ತಿತ್ವದ ಬೆಳವಣಿಗೆಗೆ ಅಡ್ಡ ಬರುವ (i) ಸಾಮಾಜಿಕ (ii) ಆರ್ಥಿಕ ಮತ್ತು (iii) ಭೌತಿಕ ಸಂಗತಿಗಳು ಯಾವವು ? ಅವುಗಳನ್ನು ಕಡಿಮೆ ಮಾಡಲಿಕ್ಕೆ ನೀವು ಯಾವ ವ್ಯವಹಾರಿಕ ಸೂಚನೆಗಳನ್ನು ಮಾಡುವಿರಿ ?

೪. ವ್ಯಕ್ತಿತ್ವದ ಬೆಳವಣಿಗೆಯನ್ನು ಮುಂದುವರಿಸುವವೆಂದು ತೋರುವ, ಆದರೆ ನಿಜವಾಗಿ ಹಾನಿಯನ್ನುಂಟು ಮಾಡುವ ಸಂಗತಿಗಳ ಕೆಲವು ಉದಾಹರಣೆಗಳನ್ನು ಕೊಡಿರಿ.

೫. ಹೊಂದಿಕೊಳ್ಳುವದು (Adjustment) ಅಂದರೇನು ? ಹೊಂದಿಕೆ ತಪ್ಪಿದ ವರ್ತನದ ಕೆಲವು ಮುಖ್ಯ ಪ್ರಕಾರಗಳನ್ನು ಉದಾಹರಣೆ ಸಹಿತ ವಿವರಿಸಿರಿ.

೬. ಉದ್ವೇಗಗಳನ್ನು ಸುಸಂಬದ್ಧಗೊಳಿಸಲಿಕ್ಕೆ ಶಿಕ್ಷಕನು ಯಾವ ಉಪಾಯಗಳನ್ನು ಕೈಕೊಳ್ಳಬೇಕು ?

೭. ಅಜಾಗ್ರತ ಮನಸ್ಸಿನಲ್ಲಿ ನಡೆಯುವ ಹೋರಾಟಗಳ ಕಾರಣ ಗಳನ್ನು ಉದಾಹರಣೆ ಸಹಿತ ಸ್ಪಷ್ಟೀಕರಿಸಿರಿ.

೮. ಸುಖ, ಪ್ರಾವೀಣ್ಯತೆ ಮತ್ತು ಸಾಮಾಜಿಕ ಭಾವನೆ ಇವು ಹೊಂದಿಕೆಯ ಅಥವಾ ಸುಸಂಬದ್ಧತೆಯ ಕಾರಣಗಳೆಂದು ಹೇಳುವದುಂಟು. ಅದು ಹೇಗೆ ಎಂಬುದನ್ನು ತಿಳಿಸಿ ಹೇಳಿರಿ. ಇವಲ್ಲದೆ ಬೇರೆ ಯಾವ ಕಾರಣಗಳನ್ನು ನೀವು ಕೂಡಿಸುವಿರಿ ?

೯. ಒಬ್ಬ ಪ್ರಾಥಮಿಕ ಸಾಲೆಯ ಶಿಕ್ಷಕನು ಹೀಗೆಂದು ಅಭಿಪ್ರಾಯ ಪಡುತ್ತಾನೆ. “ನಾನು ಕಲಿಸುವ ವರ್ಗದ ಪ್ರತಿಯೊಬ್ಬ ಮಗುವು (ಆರು ತಿಂಗಳ) ಟರ್ಮಿನ ಕೊನೆಗೆ ಚನ್ನಾಗಿ ಹೊಂದಿಕೊಳ್ಳದಿದ್ದರೆ ನಾನು ಶಿಕ್ಷಕನಾಗಿದ್ದು ವ್ಯರ್ಥ.” ಯಾವ ಕಾರಣಗಳ ಸಲುವಾಗಿ ಇದನ್ನು ನೀವು ಒಪ್ಪುವದಿಲ್ಲ ?

೧೦. ನಿಮ್ಮ ಸಾಲೆಗೆ ಬರುವ ಹುಡುಗರಲ್ಲಿ ಎಷ್ಟು ಜನ ಬಡತನದ ಬವಣೆಗೆ ತುತ್ತಾಗಿರುತ್ತಾರೆ ? ಅವರಲ್ಲಿ ಉಂಟಾಗಬಹುದಾದ ಅನಿಷ್ಟ ಲಕ್ಷಣಗಳನ್ನು ತೊಡೆದು ಹಾಕಲಿಕ್ಕೆ ಸಾಲೆಯಲ್ಲಿ ಯಾವ ಸಂಗತಿಗಳಿಗೆ ನೀವು ಲಕ್ಷ್ಯ ಪೂರೈಸಬೇಕಾಗುತ್ತದೆ?

೧೧. ಒಬ್ಬ ಮಗುವಿನ ನಡತೆಯು ಮೇಲಿಂದ ಅವನು ತಂದೆ ತಾಯಿಗಳಿಂದ ಸಿರಾಕರಿಸಲ್ಪಟ್ಟವನೆಂದು ಹೇಳಲು ಬರುತ್ತದೆಯೊ ? ಇಲ್ಲವಾದರೆ ಏಕೆ ?

೧೨. ಮಕ್ಕಳನ್ನು ಅತಿಯಾಗಿ ಸಂರಕ್ಷಿಸಲಿಕ್ಕೆ ಕಾರಣಗಳು ಯಾವವು? ಬೆಳವಣಿಗೆಯ ಮೇಲೆ ಇದರಿಂದ ಯಾವಹಾನಿ ಉಂಟಾಗುತ್ತದೆ? ಇದಕ್ಕಾಗಿ ಯಾವ ಎಚ್ಚರಿಕೆಯನ್ನು ಪಡಬೇಕಾಗುವದು ?

೧೩. ಮಕ್ಕಳ ವರ್ತನದ ಬಗೆಗೆ ಆವರಣವಾದಿಗಳು ಮತ್ತು ಅನುವಂಶೀಯತೆವಾದಿಗಳು ಪ್ರತಿಪಾದಿಸುವ ತರ್ಕ ಕುತರ್ಕಗಳನ್ನು ವಿವೇಚಿಸಿರಿ.

೧೪. ಸಾಧಾರಣ ಮಗುವಿಗಿಂತ ಅತಿ ಜಾಣ ಮಗುವು ಅಥವಾ ಅತಿ ಧಡ್ಡ ಮಗುವು ಹೊಂದಿಕೊಂಡು ಹೋಗಲಿಕ್ಕೆ ಹೆಚ್ಚು ಕಷ್ಟ ಪಡಬೇಕಾಗುತ್ತದೆ. ಪ್ರಮಾಣ ಸಹಿತ ವಿವೇಚಿಸಿರಿ.

೧೫. ಕೆಲವು ಹುಡುಗರಲ್ಲಿ ಕೀಳುತನ ಭಾವನೆಯು (Feeling of inferiority) ಮನೆ ಮಾಡಿಕೊಂಡಿರುವುದರಿಂದ ಇದಕ್ಕೆ ಯಾವ ಉಪಾಯವೂ ನಾಟುವದಿಲ್ಲ. ಈ ಹೇಳಿಕೆಗೆ ನಿಮ್ಮ ಒಪ್ಪಿಗೆಯುಂಟೆ ? ಸ್ಪಷ್ಟೀಕರಿಸಿರಿ.

೧೬. ಹೊಂದಿಕೆ ತಪ್ಪಿ ನಡೆಯುವ ಮಗುವಿನ ಬಗೆಗೆ ಸಮಾಚಾರವನ್ನು ತಿಳಿದುಕೊಳ್ಳಲಿಕ್ಕೆ ಶಿಕ್ಷಕನು ಅವನ ತಂದೆ ತಾಯಿಗಳೊಡನೆ ಆಲೋಚಿಸಬೇಕಾಗುತ್ತದೆ. ಇಲ್ಲಿ ಶಿಕ್ಷಕನು ಅನುಭವಿಸಬೇಕಾದ ತೊಂದರೆಗಳು ಯಾವವು ? ಅವುಗಳನ್ನು ನೀಗಲಿಕ್ಕೆ ಯಾವ ಎಚ್ಚರಿಕೆಯನ್ನು ತಕ್ಕೊಳ್ಳಬೇಕಾಗುತ್ತದೆ ?

೧೭. ಏಸಂಬದ್ಧ (Maladjusted) ಮಗುವಿನ ಸಂದರ್ಭನಗಳನ್ನು ತಕ್ಕೊಳ್ಳುವಾಗ ಸಹಾನುಭೂತಿಪರ ದೃಷ್ಟಿಯನ್ನು ಇಟ್ಟುಕೊಳ್ಳುವದು ಏಕೆ ಅವಶ್ಯವಿರುತ್ತದೆ ?

೧೮. ಸಾಲೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಕುರಿತು "ಪ್ರಗತಿ ಪತ್ರಿಕೆ" (Cumulative Record) ಯನ್ನು ಇಡುವುದರ ಬೆಲೆ ಮತ್ತು ಕೊರತೆಗಳು ಯಾವವು ?

೧೯. ಶಿಕ್ಷಕರು ವಿದ್ಯಾರ್ಥಿಗಳ ವ್ಯಕ್ತಿ ಚಿಕಿತ್ಸೆ (Case Study) ಮಾಡುವದು ಒಳ್ಳೆಯದು. ಆದರೆ ಇದು ಎಷ್ಟರ ಮಟ್ಟಿಗೆ ವ್ಯವಹಾರಿಕವಾಗಿರುತ್ತದೆ ?

೨೦. ಹೊಂದಿಕೆ ತಪ್ಪಿದ ವಿಸಂಬದ್ಧ ವರ್ತನಗಳನ್ನು ತಿಳಿದುಕೊಳ್ಳುವ ಬಗೆಗಳು ಯಾವವು ? ನಿಮ್ಮ ಸ್ವಂತ ಅನುಭವದ ಕೆಲವು ಸೂಚನೆಗಳನ್ನು ಕೊಡಿರಿ. ಅಂಥ ಮಕ್ಕಳಿಗೆ ನೀವು ಯಾವ ಸಹಾಯವನ್ನು ನೀಡುವಿರಿ ?

# ಶಬ್ದಕೋಶ

(ವಿ. ಸೂ. ಈ ಆವೃತ್ತಿಯಲ್ಲಿ ಕ್ಲಿಷ್ಟವಾದ ಪಾರಿಭಾಷಿಕ ಶಬ್ದಗಳನ್ನು ಆದಷ್ಟು ಕಡಿಮೆ ಮಾಡಿದೆ. ಶೈಕ್ಷಣಿಕ ಮನೋವಿಜ್ಞಾನವು ಗಡುಚಾದ ವಿಷಯವಾದರೂ ಅದರ ಪೂರ್ವ ಪರಿಚಯವಿಲ್ಲದ ಶಿಕ್ಷಕರಿಗೆ ಹೆಚ್ಚು ಉಪಯುಕ್ತವಾಗುವ ದೃಷ್ಟಿಯಿಂದ ರೂಢಿಯಲ್ಲಿರುವ ಶಬ್ದಗಳನ್ನೇ ಬಳಸಿದೆ. ಆದರೂ ಈ ವಿಷಯದ ಮೇಲೆ ಇತ್ತೀಚೆಗೆ ಪ್ರಕಟವಾದ ಇಂಗ್ಲೀಷ ಗ್ರಂಥಗಳನ್ನು ಸಹಾಯವಾಗಿ ಇಟ್ಟುಕೊಂಡದ್ದರಿಂದ ನಾನು ಉಪಯೋಗಿಸಿದ ಕನ್ನಡ ಶಬ್ದಗಳ ಮತ್ತು ಅವುಗಳಿಗೆ ಸಮಾನ ಅರ್ಥವನ್ನು ಕೊಡುವ ಇಂಗ್ಲೀಷ ಪದಗಳ ಕೋಶವನ್ನು ಇಲ್ಲಿ ಕೊಡಲಾಗಿದೆ.)

ಅಕ್ರಮ ವರ್ತನ, ಅಪರಾಧ, ತಪ್ಪು ನಡತೆ Maladjusted Behaviour, Delinquency, Deviates

ಅಜಾಗ್ರತಾವಸ್ಥೆ The Unconscious

ಅತಿಕ್ರಮಣ Aggression

ಅದುಮುವದು, ಹತ್ತಿಕ್ಕುವದು, ಬಚ್ಚಿಡುವದು Repression

ಅನುಭವ Experience

ಅನುಭವದ ಮುದ್ರೆ, ಅನುಭವ ಶೇಷ, ಭಾವಗ್ರಂಥಿ Engram Complex

ಅನುರಾಗ, ಭಾವನೆ, ಸ್ಥಿರವೃತ್ತಿ Sentiment

ಅಭ್ಯಾಸ, ರೂಢಿ Study, Practice, Exercise

ಅಭ್ಯಾಸ ನಿಯಮ Law of Exercise

ಅಭ್ಯಾಸ ಪತ್ರಿಕೆ, Curriculum

ಅಭಿರುಚಿ, ಆಸಕ್ತಿ Interest

ಅಲೆದಾಡುವದು Truancy

ಅಂತಃಪ್ರೇರಣೆ Motivation, Urge, Drive

ಅಂತರಾವಲೋಕನ Introspection

ಅಂತರ್ಮುಖಿ Introvert

ಆತ್ಮಗೌರವ, ಸ್ವಾಭಿಮಾನ Self-regard

ಆತ್ಮ ಪ್ರತಿಷ್ಠೆ Self-assertion
ಆಧಾರವುಳ್ಳ Valid
ಅನುವಂಶೀಯತೆ, ಪರಂಪರೆ Heredity
ಆವರಣ, ಪರಿಸ್ಥಿತಿ, ಸನ್ನಿವೇಶ Environment
ಆಶ್ರಯ, ಆಸರ, ಭದ್ರತೆ Security
ಇಡಿ ಮತ್ತು ಬಿಡಿ ರೀತಿ ಕಲಿಯುವ— Whole and Part Method of Learning
ಉದಾತ್ತೀಕರಣ, ಉದಾತ್ತಗೊಳಿಸುವದು Sublimation
ಉದ್ವೇಗ, ಭಾವ, ರಸಭಾವ Emotion
ಉಪದೇಶಕ, ಮಾರ್ಗದರ್ಶಕ Counsellor
ಒರೆಗಳು Tests

| | |
|---|---|
| ಒಲವಿನ ಒರೆಗಳು | Aptitude Tests |
| ಕೃತಿಯ ಒರೆಗಳು | Performance Tests |
| ಜೋಡಿಸುವ ಒರೆಗಳು | Matching Tests |
| ಪೂರ್ತಿಯ ಒರೆಗಳು | Completion Tests |
| ಪ್ರಗತಿಯ ಒರೆಗಳು | Attainment Tests |
| ಪ್ರಮಾಣ ಒರೆಗಳು | Standardized Tests |
| ವಸ್ತುವಾಚಕ ಒರೆಗಳು | Objective Tests |
| ಸರಿ–ತಪ್ಪು ಒರೆಗಳು | True-False Tests |
| ಹಲವು ಆಯ್ಕೆಯ ಒರೆಗಳು | Multiple Choice Tests |

ಒಲವುಗಳು Aptitudes, Disposition
ಒಳನೋಟ, ಅಂತರ್ದೃಷ್ಟಿ Insight
ಓ. ಬ. ಲೆ (ಓದು, ಬರೆಹ, ಮತ್ತು ಲೆಕ್ಕ) Three 'R's
ಕಡಿಮೆ ಎಂಬ ಭಾವ, ಕೀಳು ಭಾವ, ನ್ಯೂನ್ಯ ಭಾವ Inferiority Complex,—Feeling
ಕಲಿಯುವ ಕ್ರಮ The Learning Process
ಕಲಿತ ವಿಷಯದ ವರ್ಗಾಂತರ, ಶಿಕ್ಷಣದ ವರ್ಗಾಂತರ Transfer of Training

ಕಲಿಯುವಿಕೆಯ ನಿಯಮಗಳು Laws of Learning
ಅಭ್ಯಾಸ ನಿಯಮ Law of Exercise
ಪರಿಣಾಮ ನಿಯಮ Law of Effect
ಸನ್ನಾಹ ನಿಯಮ Law of Readiness
ಕಲಿಯುವ ರೀತಿಗಳು Methods of Learning
ನೋಡಿ ಕಲಿಯುವ ರೀತಿ Observation Method
ಅನುಕರಣ ರೀತಿ Imitation Method
ಕೇಳಿ ಕಲಿಯುವ ರೀತಿ Verbal Method
ಓದಿ ಕಲಿಯುವ ರೀತಿ Reading Method
ಬಾಯಿಪಾಠದಿಂದ ಕಲಿಯುವ ರೀತಿ Rote Method or Recitation Method
ತೀಡಿ ಕಲಿಯುವ ರೀತಿ Manual Guidance Method
ಮಾಡಿ ಕಲಿಯುವ ರೀತಿ Learning by Doing Method
ಪ್ರಯತ್ನ ಮತ್ತು ಪ್ರಮಾದ ರೀತಿ Trial and Error Method
ಸಮಸ್ಯೆ (ಬಿಡಿಸುವ) ರೀತಿ Problem(Solving) Method
ಸಿದ್ಧಾಂತ ರೀತಿ Inductive Method or Generalization Method
ಇಡಿ ಮತ್ತು ಬಿಡಿ ರೀತಿ The Whole and Part Method
ನಿರಂತರ ರೀತಿ Massed or Concentrated Method
ಕಾಲಾಂತರ ರೀತಿ Distributed Method or Spaced Method
ಕಲ್ಪನೆ Concept, Idea
ಕಲ್ಪನಾ ವಿಲಾಸ Free Imagination
ಕಾಲವಯ Chronological Age
ಕಾಲ್ಪನಿಕ ವಿಚಾರ Conceptual Thinking

ಕುತರ್ಕ, ಕುಂಟು ನೆವ, ನೆವ Rationalizing
ಕೀಳು ಭಾವನೆ, ಕಡಿಮೆ ಎಂಬ ಭಾವ, ನೈಚ್ಯಭಾವ Inferiority Feeling
ಕೃತಕ ನಂಬುಗೆ Make Belief
ಗಟ್ಟಿಯಾಗುವಿಕೆ, ದೃಢೀಕರಣ Consolidation
ಗೃಹಪಾಠ, ಮನೆ ಕೆಲಸ Home Work
ಚೇತನ, ಜೀವನದ ರಭಸ Horme, Libido, Elan-Vital
ಚೇತನವಾದ Vitalism
ಜೀವನ ದೃಷ್ಟಿ, ತತ್ವಜ್ಞಾನ Philosophy of Life
ಜಾಗ್ರತಾವಸ್ಥೆ The Conscious
ತತ್ವಜ್ಞಾನ Philosophy
ತಪ್ಪು ನಡೆಗಳು, ಅಕ್ರಮ ವರ್ತನ ನೋಡಿ
ತರ್ಕ, ವಿವೇಕ, ಅನುಮಾನ Reasoning
ತಿಕ್ಕಾಟ, ಹೋರಾಟ Conflict
ದೃಢೀಕರಣ, ಗಟ್ಟಿಯಾಗುವಿಕೆ ನೋಡಿ
ನಂಬುಗೆಯುಳ್ಳ, ನಂಬಲರ್ಹವಾದ Reliable
ನಿರಾಕರಿಸುವದು Rejecting
ನಿರಾಶೆ Frustration
ನಿರಂಕುಶ ವರ್ತನ Autocratic Behaviour
ನೈಚ್ಯಭಾವ, ಕೀಳು ಭಾವ ನೋಡಿ
ಪಠ್ಯೇತರ Extra Curricular, Co-Curricular
ಪರಂಪರೆ, ಆನುವಂಶೀಯತೆ ನೋಡಿ
ಪರಕ್ಷೇಪಣ Projection
ಪರಿಣಾಮ ನಿಯಮ Law of Effect

- ಪರಿಸ್ಥಿತಿ, ಆವರಣ ನೋಡಿ
- ಪಾತಳಿಗಳು Plateaus
- ಪೂರ್ವ ಸಿದ್ಧಾಂತ Hypothesis
- ಪ್ರತ್ಯಕ್ಷ ಜ್ಞಾನ Perception
- ಪ್ರತ್ಯಕ್ಷ ವಿಚಾರ Perceptual Thinking
- ಪ್ರಚೋದನೆ Motivation, Drive
- ಪ್ರಮಾಣ Norm, Standard
  - ಪ್ರಮಾಣ ಒರೆಗಳು Standardized Tests
  - ಪ್ರಮಾಣ ಗುಣಗಳು Norms
  - ಪ್ರಮಾಣ ವಿಜ್ಞಾನ Normative Science
- ಪ್ರವೃತ್ತಿ, ಮೂಲಪ್ರವೃತ್ತಿ Instinct
- ಪ್ರೇಮ Affection, Love
- ಪ್ರೇರಣೆ Motive, Drive
  - ಪಾಲನ- Parental Motive
  - ಯುದ್ಧ- Pugnacity
  - ರಚನೆ Construction
  - ಸಂಪಾದನೆ Acquisition
  - ಸುರಕ್ಷತೆ, ಭದ್ರತೆ Security
  - ಸಂಘ Gregariousness
  - ಸ್ವಪ್ರತಿಷ್ಠೆ Self-display
  - ವಿಚಾರಣೆ, ಕುತೂಹಲ Curiosity
  - ವಿಧೇಯತೆ Submission
- ಬಿಕ್ಕಟ್ಟು Tension
- ಬುದ್ಧಿ Intellect, Intelligence
- ಬುದ್ಧಿ ಒರೆಗಳು Intelligence Tests
- ಬುದ್ಧಿ ಮಟ್ಟ Intelligence Quotient, (I. Q.)
- ಬುದ್ಧಿ ವಯ Mental Age

ಬೇಡಿಕೆಗಳು Needs
ಆಧ್ಯಾತ್ಮಿಕ ಬೇಡಿಕೆಗಳು Spiritual Needs
ಮಾನಸಿಕ ಬೇಡಿಕೆಗಳು Psychological Needs
ಶಾರೀರಿಕ ಬೇಡಿಕೆಳು Orgnic Needs
ಸಾಮಾಜಿಕ ಬೇಡಿಕೆಗಳು Social Needs
ಭದ್ರತೆ, ಆಶ್ರಯ, ಆಸರ, Security
ಭರತಿ, ತುಂಬಿಕೊಳ್ಳುವದು Compensation
ಭಾವ Feeling, Emotion
ಭಾವ ಗ್ರಂಥಿ ಅನುಭವ ಮುದ್ರೆ ನೋಡಿ
ಭಾವನೆ Sentiment
ಮನಸ್ಸಿನ ಅನಾರೋಗ್ಯ Mental Illhealth
ಮನಸ್ಸಿನ ಆರೋಗ್ಯ Mental Health, Meutal Hygiene
ಮನಸ್ಸಿನ ಹೋರಾಟ Mental Conflict
ಮನೋಜಾಡ್ಯ Mental Illness
ಮನೋರೋಗ Mental Illness
ಮನೋವಿಜ್ಞಾನ Psychology
ಮನೋವಿಶ್ಲೇಷಣ Psycho-analysis
ಮನೋವೃತ್ತಿ Attitudes, Aptitudes
ಮಾನಸಿಕ ಗ್ರಂಥಿ Complex
ಮಾರ್ಗದರ್ಶಕ Counsellor, Guide
ಮಾರ್ಗದರ್ಶನ Counselling, Guidance
ಮೂಲಪ್ರವೃತ್ತಿ, ಪ್ರವೃತ್ತಿ Instinct
ಮೂಲ ಹಕ್ಕುಗಳು Fundamental Rights
ಲೋಕಸತ್ತೆ Democracy
ಲೋಕಸತ್ತೆಯ ವರ್ತನ Democratic Behaviour
ಲೌಕಿಕ Secular
ವರ್ಗ Class, Standard

ವರ್ಗಾಂತರ Transfer
ವರ್ತನ Behaviour
ವರ್ತನವಾದ Behaviourism
ವಾಸ್ತವ ವಿಜ್ಞಾನ Positive Science
ವಿಚಾರ Thinking
    ಕಾಲ್ಪನಿಕ ವಿಚಾರ Conceptual Thinking
    ಪ್ರತ್ಯಕ್ಷ ವಿಚಾರ Perceptual Thinking
ವಿವೇಕ, ಅನುಮಾನ, ತರ್ಕ Reasoning
ವಿಜ್ಞಾನ Science
ವಿಶ್ಲೇಷಣ Analysis
ವೀರೋಪಾಸನೆ Hero-worship
ವೃತ್ತಿ Aptitude, Vocation
    ವೃತ್ತಿ ಒರೆಗಲ್ಲು Vocational Tests
    ವೃತ್ತಿಶಿಕ್ಷಣ Vocational Education
ವೃತ್ತಾಂತ ಸಂಗ್ರಹ Anecdotal Record, Cumulative Record
ವ್ಯಕ್ತಿ ಚಿಕಿತ್ಸೆ Case Study
ವ್ಯಕ್ತಿತ್ವ Personality
ವ್ಯಕ್ತಿತ್ವದ ಒರೆಗಲ್ಲು Personality Tests
"ಶಕ್ತಿ" Faculty
ಶಿಕ್ಷಣ Education, Training
ಶಿಕ್ಷಣದ ವರ್ಗಾಂತರ Transfer of Training
ಸಮಘಟಕವಾದ Theory of Identical Elements
ಸಮಪಾತಳಿಗಳು Plateaus
ಸಮಸ್ಯಾ ಮಗು Problem Child
ಸಮಾಜ ಬಂಧುತ್ವ Social Relationship

ಸಮಾಜ ಬಂಧುತ್ವವನ್ನು ತಿಳಿದುಕೊಳ್ಳುವ ವಿಧಾನ Sociometric Technique
ಸಾಮಾನ್ಯ ನಿಯಮ ಹೊರಡಿಸುವದು Generalization
ಸಾಮರ್ಥ್ಯ Ability
ಸಿದ್ಧಾಂತ Generalization, Inductive Reasoning
ಸಸಂಬದ್ಧ ವ್ಯಕ್ತಿತ್ವ Integrated Personality
ಸಂದರ್ಶನ Interview
ಸಂಸಕ್ತಿ, ಅಂಟಿಕೊಳ್ಳುವದು Cohesion
ಸಂಸ್ಕಾರ, ಉಳಿವು Mneme
ಸಂಶ್ಲೇಷಣ, ಸಂಯೋಜನೆ Synthesis
ಹಗಲುಗನಸು Day-dream
ಹಿಂಜರಿಯುವದು Withdrawl
ಹೊಂದಿಕೆ Adjustment
ಹೊಂದಿಕೆ ಆಗದ Maladjusted

# ಸಹಾಯಕ ಗ್ರಂಥಗಳು

## ( REFERENCES )

Bernard, H W. Mental Hygiene for Classroom Teachers

Bhatia, H R. Elements of Educational Psychology

Gates, A. I., and others. Educational Psychology

Kilpatric Philosophy of Education

McDougall, W. (i) The Energies of Men

(ii) Introduction to Social Psychology

Nunn, T. P. Education: Its Data and First Principles

Peterson, H. R. Educational Psychology

Report of the Secondary Education Commission, New Delhi, ( 1953 )

Ross, J. S. (i) Ground Work of Educational Psychology

(ii) Basic Psychology

Sandiford A. P. Educational Psychology

Woodruff, A. D. The Psychology of Teaching